# ಆಚಾರ್ಯ ಚಾಣಕ್ಯ

ಲೇಖಕರು :
ಕೆ. ಎಸ್. ನಾರಾಯಣಾಚಾರ್ಯ

ಪ್ರಕಾಶಕರು :
ಮನೋಹರ ಗ್ರಂಥಮಾಲಾ ಪ್ರಕಾಶನ
ರೇಲ್ವೆ ಗುಡ್ಸ್‌ಶೆಡ್ ಹಿಂದೆ, ಕಲ್ಯಾಣನಗರ,
ಧಾರವಾಡ- 580007

ಶ್ರೀ ಎನ್. ಕೆ. ಅವರ ಮುನ್ನುಡಿಯಿಂದ

ಪ್ರೊ|| ಕೆ. ಎಸ್. ನಾರಾಯಣಾಚಾರ್ಯರ

ಆಚಾರ್ಯ ಕೃತಿ

# 'ಆಚಾರ್ಯ ಚಾಣಕ್ಯ'

## ಒಂದು ಜಿಜ್ಞಾಸೆ

('ತರಂಗ'ಕ್ಕಾಗಿ ಬರೆದು ಪ್ರಕಟಿಸಿದ್ದು)

ಪ್ರೊ। ಕೆ. ಎಸ್. ನಾರಾಯಣಾಚಾರ್ಯರ ರಚನಾ ಸರ್ವಸ್ವವನ್ನೂ ಒಂದೇ ಶಬ್ದದಿಂದ ವರ್ಣಿಸಬಹುದಾದರೆ 'ಪರಿಪೂರ್ಣಸಾಮೀಪ್ಯ' ಎನ್ನಬೇಕು. ಆದರೆ ಯುನಿವರ್ಸಿಟಿ ಪರೀಕ್ಷಕರೂ ಯಾವಾಗಲೂ ನೂರಕ್ಕೆ ನೂರು ಗುಣಾಂಕಗಳನ್ನು ಕೊಡುವುದಿಲ್ಲ. ಸಾಹಿತ್ಯ ವಿಮರ್ಶಕರೂ ಯುನಿವರ್ಸಿಟಿ ಪರೀಕ್ಷಕರಂತೆ ಇರುತ್ತಾರೆ. ಪರಿಪೂರ್ಣಗುಣ ಸಂಪನ್ನವಾದ ಕೃತಿಯನ್ನು ಹಾಗೆ ಅಂತ ಅವರು ಹೇಳುವುದೇ ಇಲ್ಲ. ನಾನೇನು ಅಂತಹ ಸ್ಟ್ಯಾಂಡರ್ಡ್ ವಿಮರ್ಶಕನಲ್ಲ. ನನಗೆ ಆ ವಿಮರ್ಶಾನೀತಿಯ ನಿರ್ಬಂಧವೂ ಇರಬೇಕಿಲ್ಲ. ಆದರೂ ಒಂದು ಭಯ. ಪ್ರೊ|| ನಾರಾಯಣಾಚಾರ್ಯರ ನೆರೆಯ ಬಂಧು ಹಾಗಿದ್ದುಕೊಂಡು ಅವರ ಎಲ್ಲದಕ್ಕೂ ಪರಿಪೂರ್ಣ ಎಂಬ ಉದ್ಗಾರ ತೆಗೆಯುತ್ತಾನೆ, ಈ ಮನುಷ್ಯ, ಎಂದು ಕನ್ನಡ ವಾಚಕಲೋಕ ಆಕ್ಷೇಪಿಸಬಾರದು. ಅದಕ್ಕೆಂದೆ ನಾರಾಯಣಾಚಾರ್ಯರ ಸೃಜನಶೀಲ, ಸೃಜನೇತರ ರಚನೆ ಎಲ್ಲವೂ ಪರಿಪೂರ್ಣ ಸಮೀಪ ಎಂದು ಬಿಡುವುದು ಕ್ಷೇಮಕರ. ಆಮೇಲೆ ವಾಚಕರು, 'ಇಲ್ಲ ಅದು ಪರಿಪೂರ್ಣವೆ ಸರಿ' ಎಂದು ವಿರೋಧಿಸಿದರೆ ನನ್ನ

ಸೋಲನ್ನು ಸಂತೋಷದಿಂದ ಒಪ್ಪಿಕೊಳ್ಳುವೆ. ಇದಕ್ಕಿಂತ ಸಂತೋಷ ಯಾವುದು ? ಆದರೆ ಇಷ್ಟು ನಿಜ, ಪ್ರೊ। ನಾರಾಯಣಾಚಾರ್ಯರು ಪೂರ್ಣತೆಯ ಉಪಾಸಕರು.

ಪ್ರೊ। ನಾರಾಯಣಾಚಾರ್ಯರ ವೈಚಾರಿಕ ಬರೆವಣಿಗೆಯೆಲ್ಲವೂ ಥರೋ ಆಗಿರುತ್ತದೆ. ಅವರ ಅಧ್ಯಯನ ಥರೋ, ಅಧ್ಯಾಪನ ಥರೋ, ವ್ಯಾಖ್ಯಾನದ ಸನ್ನಾಹ ಥರೋ, ಅಧ್ಯಯನಶೀಲ ಬರೆವಣಿಗೆಯೆಲ್ಲವೂ ಥರೋ. ವೇದಾಗಮಗಳನ್ನು, ಪ್ರಸ್ಥಾನತ್ರಯಿಯನ್ನು, ರಾಮಾಯಣ-ಮಹಾಭಾರತಗಳನ್ನು ಯಾವ ಒಂದು ಗಟ್ಟಿ ತಳಹದಿಯ ಮೇಲೆ ಅವರು ಕರತಲಾಮಲಕನಾಗಿಸಿಕೊಂಡಿದ್ದಾರೊ ಅದರ ಪ್ರತ್ಯಯವನ್ನು ನಾವು ಅವರ ಪ್ರವಚನ ಪಾಂಡಿತ್ಯದಲ್ಲಿ ಕಾಣುತ್ತೇವೆ. ಪ್ರತಿಭಾಪೂರ್ಣ ಪ್ರಬಂಧ ರಚನೆಯಲ್ಲಿ ಕಾಣುತ್ತೇವೆ. ಅವರ ರಾಮಾಯಣ, ಮಹಾಭಾರತ, ಭಾಗವತ, ಭಗವದ್ಗೀತೆಗಳ ಪ್ರವಚನಗಳು ಈ ಮಾತಿಗೆ ಒಂದು ಪ್ರಮಾಣವಾದರೆ, 'ತರಂಗ'ದಲ್ಲಿ ಧಾರಾವಾಹಿಯಾಗಿ ನಮ್ಮ ಜನಪ್ರಿಯ, ಸಹೃದಯ ಸಂಪಾದಕ ಗುಲ್ವಾಡಿ ಅವರ ಗುಣಗ್ರಾಹಿ ಗುಣದಿಂದಾಗಿ ಕಳೆದ ಕೆಲ ತಿಂಗಳು ವಾರವಾರಕ್ಕೂ ಪ್ರಕಟಗೊಂಡು ವಾಚಕಲೋಕವನ್ನು ಮುಗ್ಧಗೊಳಿಸಿದ 'ಮಹಾಭಾರತ ಪಾತ್ರ ಪ್ರಪಂಚ' ಇನ್ನೊಂದು ಪ್ರಮಾಣ.

ಇದೀಗ ಪ್ರೊ। ನಾರಾಯಣಾಚಾರ್ಯರು ಹೊಸದೊಂದು ಬರೆವಣಿಗೆಯನ್ನು ರಸಿಕವಾಚಕರಿಗೆ ಉಣಬಡಿಸಿದ್ದಾರೆ. ಈ ವಾರಪತ್ರಿಕೆಯ ದ್ವಾರಾ. ಅದೇ- 'ಆಚಾರ್ಯ ಚಾಣಕ್ಯ' ! ಇದು ಸೃಜನಶೀಲ ಕಾದಂಬರೀ ರೂಪ ತಾಳಿ ನಿಮ್ಮ ಕಣ್ಮುಂದೆ ತೆರೆದುಕೊಂಡಿದೆ. ಆಚಾರ್ಯ ಚಾಣಕ್ಯನ ವ್ಯಕ್ತಿತ್ವವನ್ನು ಆತನ ಬಹುಮುಖ ವಿದ್ಯುತ್‌ಸಮ ವಿದ್ವತ್ತು, ಪಾದರಸ ಸಮ ಮುತ್ಸದ್ದಿತನ, ಪವಾಡಾತ್ಮಕ ಪುರುಷಾರ್ಥ ಪ್ರಾವೀಣ್ಯಗಳನ್ನು ವಿರಾಟ್ ಆಕಾರವಾಗಿ ಲೈಫ್ ಸೈಜ್‌ನ ರಿಲೀಫ್ ಪ್ರತಿಮೆಯ ರೂಪದಲ್ಲಿ ನಿಲ್ಲಿಸಿದ್ದಾರೆ. ಇದು ಚಾಣಕ್ಯನ ಸಮರ್ಥ ವ್ಯಕ್ತಿತ್ವದ ಯಥಾವತ್ತಾದ

ಐತಿಹಾಸಿಕ ವಾಕ್ತನೆ. ಆಗಿನ ಧಾರ್ಮಿಕ, ಸಾಮಾಜಿಕ ಸಮಕಾಲೀನ ಪ್ರಜ್ಞೆ ಚಾಚೂ ತಪ್ಪದಂತೆ ಇಲ್ಲಿ ಚಾಚಿಕೊಂಡಿದೆ.

ಚಾಣಕ್ಯ ಒಬ್ಬ ಐತಿಹಾಸಿಕ ವ್ಯಕ್ತಿ. ಒಬ್ಬ ಮಹಾನ್ ಕಿಂಗ್ ಮೇಕರ್. ಅಮರಕೃತಿ ಅರ್ಥಶಾಸ್ತ್ರವನ್ನು ಬರೆದ ಕೌಟಿಲ್ಯನೂ ಈತನೆ, ವಿಷ್ಣುಗುಪ್ತ. ಅಷ್ಟೇಕೆ ಕಾಮಸೂತ್ರ ರಚಯಿತ ವಾತ್ಸ್ಯಾಯನನೂ ಈತನೆ. ಬಹುನಾಮಧಾರಿಯಾದ ಈ ಘನ ವ್ಯಕ್ತಿ. ಪುರಾಣ ಪ್ರಸಿದ್ಧ ನಾದ ಐತಿಹಾಸಿಕ ವ್ಯಕ್ತಿ, ಈ ಕಾದಂಬರಿಯನ್ನು ಹಸ್ತಪ್ರತಿರೂಪದಲ್ಲಿ ಪ್ರಥಮ ವಾಚಕನಾಗಿ ಪೂರ್ತಿ ಓದಿದ್ದೇನೆ. ಅಧ್ಯಾಯ ಅಧ್ಯಾಯಕ್ಕೂ ಟೆಂಪೋ ಕುದುರುತ್ತ ಕ್ಲೈಮಾಕ್ಸ್ ಮುಟ್ಟುವಾಗ ಆಚಾರ್ಯ ಚಾಣಕ್ಯನ ಕೊನೆ! ಆ ಮಹಾತ್ಮನಿಗಾಗಿ ಕೊನೆಯ ಕಂಬನಿ ತಂತಾನೆ ಮಿಡಿಯು ತ್ತದೆ. ಸೂತಕದ ವಿಷಣ್ಣಭಾವ ಸ್ಪಂದನಗಳನ್ನಾವರಿಸಿಬಿಡುತ್ತದೆ. ಮುಂದೆ ಹನ್ನೆರಡನೆಯ ಶಲೆಗೆ ಚಂದ್ರಗುಪ್ತ ಚಾಣಕ್ಯರು ಮತ್ತೆ ಒಟ್ಟಿಗೆ ದೊರೆ-ಆಚಾರ್ಯರಾಗಿ ಕರ್ನಾಟಕದಲ್ಲಿ ಜನ್ಮನೆತ್ತುವರೆಂಬ ಕಲ್ಪನೆ ರೋಮಾಂಚಕಾರಿ!

ಇಷ್ಟಿದ್ದೂ ಈ ಚಾಣಕ್ಯನ ಬಗ್ಗೆ ನಮಗೆ ಬಹಳಷ್ಟು ತಿಳಿದಿಲ್ಲ. ನನಗೇ ತಿಳಿದಿರಲಿಲ್ಲ. ನಮ್ಮ ಆಚಾರ್ಯರ ಈ ಆಚಾರ್ಯಕೃತಿ, 'ಆಚಾರ್ಯ ಚಾಣಕ್ಯ'ನನ್ನು ಓದಿಕೊಂಡ ಮೇಲೆಯೆ ಬೆರಗುಪಡುವ ದಕ್ಕೆ ಅವಕಾಶ ದೊರಕಿತು. ಚಾಣಕ್ಯನ ಬಗ್ಗೆ ನಮಗೆ ದೊರಕುವ ಸಾಹಿತ್ಯವೆಂದರೆ ವಿಶಾಖದತ್ತ (ಕ್ರಿ.ಶ. 8ನೆಯ) ನ 'ಮುದ್ರಾ ರಾಕ್ಷಸ'ವೆಂಬ ಸಂಸ್ಕೃತ ನಾಟಕ, ಕೆಂಪುನಾರಾಯಣನ (ಹೊಸಗನ್ನಡ ಗದ್ಯವಿಧಾತ) 'ಮುದ್ರಾ ಮಂಜೂಷ', ಮೂಲ ಬಂಗಾಲಿಯ ದ್ವಿಜೇಂದ್ರ ಲಾಲ್ ರಾಯ್ ಅವರ ಚಂದ್ರಗುಪ್ತ ಚಾಣಕ್ಯರನ್ನು ಕುರಿತ ನಾಟಕದ ಕನ್ನಡ ಅನುವಾದಗಳು. (ಮಾ. ನಾ. ಚೌಡಪ್ಪ ಮತ್ತು ರಂಗನಾಥ್ ಹಿರೇಕೆರೂರ ಅವರದು.) ಕೂಡಲಿ ಶೃಂಗೇರಿ ಜಗದ್ಗುರುಗಳು – ಸಚ್ಚಿದಾ ನಂದ ಶಂಕರಭಾರತಿ ಅವರು–ಸಮರ್ಥವಾಗಿ ಕನ್ನಡಿಸಿರುವ 'ಕೌಟಲೀಯ

ಅರ್ಥಶಾಸ್ತ್ರ' ಮೈಸೂರು ರಾಜ್ಯದ ಸಂಸ್ಕೃತಿ ಇಲಾಖೆಯಿಂದ ಪ್ರಕಟ ವಾದುದು 1963 ರಲ್ಲಿ. ವಿದ್ವಾನ್ ಎನ್. ಎಸ್. ವೆಂಕಟನಾಥಾಚಾರ್ಯ ರಿಂದ ಪರಿಶ್ರಮ ಪೂರ್ವಕವಾಗಿ ಸಂಪಾದಿಸಲ್ಪಟ್ಟ ಕೌಟಲೀಯ ಸಂಸ್ಕೃತ ಅರ್ಥಶಾಸ್ತ್ರ ಸಂಸ್ಕೃತ ಪ್ರಸ್ತಾವನೆಯೊಂದಿಗೆ, ಪ್ರಖ್ಯಾತ ವಿದ್ವಾಂಸ ಆರ್. ಶ್ಯಾಮಾ ಶಾಸ್ತ್ರಿಗಳ ಸಂಸ್ಕೃತ ಉಪೋದ್ಘಾತಗಳೊಂದಿಗೆ ಮೈಸೂರು ಓರಿ ಯಂಟಲ್ ಸಂಶೋಧನ ಸಂಸ್ಥೆಯಿಂದ ಪ್ರಕಟವಾದದ್ದು, 1960 ರಲ್ಲಿ. (ಪ್ರಥಮ ಮುದ್ರಣ ಶ್ಯಾಮಾ ಶಾಸ್ತ್ರಿಗಳಿಂದ 1908.)

ವಿದ್ಯಾರ್ಥಿಯಾಗಿ, ಪ್ರಾಧ್ಯಾಪಕರಾಗಿ, ಪ್ರವಚನಕಾರರಾಗಿ ತಾವು ಮೊದಲಿನಿಂದಲೂ ಬೆಳೆಸಿಕೊಂಡು ಬಂದಿದ್ದ ಹಾಸ್ಯ ಪ್ರಜ್ಞೆಯನ್ನು ಅವರು ಆಗಾಗ ಪ್ರಕಟಿಸುತ್ತಿದ್ದರು. ಇಷ್ಟೇ ಅಲ್ಲ, ಸೃಜನಶೀಲ ಸಾಹಿತ್ಯದಲ್ಲೂ ಕೈಯಾಡಿಸಿ ಒಂದು ಮಟ್ಟವನ್ನು ತಲುಪಿದ್ದರು. ಈ ಎಲ್ಲ ಭೂಮಿಕೆ ಇರುವಾಗ ಈ 'ಆಚಾರ್ಯ ಚಾಣಕ್ಯ' ಕಾದಂಬರಿ ಪ್ರೊ| ನಾರಾಯಣಾ ಚಾರ್ಯರ ಕುಶಲ, ಸೃಜನಶೀಲ ಲೇಖನಿಯಿಂದ ಹೇಗೆ ಈ ರೂಪದಲ್ಲಿ ಮೈತಾಳಿ ಬಂತು ಎಂಬ ಬಗ್ಗೆ ಇನ್ನಷ್ಟು ಕುತೂಹಲ ಹೆಚ್ಚಿದಾಗ ಅವ ರೊಂದಿಗೆ ಸಂವಾದ ನಡೆಸಿದೆ.

○ ಈ ಅಪರೂಪವಾದ ಕಾದಂಬರಿ ಬರೆಯುವುದಕ್ಕೆ ತಮಗೆ ಪ್ರೇರಣೆ? ಇದರ ಮೂಲ ಮಾತೃಕೆಗಳೇನು ?

ಸುಮಾರು ನನ್ನ ಹದಿನೈದನೆಯ ವಯಸ್ಸಿನಲ್ಲಿ ಕೆಲವು ಕವನಗಳನ್ನು, ಇಪ್ಪತ್ತು ತುಂಬುವುದರೊಳಗಾಗಿ ಲಲಿತ ಪ್ರಬಂಧಗಳನ್ನು, ವಿಡಂಬನ ಲೇಖನ ಗಳನ್ನೂ ಬರೆದದ್ದುಂಟು. ಬೆಂಗಳೂರಿನ 'ವಿಕಟವಿನೋದಿನಿ', 'ವಿಜಯ ಮಾಲಾ' ಮುಂತಾದ ಮಾಸಿಕಗಳಲ್ಲಿ ಅವು ಪ್ರಕಟವಾಗಿವೆ. ಕೆಲವು ಸಣ್ಣ ಕಥೆಗಳು ಕೂಡ. ಭಾಸನ 'ಪ್ರತಿಮಾ', ವಿಶಾಖದತ್ತನ 'ಮುದ್ರಾರಾಕ್ಷಸ' ಗಳನ್ನೂ ವಿದ್ಯಾರ್ಥಿ ದೆಸೆಯಲ್ಲೇ (1954 ರ ಒಳಗೆ) ಗದ್ಯ ಪದ್ಯಾತ್ಮಕ

ವಾಗಿ ಕನ್ನಡಿಸಿದ್ದುಂಟು. ಆಂಗ್ಲದಲ್ಲಿ 'ದ ಫ್ಲೂಟ್ ಮಾಸ್ಟರ್' ಎಂಬ ಕಿರುಕಾದಂಬರಿಯನ್ನೂ ಬರೆದೆ. ಮುಂದೆ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರ ಪ್ರಭಾವದಿಂದ 'ಸೂರಪ್ಪನ ಸವಿನೆನಪುಗಳು', 'ನಮ್ಮೂರ ಸಂತೆ ಮಾಳ', 'ಅಡಿಗೆಯವರು ಬೇಕಾಗಿದ್ದಾರೆ' ಮುಂತಾದ ಹಾಸ್ಯ ಲೇಖನಗಳನ್ನು 'ವಿಕಟವಿನೋದಿನಿ'ಯಲ್ಲಿ ಪ್ರಕಟಿಸಿದ್ದೂ ಆಯಿತು.

ನಮ್ಮ ಮನೆಯಲ್ಲಿ 'ಮುದ್ರಾಮಂಜೂಷ'ದ (ಕೋರಿ ಕಾಗದ) ತಾಳೆಗರಿ ಹಸ್ತಪ್ರತಿ ಒಂದಿತ್ತು. ನನ್ನ ಅಣ್ಣಂದಿರು ನನ್ನ ತಾಯಿಯ ಸೋದರಮಾವಂದಿರಿಗೆ ಅದನ್ನು ಓದಿ ಹೇಳುತ್ತಿದ್ದಾಗ ಅದನ್ನು ಕೇಳುತ್ತಿದ್ದ ನನಗೆ (ಆಗ ೧೧ ವರ್ಷ) ಚಾಣಕ್ಯನ ವ್ಯಕ್ತಿತ್ವದ ಪ್ರಭಾವ ಎಷ್ಟಾಯಿತೆಂದರೆ ನಿದ್ರೆಯಲ್ಲೂ ಎಚ್ಚರದಲ್ಲೂ ಈ ಮಹಾಪುರುಷನೇ ಕಾಣತೊಡಗಿದ. ನಾನೂ ಹಾಗೇ ಆಗಬೇಕೆಂಬ ಹಂಬಲವೂ ಕಾಡಿತು. ಎಸ್.ಎಸ್.ಎಲ್.ಸಿ. ಪರೀಕ್ಷೆಯ ಆಂಗ್ಲ ಪಠ್ಯಪುಸ್ತಕದಲ್ಲಿ (ನನ್ನ ೧೪ನೆಯ ವಯಸ್ಸಿಗೆ) ಎ.ಎಸ್.ಪಿ.ಅಯ್ಯರ್ ಎಂಬ ಆಂಗ್ಲ ಕಾದಂಬರಿಕಾರರ 'ಚಾಣಕ್ಯ ಅ್ಯಂಡ್ ಚಂದ್ರಗುಪ್ತ' ಎಂಬ ಗ್ರಂಥದಿಂದ ಒಂದು ಅಧ್ಯಾಯವನ್ನೇ ಇಟ್ಟಿದ್ದರು. ಮುಂದೆ ಕಾಲೇಜಿನಲ್ಲಿ ಕೌಟಿಲ್ಯನ ಅರ್ಥಶಾಸ್ತ್ರದ ಅಧ್ಯಯನದ ಒಂದು ಹವ್ಯಾಸ. ಸಂಸ್ಕೃತದಲ್ಲಿ ಸಾಕಷ್ಟು ಗತಿ ಆಗ ನನಗೆ; ತಿಳಿದಷ್ಟರಿಂದಲೆ ಪುಲಕಿತನಾದ ಅನುಭವ. ಬಿ.ಎಸ್.ಸಿ. ಗೆ 'ಮುದ್ರಾರಾಕ್ಷಸ'ವೇ ಪಠ್ಯವಾಗಿ ನನ್ನ ಭಾಗ್ಯದ ಬಾಗಿಲು ತೆರೆಯಿತೆನ್ನಬೇಕು. ಕವಿ ಬರೆಯದ ಎಷ್ಟೋ ವಿಷಯಗಳು ಕಲ್ಪನೆಗಳು ನನ್ನನ್ನು ಕಾಡಹತ್ತಿದವು. ಅಭಿವ್ಯಕ್ತಿಯ ಸೌಖ್ಯವಿಲ್ಲದೆ ಅವು ಆಗ ನನ್ನನ್ನು ಒಳಗೇ ಹಿಂಡಿ, ಕನಸು-ನನಸುಗಳ ತೆಳುಪರದೆಯ ಅಂತರ ತಿಳಿಯದಂತೆ, ಮೂಕವೇದನೆಯ ಸಂಕಟದಲ್ಲಿ ಸಿಲುಕಿಸಿ ಬೇರೆ ಪಠ್ಯ ವಿಷಯಗಳಿಗೆ ಲಕ್ಷ್ಯಕೊಡದಂತೆಯೂ ಮಾಡಿಬಿಟ್ಟವು. ಸುಪ್ತವಾಗಿ ಚಾಣಕ್ಯನ ವ್ಯಕ್ತಿತ್ವದ ಚಿತ್ರಣವೊಂದು ಸುಮಾರು ನಲ್ವತ್ತು ವರ್ಷದ ಹಿಂದಿನಿಂದ ನನ್ನ ಮನಃ ಪಟಲದಲ್ಲಿ ಬೆಳೆಯಲು ಆರಂಭವಾದದ್ದು ಹೀಗೆ. ಶೃಂಗೇರಿ ಮಠದ ದಿವಾನರಿಂದ ಕಾಣಿಕೆಯಾಗಿ ದೊರೆತ (ರಾಮಾಯಣ ಪ್ರವಚನದಲ್ಲಿ 'ಅರ್ಥ

ಶಾಸ್ತ್ರ'ದ ಪ್ರಕ್ರಿಯೆಗಳನ್ನೂ ಪರಿಣಾಮಕಾರಿಯಾಗಿ ಬಳಸಿದ್ದರಿಂದ) ಕೌಟಿಲ್ಯನ ಅರ್ಥಶಾಸ್ತ್ರದ ಪ್ರತಿಯು ಕಾದಂಬರಿ ರಚನೆಗೆ ತೊಡಗಲು ಪ್ರಬಲ ಪ್ರೇರಣೆಯಾಯಿತು. ಆದರೆ ಕಟ್ಟಾ ವೈದಿಕ ಮನೆತನದಲ್ಲಿ, ಶಾಸ್ತ್ರಾಭಿರುಚಿಯ ವಾತಾವರಣದಲ್ಲಿ ಬೆಳೆದ ನನಗೆ ಕಥೆಕಾದಂಬರಿಯಂಥ ಸಾಹಿತ್ಯ ಹೆಣೆಯುವ ಬಗೆಗೆ 'ಇದೊಂದು ತಪ್ಪು ಕೆಲಸ' ಎಂಬ ಭಾವನೆ. ಆದರೆ ದೈವೀ ಪ್ರೇರಣೆ ಬೇರೆಯೇ ಆಗಿತ್ತು. ಶ್ರೀ ಗುಲ್ವಾಡಿಯವರ ಪ್ರೇರಣೆ, ಪ್ರೋತ್ಸಾಹದಂತೆ 'ಮಹಾಭಾರತ ಪಾತ್ರ ಪ್ರಪಂಚ' ಬರೆದು ಪ್ರಕಟಿಸಿದಾಗ, 'ಚಾಣಕ್ಯನ ಬಗೆಗೇ ಬರೆದರೆ?' ಎಂಬ ಪ್ರಚೋದನೆ ಪ್ರಬಲವಾಯಿತು. ಇದರ ಫಲವೇ 'ಆಚಾರ್ಯ ಚಾಣಕ್ಯ!'ಹದಿನೈದು ದಿನಗಳಲ್ಲಿ ಟಿ.ವಿ. ಮಹಾಭಾರತದ ದೃಶ್ಯಗಳ ಜೊತೆಗೆ ರೀತಿಯಲ್ಲಿ ಅಹೋರಾತ್ರಿ ನನ್ನನ್ನು ಹಿಡಿದು ಈ ಸುಪ್ತ ಪ್ರೇರಣೆ ಇಪ್ಪತ್ತೇಳು ಅಧ್ಯಾಯ ಬರೆಯಿಸಿಬಿಟ್ಟಿತು.

○ ಈ ಕಾದಂಬರಿಯ ಉದ್ದಕ್ಕೂ ಚಾಣಕ್ಯನ ಘನವಾದ ವ್ಯಕ್ತಿತ್ವ ಎದ್ದು ನಿಲ್ಲುತ್ತದೆ. ಅಲ್ಲಾ, ಈತನೇ ಕೌಟಿಲ್ಯನೂ ಆಗಿದ್ದ. ವಾತ್ಸ್ಯಾಯನನೂ ಆಗಿದ್ದ ಎಂದು ಹೇಳುತ್ತೀರಿ, ಚಾಣಕ್ಯನಿಗೆ ಇನ್ನೂ ಎಷ್ಟೆಷ್ಟು ಅನ್ವರ್ಥಕನಾಮಗಳಿದ್ದುವು ವಿವರಿಸುತ್ತೀರಾ?

– ಸಂಸ್ಕೃತ ಶಬ್ದಕೋಶಗಳು 'ಚಾಣಕ್ಯ, ಮಲ್ಲನಾಗ, ಪಕ್ಷಿಲ, ವಾತ್ಸ್ಯಾಯನ, ದ್ರಮಿಡ, ಕೌಟಿಲ್ಯ' ಇವರೆಲ್ಲ ಒಬ್ಬನೇ ಎಂದೂ ಅವು ಅವನ ಪರ್ಯಾಯ ನಾಮಗಳೆಂದೂ ಹೇಳುತ್ತವೆ. ಎ.ಎಸ್.ಪಿ. ಅಯ್ಯರ್ ಅವರೂ ಇದನ್ನು ಸಮನ್ವಯಿಸಿಯೇ ಬರೆದಿದ್ದಾರೆ. ಕಥೆಯ ದೃಷ್ಟಿಯಿಂದಂತೂ ಈ ಸಮನ್ವಯ ದಾರಿ ಒಂದು ವರವೇ ಆಯಿತು. ಗೋತ್ರದಿಂದ ಕೌಟಿಲ್ಯನೂ, ತಾಯಿಯ ಕಡೆಯ ಗೋತ್ರದಿಂದ (ಉಭಯದತ್ತಕನಾಗಿ) ವಾತ್ಸ್ಯಾಯನನೂ, ಹೆಸರಿನಿಂದ ಚಾಣಕ್ಯನೂ, ದೇಶದ ದೆಸೆಯಿಂದ ದ್ರಮಿಡನೂ, ಅನ್ವರ್ಥನಾಗಿ ಪಕ್ಷಿಲ, ಅನ್ವರ್ಥಕನಾಗಿ ಪಕ್ಷಿಲ, ಮಲ್ಲನಾಗನೂ ಒಬ್ಬನೇ ಇದ್ದದ್ದರಲ್ಲಿ ಸಂಶಯವು ಬರಲಿಲ್ಲ. ಅರ್ಥಶಾಸ್ತ್ರವಂತೂ ಅವನನ್ನು ಸಕಲ ಶಾಸ್ತ್ರಜ್ಞನನ್ನಾಗಿ ತೋರಿ ಬಗೆಹರಿಸಿತು.

○ ಈ ತಮ್ಮ ಹಸ್ತಪ್ರತಿಯ ಕಾದಂಬರಿಯನ್ನು ಓದುತ್ತಿದ್ದಾಗ ತಮ್ಮ ಮೇಲೆ ಅರ್ಥರ್ ಕಾನನ್‌ಡೈಲ್, ಅಗಾಥಾಕ್ರಿಸ್ಟೀ ಇಂಥಹ ಪತ್ತೇದಾರಿಕಾರರೂ ಪ್ರಭಾವ ಬೀರಿದಂತೆ ಕಾಣುತ್ತದಲ್ಲ? ಚಾಣಕ್ಯನ ಕಥೆಯು ರಹಸ್ಯ, ಪವಾಡ, ನಿಗೂಢಗಳ ನಿಧಿಯಾಗಿತ್ತೆ ?

-ಚಿಕ್ಕ ವಯಸ್ಸಿನಿಂದಲೇ ನಾನು ಕಾನನ್ ಡೈಲ್ ಅವರ ಶೆರ್‌ಲಾಕ್ ಹೋಮ್ಸನನ್ನು ಕುರಿತ ಎಲ್ಲ ಕಥೆಗಳನ್ನು ಓದಿದ್ದೆ. ಹಲವು ಸಲ ಕ್ರಿಸ್ಟೀ ಕಾದಂಬರಿಗಳನ್ನು ಓದಿದ್ದುಂಟಾದರೂ ಅವರ ಶೈಲಿ, ರಚನಾ ವಿಧಾನ ನನಗೆ ಹಿಡಿಸಲಿಲ್ಲ. ಈಚಿನ ಪ್ರಬುದ್ಧ ಲೇಖಕರೂ-ಲುಡ್ಲೊಂ ಸಂಥವರೂ-ನನಗೆ ಬಹುಮೆಚ್ಚುಗೆಯಾದವರು. ಪಟಚಿತ್ರಣದಲ್ಲಿ ಆಲ್‌ಫ್ರೆಡ್ ಹಿಚ್‌ಕಾಕ ನನ್ನೂ ನಾನು ಮೆಚ್ಚಿದವ. ಹೇಗೆ ಸ್ವಾರಸ್ಯ ಕುದುರುವಂತೆ ಬರೆಯಬಹುದೆಂಬುದನ್ನು ಇಂಥ ಹಲವಾರು ಆಂಗ್ಲ ಬರೆಹಗಾರರಿಂದ ನಾನು ಅರಿತೆನಾದರೂ ಮನರಂಜನೆಯ ಜೊತೆಗೆ ಸ್ಥಿರ ಸಾಹಿತ್ಯ ಮೌಲ್ಯಗಳನ್ನೂ ಅಳವಡಿಸಲು ಬರುವುದೆಂಬುದನ್ನು ನನ್ನ ಬುದ್ಧಿಯೇ ನನಗೆ ಕಲಿಸಿತು. 'ಥ್ರಿಲರ್' ಕಥೆಗಳ ಕುತೂಹಲ (ಸಸ್ಪೆನ್ಸ್)ದ ಜೊತೆಗೆ ಸ್ಥಾಯಿವ ಪ್ರಭಾವದ ವ್ಯಕ್ತಿಚಿತ್ರಣವೂ, ಜೀವನ ಪರಿಚಯವೂ, ಇತಿಹಾಸದ ಬೋಧೆಯೂ ಶಾಸ್ತ್ರಗ್ರಂಥದ ಸೂಕ್ಷ್ಮ ಪ್ರಕ್ರಿಯೆಗಳ ಅಳನಡಿಕೆಯೂ ಸಾಧ್ಯವೆಂಬುದನ್ನು 'ಮುದ್ರಾರಾಕ್ಷಸ','ಮುದ್ರಾಮಂಜೂಷ'ಗಳು ಒಂದಿಷ್ಟು ಮನವರಿಕೆಮಾಡಿಕೊಟ್ಟವು ನನ್ನ ಆಂಗ್ಲ ಸಾಹಿತ್ಯಾಭ್ಯಾಸ. ಕೃಷಿ, ಬೋಧನೆಗಳು ಸಮರ್ಥ ಹಿನ್ನೆಲೆ ಆದವು. ಭಾರತೀಯ ಇತಿಹಾಸ, ಸಾಹಿತ್ಯಗಳ ಅಭ್ಯಾಸಗಳು ಸಾಮಗ್ರಿ ಕೊಟ್ಟವು. ವಾರಪತ್ರಿಕೆಯ ಮಿತಿ ಇರದಿದ್ದರೆ ಚಾಣಕ್ಯನ ಬಗೆಗೆ ಇನ್ನೂ ಹತ್ತೆಂಟು ಅಧ್ಯಾಯಗಳನ್ನು ಜೋಡಿಸುತ್ತಿದ್ದೆನೇನೋ! ಚಾಣಕ್ಯನ ಕಥೆಯು ರಹಸ್ಯ, ಪವಾಡ, ನಿಗೂಢಗಳ ನಿಧಿ, ಗಣಿ ಎಂಬುದು ಸತ್ಯ.

○ ಚಾಣಕ್ಯನಂಥ ಪಾತ್ರವನ್ನು ಚಿತ್ರಿಸುವಾಗಲೆಲ್ಲಾ ತಮ್ಮ ಕಣ್ಣ ಮುಂದೆ ಆತನ ವ್ಯಕ್ತಿತ್ವ ಯಾವ ರೀತಿ ರೂಪ ತಾಳಿ ನಿಂತಿತ್ತು? ಈ ಪಾತ್ರ

ವನ್ನು ಹೇಗೆ ಬೆಳೆಸಿಕೊಂಡು ಬಂದಿದ್ದೀರಿ? ಇದರ ಸ್ವಾರಸ್ಯವನ್ನು ಸ್ವಲ್ಪ ವಿವರಿಸುತ್ತೀರಾ ?

-ನನ್ನ ಹಿರಿಯಣ್ಣ ಕೊಂಚ ಚಾಣಕ್ಯನ ವ್ಯಕ್ತಿತ್ವವನ್ನು ಹೋಲುತ್ತಿದ್ದರು. ಹೊರಗಿನಿಂದ ಮನೆಗೆ ಬಂದೊಡನೆಯೇ, 'ನನ್ನ ಟೇಬಲ್ ಮೇಲೆ ಕೈಯಾಡಿಸಿದವರಾರು ?' ಎಂದು ಕೇಳಿ, ಆಕಸ್ಮಿಕವಾಗಿ ನಡೆದುದನ್ನು ವೈಜ್ಞಾನಿಕವಾಗಿ ತಿಳಿಯುತ್ತಿದ್ದರು. 'ಕ್ರಾಸ್ ಎಕ್ಸಾಮಿನೇಶನ್' ನಡೆಸುವಂತೆ ತಮಗೆ ಬೇಕಾದ ಸತ್ಯವನ್ನು ಇನ್ನೊಬ್ಬರಿಂದ ಬಾಯಿಬಿಡಿಸುತ್ತಿದ್ದರು. ನಿಃಸ್ವಾರ್ಥತೆ, ತ್ಯಾಗ, ಕಾರ್ಯನಿಷ್ಠೆ, ಸತ್ಯತತ್ಪರತೆ, ಜಪತಪಾನುಷ್ಠಾನ, ಧೂರ್ತನಂತೆ ಕಾಣುವ ನಿರ್ಘೃಣ ದೃಷ್ಟಿ, ಚೈತನ್ಯ ಶಕ್ತಿ-ಇವುಗಳ ಸಮ್ಮೇಳನವನ್ನು ತನ್ನ ಅಣ್ಣನಲ್ಲಿ ಪ್ರತ್ಯಕ್ಷ ಕಂಡ ಮೇಲೆ ಚಾಣಕ್ಯನಲ್ಲಿ ಇವುಗಳ ವೈಭವೀಕರಣಕ್ಕೆ ಪ್ರೋಷಣೆ ಆಯಿತು. ಉಳಿದ ವಿಷಯದಲ್ಲಿ ನನ್ನ ಸಂಸ್ಕೃತ ಗುರುಗಳಾಗಿದ್ದ ರಾಮಶಾಸ್ತ್ರಿಗಳೆಂಬವರ ಆಕಾರ, ಪ್ರವೃತ್ತಿ, ಮಾತಿನ ಶೈಲಿ- ಇವುಗಳನ್ನು ನನ್ನ ಚಾಣಕ್ಯ ಕಲ್ಪನೆಯ ಮೂಲ ಭಿತ್ತಿಯನ್ನಾಗಿ ಮಾಡಿಕೊಂಡಿರುವುದೂ ಸಂಭವ. ನನ್ನ ಅಧ್ಯಾತ್ಮ ಗುರು (ಸನ್ಯಾಸಿ)ಗಳೊಬ್ಬರ ತೇಜಸ್ಸು, ತ್ಯಾಗ, ಪಾಂಡಿತ್ಯ, ಶಿಷ್ಯ ವಾತ್ಸಲ್ಯಗಳೂ ಇಲ್ಲಿ ಸಮ್ಮಿಳಿತಗಳಾಗಿವೆ. 'ನಿಜ ಚಾಣಕ್ಯನನ್ನೇ ನಾನು ಕಂಡಿದ್ದರೆ !' ಎಂಬ ಹಂಬಲ ಈಗಲೂ ನನ್ನನ್ನು ಕಾಡುತ್ತದೆ! ಅದೊಂದು ಕೊರತೆಯೇ.

○ ಮಹಾಭಾರತದಲ್ಲಿ ಶ್ರೀಕೃಷ್ಣನೂ ಶುಕ್ರ ನೀತಿಯನ್ನು ಅನುಸರಿಸುವ ಅನಿವಾರ್ಯತೆಯನ್ನು ಸೂಚಿಸಿದ್ದೀರಿ. ಚಾಣಕ್ಯನಿಗೂ ಅದು ಅವಶ್ಯವಾಗಿ ಕಂಡಿತು ಎಂದಿದ್ದೀರಿ. ಚಾಣಕ್ಯ ಸ್ವಲ್ಪ ಕುಟಿಲ ಪಾತ್ರ ಎಂದು ಹೇಗೋ ಪ್ರತೀತಿ ಬಂದಿದೆ. ಚಾಣಕ್ಯನು ಶ್ರೀಕೃಷ್ಣನ ಉದಾತ್ತತೆಯನ್ನು ನಿಲುಕಬಲ್ಲನೆ ?

- ಖಂಡಿತ. ಚಾಣಕ್ಯನಿಗೆ ಶ್ರೀಕೃಷ್ಣನ ವ್ಯಕ್ತಿತ್ವ. ಸಾಧನೆಗಳ ಸ್ಪಷ್ಟ ಕಲ್ಪನೆ ಇದ್ದಿರಬೇಕು. ನಿರೂಪಣೆಗೆ ಇದು ಗ್ರಂಥ ವಿಷಯವಾಗು ತ್ತಿದೆ, ಗಾತ್ರದಲ್ಲಿ. ಇಬ್ಬರೂ ಏಕ್ರ ನೀತಿಯನ್ನು ಅನಿವಾರ್ಯವಾಗಿ ಅನುಸರಿಸಿದವರೆ 'ಕುಟಿಲ' ಎಂಬ ಕೆಟ್ಟ ಬಿರುದು ಇಬ್ಬರಿಗೂ ಇದ್ದೇ ಇದೆ! ಅದು ಅಜ್ಞರು ಕೊಟ್ಟ ಪ್ರಶಸ್ತಿ ಅಷ್ಟೆ. ಕೃಷ್ಣ ಎಷ್ಟು ನಿಃಸ್ವಾರ್ಥಿಯೋ, ಚಾಣಕ್ಯನೂ ಅಷ್ಟೇ, ಇಬ್ಬರೂ ಸಮರ್ಥ ತಂತ್ರಗಾರರು. ಸಿದ್ಧಾಂತ ನಿಷ್ಠರು. ಸಂಕ್ಷಿಪ್ತವಾಗಿದ್ದು ಚಾಣಕ್ಯನ ಕಥೆ ಮಾಡುವ ಸಾಂದ್ರ ಪರಿಣಾಮವನ್ನು, ವಿಸ್ತಾರದ ಕೃಷ್ಣ ಕಥೆ-ಮಹಾಭಾರತದ ವಿವಿಧ ಪಾತ್ರಗಳ ಸಾಗರ ರಾಶಿಯಲ್ಲಿ – ಮಾಡಲಾಗದುದು ಒಂದು ದುರ್ದೈವ. ಶ್ರೀಕೃಷ್ಣನ ಆತ್ಮಕಥೆಯ ರೀತಿಯಲ್ಲೋ, ಸಾಹಸಕಥೆಯ ಶೈಲಿಯಲ್ಲೋ ಒಂದು ಕಾದಂಬರಿಯನ್ನು ಬರೆದು ಕೃಷ್ಣನ ವ್ಯಕ್ತಿತ್ವವನ್ನು ನಿರೂಪಿಸುವ ಬಯಕೆ ನನಗಿದೆ. ರಾಮಾಯಣ, ಮಹಾಭಾರತಗಳ, ಭಾರತೀಯ ಮೌಲ್ಯಗಳ, ಜೀವನ ಕ್ರಮದ, ಅರ್ಥೈಕೆಯ ರೀತಿಯ ನೇರ ಉದಾಹರಣೆಯೇ ಚಾಣಕ್ಯನೆನ್ನಬಹುದು. ಅರ್ಥಶಾಸ್ತ್ರದಲ್ಲಿ ಇದಕ್ಕೆಲ್ಲ ಪುಷ್ಟಿಯಿದೆ.

○ ಈ ಕಾದಂಬರಿಯ ವೈಶಿಷ್ಟ್ಯಗಳನ್ನು ಕುರಿತು ಇನ್ನೇನು ಹೇಳ ಬಯಸುತ್ತೀರಿ ?

- ಈ ಮೊದಲು ಕನ್ನಡದಲ್ಲಿ ಯಾವ ಕಾದಂಬರಿಯನ್ನೂ ನಾನು ಬರೆದವನಲ್ಲ. ಇದನ್ನು ಕಾದಂಬರಿಯಂತೆ ಬರೆಯಲೂ ಹೊರಟವನಲ್ಲ. ಆ ಬಗ್ಗೆ ಸಂಕೋಚದ ಮಿತಿಯಿಂದಲೂ ನರಳುತ್ತಿದ್ದವನು ನಾನು. ಚಾಣಕ್ಯನ ಕುರಿತು ಪ್ರಭಾವಶಾಲೀ ವ್ಯಕ್ತಿತ್ವ ನಿರೂಪಣೆಗೆ, ಅರ್ಥ ಶಾಸ್ತ್ರದ ಸರಳ ಪರಿಚಯದ ಬಗೆಗೆ ಯಾವ ರೀತಿಯ ಅಭಿವ್ಯಕ್ತಿ ಮಾಧ್ಯಮ ಸೂಕ್ತವೆಂದು ಬಹುವಾಗಿ ಚಿಂತಿಸಿದೆ. ದೇವುಡು ಅವರ 'ಮಹಾಬ್ರಾಹ್ಮಣ', 'ಮಹಾಕ್ಷತ್ರಿಯ', 'ಮಹಾದರ್ಶನ'ಗಳೂ ಕಣ್ಮುಂದೆ ಸುಳಿದವು. ಕನ್ನಡಿಗರಿಗೆ ಮರೆತು ಹೋದ ದೇವುಡು ನನಗೆ ಮರೆಯದ ಸ್ಫೂರ್ತಿ! ಅಲ್ಲದೆ ಟಿವಿ ಮಾಧ್ಯ

ಮದ ವಿಶ-ವ್ಯಾಪ್ತಿಗಳಿಗೆ ಒಳಪಡುವಂತೆ ಮಾಡಿದರೆ ಚೆನ್ನ ಎಂಬ ನಿರ್ಧಾರಕ್ಕೆ ಬಂದೆ.

ಅಮಾನುಷ ಅತಿಮಾನುಷ ವ್ಯಕ್ತಿತ್ವವೊಂದು ಕೆಲಸ ಮಾಡಿ ಪ್ರಭಾವ ಬೀರಿದ್ದರೆ ಇತಿಹಾಸ ಥ್ರಿಲರ್ ಆಗಬಹುದೆಂಬುದಕ್ಕೆ ಚಾಣಕ್ಯನೇ ಜ್ವಲಂತ ನಿದರ್ಶನ. ಓದುಗರಿಗೆ ಮೆಚ್ಚುಗೆಯಾದರೆ ಅಗಸ್ತ್ಯ ಕುರಿತು ಇದೇ ಬಗೆಯ ಕಾದಂಬರಿ ಬರೆಯುವ ಕುತೂಹಲವಿದೆ. ●

[ “ಅಗಸ್ತ್ಯ” ಕಾದಂಬರಿ ಬರೆದಾಗಿದ್ದು
ಈಗ ಪ್ರಕಟನೆಯ ದಾರಿ ಕಾಯುತ್ತಿದೆ.]

# ಲೇಖಕನ ಮಾತು

ತನ್ನ 'ಮಕ್ಕಳ' ಬಗೆಗೆ ತಂದೆಯಾದವನು ತಾನೇ ಮಾತಾಡಬಾರ ದೆಂಬ ಲೋಕನೀತಿಯೊಂದುಂಟು. ಲೋಕವೇ ಆ 'ಮಕ್ಕಳು' ಶಿಷ್ಟರೋ ಹೇಗೆಂಬುದನ್ನು ಹೇಳಿದರೆ, ಅಪ್ರಾರ್ಥಿತನಾದ ಈ ಕೊಂಡಾಟವನ್ನು ಕೇಳಿ, ಅವನು ಮೌನದಿಂದ ಸಂತೋಷವನ್ನನುಭವಿಸಬೇಕೆಂಬುದು ಶಿಷ್ಟರೀತಿ. ಆದರೆ ವಿನಾ ಕಾರಣ ಅಲ್ಲೊಬ್ಬರು ಇಲ್ಲೊಬ್ಬರು ಆ ಮಕ್ಕಳ ಬಗೆಗೆ ದೋಷಾ ರೋಪಣೆಗಳನ್ನು ಮಾಡಿ, ಅಪವಾದ ಹೊರಿಸಲು ಮುಂದಾದರೆ, ಯೋಗ್ಯ ತಂದೆಯ ಕರ್ತವ್ಯವೇನು ? ತನ್ನ ಮಕ್ಕಳು ಬೆಳೆದು ಬಂದ ಹಿನ್ನೆಲೆ, ಸಂಸ್ಕೃತಿ, ಅವರು ಮೈ ಗೂಡಿಸಿಕೊಂಡು ಬಂದ ಚಾರಿತ್ರ್ಯ, ಶೀಲಗಳಿಗೆ ತನ್ನ, ತನ್ನ ಪರಂಪರೆಯ, ಕುಟುಂಬದ ವಾತಾವರಣ ಎಷ್ಟು ಕಾರಣವೆಂಬುದನ್ನು ವಿವರಿಸಿ, ಅವರ ಮೇಲಿನ ದೋಷಾರೋಪಗಳು ಸರಿಯೋ ತಪ್ಪೋ ಎಂಬ ಪ್ರಶ್ನೆಗೆ ಲೋಕವೇ ಉತ್ತರಿಸಿಕೊಳ್ಳಲು ಸಹಾಯಕನಾಗುವುದು, ಮಾತ್ರ.

ಅದೇ ಕೆಲಸವನ್ನು ಈಗ ಈ ಕೃತಿಯ ಬಗೆಗೆ ಲೇಖಕನಾದ ನಾನು ಮಾಡಬೇಕಾಗಿ ಬಂದಿದೆ ! ೧೯೯೧ ೧೯೯೨ ರ ನಡುವೆ ಇಪ್ಪತ್ತೇಳು ಕಂತು ಗಳಲ್ಲಿ ವಾರವಾರವಾಗಿ, 'ತರಂಗ' ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಹಂದು ಬಂದ ಈ ಕೃತಿಯನ್ನು ಓದಿ ಮೆಚ್ಚಿದ ಅನೇಕ ಸಹೃದಯರ ಪತ್ರಗಳು 'ತರಂಗ'ದಲ್ಲೂ ಪ್ರಕಟವಾದವು; ನನಗೂ ಒಹಳ ಬಂದವು. ಕೆಲವು ಜನ ಓದುಗರು ಮಾತ್ರ (ಒಂದು ಮತದವರು,) ಇದರಲ್ಲಿ ಬರುವ 'ಜೀವ ಸಿದ್ಧಿ'ಯ ಪಾತ್ರವನ್ನೂ, ಚಂದ್ರಗುಪ್ತನ ಅರಮನೆಯಲ್ಲಿ ಪ್ರಭಾವ ಬೀರಿ, ಚಾಣಕ್ಯನ ನಿರ್ಗಮನಾ ನಂತರ, ದೊರೆಯು ಮೇಲೆ ವೈದಿಕೇತರ ಪ್ರಭಾವ ಹೆಚ್ಚಿಸಿ, ಅವನನ್ನು ಸಂನ್ಯಾಸಿಯನ್ನಾಗಿಸಿದ ಕಥೆಯ ಭಾಗಕ್ಕೆ ಸಂಬಂಧಿಸಿದ ವ್ಯಕ್ತಿಗಳ, ಸಂದರ್ಭಗಳ ಭಾಗವನ್ನು ಆಕ್ಷೇಪಿಸಿದರು. ಯಾರ ಮನ

ನೋಯಿಸುವುದೂ ನನ್ನ ಉದ್ದೇಶ್ಯವಾಗಿರಲಿಲ್ಲ ಎಂದು ಆಗಲೂ ಪತ್ರಿಕೆ ಯಲ್ಲಿ ಬರೆದೆ, ಈಗಲೂ ಸ್ಪಷ್ಟ ಪಡಿಸಬಯಸುತ್ತೇನೆ. 'ತರಂಗ' ಧಾರಾ ವಾಹಿಯ ಕೊನೆಯ ನಾಲ್ಕು ಅಧ್ಯಾಯಗಳನ್ನು ಅಲ್ಲಲ್ಲಿ ಪರಿಷ್ಕರಿಸಿ, ಆಕ್ಷೇಪಾರ್ಹವೆನಿಸಿದ ಭಾಗಗಳನ್ನು ತೆಗೆದು, ಮೂಲದಲ್ಲಿ ನಾನು ಬರೆದು ದನ್ನು ತಿರುಚದಂತೆಯೇ ಈಗ ಮತ್ತೆ ಸಮಗ್ರ ಕೃತಿಯನ್ನು ಈ ಪುಸ್ತಕ ರೂಪದಲ್ಲಿ ಹೊರತರುತ್ತಿದ್ದೇನೆ. ಇದರಿಂದ ಮೆಚ್ಚುಗೆ ವ್ಯಕ್ತ ಪಡಿಸಿದವ ರಿಗೂ, ಆಕ್ಷೇಪ ಮಾಡಿದವರಿಗೂ ಸಮವಾಗಿ ಸಮಾಧಾನವಾದೀತೆಂದು ಆಶಿಸುತ್ತೇನೆ. ಈ ಸಂಬಂಧದಲ್ಲಿ ಲೇಖಕನ ಹೊಣೆ, ಅವನು ಸಿಕ್ಕಬಹು ದಾದ ಇಕ್ಕಟ್ಟುಗಳು, ಇತಿಹಾಸ-ಕಲ್ಪನೆಗಳ ನಡುವೆ ತೇಲಾಡಬೇಕಾದ ನಿರ್ಬಂಧ ಸ್ಥಿತಿ, ಅವನ ಓದುಗಾರಿಕೆಯ ವಿಸ್ತಾರ, ಪ್ರಾಮಾಣಿಕತೆ, ಎಲ್ಲ ರನ್ನೂ ಮೆಚ್ಚಿಸಲಾಗದ ಪರಿಮಿತಿ, ತನಗೆ ತಾನೇ ನಿಷ್ಠೆಯಿಂದಿರಬೇಕಾದ ಅವಶ್ಯಕತೆ, ಇತ್ಯಾದಿಗಳ ಹಿನ್ನೆಲೆಯಲ್ಲಿ ಪ್ರಕೃತ ಕೃತಿಯ ಬಗೆಗೆ ಈ ನಾಲ್ಕು ಮಾತುಗಳನ್ನು ನಿವೇದಿಸುತ್ತೇನೆ.

ಸರ್ ವಾಲ್ಟರ್ ರ್‍ಯಾಲೇ ಎಂಬ ಸಾಹಸಿಗ, ಪ್ರವಾಸೀ, ರಾಜಕಾರಣಿ, ಬರೆಹಗಾರನನ್ನು ಒಮ್ಮೆ ಇಂಗ್ಲೆಂಡಿನ ಟವರ್ ಎಂಬಲ್ಲಿ ಸೆರೆಮನೆಗೆ ಹಾಕಿದ್ದ ರಂತೆ! ಸ್ತಂಭಾಕೃತಿಯ ಆ ಬಂದೀಖಾನೆಯ ಮೇಲಂತಸ್ತಿನ ಕೋಣೆಯಲ್ಲಿ ಅವನು ಹಾಗೆ ಬಂಧಿತನಾಗಿದ್ದಾಗ 'ಪ್ರಪಂಚದ ಇತಿಹಾಸ'ವೆಂಬ ದೊಡ್ಡ ಗ್ರಂಥದ ಮೊದಲನೇ ಭಾಗವನ್ನು ಆಗ ಬರೆದಾಗಿದ್ದು ಎರಡನೆಯದನ್ನು ಬರೆಯುತ್ತಿರುವಾಗ ಒಂದು ಘಟನೆ ಅಲ್ಲಿ ಸಂಭವಿಸಿತಂತೆ! ಮೇಲಂತಸ್ತಿನ ತನ್ನ ಸೆರೆಮನೆಯಿಂದ ಒಮ್ಮೆ, ಕೆಳಗಡೆ, ಗೋಪುರದ ಮೆಟ್ಟಿಲುಗಳ ದ್ವಾರದ ಬಳಿ, ಆಕಸ್ಮಾತ್ತಾಗಿ ಇಣುಕಿ ನೋಡಿದನಂತೆ, ಹೊತ್ತು ಕಳೆಯಲು ದಾರಿ ಯಿಲ್ಲದೆ! ಆಗ ಯಾವನನ್ನೋ ಯಾರೋ ಅಲ್ಲಿ ಕೊಲೆ ಮಾಡಿದುದನ್ನು ಸ್ವತಃ ತನ್ನ ಕಂಗಳಿಂದಲೇ ಕಂಡನಂತೆ! ಕುತೂಹಲ ತಡೆಯಲಾರದೆ, "ಇದಾರು ಕೊಲೆಯಾದುದು, ಯಾರು ಮಾಡಿದವರು, ಏಕೆ?'' ಎಂದು ಅಲ್ಲಿ, ಕೆಳಗಡೆ, ಅದನ್ನು ಪ್ರತ್ಯಕ್ಷವಾಗಿ ಕಂಡವರನ್ನು ಕರೆದು ಬಗೆಬಗೆಯಿಂದ ಕೇಳಿದಾಗ, ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ಆ ಎಲ್ಲರೂ ಸಮವಾಗಿ

ಕಂಡ ಘಟನೆಯ ಬಗ್ಗೆ ಹೇಳಿದರಂತೆ!! ಕೊಲೆಗಾರನನ್ನೇ ಕೊಲೆ ಮಾತ ಲ್ಪಟ್ಟವನೆಂದೂ, ಸತ್ತವನನ್ನೇ ಕೊಂದನೆಂದೂ, ಪರಸ್ಪರ ವಿರುದ್ಧ ರೀತಿ ಯಲ್ಲಿ, ಪ್ರತ್ಯಕ್ಷನೋಡಿದವರೆಲ್ಲರೂ, ಪ್ರಮಾಣ ಮಾಡಿ ಹೇಳಿದ್ದು, ಇವನಿಗೆ ತುಂಬ ಗೊಂದಲ ಹಿಡಿಸಿ, ಇಷ್ಟು ಸಣ್ಣ ಘಟನೆಯ ಬಗೆಗೆ, ತನ್ನೆದುರೇ ನಡೆದುದಕ್ಕೆ, ಸಾಕ್ಷಿಗಳಿದ್ದೂ, ತಾನು ದೃಢನಾಗಿ, ಖಚಿತವಾಗಿ, ಸತ್ಯವನ್ನು ಮನವರಿಕೆ ಮಾಡಿಕೊಳ್ಳದುದು ಸಾಧ್ಯವಾಗದಿರುವಾಗ, ದೂರದ ಗತಕಾಲದ ಐತಿಹಾಸಿಕಗಳೆಂದು ಭಾವಿಸಲಾದ ಸಂಗತಿಗಳ ಬಗ್ಗೆ ತಾನು ಬರೆದುದು ಮೂರ್ಖತನವೆನಿಸಿ, ತಾನು ಬರೆದಿದ್ದ ಪ್ರಪಂಚದ ಇತಿಹಾಸದ ಮೊದಲ ಭಾಗವನ್ನು ಹರಿದು ಚೂರು ಮಾಡಿ, ಸುಟ್ಟು ಹಾಕಿದನಂತೆ!! ಇತಿಹಾಸ ವನ್ನು ಬರೆಯುವುದು ಎಷ್ಟು ಕಠಿಣವೆಂಬುದಕ್ಕೆ ಉದಾಹರಣೆಯನ್ನಾಗಿ ಜಾರ್ಜ್ ಆರ್‌ವೆಲ್ ಎಂಬ ಮಹಾಶಯನು ಈ ಪ್ರಸಂಗವನ್ನು ಉದಾಹರಿಸಿ ದ್ದಾನೆ!!!

ನಾನು ಆಚಾರ್ಯ ಚಾಣಕ್ಯನನ್ನು, ಅವನ ಕಾಲದ ಭಾರತವನ್ನು, ಅವನ ಚರಿತ್ರೆಯ ಘಟನಾವಳಿಗಳನ್ನು ಕಣ್ಣಿಂದ ಕಂಡವನಲ್ಲ! (ನನ್ನ ಕಥೆಯ ಓದುಗರೂ ಸಹ!) ನಾನು ಬರೆದುದು ಬರಿಯ ಇತಿಹಾಸವೂ ಅಲ್ಲ! ಇತಿಹಾಸಾಧಾರಿತ ಕಥಾನಕ ಮಾತ್ರ! ಇದರಲ್ಲಿನ ಎಲ್ಲ ಭಾಗಗಳಿಗೂ ಚಾರಿತ್ರಿಕ ದಾಖಲೆಗಳನ್ನೂ ಆಧಾರಗಳನ್ನೂ ಯಾರೂ ಒದಗಿಸಲಾರರು. ಚಾಣಕ್ಯನೇ ಬರೆದ ಅರ್ಥಶಾಸ್ತ್ರವಿದೆ! ಆದರೆ ಅದು ಕೌಟಲೀಯವೆಂಬ ಹೆಸರಿಂದ ಪ್ರಸಿದ್ಧವಾಗಿದ್ದು, ಈ ಕೌಟಿಲ್ಯನೂ ಚಾಣಕ್ಯನೂ ಒಬ್ಬನೇಯೋ ಬೇರೆ ಬೇರೆಯೋ ಎಂದು ಶಂಕಿಸುವವರಿದ್ದಾರೆ! ('ಕೌಟಿಲ್ಯ' ಎಂದು ಅವನ ಹೆಸರನ್ನೇ ವಕ್ರ ಮಾಡಿ ಕರೆಯುವ ರೂಢಿಯೂ ಬಂದು ಬಿಟ್ಟಿದೆ). ಅರ್ಥ ಶಾಸ್ತ್ರದ ಕೊನೆಯಲ್ಲಿ ಗ್ರಂಥಕಾರನೇ ನೇರವಾಗಿ ತನ್ನ ಹೆಸರನ್ನು ಹೇಳಿ ಕೊಳ್ಳದೆ:

**ಯೇನ ಶಾಸ್ತ್ರಂ ಚ ಶಸ್ತ್ರಂ ಚ ನಂದರಾಜಗತಾ ಚ ಭೂಃ ।**
**ಅಮರ್ಷೇಣೋದ್ಧೃತಾನ್ಯಾಶು ತೇನ ಶಾಸ್ತ್ರಮಿದಂ ಕೃತಂ ॥**

ಎಂದು ಪರೋಕ್ಷವಾಗಿ ತಾನಾರೆಂಬುದನ್ನು ಸೂಚಿಸಿದ್ದಾನೆ. "ಯಾವನು ಕೋಪಾತಿಶಯದಿಂದ ಶಾಸ್ತ್ರವನ್ನೂ, ಶಸ್ತ್ರವನ್ನೂ, ನಂದ ರಾಜರ ವಶ ವಾಗಿದ್ದ ಭೂಮಿಯನ್ನೂ, ಒಂದೇ ಸಲಕ್ಕೆ (ಇದಕ್ಕಿದ್ದಂತೆ) ಮೇಲೆತ್ತಿ ಉದ್ಧರಿಸಿದನೋ, ಅವನಿಂದ ಈ ಶಾಸ್ತ್ರವು ಬರೆಯಲ್ಪಟ್ಟಿತು.'' ಎಂದು. ಇದರಿಂದ ಚಾಣಕ್ಯನೇ, ನಂದರನ್ನು ಕೊಂದು, ಮೌರ್ಯರಾಜ್ಯ ಸ್ಥಾಪಕನಾಗಿ, ಈ ಶಾಸ್ತ್ರವನ್ನು ಬರೆದನೆಂದ. ತಿಳಿಯುತ್ತದೆ. ರೂಢಿಯಲ್ಲಿರುವ ಚಾಣಕ್ಯನ ಕಥೆಯಲ್ಲಿ ನಂದನಿಗ್ರಹದ ಕಥೆಯಿರುವುದಷ್ಟೆ! ಈ ಶ್ಲೋಕವನ್ನೇ ನೋಡಿ ದರೂ ಅವನು ಶಸ್ತ್ರ ಶಾಸ್ತ್ರಗಳೆರಡರಲ್ಲೂ (ಪರಶುರಾಮರಂತೆ, ದ್ರೋಣ ರಂತೆ, ಶುಕ್ರಾಚಾರ್ಯ, ಬೃಹಸ್ಪತಿಗಳಂತೆ) ನಿಪುಣನೂ, ಅನ್ಯಾಯ ಆಕ್ರಮಗಳನ್ನು ಎಷ್ಟೂ ಸಹಿಸದ ಕೋಪಿಷ್ಠನೆಂದೂ, ಶಸ್ತ್ರ ಶಾಸ್ತ್ರ ಗಳೆರಡನ್ನೂ ಲೋಕೋದ್ಧಾರಕ್ಕೇ ಅವನು ಬಳಸಿದನೆಂದೂ ತಿಳಿದು ಬರುತ್ತದೆ.

ಶ್ರೀ ವಿಷ್ಣುಪುರಾದಲ್ಲಿ ವಿಷ್ಣುಗುಪ್ತನೆಂಬ ಮಹಾತ್ಮನು ನವನಂದರ ದುರಾಡಳಿತವನ್ನು ಕೊನೆಗೊಳಿಸಿ, ಮೌರ್ಯರನ್ನು ಅಧಿಕಾರಕ್ಕೆ ತರುವ ನೆಂದೂ ಭವಿಷ್ಯತ್ ಸೂಚನೆಯ ರೂಪದಲ್ಲಿ ಹೇಳಲ್ಪಟ್ಟಿದೆ. (ವಾಯು, ಮಾತ್ಸ್ಯ, ಬ್ರಹ್ಮಾಂಡ. ಭವಿಷ್ಯಗಳಲ್ಲೂ ಸಹ.) ಪುರಾಣದಲ್ಲಿ ಈ ಮಹಾತ್ಮನ ಹೆಸರು ಆರೂಢನಾಗಬೇಕಾದರೆ. ವಿಶ್ವಾಮಿತ್ರ, ವಸಿಷ್ಠ, ಜಮ ದಗ್ನಿಗಳಂತೆ ಆತ ಮಹರ್ಷಿಕಲ್ಪನಾಗಿರಬೇಕೆಂಬ ಒಂದು ಕಲ್ಪನೆ ಸಹಜ ನಾಗಿಯೇ ಬರುತ್ತದೆ. [ವಿಷ್ಣುಗುಪ್ತನೆಂಬುದು ಚಾಣಕ್ಯನ ಇನ್ನೊಂದು ಹೆಸರೆಂಬುದು ಪ್ರಸಿದ್ಧ. ಮುದ್ರಾರಾಕ್ಷಸ ನಾಟಕ, ಮುದ್ರಾಮಂಜೂ ಷಾದಿಗಳಲ್ಲಿ ಇದು ಪ್ರಸಿದ್ಧ.]

ಬೃಹತ್ ಕಥಾಮಂಜರಿ. ಕಥಾಸರಿತ್ಸಾಗರ, ಪಂಚತಂತ್ರ, ದಶ ಕುಮಾರ ಚರಿತ, ಮೊದಲಾದ ಸಂಸ್ಕೃತ ಗ್ರಂಥಗಳಲ್ಲಿ ಚಾಣಕ್ಯ [ವಿಷ್ಣು ಗುಪ್ತ]ನ, ಅರ್ಥಶಾಸ್ತ್ರದ, ಪ್ರಸ್ತಾಪವಿದೆ. ಆದುದರಿಂದ ಚಾಣಕ್ಯ ಐತಿ ಹಾಸಿಕ ವ್ಯಕ್ತಿ ಎಂಬುದರಲ್ಲಿ ಸಂದೇಹಬೇಡ.

ಮೆಗಾಸ್ತನೀಸನು ಚಂದ್ರಗುಪ್ತನನ್ನು 'ಸಂದ್ರಕೋಟಸ್' ಎಂದು ತನ್ನ ಟಿಪ್ಪಣಿಗಳಲ್ಲಿ ವ್ಯವಹರಿಸಿದ್ದರೂ, ಅದೇ ಕಾಲದವನೂ, ಚಂದ್ರಗುಪ್ತನನ್ನು ಅಧಿಕಾರಕ್ಕೆ ತಂದವನೂ ಎನಿಸಿದ ಚಾಣಕ್ಯನನ್ನು ಹೆಸರಿಸಿಲ್ಲವಾದುದರಿಂದ, ಈತನು ಐತಿಹಾಸಿಕ ವ್ಯಕ್ತಿ ಅಲ್ಲ ಎಂಬವಾದದಲ್ಲಿ ಹುರುಳಿಲ್ಲ. ಮೆಗಾಸ್ತನೀಸನು ಹೆಸರಿಸದೇ ಬಿಟ್ಟ ಇತರ ವ್ಯಕ್ತಿಗಳು ಆಕಾಲದಲ್ಲಿ ಇರಲಿಲ್ಲವೆಂದೂ, ಅವನು ನಮೂದಿಸದ ಘಟನೆಗಳೂ ಇಷ್ಟು ಮಾತ್ರದಿಂದ ಕೇವಲ ಕಾಲ್ಪನಿಕವೆನ್ನಲು ಬರುವುದೇ? ಅಶೋಕನು ತಾನು ಕೆತ್ತಿಸಿದ ಯಾವ ಶಿಲಾಶಾಸನದಲ್ಲೂ ತನ್ನ ತಂದೆ ಬಿಂದುಸಾರನನ್ನೇ, ತಾತನಾಗಿದ್ದ ಚಂದ್ರಗುಪ್ತನನ್ನೇ ಹೆಸರಿಸಿಲ್ಲವೆಂದ ಮಾತ್ರದಿಂದ ಇವರು ಅವನ ತಂದೆ ತಾತರಾಗದೇ ಹೋಗಿ ಬಿಡುವರೇ ? ಅಥವಾ ಅವನಿಗೆ ಇವರ ಬಗೆಗೆ ಗೊತ್ತೇ ಇರಲಿಲ್ಲವೆಂದಾಗಿ ಬಿಡುವುದೆ? ಚಾಣಕ್ಯನು ಪಾಟಲೀಪುತ್ರವನ್ನೇ ನೇರವಾಗಿ ಹೆಸರಿಂದ ಅರ್ಥಶಾಸ್ತ್ರದಲ್ಲಿ ಬರೆದಿಲ್ಲ! ಆಗ ಆ ಊರೇ ಇರಲಿಲ್ಲವೆಂದಾಗುವುದೇ?

ಮೆಗಾಸ್ತನೀಸನ ಬರವಣಿಗೆ ಪೂರ್ತಿಯಾಗಿ ದೊರೆತೂ ಇಲ್ಲ! ಕಳೆದು ಹೋಗಿರುವ ಭಾಗದಲ್ಲಿ ಏಕೆ ಅವನು ಚಾಣಕ್ಯನನ್ನು ಪ್ರಸ್ತಾಪಿಸಿರಲಾರನೆಂದು ಯಾರು ಸ್ಥಾಪಿಸಬಲ್ಲರು? ಮೆಗಾಸ್ತನೀಸನು ಬಂದಿದ್ದಾಗ ಚಾಣಕ್ಯನು ತಪಸ್ಸೋ ಭೂಮಿಗೆ ಹೋಗಿ ಆಗಿದ್ದದ್ದು ಸತ್ಯವಾಗಿದ್ದರೆ, ಈ ಉಲ್ಲೇಖಲೋಪದಿಂದ ಆಗುವ ನಷ್ಟವೇನು? ಅಶೋಕಶಾಸನಗಳಲ್ಲಿ ಪಾಟಲೀಯ ಅರ್ಥಶಾಸ್ತ್ರದಿಂದ ಉದ್ಧೃತವಾಗಿ ಕೆತ್ತಲ್ಪಟ್ಟಿರುವ ಭಾಗಗಳಿವೆಯಲ್ಲ! ಸಾಕಲ್ಲವೆ ?

ಚಾಣಕ್ಯನ ಶಿಷ್ಯನಾಗಿದ್ದ ಕಾಮಂದಕನು ತನ್ನ ನೀತಿ ಶಾಸ್ತ್ರದ ಆರಂಭದಲ್ಲಿ ತನ್ನ ಗುರುವಿನ ಸ್ತುತಿಯನ್ನು ಹೀಗೆ ಮಾಡುತ್ತಾನೆ.

> ವಂಶೇ ವಿಶಾಲವಂಶ್ಯಾನಾಂ ಋಷೀಣಾಮಿವ ಭೂಯಸಾಂ |
> ಅಪ್ರತಿಗ್ರಾಹಕಾಣಾಂ ಯೋ ಬಭೂವ ಭುವಿ ವಿಶ್ರುತಃ |
> ಜಾತವೇದಾ ಇವಾರ್ಚಿಷ್ಮಾನ್ ವೇದಾನ್ ವೇದವಿದಾಂವರಃ |
> ಯೋಽಧೀತವಾನ್ ಸುಚತುರಃ ಚತುರೋಽಪ್ಯೇಕವೇದವತ್||

ಯಸ್ಯಾಭಿಚಾರೇಣ ವಜ್ರೇಣ ವಜ್ರ ಜ್ವಲನ ತೇಜಸಃ ।
ಪಪಾತ ಮೂಲತಃ ಶ್ರೀಮಾನ್ ಸುಪರ್ವಾ ನಂದಪರ್ವತಃ ॥

ಏಕಾಕೀ ಮಂತ್ರಶಕ್ತ್ಯಾ ಯ ಶಕ್ತ್ಯಾ ಶಕ್ತಿಧರೋಪಮಃ ।
ಆಜಹಾರ ನೃಚಂದ್ರಾಯ ಚಂದ್ರಗುಪ್ತಾಯ ಮೇದಿನೀಂ ॥

ನೀತಿಶಾಸ್ತ್ರಾಮೃತಂ ಧೀಮಾನ್ ಅರ್ಥಶಾಸ್ತ್ರ ಮಹೋದಧೇಃ ।
ಸಮುದದ್ಧ್ರೇ ನಮಸ್ತಸ್ಮೈ ವಿಷ್ಣುಗುಪ್ತಾಯ ವೇಧಸೇ ॥

"ವಿಶಾಲ (ದೀರ್ಘ) ವಂಶೀಯರಾದ ಪ್ರಾಚೀನ ಋಷಿಗಳಂತಿದ್ದವರ ವಂಶದಲ್ಲಿ ಯಾವನು ಉದಿಸಿದನೋ, ಆ ಯಾವ ವಂಶೀಯರು ದಾನವನ್ನು ಸ್ವೀಕರಿಸದವರಾಗಿದ್ದರೋ, (ಅದೇ ವಂಶೀಯನಾದ ಯಾವ ಚಾಣಕ್ಯನೂ ಅದೇ ಅಪರಿಗ್ರಹ ವ್ರತದಲ್ಲಿದ್ದನೋ), ಯಾವನು ಭೂಮಿಯಲ್ಲಿ ಎತ್ತಲೂ ಕೀರ್ತಿವಂತನಾದನೋ, ಯಾವನು ಅಗ್ನಿಯಂತೆ ತೇಜೋವಂತನಾಗಿದ್ದನೋ, ವೇದವಿದಗ್ರೇಸರರಲ್ಲಿ ಅಗ್ರಗಣ್ಯನಾಗಿದ್ದನೋ, ಯಾವ ಚತುರನು ನಾಲ್ಕು ವೇದಗಳನ್ನೂ ಅಖಂಡನಾಗಿ ಒಂದೇ ವೇದವೆಂಬಂತೆ ಅಧ್ಯಯನ ಮಾಡಿದ್ದನೋ, ವಜ್ರಾಯುಧದ ತೇಜಸ್ಸನ್ನುಳ್ಳ ಒಬ್ಬನೇ ಯಾವನ ಅಭಿಚಾರ ಯೋಗದಿಂದ (ಮಂತ್ರಶಕ್ತಿಯಿಂದ), (ಇತರರ ಸಹಾಯ ನಿರಪೇಕ್ಷನಾಗಿ) ಒಳ್ಳೆಯ ರೆಕ್ಕೆಯುಳ್ಳಪರ್ವತಗಳು ಹಾರಾಡುತ್ತಿದ್ದಂತೆ,ನಂದಪರ್ವತವು ಹಾರಲಾರದೆ ಸಮೃದ್ಧವಾದ ಆ ನಂದಾಚಲವು ರೆಕ್ಕೆ ಕತ್ತರಿಸಿ, ಬೇರು ಕಡಿದ್ಕೊಂಡು, ನೆಲಕ್ಕುರುಳಿ ತತ್ತರಿಸಿತೋ, ಹೀಗೆ ಯಾವನು ಇಂದ್ರ ಸಮಾನನಾದನೋ, ಯಾವ ಮಹಾಪುರುಷನು ಪುರುಷೇಂದ್ರನಾದ ಚಂದ್ರಗುಪ್ತನಿಗೆ ಸಮಸ್ತ ಭೂಮಂಡಲವನ್ನೂ, ಈ ಅರ್ಥಶಾಸ್ತ್ರವೆಂಬ ಸಾಗರದಿಂದ ನೀತಿ ಶಾಸ್ತ್ರಾಮೃತವನ್ನೂ (ಗರುಡನು ಹಿಂದೆ ಅಮೃತಾಹಣ ಮಾಡಿ ದೇವತೆಗಳಿಗೆ ಕೊಟ್ಟು, ಅಸುರರಿಂದ ಅಜೇಯರಾಗುವಂತೆ ಮಾಡಿ) ಅನುಗ್ರಹ ಮಾಡಿ ಕೊಟ್ಟನೋ, (ಅಥವಾ, ಭಗವಂತನು ಮೋಹಿನೀ ಅವತಾರ ಮಾಡಿ ಅಮೃತ ಮಥನ ಕಾಲದಲ್ಲಿ, ಅದು ಅಸುರರಿಗೆ ದೊರಕದಂತೆಯೂ ದೇವತೆಗಳಿಗೇ ಮಾತ್ರ ದೊರಕುವಂತೆಯೂ, ಮಾಡಿ, ಲೋಕ ಹಿತವನ್ನು ರಕ್ಷಿಸಿ

ದನೋ, ಹಾಗೆ ಯಾವನು ನಂದಾಸುರರನ್ನು ನಿಗ್ರಹಿಸಿ, ರಾಜ್ಯವೆಂಬ ಅಮೃತವನ್ನೂ, ಅದನ್ನು ರಕ್ಷಿಸುವ ಉಪಾಯವೆಂಬ ಅರ್ಥಶಾಸ್ತ್ರಾಮೃತ ವನ್ನೂ ಚಂದ್ರಗುಪ್ತನಿಗೆ ದೊರಕಿಸಿಕೊಟ್ಟನೋ), ಆ ವಿಷ್ಣುಗುಪ್ತನೆಂಬ ಮಹಾ ತೇಜಸ್ವಿಯಾದ, ಚಿಂತಕನಾದ ಪ್ರಾಜ್ಞನಾದ ಪಂಡಿತೋತ್ತಮನಿಗೆ ವಂದಿಸುತ್ತೇನೆ."

ಚಾಣಕ್ಯ ಶಿಷ್ಯನಾಗಿದ್ದ ಈ ಕಾಮಂದಕನ ನೀತಿಶಾಸ್ತ್ರವು ಪ್ರಸಿದ್ಧ ನಾಗಿಯೇ ಇದೆ. ಇದು ಕ್ರಿಸ್ತಾಬ್ದದ ಆರಂಭ ಕಾಲದಲ್ಲಿ (ಅಥವಾ ಕೊಂಚ ಮುಂಚೆಯೇ) ಭಾರತದೇಶಾಚೆಗಿನ ಬಲಿದ್ವೀಪ (ಈಗಿನ ಬಾಲಿ), ಜಾವಾ, ಸುಮಾತ್ರಾ (ಈಗಿನ ಇಂಡೋನೇಸಿಯಾ) ಮುಂತಾದ ದೇಶಾಂತ ರಗಳಲ್ಲಿ ಆಗ ವಾಸಿಸುತ್ತಿದ್ದ (ಈಗ ಮತಾಂತರಗೊಳಿಸಲ್ಪಟ್ಟ) ಆರ್ಯ ಜನರಿಗೆ ಮಾರ್ಗದರ್ಶಿಯಾಗಿತ್ತೆಂದು, ಅಲ್ಲಿ ''ಕಾಮಂದಕೀಯ ನೀತಿಸಾರ" ವೆಂದು ಪ್ರಸಿದ್ಧವಾಗಿತ್ತೆಂದೂ, ಈಗಲೂ ಅಲ್ಲಿ ಉಪಲಬ್ಧವಾಗಿರುವುದೆಂದೂ ಇತಿಹಾಸಜ್ಞರು ಹೇಳುತ್ತಾರೆ. ಆದುದರಿಂದ ಚಾಣಕ್ಯ ಚಂದ್ರಗುಪ್ತರ ಐತಿಹಾಸಿಕತೆಯ ಬಗೆಗೆ, ಈ ಕಥೆಯ ಮೂಲಾಧಾರ ವ್ಯಕ್ತಿಗಳ ಬಗೆಗೆ ಸಂದೇಹ ಬೇಡ.

ಚಾಣಕ್ಯನ ಕಾಲ ಸುಮಾರು ಕ್ರಿ. ಪೂ. ೩೦೦ ವರ್ಷವೆಂದು ಇತಿ ಹಾಸಕಾರರು ತೋರಿಸುತ್ತಾರೆ. ಮೋಸದಿಂದ ಯುದ್ಧವನ್ನು ಗೆಲ್ಲುವುದಿಲ್ಲ ವೆಂದು ಘೋಷಿಸಿದ್ದ ಅಲೆಗ್ಸಾಂಡರನು ಮೋಸದಿಂದಲೇ ಅಭಿಸಾರ, ಆಂಭಿ ಮುಂತಾದ ಭಾರತ ವಾಯುವ್ಯ ಪ್ರಾಂತದ ಅರಸರನ್ನು, ಅವರವರ ಪರಸ್ಪರ ವೈರ, ಅನೈಕಮತ್ಯವನ್ನು ದುರುಪಯೋಗಿಸಿಕೊಂಡು, ಗೆದ್ದು, ಕೊಲ್ಲಿಸಿ, ಪುರೂರವನನ್ನು ಎದುರಿಸಿ, ಅವನನ್ನೂ ಹಾಗೆಯೇ ಸೋಲಿಸಿದನು! ಪೇರಿಯಸ್ಸನ್ನು ಗೆದ್ದಂತೆ ಇಲ್ಲಿ ಭಾರತದಲ್ಲಿ ಅಲೆಗ್ಸಾಂಡರನಿಗೆ ಕೆಲಸ ಸುಲಭವಿರಲಿಲ್ಲ! ಉಳಿದ ಕಡೆ ಆ ಆ ದೇಶದ ದ್ರೋಹೀ ಜನರು ಹಣಕ್ಕಾಗಿ ಆಕ್ರಮಣಕಾರನಿಗೆ ತಮ್ಮನ್ನು ಮಾರಿಕೊಂಡು, ತಮ್ಮವರನ್ನೇ ಕೊಲ್ಲಲು ಮುಂದಾದಂತೆ, ಇಲ್ಲಿ ಭಾರತದಲ್ಲಿ ಅವನಿಗೆ ಒದಗಿ ಬರಲಿಲ್ಲ! ಇಲ್ಲಿನಂತೆ

ಅವನು ಬೇರೆಲ್ಲೂ ಪ್ರತಿರೋಧವನ್ನು ಕಾಣಲಿಲ್ಲ. ಕ್ರಿ. ಶಕ ಒಂದನೇ ಶತಕದ ಪ್ಲೂಟಾರ್ಕ್ ಎಂಬ ಇತಿಹಾಸಕಾರನು ಹೇಳುವಂತೆ, ಗ್ರೀಕ್ ಆಕ್ರಮಣಕಾರರು ಈ ಪೌರವನೊಡನೆ ಯುದ್ಧದಲ್ಲಿ ತಮ್ಮ ಬಲಶಕ್ತಿಗಳನ್ನೆಲ್ಲ ಕಳೆದುಕೊಂಡರು ! ಮುಂದಿನ ಆಕ್ರಮಣಕ್ಕೆ ಹೆದರಿ ಹಿಂದೆಗೆದುದೂ ಇದೇ ಕಾರಣದಿಂದ. ಬರಿಯ ಇಪ್ಪತ್ತು ಸಾವಿರ ಕಾಲಾಳುಗಳೂ, ಎರಡು ಸಾವಿರ ಕುದುರೇ ಸವಾರರೂ, ಆನೆಗಳೂ, ಇದ್ದ ಪುರೂರವನ ಸೈನ್ಯದಿಂದಲೇ ಧೂಳಿ ಪಟವಾದ ಗ್ರೀಕ್ ಸೇನೆಯು ಹೆದರಿದ್ದು ಹೀಗೆ! ಗಂಗೆಯೂ ಮುವ್ವತ್ತು ಫರ್ಲಾಂಗು ಅಗಲವಿರುವುದಾಗಿಯೂ, ನೂರು ಪುರುಷ ಪ್ರಮಾಣ ಆಳ ವುಳ್ಳದಾಗಿಯೂ, ಗಂಗಾಪುತ್ರರೆಂಬ ಆ ದಡದ ದೊರೆಗಳೂ, 'ಪ್ರಾಚ್ಯ'ರೂ ಎಂಭತ್ತು ಸಾವಿರ ಅಶ್ವಾರೋಹಿಗಳನ್ನೂ, ಎರಡು ನೂರು ಸಾವಿರ ಕಾಲಾಳು ಗಳನ್ನೂ, ಎಂಟು ಸಾವಿರ ರಥಗಳನ್ನೂ, ಆರು ಸಾವಿರ ಆನೆಗಳನ್ನೂ ಹೊಂದಿ ಅಪಾರ ಸೈನ್ಯದೊಡನೆ ತಮ್ಮನ್ನು ಎದುರು ನೋಡುತ್ತಿರುವರೆಂದು ಕೇಳಿಯೇ ಅಲೆಕ್ಸಾಂಡರ್ ಹೆದರಿದ್ದ!! ತಾನು ಪಟ್ಟ ಪಾಡಿಗೆ ಪ್ರತೀಕಾರವಾಗಿ ಮೂಸಿಕವೆಂಬಲ್ಲಿ, ತಾನು ಗೆದ್ದಿದ್ದ ಪ್ರತಿಯೋಧರನ್ನೂ, ಸಿರಪರಾಧೀ ಸ್ತ್ರೀ ಪುರುಷ ಬಾಲಕರನ್ನೂ ಮಾಲವ ಕೋಟೆಯಲ್ಲಿ ಸಾವಿರಾರು ಬ್ರಾಹ್ಮಣ ರನ್ನೂ, ಕರುಣೆಯಿಲ್ಲದೆ ಕೊಲ್ಲಿಸಿದ! ಅವರೆಲ್ಲಿ ಮತ್ತೆ ತಿರುಗಿ ಬೀಳುವರೋ ಎಂಬ ಭಯ ಹಾಗಿತ್ತು! ಏಳೆಂಟು ಅಡಿ ಎತ್ತರದ ಪುರೂರವನಂಥ ಪುರುಷನನ್ನೂ, ಆನೆಗಳೆಂಬ ಪ್ರಾಣಿಗಳನ್ನೂ ಗ್ರೀಕರು ಹಿಂದೆ ಕಂಡೇ ಇರ ಲಿಲ್ಲ! ಅವನು ಇಲ್ಲಿ 'ಗೆದ್ದ'ದ್ದೆಲ್ಲಾ ನಾಲ್ಕೇ ವರ್ಷಗಳಲ್ಲಿ ಮತ್ತೆ ಭಾರತದ ವಶವಾಯಿತು ! ಭಾರತೀಯ ಇಂದಿನ ಇತಿಹಾಸ ಪಠ್ಯಪುಸ್ತಕಗಳು ಇವ ನ್ನೆಲ್ಲ ತಿಳಿಸದಿರುವುದು ಎಷ್ಟು ಶೋಚನೀಯ !

ವಿಪಾಶಾ ನದಿಯಿಂದೀಚೆ, ಗ್ರೀಕ್ ಸೈನ್ಯ ಬರಲು ಹೆದರಿದ್ದು ಸತ್ಯ, ಸಮರ್ಥನೀಯುವಲ್ಲವೆ ?

ಗಂಗಾಪುತ್ರರೂ, ಪ್ರಾಚ್ಯರೂ ಎಂಬವರು ಅಂದಿನ ಮಗಧ ಪ್ರಾಂತದ ಅರಸರು; ನಂದರು, ಮಹಾಪದ್ಮನಂದ, ಮೌರ್ಯರು ! ಆ ಸೈನ್ಯದ ಖ್ಯಾತಿ ಹಾಗಿತ್ತು.

ಅಲೆಕ್ಸಾಂಡರನು ಇಲ್ಲಿ ಬಿಟ್ಟು ಹೋಗಿದ್ದ ಸತ್ರಪರೂ, ಫಿಲಿಪ್ಪೋಸ್ ನಿಯಾರ್ಕಸ್ ಮುಂತಾದವರೂ, ಕೊಲ್ಲಲ್ಪಟ್ಟು, ರಾಜ್ಯ ಮತ್ತೆ ಸ್ವತಂತ್ರ ವಾಯಿತು. ತುಳುಂಬ, ಮಾಳವಕೋಟೆ, ಮಾಸಿಕ, ಮುಂತಾದೆಡೆ ನಡೆದ ಭಾರತೀಯರ ಮಾರಣ ಹೋಮವನ್ನು, ಭಾರತೀಯರು ಮುಲ್ತಾನ್ (ಮೂಲಸ್ಥಾನ-'ಆರ್ಯರ' ಮೂಲಸ್ಥಾನ), ಪಾತಳ, ತಕ್ಷಶಿಲಾ ಮುಂತಾದೆಡೆಗಳಲ್ಲಿ ಗ್ರೀಕ್ ಸೈನ್ಯಗಳ ಮಾರಣ ಹೋಮದಿಂದ ಪ್ರತೀಕಾರವನ್ನಾಗಿ ಲೆಕ್ಕವನ್ನು ಅಳಿಸಿದರು! ಪಂಜಾಬ್ ಸಿಂಧ ಪ್ರಾಂತಗಳನ್ನು ನಾಲ್ಕು ವರ್ಷ ಗ್ರೀಕರು ಆಳಿದರೆ, ಮೌರ್ಯರು ಅರವತ್ತು ವರ್ಷ ಆಳಿ ಸುಭಿಕ್ಷ ಸ್ಥಾಪಿಸಿದರು!! ಈಜಿಪ್ಟ್, ಪರ್ಷಿಯಾಗಳಲ್ಲಿ ಹಾಗಾಗದೇ ಜನಾಂಗಗಳೂ, ಸಂಸ್ಕೃತಿಗಳೂ ಅಳಿಸಿದ್ದವು! ಹೆದರಿ, ಪಲಾಯನ ಮಾಡಲಾಗದ ಗ್ರೀಕರು, ಭಾಗವತ ಮತವನ್ನು ಸ್ವೀಕರಿಸಿ, ಭಾರತೀಯರಾಗಿ, ಈ ದೇಶದ ಜನರಲ್ಲಿ ಬೆರೆತು ಲೀನನಾದರು! ವೈದಿಕ ಮತದ ಅಂದಿನ ಪ್ರಸಿದ್ಧರೂಪ ಅದೇ ಆಗಿತ್ತು. ಚಂದ್ರಗುಪ್ತ ಮೌರ್ಯನು, ಮಹಾ ಸಾಹಸಿಯಾಗಿ, ಇಡೀ ಭರತ ವರ್ಷವನ್ನೂ, ಆಚಿನ ಅನೇಕ ಪ್ರಾಂತಗಳನ್ನೂ ಸಾಂಸ್ಕೃತಿಕವಾಗಿ ಏಕೀಕರಿಸಿ, ರಾಜಕೀಯ ಸುಭದ್ರತೆಯೊದಗಿಸಿ, ಸಮ್ರಾಟ್ ಆದನು ! ಇದನ್ನೆಲ್ಲ (ಕ್ರಿ. ಪೂ. ೧ ನೇಯ ಶತಮಾನದ) ಸ್ಟ್ರಾಬೋ ಎಂಬವನೂ, ಡಿಯೋಡೋರಸ್ ಎಂಬುವನೂ (ಅದೇ ಕಾಲದವನು), ಕರ್ಟಿಯಸ ಎಂಬವನೂ, ಅದೇ ಕಾಲದ (ಹಿರಿಯ) ಪ್ಲೀನಿ ಎಂಬುವನೂ, ಪ್ಲುಟಾರ್ಕನೂ, ಏರ್ರಿಯನ್ ಜಸ್ಟಿನ್ ಎಂಬುವನೂ ಬರೆದಿಟ್ಟಿದ್ದಾರೆ.

ಜಸ್ಟಿನ್ನನ್ನು (ಕ್ರಿ. ಶ. ಎರಡನೆಯ ಶತಮಾನ) ಚಂದ್ರಗುಪ್ತ ಮೌರ್ಯನ ಪರಾಕ್ರಮವನ್ನೂ ವರ್ಣಿಸಿದ್ದಾನೆ. ಆದರೆ ಅನನು ಹೇಳುವ ಹೆಚ್ಚಿನ ಮಾತು;

"ತಾನೇ ಗೆದ್ದು ವಶೀಕರಿಸಿಕೊಂಡ ಸಾಮ್ರಾಜ್ಯವನ್ನು ಆ ಚಂದ್ರಗುಪ್ತನೇ ಕಪಿಮುಷ್ಟಿಯಿಂದ ಆಳಿ,ಸ್ವಾತಂತ್ರ್ಯ ತಂದವನೆಂಬ ಕೀರ್ತಿಯನ್ನು ಕಳೆದುಕೊಂಡು, ಜನರನ್ನು ದಾಸ್ಯದಲ್ಲಿ ಹಾಕಿದನು. ಕೆಳಗಿನ ಸ್ತರದಿಂದ

ಮೇಲೆ ಬಂದ ಈ ಅರಸು, ಅತಿಮಾನುಷವಾದ ಭೌತಾತೀತ ಶಕ್ತಿಯೊಂದ ರಿಂದ ಅಧಿಕಾರಕ್ಕೆ ಬಂದ ! ✪ ಅಲೆಗ್ಸಾಂಡರನನ್ನೇ ಧೈರ್ಯ ಮಾತು ಗಳಿಂದ ಎದುರಿಸಿದ್ದ ಇವನು, ಗ್ರೀಕ್ ದೊರೆಯ ಮರಣ ದಂಡನೆಯ ಅಪ್ಪಣೆಯನ್ನೂ ಉಪಾಯದಿಂದ ನಿವಾರಿಸಿಕೊಂಡು ಬದುಕಿದ್ದವನು ...'' ಇತ್ಯಾದಿ.

ಇಲ್ಲಿ ಚಾಣಕ್ಯಶಕ್ತಿಯ ಪರೋಕ್ಷ ಪ್ರಸ್ತಾಪವಿರುವುದಲ್ಲದೆ, ತೀರ ಬಾಲ್ಯದಲ್ಲಿ, ಚಂದ್ರಗುಪ್ತನು ಏಕಾಕಿಯಾಗಿ ಅಲೆಕ್ಸಾಂಡರನನ್ನು ಏಕಾಂತ ದಲ್ಲಿ ಕಂಡು, ಎದುರಿಸಿ, (ಕೊಲ್ಲಲು ಯತ್ನಿಸಿ ?) ಉಪಾಯದಿಂದ ತನ್ನ ಮೃತ್ಯುವನ್ನೂ ತಪ್ಪಿಸಿಕೊಂಡನೆಂಬ ಸೂಚನೆ ಇದೆ. ವಿವರಗಳು ದೊರೆ ಯುವುದಿಲ್ಲ ! ಚಾಣಕ್ಯ ಮುಂದೆ ಈ ಬಾಲಕನನ್ನು ಸಿದ್ಧಗೊಳಿಸಿ, ಚಕ್ರ ವರ್ತಿಪದವಿಗೆ ತಂದನೆಂಬ ಪ್ರಸಿದ್ಧ ಕಥೆಗೆ ಇಲ್ಲಿ ಅರ್ಥಪುಷ್ಟಿ ದೊರೆಯುತ್ತದೆ.

ಚಾಣಕ್ಯ ಚಂದ್ರಗುಪ್ತರು ಅದೇ ಪುರೂರವನನ್ನು (ನಮ್ಮ ಕಥೆ ಯಲ್ಲಿ ಇವನೇ ಪರ್ವತೇಶ್ವರ !) ಸಂಧಿಸುವ ವೇಳೆಗೆ, ಅಲೆಗ್ಸಾಂಡರನು ಭಾರತವನ್ನು ಬಿಟ್ಟೂ, ಸತ್ತೂ, ಆಗಿತ್ತು. ಅವನ ಸತ್ರಪರೂ, ನಿಯಾ ರ್ಕಸ್ (ನ್ಯಾಯಾರ್ಕ) ಮುಂತಾದವರು ಇದ್ದರು! ತಕ್ಷಶಿಲೆಯ ವಿಶ್ವವಿದ್ಯಾ ಲಯವು ನೆಲ ಸಮವಾದ ಬಳಿಕ ಚಾಣಕ್ಯ, ಆಶ್ರಯಾರ್ಥಿಯಾಗಿ, ದೇಶ ಭಕ್ತನಾಗಿ, ಉತ್ತಮ ಕ್ಷತ್ರ ಬೀಜಗಳನ್ನು ಅರಸುತ್ತಾ, ಪೋಷಿಸುತ್ತಾ ಬರುವ ವೇಳೆಗೆ ನಂದರು ಕೊಬ್ಬಿ, ಮದಾಂಧರಾಗಿ, ದೇಶದ ಭವಿತವ್ಯ ದೃಷ್ಟಿ ಯಿಲ್ಲದೆ, ಮದಮತ್ತರಾಗಿ ಬೀಗುತ್ತಿದ್ದರು, ಎಂಬುದು ಸಂಗತವಾಗುತ್ತದೆ. ಇಷ್ಟು, ಚರಿತ್ರೆಯ ಮುಖ್ಯ ಆಧಾರ.

---

✪ ಇದು, ಪ್ರಾಯಃ, ಚಾಣಕ್ಯನ ಬ್ರಹ್ಮತೇಜಸ್ಸಿಗೂ, ಅವನ ಅತಿಮಾನುಷ ವೃತ್ತಾಂತಕ್ಕೂ, ಅವನ ಅಭಿಚಾರ ಶಕ್ತಿಗೂ, ಸಲ್ಲುವ ಸೂಚನೆ ಇರಬೇಕು!

ಚಾಣಕ್ಯ (ವಿಷ್ಣುಗುಪ್ತ) ನು ಇದ್ದನೆಂಬುದನ್ನೊಪ್ಪಿದರೂ, ಈಗ ಅವನು ಭಾರತದ ಯಾವಭಾಗದಿಂದ ಬಂದವನೆಂಬ ಬಗೆಗೂ ವಿದ್ವಾಂಸರು ನಾನಾ ಉತ್ತರ ಕೊಡುತ್ತಾರೆ. ಅವನು ಮಗಧದವನೇ ಎಂಬುದು ಒಂದು; ತಕ್ಷಶಿಲೆಯವನೆಂಬುದು ಇನ್ನೊಂದು; ದಕ್ಷಿಣದ ಮಲಬಾರು ಮಲೈಯಾಳ ದೇಶದವನೆಂಬುದು ಮಗದೊಂದು; ನಮ್ಮ ಈ ಕಥಾನಕದಲ್ಲಿ ಈ ಮೂರನೆಯ ದನ್ನು ಒಪ್ಪಿ ಎತ್ತಿಹಿಡಿದು ಚಿತ್ರಿಸಲಾಗಿದೆ. ಶ್ರೀ ಎ. ಎಸ್. ಪಿ. ಅಯ್ಯರ್ ಕೊಡುವ ಕಾರಣಗಳನ್ನು ಕೇಳಿ :

೧) ಅವನಿಗೆ 'ದ್ರಮಿಡಾಚಾರ್ಯ'ನೆಂಬ ಉಪನಾಮ ಇದ್ದುದೇ ಒಂದು ಸಾಕ್ಷಿ. ಈ ಶಬ್ದಕ್ಕೆ ಬಳಸಿ ಎಳೆದು ದ್ರಾವಿಡಾಮ್ನಾಯ ಪ್ರಾಜ್ಞಾ ಯಾಮ ಮಾಡುವ ಅರ್ಥಗಳಿಂದ ಪ್ರಯೋಜನವಿಲ್ಲ; ಅವನು ಶಂಕರ ರಾಮಾನುಜರು ಉದಹರಿಸುವ ಉಪನಿಷದ್ಭಾಷ್ಯದ ದ್ರಮಿಡನೇ ಆಗಿರಲಿ (ಅದೇ ಹೌದೆಂಬುದೇ ನಮ್ಮ ಗ್ರಹಿಕೆ.) ಬಿಡಲಿ,ಅವನಿಗೆ ಈ ಹೆಸರು ಇದ್ದುದೇ ವಿಶೇಷ.ದ್ರವಿಡ = ದ್ರಮಿಳ = ತಮಿಳ ಸಮೀಕರಣವನ್ನು ಗಮನಿಸಿದರೆ, ಅವನು ದಕ್ಷಿಣದವನೂ, ತಮಿಳು ದೇಶದವನೂ, ಆಗಿದ್ದನೆಂದು ತಿಳಿಯುತ್ತದೆ. ಆಂಧ್ರದವರೂ, ಕನ್ನಡಿಗರೂ 'ದ್ರಮಿಡ'ರೇ ಆಗಿದ್ದರೂ ವಿಶೇಷತಃ ತಮಿಳ ರನ್ನೇ ಇಂದಿಗೂ ಈ ಶಬ್ದ ಕುರಿತು ಹೇಳುವುದು ಅನುಭವದಲ್ಲಿದೆ.

೨) ಅರ್ಥಶಾಸ್ತ್ರದಲ್ಲಿ ದಕ್ಷಿಣಭಾರತದ ನಿಕಟ, ಸೂಕ್ಷ್ಮ ಪರಿಚಯ ಗ್ರಂಥಕರ್ತನಿಗಿದ್ದುದು ಸ್ಪಷ್ಟವಾಗಿದೆ. 'ಕುಮಾರ,' (ಸುಬ್ರಹ್ಮಣ್ಯ), 'ಕುಮಾರಿ' (ಕನ್ಯಾ, ದುರ್ಗಾ) ಪೂಜೆಗಳ ಪ್ರಸ್ತಾಪ ಇದನ್ನು ಇನ್ನಷ್ಟು ಸ್ಪಷ್ಟಪಡಿಸುತ್ತದೆ.

೩) ಕೇರಳದ ಕೊಚ್ಚಿನ್ ಪ್ರಾಂತದಲ್ಲಿ ವಿಶೇಷವಾಗಿ ಇಂದಿಗೂ ಲಭ್ಯವಾದ (ಇತರೆಡೆ ದುರ್ಲಭವಾದ) ಮೂಲಿಕೆಗಳನ್ನೂ, ವೃಕ್ಷ ವನಸ್ಪತಿ ಗಳನ್ನೂ ಅರ್ಥಶಾಸ್ತ್ರ ಹೆಸರಿಸುವುದರಿಂದ, ಚಾಣಕ್ಯ, ಪ್ರಾಯಃ ಅಲ್ಲಿನ

ಮುಯರಿಕ್ಕೋಡು, ಮುಸಿರಿ, ಚಂದ್ರನಾಗೂರು ಪ್ರಾಂತದವನಾಗಿರಬೇಕು. ಆಗ ಈ ಪ್ರಾಂತ ದ್ರವಿಡದೇಶ ಭಾಗವೇ ಆಗಿತ್ತು.

೪) ಚಾಣಕ್ಯ ಉಲ್ಲೇಖಿಸುವ ಅಭಿಚಾರ ಕೃತ್ಯಗಳು ಅಥರ್ವವೇದ ಮೂಲವಾಗಿದ್ದು, ಇಂದಿಗೂ ಈ ಮಾಟ, ಕೃತ್ಯಗಳಿಗೆ, ಮಲೈಯಾಳ 'ಭಗವತಿ'ಯ, 'ಮೋಡಿ'ಯ 'ವಿದ್ಯೆ'ಗೆ ಈ ಪ್ರಾಂತವು ಪ್ರಸಿದ್ಧ. ಗ್ರಂಥದ ಹದಿನಾಲ್ಕನೆಯ ಅಧ್ಯಾಯದಲ್ಲಿ ಉಕ್ತವಾದ ಶತ್ರುಹನನ ವಿದ್ಯೆ, ಮಾರಣ ಹೋಮ, ಕುರುಡುತರಿಸುವುದು ರೋಗಕಾರಕ ವಿಷಪ್ರಯೋಗಾದಿಗಳೂ ಹುಚ್ಚುತರಿಸುವ ಮೂಲಿಕೆಗಳ ಪ್ರಯೋಗ,—ಇವೆಲ್ಲವನ್ನೂ ಕೇರಳೀಯರು ನಂಬುತ್ತಾರೆ, ಉಪಯೋಗಿಸುತ್ತಾರೆ. "ಮಲೈಯಾಳ ಮಾಡುವುದು" ಎಂದರೇನೇ ಈ ಅರ್ಥ ಇರುವುದೇ ಇದಕ್ಕೆ ಸಾಕ್ಷಿ. ಆಗ "ಮಲೈಯಾಳ" ದ್ರವಿಡ ದೇಶ ಭಾಗವೂ ಇದ್ದು, ಆ ಭಾಷೆಯೂ ತಮಿಳಿನ ರೂಪಾಂತರ ವಾಗಿ ಬೆಳೆಯುತ್ತಿತ್ತು.

೫) ಅರ್ಥಶಾಸ್ತ್ರದಲ್ಲಿ ಉಪಯುಕ್ತವಾದ 'ವಸ್ತು, ನಾಸ್ತು' ಶಬ್ದ ಗಳು, ಮನೆ, ಹೊಲ, ಗದ್ದೆ, ಕಟ್ಟಡ, ಕೆರೆಗಳನ್ನು ಸೂಚಿಸುತ್ತಾ, ಇಂದಿಗೂ ಅವೇ ಅರ್ಥಹೊಂದಿರುವುದು ಕೇರಳದಲ್ಲಿ ಮಾತ್ರ.

೬) ಭಾರತೀಯ ಆರ್ಥಿಕ ವರ್ಷದ (financial year) ಆದಿ, ಮಧ್ಯ, ಅಂತ್ಯಗಳು ಅರ್ಥಶಾಸ್ತ್ರದಲ್ಲಿ ಸೂಚಿಸಿರುವಂತೆಯೇ ಇಂದಿಗೂ ತಮಿಳರಲ್ಲಿ (ಸೌರಮಾನ ರೀತ್ಯಾ) ಪ್ರಸಿದ್ಧವಿದೆ.

೭) "ಚೋಳ ದೇಶ ಬ್ರಾಹ್ಮಣನ ಜುಟ್ಟು (ಚಂಡಿಕೆ) ಸುಮ್ಮನೆ ಕುಣಿಯುವುದಿಲ್ಲ!" ಎಂಬರ್ಥದ ತಮಿಳು ಗಾದೆ (ಶೋಳಿಯನ್ ಕುಡುಮಿ ಸುಮ್ಮಾ ಆಡಾದು!) ಸಾರ್ಥಕವಾದುದು ಈ ಚಾಣಕ್ಯನ ಜುಟ್ಟು ಬಿಚ್ಚಿ ಅವಮಾನಿಸಿದ, ನಂದರ ನಿಗ್ರಹ ವೃತ್ತಾಂತದಲ್ಲಿ ಜೈನ್ನಾರ್ಯರ್ ನಿದರ್ಶಿತ ವಾಗಿದೆ. ಜುಟ್ಟು ಬಿಚ್ಚಿ ಪ್ರತಿಜ್ಞೆ ಮಾಡುವ ಬ್ರಾಹ್ಮಣರು ತಮಿಳರಲ್ಲಿ ಪ್ರಸಿದ್ಧ.

೭) ಜೈನಗ್ರಂಥಗಳು ಚಾಣಕ್ಯನನ್ನು ''ಗೊಲ್ಲ ವಿಷಯ''ದವನು ಎಂದು ಸೂಚಿಸಿರುವುದು, ಪ್ರಾಯಃ ಕೇರಳದ 'ಕೊಲ್ಲಂ' (ಇಂಗ್ಲೀಷು ವ್ಯವಹಾರದ ಕ್ವೈಲಾನ್) ಪ್ರಾಂತ ಕುರಿತದ್ದಾಗಿರಲು ಸಾಕು.

೮) ತಕ್ಷಶಿಲೆಯು ಪ್ರಸಿದ್ಧ ವಿದ್ಯಾಲಯವಾಗಿದ್ದು, ಅಲ್ಲಿ ಬಹು ವರ್ಷಕಾಲ ನೆಲೆಸಿದ್ದು, ಚಾಣಕ್ಯ ಅಲ್ಲಿಯವನೆಂಬ ಪ್ರಸಿದ್ಧಿ ಆಮೇಲೆ ಬಂದಿರಬೇಕು.

೯) ಅವನ ಕಪ್ಪು ಮೈ ಬಣ್ಣ, ಗಿಡ್ಡ ಆಕೃತಿ, ಇವೂ ಇದನ್ನೇ ಪೋಷಿಸುತ್ತವೆ. ಇತ್ಯಾದಿ.

ಚಾಣಕ್ಯ 'ಬಹು' ಜನಪ್ರಿಯನಿರಲಿಲ್ಲ! ಆ 'ಬಹು' ಜನರು ಆಗ ಭ್ರಷ್ಟಾಚಾರ ಪ್ರಿಯರು ಇದ್ದರೆಂಬುದು ಅರ್ಥಶಾಸ್ತ್ರದ ಕಠಿಣ ದಂಡ ಪ್ರಯೋಗಗಳಿಂದಲೂ, ನೀತಿಗಳಿಂದಲೂ ಸಿದ್ಧಪಡುತ್ತದೆ. ದಕ್ಷ, ಶುದ್ಧ, ಉನ್ನತ ವಿಚಾರಧ್ಯೇಯಗಳ ಆಡಳಿತಗಾರರು ಅಂದೂ ಇಂದೂ, ಹೀಗೆಯೇ ಅಲ್ಲವೆ! "ನಾನೂ ಲಂಚ ತಿನ್ನುತ್ತೇನೆ, ನೀನೂ ತಿನ್ನು" ಎಂಬ ರೀತಿಯ ಜನಪ್ರಿಯತೆಗೆ ಚಾಣಕ್ಯ ದೂರನಿದ್ದ. ಅವನು 'ಧರ್ಮವಾದಿ' ಇದ್ದನೇ ಹೊರತು ಬೇರಾವ ವಾದಕ್ಕೂ ಗಂಟು ಬಿದ್ದವನಲ್ಲವೆಂದು ಅವನ ಗ್ರಂಥ ತೋರುತ್ತದೆ. ಧರ್ಮಸ್ಥಾಪನೆಯ ಗುರಿಯ ಈ ಮಹಾಪುರುಷನ ಗ್ರಂಥ ಇಂದೂ ಬಹುಜನರ ಅನಾದರಕ್ಕೇ ಪಾತ್ರವಾಗಿರುವುದು ಏನನ್ನು ತೋರಿಸುತ್ತದೆ? ಅಧರ್ಮದೊಡನೆ ರಾಜಿಯ ಪ್ರವೃತ್ತಿ ಅವನಿಗಿರಲಿಲ್ಲ ಎಂದಲ್ಲವೆ? ಪುರಾಣಗಳು ಇವನನ್ನು ಕೊಂಡಾಡಿದ್ದು ಏನಾಶ್ಚರ್ಯ? ನೆನ್ನೆ ಮೊನ್ನೆ ಅಧಿಕಾರದಿಂದುರುಳಿದ, ಈಗ ಉರುಳಲಿರುವ, ಮಹಾಭ್ರಷ್ಟ 'ಮುಖ್ಯಮಂತ್ರಿ,' 'ಪ್ರಧಾನಿ'ಗಳಿಗಿರುವ ಪ್ರಚಾರ, 'ಜನಪ್ರಿಯತೆ'ಗಳು ನಮ್ಮ ಎದುರಿಗೇ ಇದ್ದ ನಾಲ್ವಡಿ ಕೃಷ್ಣರಾಜ ಒಡೆಯರಿಗೂ, ದಿವಾನ್ ವಿಶ್ವೇಶ್ವರಯ್ಯನವರಿಗೂ ಇರಲಿಲ್ಲವೆಂದರೆ, ಕಾಶ್ಮೀರದಲ್ಲಿ ಸುವ್ಯವಸ್ಥೆ ತರಲೆಳಸಿದ ಪ್ರಾಮಾಣಿಕ ಆಡಳಿತಗಾರ ಜಗಮೋಹನ್ ಅವರಿಗೂ ಬರಲಿಲ್ಲವೆಂದರೆ,

ಜನತೆಯ ಸ್ವಭಾವಕ್ಕೇ ಅಲ್ಲವೇ ಇದು 'ಮಂಗಳಾರತಿ'! ಅದು ಮುಖ್ಯವಲ್ಲ; ಚಾಣಕ್ಯ ಪ್ರತಿನಿಧಿಸಿದ್ದ ಮೌಲ್ಯಗಳೂ, ಧ್ಯೇಯಗಳೂ, ವ್ಯವಹಾರ ನಿಷ್ಠೆ, ಇಹ ಪರ ಸಾಮರಸ್ಯ, ವ್ಯವಸ್ಥೆಯ ಬಗೆಗೆ ಅವನ ಅಕ್ಕರೆ, ಸ್ವಾರ್ಥತ್ಯಾಗ- ಇವು ಇಂದೂ ಬೇಕು.

ಅಮಾತ್ಯ ರಾಕ್ಷಸನೆಂಬುವನು ಇದ್ದನೇ ? ಚಾಣಕ್ಯ ಅವನನ್ನೇ ಮತ್ತೆ ಅವನ ಮುದ್ರೆಯುಂಗುರದಿಂದಲೇ ವಶಪಡಿಸಿ ತಂದು ಚಂದ್ರಗುಪ್ತನ ಪ್ರಧಾನಿಯನ್ನಾಗಿ ಮಾಡಿ ತಾನು ವಿರಕ್ತನಾಗಿ ಹೋದನೆಂಬ ಕಥೆ ಮುದ್ರಾ ರಾಕ್ಷಸ (ಕಿ.ಶ. ೮ನೇ ಶತಮಾನ, ಪ್ರಾಯಃ) ನಾಟಕದಿಂದಲೂ, ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಕನ್ನಡ ಮುದ್ರಾ ಮಂಜೂಷವೆಂಬ ಅದ್ಭುತ ಕಥೆಯಿಂದಲೂ ತಿಳಿಯುತ್ತದೆ. ಇದಕ್ಕೆಲ್ಲ ಇತಿಹಾಸಾಧಾರವನ್ನು ಯಾರು ಕೊಡಬಲ್ಲರು ? ಅದು ಕವಿಯ ಪ್ರತಿಭೆ, ಕಲ್ಪನೆಗಳ ಕೊಡುಗೆ ಇದ್ದೀತು! ಅದು ಮುಖ್ಯವಲ್ಲ! ಚಾಣಕ್ಯನ ಭವ್ಯ ವ್ಯಕ್ತಿತ್ತ್ವ, ತಂತ್ರ ಕೌಶಲ, ದೇಶ ಭಕ್ತಿ, ಸರಳತೆ, ಧೀಮಂತ ಚಿಂತಕ ಶಕ್ತಿ, ಶಸ್ತ್ರಶಾಸ್ತ್ರ ಪ್ರವೀಣತೆ, ಇವು ಅವನದೇ ಅರ್ಥಶಾಸ್ತ್ರದ ಆಧಾರದಂತೆ ಅದಕ್ಕೆ ವಿರೋಧವಿಲ್ಲದಂತೆ ಚಿತ್ರಿತ ವಾಗಿದ್ದರೆ ಸಾಕು !

ನಮ್ಮ ಈ ಕೃತಿಯಲ್ಲೂ ಓದುಗ ಇದನ್ನೇ ಕಾಣಬೇಕೆಂದು ನಮ್ಮ ಸೂಚನೆ. ಚಾಣಕ್ಯನ ಕಾಲಕ್ಕೆ ಕೆಲ ಶತಮಾನಗಳ ಹಿಂದೆಯಷ್ಟೇ ಬೌದ್ಧ ಮತವೂ, ಸುಮಾರು ಅದೇ ಸರಿ ಸರಿ ಎನ್ನುವ ಕಾಲಕ್ಕೆ ಜೈನ ಮತವೂ ಪ್ರಸಿದ್ಧಿಗೆ ಬಂದು, ರಾಜಾಶ್ರಯ ದೊರಕಿಸುವಲ್ಲಿ ವೈದಿಕ ಮತದೊಡನೆ ಸ್ಪರ್ಧಿಸುತ್ತಿದ್ದವು. ಅದು ಮತ ಸಂಘರ್ಷಕಾಲವಾಗಿರಲಿಲ್ಲ ಎಂಬುವರು ಆತ್ಮವಂಚಕರು ಮಾತ್ರ! ಸ್ವಯಂ ಚಂದ್ರಗುಪ್ತನೇ, ಚಾಣಕ್ಯ ಪದಪಿ ತ್ಯಜಿಸಿದ ಕೊಂಚವೇ ಕಾಲದಲ್ಲಿ ಜೈನ ಮತವನ್ನು ಆಶ್ರಯಿಸಿ, ಶ್ರವಣ ಬೆಳಗೊಳದಲ್ಲಿ, ದಿಗಂಬರ ದೀಕ್ಷೆಯಿಂದ ಪ್ರಾಣಬಿಟ್ಟನೆಂಬ ಕಥೆ ಪ್ರಸಿದ್ಧ ವಿದೆ. (ಇವನು ಬೇರೊಬ್ಬ ಚಂದ್ರಗುಪ್ತನೆಂಬವರೂ ಉಂಟು !) ಚಾಣಕ್ಯನು ಉಜ್ವಲ ವೈದಿಕ ನಿಷ್ಠನಿದ್ದದ್ದೂ, ಜೈನ, ಬೌದ್ಧ, ಶೈವ,

ಕಾಪಾಲಿಕ ಮತಗಳ ಬಗೆಗೆ, ಇವುಗಳ ಅತಿರೇಕದ ವಾಮಾಚಾರಗಳ ಬಗೆಗೆ ಉಗ್ರ ನಿಲುವು ತಾಳಿದ್ದೂ ಅವನ ಅರ್ಥಶಾಸ್ತ್ರದಿಂದಲೇ ಸುವ್ಯಕ್ತ! ಇಲ್ಲವಾದರೆ "ರಾಣಿಯರಿಗೆ ಬೌದ್ಧ ಭಿಕ್ಷುಗಳೊಡನೆಯೂ, ಜೈನ ಸಂನ್ಯಾಸಿಗಳೊಡನೆಯೂ, ಶೈವ ಪಾಶುಪತ ಕಾಲಭೈರವರೊಡನೆಯೂ, ಮಾಯಾವಾದಿಗಳೊಡನೆಯೂ, ಪರಿಚಯವಿಲ್ಲದಂತೆ ದೂರ ಎಚ್ಚರ ವಹಿಸಬೇಕು" ಎಂದು ಏಕೆ ಅವನು ಬರೆಯುತ್ತಿದ್ದ! ಮೂಲದಲ್ಲಿ ಈ ಧರ್ಮಗಳ ಸ್ಥಾಪಕ ಪುರುಷರು ಎಷ್ಟೇ ಪರಿಶುದ್ಧ ನೀತಿಗಳನ್ನು ಬೋಧಿಸಿದ್ದರೂ, ಇವು ಅಂದು ವಾಮಾಚಾರವನ್ನು ಆಶ್ರಯಿಸಿದ್ದುವು ಎಂದು ಇಲ್ಲಿ ದೃಢ ಪಡುವುದಿಲ್ಲವೇ? ಹೀಗೆ ಬರೆದ ಚಾಣಕ್ಯನೇ ಶೈವನೋ ಶಾಕ್ತನೋ ಸ್ಮಾರ್ತನೋ ಇದ್ದನೇ? ಅಂದು ಸ್ಮಾರ್ತ ವೈಷ್ಣವಾದಿಭೇದಗಳಿಲ್ಲದ ಭಾಗವತ ಮತವೇ ಅಲ್ಲವೇ ವೇದ ಪ್ರತಿನಿಧಿಯಾಗಿದ್ದ ಧರ್ಮ? ಈ ನನ್ನ ಕೃತಿಯಲ್ಲಿ ಚಾಣಕ್ಯನನ್ನು ಹಾಗೇ ಚಿತ್ರಿಸಿದ್ದಕ್ಕೇಕೆ ಒಬ್ಬರು ಸಂಕಟ ಪಡಬೇಕು? ಯಾವ ಇತರ ದೇವತೆಗಳ ದ್ವೇಷವೂ ಇಲ್ಲದೆ, "ಏಕೋ ವಿಷ್ಣುರ್ಮಹದ್ಭೂತಂ ಪೃಥಕ್ ಭೂತಾನ್ಯನೇಕಶಃ" ಎಂಬಂತೆ, ಎಲ್ಲವನ್ನೂ ವ್ಯಾಪಕನೆಂಬರ್ಥದ ಒಬ್ಬನೇ "ವಿಷ್ಣುವಿನ" ಅಂಗಭೂತರೆಂದು ಭಾವಿಸಿದ್ದ ವೈಷ್ಣವ ಮೂಲದ ಮತವೇ ಭಾಗವತ ಧರ್ಮ. ಇದನ್ನು ಇತಿಹಾಸವೂ ಚೆನ್ನಾಗಿ ಸಮರ್ಥಿಸುತ್ತದೆ.

ಆದ್ದರಿಂದ ಕಥೆಯಲ್ಲಿ ಬರುವ ವೈದಿಕೇತರ ಧರ್ಮಗಳ ಅಂದಿನ ವಿಕೃತ ಸ್ಥಿತಿಗೆ ಈ ಕಥಾಕಾರ ಜವಾಬ್ದಾರಿಯಲ್ಲ! ಮುದ್ರಾರಾಕ್ಷಸ ನಾಟಕದ ಮುನ್ನುಡಿಯನ್ನು ಬರೆದ ಅನೇಕ ವಿದ್ವಾಂಸರೂ 'ಜೀವಸಿದ್ಧಿ'ಯ ಪಾತ್ರದ ಬಗೆಗೆ ಬರೆಯುತ್ತಾ ಇದೇ ಮಾತನ್ನೇ ಹೇಳಿದ್ದಾರೆ. ವಿಕೃತ ಧರ್ಮವನ್ನು ಹಾಗೇ ನೈಜವಾಗಿ ಚಿತ್ರಿಸಿದರೆ, ಅದು ಕಲಾ ನೈಪುಣ್ಯವೇ ಆಗುವುದೇ, ವಿನಾ ಅವನ ವೈಯಕ್ತಿಕ ಬೇಕು ಬೇಡಗಳ ಅಭಿವ್ಯಕ್ತಿ ಅದಲ್ಲ!! ನಿಜವಾದ ಹೂವಿನಂತೆಯೇ ಕಾಣುವ ಚಿತ್ರಕ್ಕೆ ದುಂಬಿಗಳು ಮುತ್ತಿ, ಜೇನು ಸಿಗಲಿಲ್ಲವೆಂದು ನ್ಯಾಯಾಲಯದ ಮೆಟ್ಟಿಲು ಹತ್ತಿದರೆ, ಚಿತ್ರದ ತಪ್ಪೆ! ಬರೆದವನ ತಪ್ಪೆ! ದುಂಬಿಗಳ ತಪ್ಪೆ! ಅದು ಚಿತ್ರಕ್ಕೇ 'ಶಹಬ್ಬಾಸ್'ಗಿರಿಯಲ್ಲವೇ?

ವಿಚಾರಿಸುವರಿಲ್ಲ, ಜಾತಿ ದ್ವೇಷದಲ್ಲಿ ಸುಡುತ್ತಿರುವ ಇಂದಿನ ನಮ್ಮ ದೇಶದಲ್ಲಿ !

ಚಾಣಕ್ಯನು ಅಷ್ಟು ಶ್ರಮ ಪಟ್ಟು ನಿಃಸ್ವಾರ್ಥಸೇವೆಯಿಂದ ಸ್ಥಾಪಿಸಿದ ರಾಜ್ಯವನ್ನು, ಪ್ರತಿಷ್ಠಿಸಿದ ಚಂದ್ರಗುಪ್ತನನ್ನು, ವೈದಿಕೇತರರು, ಅಷ್ಟು ಬೇಗ ಹೇಗೆ ಮತಾಂತರ ಮಾಡುವಲ್ಲಿ ಯಶಸ್ವೀ ಆದರು ? ಅವನ ಮೊಮ್ಮಗ ಏಕೆ ಬೌದ್ಧನಾದ ? ಮತಗಳು ಪೈಪೋಟಿ ನಡೆಸುತ್ತಿದ್ದುದರ, ಉಪಾಯ ಹುಡುಕುತ್ತಿದ್ದುದರ ಫಲ ಅಲ್ಲವೇ ? ಇದನ್ನು ಚಿತ್ರಿಸಲು ಮೂಲದಲ್ಲಿ 'ತರಂಗ'ದಲ್ಲಿ ಬರೆದ ಧಾರಾವಾಹಿಯಲ್ಲಿ ನಾನು ಯತ್ನಿಸಿದ್ದೆ! ಕೆಲವರಿಗೆ ಅದು ರುಚಿಸಲಿಲ್ಲ; ಸಹನೆಯೂ ಆಗಲಿಲ್ಲ; ನನ್ನನ್ನೇ ಮತಾಂಧನೆಂದರು; ಹೆದರಿಸಿದರು; 'ತರಂಗ'ದ ಸಂಪಾದಕರನ್ನೂ ಸಹ ! ಬರೆದರು, ಪ್ರತಿಭಟಿಸಿದರು; ನನ್ನ ಉತ್ತರ ಅವರಿಗೆ ಯಾವ ಸಮಾಧಾನವನ್ನೂ ತರಲಿಲ್ಲ. ಆ ಉತ್ತರವೂ ತರಂಗದಲ್ಲೇ ವಿಸ್ತಾರವಾಗಿ ಪ್ರಕಟವಾಯಿತು!... ಕಲೆಯನ್ನು ಕಲೆಯನ್ನಾಗಿಯೇ ಕಾಣುವ ದೃಷ್ಟಿ ಬೆಳೆಯಲೇ ಇಲ್ಲ; ಜಾತಿ ದ್ವೇಷ ಹಾಗಿತ್ತು. ಜೈನರ 'ಪರಿಶಿಷ್ಟ ಪರ್ವ'ವೆಂಬ ಗ್ರಂಥದ ಆಧಾರವನ್ನೂ ಅವರು ನಂಬಲಿಲ್ಲ; ಚಂದ್ರಗುಪ್ತನ ಪಟ್ಟಾಭಿಷೇಕಾನಂತರದ ಈ ಗ್ರಂಥದ ಕಥೆಗೆ ಅದೂ ಒಂದು ಮುಖ್ಯಾಧಾರ; ಅಮಾತ್ಯ ರಾಕ್ಷಸನನ್ನು ಮತ್ತೆ ತಂದು ಇಟ್ಟ ನಂತರ, ಚಾಣಕ್ಯ, ಒಂದು ಕ್ಷಾಮ ಕಾಲದಲ್ಲಿ, ಪಾಟಲೀಪುತ್ರಕ್ಕೆ ಬಂದು, ಅರಮನೆಯಲ್ಲಿ ವೈದಿಕೇತರ ಪ್ರಭಾವ ಬೆಳೆದು, (ಸುಸ್ಥಿತ, ಭದ್ರಬಾಹು ಎಂಬವರ ಪ್ರಭಾವಕ್ಕೆ ದೊರೆ ಒಳಗಾಗಿ) ಆಡಳಿತ ಯಂತ್ರವು ಪಕ್ಷಪಾತದಿಂದಲೂ, ಅಧಿಕಾರಿಗಳ ಉದಾಸೀನತೆಯಿಂದಲೂ, ಕುಸಿದು, ಅತ್ತ ಕ್ಷಾಮವೂ ಬಂದು, ಜನರು, ಕಂಗಾಲಾಗಿದ್ದು, ಅದನ್ನು ಕಂಡ ಚಾಣಕ್ಯ ಕಿಡಿಕಿಡಿಯಾಗಿ, ತಾನು ಕಂಡಿದ್ದನ್ನು ದೊರೆಯ ಎದುರೇ ಸ್ಥಾಪಿಸಿ ತೋರಿಸಿ, ಅದನ್ನು ಸಹಿಸದೆ ಚಂದ್ರಗುಪ್ತನು ಸಂನ್ಯಾಸಿ ಆದನೆಂದು ಅಲ್ಲಿ ಹೇಳಿದೆ. ಶ್ರೀ ಎ.ಎಸ್.ಪಿ. ಅಯ್ಯರ್ ಎಂಬ (ಮದ್ರಾಸು ನ್ಯಾಯಾಲಯದ ಮುಖ್ಯ ನಿವೃತ್ತ ನ್ಯಾಯಾಧೀಶರು) ಮಹನೀಯರು ಬರೆದ

Chanakya and Chandragupta ಎಂಬ ಕಾದಂಬರಿಯ ಮುನ್ನುಡಿಯಲ್ಲಿ ಈ ಆಧಾರಗಳನ್ನೆಲ್ಲ ಕೊಟ್ಟು ತೋರಿದ್ದಾರೆ. ಅದನ್ನು ನಾನೂ ಉದಾಹರಿಸಿಯೂ, ಕೆಲವರಿಗೆ ತೃಪ್ತಿ ಆಗಲಿಲ್ಲ. 'ದೀಪವಂಶ,' 'ಮಹಾವಂಶ,' 'ಆರ್ಯಮಂಜುಶ್ರೀ ಮೂಲ ಕಲ್ಪ' ಎಂಬ ಬೌದ್ಧ ಗ್ರಂಥಗಳಲ್ಲೂ ಚಾಣಕ್ಯನನ್ನು ಕ್ರೂರಿಯನ್ನಾಗಿಯೂ, ಮತಾಂಧನನ್ನಾಗಿಯೂ, ಚಿತ್ರಿಸಿದೆ! ಇಂದಿನ ಬ್ರಾಹ್ಮಣರು ಪ್ರತಿಭಟಿಸಬೇಕೆ ? ಶೇಕ್ಸ್‌ಪಿಯರನು ತನ್ನ 'ದ ಮರ್ಚೆಂಟ್ ಆಫ್ ವೆನಿಸ್' ನಾಟಕದಲ್ಲಿ ಶೈಲಾಕ್ ಎಂಬ ಯಹೂದ್ಯ ಲೇವಾದೇವೀ ವರ್ತಕನನ್ನು ಕ್ರೂರಿಯನ್ನಾಗಿ ಚಿತ್ರಿಸಿರುವಲ್ಲಿ, ಅಂದಿನ ಯಹೂದ್ಯರ ಸ್ಥಿತಿಯೇ ಕಾರಣವಲ್ಲದೆ, ಅವನ 'ಮತಾಂಧತೆ' ಯನ್ನು ಕಾರಣವಾಗಿ ಹೇಳಬಹುದೇ ?

ಇಂದು ಎಲ್ಲ ಮತಗಳನ್ನೂ 'ಒಂದೇ' ಎಂದು, ಮತಸಾಮರಸ್ಯ ಭಾವದಿಂದ ಕಾಣಬೇಕಾದ ಪರಿಸ್ಥಿತಿ ಬಂದಿರುವುದು ನಿಜವಾದರೂ, ಹಿಂದೆಲ್ಲಾ ಹಾಗೆಯೇ ಇತ್ತೆ? ಔರಂಗಜೇಬನ ಒಂದು ಶತಾಬ್ದಿ ಉತ್ಸವದಲ್ಲಿ, 'he was a socialist, secularist, humanist' ಎಂದು ಒಬ್ಬರು ಹೇಳಿದಂತೆ ಹಾಸ್ಯಾಸ್ಪದವಾಗಲಾರದೇ ? ಇಂದಿನ ಜಾತ್ಯಂಧರು, ಜಾತಿ ಉತ್ಕರ್ಷವಾದಿಗಳು ತಿಳಿಯಲಾರರು !

ಚಾಣಕ್ಯ ಉಜ್ವಲ ವೈದಿಕ ನಿಷ್ಠನಿದ್ದ! ಇತರ ಮತಗಳು ಅದರ ವಿರುದ್ಧ ನಿಂತು ದೊರೆಯನ್ನು ಎಳೆದಾಡಲು ಆರಂಭಿಸಿದ್ದವು! ಇದನ್ನು ಚಿತ್ರಿಸದಿದ್ದರೆ, ಚಂದ್ರಗುಪ್ತನ ಅಂತ್ಯಕ್ಕೆ ಅರ್ಥೈಸುವುದೆಂತು ?

ಭದ್ರಬಾಹುಮುನಿಗಳು ಉತ್ತರದೇಶದಲ್ಲಿ ಕ್ಷಾಮದಿಂದ ಹನ್ನೆರಡು ಸಾವಿರ ಶಿಷ್ಯರೊಡನೆ ದಕ್ಷಿಣಕ್ಕೆ, ಶ್ರವಣಬೆಳಗೊಳಕ್ಕೆ ವಲಸೆ ಬಂದರೆಂದು ಹೇಳುತ್ತಾರೆ. ಇರಬಹುದೆನ್ನೋಣ. (ಅವರು ಚಾಣಕ್ಯನ ಸಮಕಾಲದವರೆಂದು 'ಪರಿಶಿಷ್ಟಪರ್ವ' ಹೇಳುತ್ತದೆ.) ಆದೇ ಕಾಲದ ದೇಶದ ಜೈನೇತರರು ಏಕೆ ವಲಸೆ ಹೋಗಲಿಲ್ಲ? ಅಥವಾ ಅವರೂ ಬೇರತ್ತ ಹೋಗಿದ್ದರೆ ಇತಿಹಾಸವೋ, ವದಂತಿಯೋ ಏಕೆ ಹೇಳುತ್ತಿಲ್ಲ! ಇವರಿಗೆ ಬಾರದ ಕ್ಷಾಮ

ಅವರಿಗೆ ಮಾತ್ರ ಬಂದಿತೇ ? ಆ ನಿರ್ಗಮನದ ಹಿಂದೆ ಮತ ಸಂಘರ್ಷದ ಹಿನ್ನೆಲೆ ಇದ್ದಿರಲಾರದೆ ? ಇಲ್ಲಿ ಕಥಾಕಾರನ ಕಲ್ಪನೆಗೆ ಎಡೆಯಿಲ್ಲವೆ? ಸಂಭಾವಿತವಾದ ರೀತಿಯಲ್ಲಿ ಕಥೆ ಹೆಣೆದರೆ ತಪ್ಪೇನು?.... ಯಾರು ಉತ್ತರಿಸ ಬೇಕು ?

ಚೋಳರ ಕಾಲದ (ನಾಲ್ಕೈದು ತಲೆಮಾರುಗಳ) ಶೈವ, ವೈಷ್ಣವ' ಜೈನ, ಬೌದ್ಧ ಮತ ಸಂಘರ್ಷವನ್ನು ಕುರಿತು, ಈಗ ಮೂವ್ವತ್ತು ವರ್ಷ ಗಳ ಹಿಂದೆ ತಮಿಳಿನ 'ಕಲ್ಕಿ'ವಾರ ಪತ್ರಿಕೆಯಲ್ಲಿ ಒಂದು ಧಾರಾವಾಹಿ, "ಪೊನ್ನಿಯಿನ್‌ಶೆಲ್ವನ್" ಎಂಬ ಶೀರ್ಷಿಕೆಯಲ್ಲಿ, ಪ್ರಕಟವಾಗಿ, ಹಲವಾರು ವರ್ಷ ಆದು ಜನಪ್ರಿಯವೂ ಆಗಿ, ಈಗ ಐದು ಸಂಪುಟಗಳಲ್ಲಿ ಪ್ರಕಟ ವಾಗಿಯೂ ಇದೆ! ಶೈವರು ಶೈವರಂತೆಯೂ, ಜೈನರು ಜೈನರಂತೆಯೂ, ಹೀಗೆ ಎಲ್ಲರೂ ನೈಜ ಸ್ವರೂಪದಲ್ಲೇ ಆಡಿ, ಮಾಡಿ, ತೋರಿದ್ದನ್ನು, ಆ ರಾಜಕೀಯ ನಡೆದ ಬಗೆಯನ್ನು ಅಲ್ಲಿ ನಿರೂಪಿಸಿದೆ ! ತಮಿಳು ನಾಡಿನ ಯಾವ ಮತದವರೂ ಪ್ರತಿಭಟಿಸಲಿಲ್ಲ ! ಕರ್ನಾಟಕದಲ್ಲೇಕೆ ಈ ಮನೋ ವಿಕಾರ ? ತಿಳಿಯದು !

ಹಾಗಾದರೂ ಈ ಮುದ್ರಿತವಾದ ಈ ಕೃತಿಯಲ್ಲಿ ಯಾರ ಮನಸ್ಸೂ 'ನೋಯುವ' ಭಾಗಗಳಿಲ್ಲದಂತೆ, ಪರಿಷ್ಕರಿಸಿ ಬರೆದು ಮುದ್ರಿಸಲಾಗಿದೆ ಎಂದು ನಂಬುತ್ತೇನೆ. ಎಲ್ಲ ಧರ್ಮಗಳ ಮೂಲಗುರಿಯೂ ಒಂದೇ—ಜನ ಕಲ್ಯಾಣ, ಆದರೂ, ಕಾಲಕಾಲಕ್ಕೆ ಅವುಗಳಲ್ಲಿ ವಿಕೃತಿಗಳು ಸಂಭವವೇ ! ವೈದಿಕವನ್ನೊಳಗೊಂಡು ಎಲ್ಲವೂ ಈ ಮಾತಿಗೆ ಉದಾಹರಣೆ. ಇಂದಿಗೆ ತಿದ್ದಿ ಪರಿಷ್ಕೃತಗೊಂಡ ನೆಲೆಗಳಿಂದ ಅಂದಿನಿಂದ ಸ್ಥಿತಿಯನ್ನು ಅಳೆಯ ಬಾರದು. ಆ ಟೀಕೆಗಳಿಗೆ ಅಂದಿನ ಸ್ಥಿತಿಗಳು ಕಾರಣವಿರಲೇಬೇಕೆಂದು ಭಾವಿಸಿ, ಬಿಟ್ಟು ಬಿಡುವುದೇ ಲೇಸು.

ಈ ಕೃತಿಯನ್ನು ಬರೆದ ಉದ್ದೇಶ್ಯ, ಚಾಣಕ್ಯನ ಘನವ್ಯಕ್ತಿತ್ವವನ್ನು ಇಂದಿನ ಜನತೆಗೆ, ನಮ್ಮ ಅಧಮ ರಾಜಕೀಯ, ಆರ್ಥಿಕ ಸ್ಥಿತಿಯಲ್ಲಿ,

ಪರಿಚಯಿಸಿ, ನಾವು ಸಾಗಬೇಕಾದ ದಿಕ್ಕಿನತ್ತ, ಮೌಲ್ಯಗಳತ್ತ, ಬೆರಳು ತೋರಿಸುವುದೇ ಆಗಿದೆ. ಪ್ರಸ್ತುತತೆ ಇರುವುದು ಚಾಣಕ್ಯನ ವಿಚಾರಗಳ ಸತ್ತ್ವದಲ್ಲಿ, ಸತ್ಯದಲ್ಲಿ, ನಿಷ್ಠುರತೆಯಲ್ಲಿ. ಅದನ್ನು ಅರ್ಥಶಾಸ್ತ್ರಾನುಸಾರ ವಾಗಿಯೇ ಮಾಡಿ, ಅಲ್ಲಿನ ವಾಕ್ಯ ಛಾಯೆಗಳನ್ನೇ ಅವನ ಬಾಯಲ್ಲಿ ಹೇಳಿಸಿ ದ್ದೇನೆ. ಕುಟಿಲ ಪಾಶ್ಚಾತ್ಯರ ರಾಜಕೀಯ, ಧರ್ಮ, ಸಾಮಾಜಿಕ ಪದ್ಧತಿ ಗಳ ಅಂಧಾನುಕರಣೆಯ ನರಕಕೂಪದಲ್ಲಿ ಬಿದ್ದ ನಮಗೆ ಅರ್ಥಶಾಸ್ತ್ರವೇಕೆ ? ರಾಮಾಯಣವೇಕೆ ? ಮಹಾಭಾರತವೇಕೆ? ಮನ, ತುಂಬ ನೊಂದು ಈ ಮಾತನ್ನು ಬರೆಯುತ್ತಿದ್ದೇನೆ!

ಕೇವಲ ಕೌಟಿಲ್ಯನ ಅರ್ಥಶಾಸ್ತ್ರದ ಪರಿಚಯಾತ್ಮಕ, ಅದರ ಕುತೂಹಲ ಜನಕ ವಿಷಯ ವೈಪುಲ್ಯ, ವೈವಿಧ್ಯ, ಉತ್ತುಂಗತೆಗಳನ್ನು ಕುರಿತೇ ಒಂದು ಗ್ರಂಥವನ್ನು ಬರೆಯಬೇಕೆಂದಿದ್ದೇನೆ.

ಚಾಣಕ್ಯ, ಕೆಲವು ತಾಮ್ರ ಪ್ರಕಾರಗಳಿಂದ ಬಂಗಾರ ಮಾಡುವ ರೀತಿ ಯನ್ನು ಅರ್ಥಶಾಸ್ತ್ರದಲ್ಲಿ ಉಲ್ಲೇಖಿಸುತ್ತಾನೆ. ಅದನ್ನಾಧರಿಸಿ ನಮ್ಮ ಕೃತಿಯಲ್ಲಿ ಒಂದು ಅಧ್ಯಾಯ ಬಂದಿದೆ. ಅದನ್ನು 'ತರಂಗ' ಧಾರಾವಾಹಿ ಯಲ್ಲಿ ಓದಿದ ಒಬ್ಬರು "ಪ್ರಾಯಃ ಚಾಣಕ್ಯನಿಗೆ ಈ ಅಸಂಭವದ ಪರಿಚಯ ವಿರಲಿಲ್ಲ" ಎಂದು ಆಕ್ಷೇಪಿಸಿ, ಅದರ ಸಂಪಾದಕರಿಗೆ ಬರೆದರು ! ಅವರು ಅದನ್ನು ನನಗೆ ರವಾನಿಸಿದರು! ನಾನು ಅರ್ಥಶಾಸ್ತ್ರದಿಂದ ಪುಟ, ಪಂಕ್ತಿ ತೋರಿಸಿ ಉತ್ತರಿಸಿದ್ದಕ್ಕೆ, "ಚಾಣಕ್ಯನಿಗೆ ಅದು ಗೊತ್ತಿರಲಿಲ್ಲ ಎಂದು ನಾನು ಹೇಳಲಿಲ್ಲ! ಅದೇ ಅಸಂಭವವೆಂದು ಲೋಹಶಾಸ್ತ್ರ–ಇಂದಿನದು–ಹೇಳು ತ್ತದೆ." ಎಂದುತ್ತರಿಸಿ. ವಿಷಯಾಂತರ ಮಾಡಿ ಜಾರಿಕೊಳ್ಳಲು ಯತ್ನಿಸಿ ದರು. "ಇಂದು ನಮಗೆ ಆ ವಿಧಾನ ತಿಳಿದಿರಲಿ, ಬಿಡಲಿ, ಚಾಣಕ್ಯನಿಗೆ ತಿಳಿದಿತ್ತು. ಅವನು ಅದಕ್ಕೆ ಬೇಕಾದ, ತಾನು ಉಪಯೋಗಿಸಿದ ಸೂತ್ರ–formulaವನ್ನು ಕೊಡದಿದ್ದ ಮಾತ್ರದಿಂದ, ಅವನಿಗೇ ತಿಳಿದಿರಲಿಲ್ಲ ಎಂಬುದು ಸರಿಯಲ್ಲ! ಕೊಟ್ಟಿದ್ದರೆ ಅನರ್ಥವಾಗುತ್ತಿತ್ತು !'' ಎಂದು ಬರೆದೆ. ಅವರು ದ್ವೈತಾದ್ವೈತ ವಿಷಯಕ್ಕೆ ತಿರುಗಿ, ಚಾಣಕ್ಯನನ್ನು

ಭಾಗವತನೆಂದು ಚಿತ್ರಿಸಿರುವುದು ಸರಿಯಲ್ಲ ಎಂದು ಬರೆದರು. ಮೇಲೆ ತೋರಿಸಿದ ವಾಕ್ಯವನ್ನು ಶೈವ, ಜೈನ, ಬೌದ್ಧದ ಬಗೆಗಿನ ಅವನ ತಿರಸ್ಕಾರ, ಎಚ್ಚರಿಕೆಯನ್ನು ಅವರಿಗೆ ಮತ್ತೆ ಎತ್ತಿ ತೋರಿಸಿದೆ! ಅವರಿಗೆ ನನ್ನಲ್ಲಿ ಅಸೂಯೆಯೂ ದ್ವೇಷವೂ ಉಂಟಾದವು! "ಶೇಷಂ ಕೋಪೇನ ಪೂರಯೇತ್" ಎಂಬುದನ್ನು ಸಿದ್ಧ ಮಾಡಿದರು, ಶಾಂತರಾದರು !!

ಕೊನೆಯದಾಗಿ, ಇಲ್ಲಿನ ಕಲ್ಪನೆಗಳ ಬಗೆಗೆ ಒಂದು ಮಾತು. ವಿದ್ಯುಲ್ಲೇಖೆಯ ಪಾತ್ರ ನನ್ನದೇ ಕಲ್ಪನೆ. ಮೂಲಕ್ಕೆ ಇದರಿಂದ ಯಾವ ಬಾಧೆಯೂ ಇಲ್ಲ. ಸೆಲ್ಯೂಕಸ್ (ಶೈಲೂಷಕ)ನ ಮಗಳನ್ನು ಚಂದ್ರಗುಪ್ತ ವಿವಾಹನಾದನೆಂಬ ಇತಿಹಾಸಕ್ಕೆ ನನ್ನ ಕಾಲ್ಪನಿಕ ಅರ್ಥ ಈ ರೂಪದ್ದು; ಚಾಣಕ್ಯ ಮುಂದೆ ಜನ್ಮಾಂತರದಲ್ಲಿ ಚಂದ್ರಗುಪ್ತನನ್ನು ಉದ್ಧರಿಸಿದ ಬಗೆಗಿನ-(ವಿಷ್ಣುವರ್ಧನ-ರಾಮಾನುಜರ ಕಥೆಯು) ಕಲ್ಪನೆ ಒಂದು ದಿನ ನನಗೆ ಕನಸಿನಲ್ಲಿ ಮೂಡಿ ಬಂದಿತು ! ವಾತ್ಸ್ಯಾಯನ, ದ್ರವಿಡಾಚಾರ್ಯ, ಚಾಣಕ್ಯ, ಮಲ್ಲನಾಗ, ಪಕ್ಷಿಲಸ್ವಾಮಿ-ಇವು ಒಬ್ಬನವೇ ಹೆಸರೆಂದೇ ಹೇಮಚಂದ್ರನ 'ಅಭಿದಾನ ಚಿಂತಾಮಣಿ' ಹೇಳುತ್ತದೆ. ಈ ಸಮೀಕರಣ ನನಗೆ ರೋಚಕವಾಗಿ ಕಂಡು, ಧರ್ಮ, ಅರ್ಥ, ಕಾಮ, ಮೋಕ್ಷ ಶಾಸ್ತ್ರ ನಾಲ್ಕರ ಮೇಲೂ ಒಬ್ಬನೇ ವಿಷ್ಣುಗುಪ್ತನೆಂಬ ಚಾಣಕ್ಯ, ಸೂತ್ರ-ವ್ಯಾಖ್ಯಾಗ್ರಂಥಗಳನ್ನು ಬರೆದ ಸಂಭವದ ಕಥಾನಕ ಉಪಯೋಗವನ್ನು ಇಲ್ಲಿ ತೆಗೆದುಕೊಂಡಿದ್ದೇನೆ. ಅಲ್ಲವೆಂಬ ಇತಿಹಾಸಕಾರರು ಇರಲಿ; ನಾನು ಬರೆಯುತ್ತಿರುವುದು ಕಥೆ, ಈ ಕಲ್ಪನೆಯಿಂದ ಚಾಣಕ್ಯನ ವ್ಯಕ್ತಿತ್ವದ ಘನತೆ ಹೆಚ್ಚುವುದೇ ವಿನಾ ಕಡಿಮೆ ಆಗಲಾರದೆಂದು ಭಾವಿಸುತ್ತೇನೆ. ಚಿಕ್ಕ ವಯಸ್ಸಿನಲ್ಲಿ ಈ ಕಲ್ಪನೆಯನ್ನು ಬೆಳೆಸಿಕೊಂಡಿದ್ದು, ಉಪಯೋಗಿಸಿದ್ದೇನೆ. ಮುದ್ರಾರಾಕ್ಷಸ, ಮುದ್ರಾಮಂಜೂಷಗಳ ಕಥೆಯನ್ನು ಆಧರಿಸಿ, ಅನುಕರಿಸಿ, ಬೆಳೆಸಿದ್ದೇನೆ.

ಚಾಣಕ್ಯನಿಗೆ ಪರಿಚಿತವಾಗಿದ್ದ ವಿದ್ಯೆಗಳ ಓದುಗರ ಪರಿಚಯಕ್ಕಾಗಿ, "ಚಾಣಕ್ಯನ ಕಥೆಗಳು'' ಎಂಬ ಹೊಸ ಗ್ರಂಥವನ್ನು ಬರೆಯಲು ಸ್ಫೂರ್ತಿ ಉಂಟಾಗಿದೆ.

ನಮ್ಮ ದೇಶಕ್ಕೆ ಇಂದು ಬೇಕಾಗಿರುವುದೇ ಶುಕ್ರನೀತಿ - ಅಧರ್ಮ ಶಕ್ತಿಗಳನ್ನು ಅವರವರ ಅಧರ್ಮದ ರೀತಿಗಳಿಂದಲೇ ಸದೆಬಡಿಯಬೇಕೆಂಬ ನೀತಿ. ಎಲ್ಲವನ್ನೂ ಒಳ್ಳೆಯ ದಾರಿಯಿಂದಲೇ ಮಾಡಬೇಕೆಂಬ ಬೃಹಸ್ಪತಿ ನೀತಿ, (ಗಾಂಧಿ ನೀತಿ ?) ನಮ್ಮ ದೇಶದ ಸುತ್ತ, ದೇಶದ ಒಳಗೆ, ಬರೀ ಶತ್ರುಗಳ ಚಕ್ರವ್ಯೂಹವನ್ನೇ ಸೃಷ್ಟಿಸಿಟ್ಟಿದೆ ! ಅಪ್ರಸ್ತುತವಾದ ನೀತಿಯ ಆಶ್ರಯದ ಫಲ; ಶ್ರೀಕೃಷ್ಣ ಅನುಸರಿಸಿದ ಮಾರ್ಗ ಇದಲ್ಲ ! ಅದು ಶುಕ್ರನೀತಿ ! ಇಲ್ಲವಾಗಿದ್ದರೆ ಕೌರವರನ್ನು ಕಿತ್ತೊಗೆಯಲು ಆಗುತ್ತಿರಲಿಲ್ಲ!

ಇಂದೊಬ್ಬ ಚಾಣಕ್ಯ ಇಲ್ಲಿ ಉದಿಸಿ ಬಂದಾನೇ ? ಒಬ್ಬ ಚಂದ್ರಗುಪ್ತ ನಮಗೆ ದೊರೆತಾನೇ ? ನಂದಪ್ರಾಯ ರಾಜಕಾರಣಿಗಳನ್ನು ಕೊನೆಗಾಣಿಸಿ, ಧರ್ಮಸಾಂಮ್ರಾಜ್ಯವನ್ನು ಸ್ಥಾಪಿಸಬಲ್ಲ ಧೀರ ಎಲ್ಲಿದ್ದಾನೆ ?

ಅಂಥವನೊಬ್ಬ ಹುಟ್ಟಿಬರಲು ಈ ಒಂದು ಕಥೆ, ಕಿಡಿಯಂತೆ! ಪುಟ್ಟ ಅಗ್ನಿಯೊಂದನ್ನು ಹುಟ್ಟಿಸಿದರೂ ನಾನು ಧನ್ಯ.

ಧಾರಾವಾಹಿಯಾಗಿ ಇದನ್ನೋದಿದ, ಮೆಚ್ಚಿಬರೆದ ಅಸಂಖ್ಯ ಓದುಗರಿಗೆ ನನ್ನ ಕೃತಜ್ಞತೆಗಳು. ಮೂಲವನ್ನು ಆಮೂಲಾಗ್ರವಾಗಿ ಓದಿ, ಸಮರ್ಥ ಮುನ್ನುಡಿ ಬರೆದುಕೊಟ್ಟ ಆತ್ಮೀಯ ಶ್ರೀ ಎನ್ಕೆಯವರಿಗೆ, ಧಾರವಾಹಿಯಾಗಿ ಬರಲು ಉಪಕರಿಸಿದ 'ತರಂಗದ' ಶ್ರೀ ಗುಲ್ವಾಡಿಯವರಿಗೆ ಈಗ ಮುದ್ರಿಸಿಕೊಟ್ಟ ಶ್ರೀ ಶಿವಶಂಕರ ಮುದ್ರಣಾಲಯದ ಮಾಲಿಕರಿಗೆ, ನಾನು ಅತ್ಯಂತ ಋಣಿ. ಉತ್ತಮ ಚಿತ್ರವನ್ನು ಮುಖಪುಟಕ್ಕೆ ಬರೆದುಕೊಟ್ಟ, ಕಲಾವಿದ ಶ್ರೀ ಕೆ. ಬಿ. ಕುಲಕರ್ಣಿ ಅವರಿಗೂ ನಾನು ಕೃತಜ್ಞ.

ಧಾರವಾಡ
೪-೧-೧೯೭೫

ಇಂತು ಸಜ್ಜನ ಕನ್ನಡಿಗರ ಸೇವಕ
ಕೆ. ಎಸ್ ನಾರಾಯಣಾಚಾರ್ಯ

# ಅರ್ಪಣೆ

ಈ ನಮ್ಮ ಪವಿತ್ರ ಭರತ ಭೂಮಿಯ
ಸಾಂಸ್ಕೃತಿಕ ಜ್ಯೋತಿಯನ್ನು ಹಚ್ಚಿಟ್ಟು ರಕ್ಷಿಸಿ,
ಬೆಳೆಸಿ ಬಂದ, ಚಾಣಕ್ಯ–ಪೂರ್ವದ, ಚಾಣಕ್ಯೋತ್ತರ
ಕಾಲದ ಸಾವಿರಾರು ಋಷಿ ಮುನಿಗಳ
ಪರಂಪರೆಗೆ

॥ ಶ್ರೀ ಕೃಷ್ಣಾಯ ನಮಃ ॥

# ಆಚಾರ್ಯ ಚಾಣಕ್ಯ

## ಮೊದಲನೆಯ ಅಧ್ಯಾಯ

### ಇವನಾರು?

ಭಾರತದೇಶದ ಮಹಾಪುರುಷರಲ್ಲಿ ಋಷಿಮುನಿಗಳ ವರ್ಗಕ್ಕೆ ಸೇರ ಬಲ್ಲ ಯೋಗ್ಯತೆ ಇದ್ದವನು ಇವನು; ಆವರ ಐತಿಹಾಸಿಕ ಕಾಲಾನಂತರ ಇವನು ಹುಟ್ಟಿ ಬಂದು ಧರ್ಮಸಂರಕ್ಷಕನಾಗಿದ್ದನ್ನು ಇಂದು ಬಹು ಜನ ನಂಬಲೊಲ್ಲರು; ಆದರೆ ಇವನು ಇದ್ದು, ಬಾಳಿ, ಬದುಕಿ, ಧರ್ಮಕ್ಕೆ, ದೇಶಕ್ಕೆ, ದೇಹಸವೆಸಿ, ತನ್ನೆಲ್ಲವನ್ನೂ ಕೊಟ್ಟು ಹೋದದ್ದು ನಿಜ; ಭಾರತದ ಇಂದಿನ ಮೂಢ ಪ್ರಜೆ ಸಂಪೂರ್ಣ ಮರೆತ ಮಹಾನುಭಾವರಲ್ಲಿ ಇವನು ಅಗ್ರಗಣ್ಯ. ಆದರೆ ಇಂದು ಬೇಕು ನಮಗೆ, ಅವನ ನೆನಪು!

"ಆನೆಗಳನ್ನು ಕೊಲ್ಲುವವರನ್ನು ಕೊಲ್ಲಬೇಕು" ಎಂದು ಅವನು ಈಗ್ಗೆ ೨೩೦೦ ವರ್ಷಗಳ ಹಿಂದೆಯೇ ಬರೆದಿದ್ದ! (ಅರ್ಥಶಾಸ್ತ್ರ ೨೩ನೇ ಅಧ್ಯಾಯ, ೨೦ನೇ ಪ್ರಕರಣ.) ಇಂದಿನ ವೀರಪ್ಪನ ಅಪ್ಪನಂಥ ಕಾಡುಗಳ್ಳರನ್ನು ಅವನು ಕಂಡಿರಬೇಕು. ಅಂಥವರನ್ನು ನಿರ್ದಯನಾಗಿ 'ಬೇಟೆ'ಯಾಡಿಸಿ,

ಕಂಟಕ ಕಿತ್ತು, ರಾಷ್ಟ್ರವನ್ನು ಬಲಪಡಿಸುವ ವಿಧಾನಗಳನ್ನು ವಿಧಿಸಿ, ಆಚರಿಸಿ ತೋರಿ,ಮಹಾ ಸಾಮ್ರಾಜ್ಯವೊಂದರ ಸಂಸ್ಥಾಪಕನಾದ ವಿರಕ್ತ ಬ್ರಾಹ್ಮಣ ಆವನು. ಸತ್ತ ಆನೆಗಳ ಜೋಡಿದಂತಗಳನ್ನು, ತಾವೇ ಸತ್ತವುಗಳದ್ದನ್ನು, ಸ್ವಪ್ರೇರಣೆಯಿಂದ ಸರ್ಕಾರಕ್ಕೆ ತಂದು ಒಪ್ಪಿಸಿದ ವನವಾಸಿ ಜನಕ್ಕೆ ನಾಲ್ಕೂ ಕಾಲು 'ಪಣ' (ಒಂದು ಪಣ ಎಂದರೆ ಹಿಂದಿನ ಬೆಳ್ಳಿರೂಪಾಯಿ ಕಾಲದ ಏಳೂವರೆ ರೂಪಾಯಿಗಳಷ್ಟು ಮೊತ್ತ; ಅದನ್ನು) ಬಹು ಮಾನ ಕೊಡ ಬೇಕೆಂಬ ದಂತರಕ್ಷಣೆಯ ದಿಟ್ಟ ಪ್ರೋತ್ಸಾಹದ ಹೆಜ್ಜೆಯನ್ನು ಆವನು ಇಟ್ಟು ತೋರಿದ. ಆ ಹಣಕ್ಕೆ ಇಂದು ಎಷ್ಟು ಬೆಲೆಯಾಗಿರಬೇಡ ! ಅಷ್ಟು ಉದಾರ ಅವನ ನೀತಿ, ಪ್ರಾಮಾಣಿಕ ಬಡವರ ಬಗೆಗೆ !

ಕಲಬೆರಕೆ ವ್ಯಾಪಾರಾಟಗಾರರಿಗೆ, ಧಾನ್ಯ, ಎಣ್ಣೆ, ಉಪ್ಪು, ಸುಗಂಧ ದ್ರವ್ಯಗಳು, ಔಷಧಿಗಳು-ಇವುಗಳಿಗೆ, ಕಡಿಮೆ ಬೆಲೆಯ ಆದೇ ಬಣ್ಣದ ಬೇರೆ ವಸ್ತುಗಳನ್ನು ಬೆರಸಿ ಮಾರುವವರಿಗೆ ಹನ್ನೆರಡು ಪಣ ದಂಡವನ್ನು ವಿಧಿಸಿ ಅವರಿಗೆ ಸಿಂಹಸ್ವಪ್ನವಾಗಿ (ಅರ್ಥಶಾಸ್ತ್ರ, ೭೬-೫೮) ಇಂಥ ವಂಚಕರ ಸಮೂಹದಲ್ಲಿ ಅಪ್ರಿಯನಾಗಿ, ಅವರಿಂದ ನಿರ್ದಯನೆಂದು ಬೈಸಿಕೊಂಡವನೂ ಇವನೇ ! ನಿಷ್ಕಾರಣ ಬೆಲೆ ಏರಿಸಿ, ಆ ಬೆಲೆಗೇ ಜನ ವಸ್ತುಕೊಳ್ಳುವಂತೆ ಅಪ್ರತ್ಯಕ್ಷ ಬೆದರಿಕೆಯೊಡ್ಡಿ, ತಾವೇ ಗುಂಪುಕೂಡಿ, ಬೇಡಿಕೆ ಅವನ್ನು ಮಾರ ಲಿಕ್ಕೂ ಪುಡಿ ವರ್ತಕರಿಗೆ ಅವಕಾಶ ಕೊಡದ ಅನಧಿಕೃತ ವ್ಯಾಪಾರಿ ಸಂಘಕ್ಕೂ ಅವರ ದುಷ್ಟನಡೆವಳಿಕೆಗೂ (ಕಳ್ಳದಾಸ್ತಾನು, ಟ್ರೇಡ್ ಯೂನಿ ಯೆಸ್, ಬ್ಲಾಕ್‌ಮೇಲ್ ಮೊದಲಾದ ಇಂದಿನ ನಡತೆಯ ಅಂದಿನ ಪರಿ ಪಾಠಕ್ಕೂ) ಸಾವಿರ ಪಣ ದಂಡ ಹಾಕಿ ಇವನು ಎಷ್ಟು ದುಷ್ಟವರ್ತಕರನ್ನು ಮುಳುಗಿಸಿದ್ದನೊ !

ತೋರಿಸುವುದೊಂದು ಮಾಲು, ಮಾರುವುದಿನ್ನೊಂದು (ಫಾಲ್ಸ್ ಸ್ಯಾಂಪ್ಲಿಂಗ್ ಎಂಬ ಇಂದಿನ ನವ ರೀತಿಯ ಪ್ರಾಚೀನ ಮೂಲದ) ಎಂಬ ವರ್ತಕರ ಜಾಡ್ಯಕ್ಕೆ ಇವನಂತೆ ಮದ್ದುಕೊಡಬಲ್ಲವರು ಹಿಂದೆ ಇರಲಿಲ್ಲ; ಮುಂದೆ ಬರಲಾರರು ! ಆ ಬೆಲೆಯ ವಸ್ತುಗಳ ಹದಿನಾರರಷ್ಟು, ಅಥವಾ

ಇನ್ನೂ ಹೆಚ್ಚು ದಂಡ ಹಾಕಿ ರಾಜಾದಾಯಕ್ಕೆ ಬಾಯಿಟ್ಟ ವಂಚಕರನ್ನು ನಿಗ್ರಹಿಸಿ, ರಾಷ್ಟ್ರದ ಬೊಕ್ಕಸವನ್ನು ಬೆಳೆಸಿ ರಕ್ಷಿಸಿದ ಧೀರನೂ ಈತನೆ. (ಅರ್ಥ ೭೭-೭೯).

"ಆಳುಗರಿಗೆ ಸ್ವಂತ ಪ್ರಿಯವೆಂಬುದಿಲ್ಲ; ಪ್ರಜೆಗಳ ಪ್ರಿಯವೇ ಅವರ ಹಿತ" (**ನಾತ್ಮಪ್ರಿಯಂ ಹಿತಂ ರಾಜ್ಞಃ, ಪ್ರಜಾನಾಂ ತು ಪ್ರಿಯಂ ಹಿತಂ** ।) ಎಂಬ ನೀತಿಯನ್ನು ರೂಪಿಸಿ, (೧೬-೧೯) ಆದರ್ಶ ದೊರೆಯ ಚಿತ್ರವನ್ನಿಟ್ಟು, ಆ ದೊರೆಗೆ ದಿನಕ್ಕೆ, ರಾತ್ರಿ ಮೂರು ಗಂಟೆಗೆ ಮೀರಿ ವಿಶ್ರಾಂತಿಯಿರದಂತೆ ಅವನ ದೈನಂದಿನ ಜೀವನ ರೀತಿಯನ್ನು ಕಲ್ಪಿಸಿ, ಅವನನ್ನು ದುಷ್ಟ ಮಂತ್ರಿಗಳಿಂದ, ದುಷ್ಟ ರಾಣಿಯರಿಂದ, ದುಷ್ಟಸೇನಾಪತಿಗಳಿಂದ, ಪರರಾಷ್ಟ್ರದ ಗೂಢಚಾರರಿಂದ, ದುಷ್ಟ ಅಡಿಗೆಯವನಿಂದ, ದುಷ್ಟವೈದ್ಯನಿಂದ ರಕ್ಷಿಸುವ ಉಪಾಯಗಳನ್ನೂ, ಆ ದುಷ್ಟರನ್ನು ಪತ್ತೆ ಹಚ್ಚುವ ವಿಧಾನಗಳನ್ನೂ ಬರೆದಿಟ್ಟು, ಅದನ್ನು ಮಾಡಿ ತೋರಿಸಿ, ರಾಷ್ಟ್ರಭಕ್ತಿಯ, ರಾಷ್ಟ್ರ ರಕ್ಷಣೆಯ ಬಗೆಬಗೆಯ ವಿಧಾನಗಳನ್ನು ಸದಾ ಚಿಂತಿಸಿದ ಮಹಾ ಪುರುಷ ಇವನು.

ರಾಷ್ಟ್ರಕ್ಕೆ ಹಾನಿಕರವಾದ ವಿಲಾಯತಿಯ ಮದ್ಯ, ವಿಷ, ಮೊದಲಾದವನ್ನೂ, ಸ್ವದೇಶೀ ಪದಾರ್ಥಗಳಿಗಿಂತ ಉತ್ಕೃಷ್ಟವಲ್ಲದ, ಆದರೆ ಹೆಚ್ಚು ಬೆಲೆಯ ಪರದೇಶೀ ವಸ್ತುಗಳನ್ನೂ ಎಂದೆಂದೂ ಆಮದುಮಾಡಬಾರದೆಂಬ ಉಗ್ರ ಶಾಸನವೂ ಇವನದೇ. ಆಮದು ಏನಿದ್ದರೂ ತೀರ ಆವಶ್ಯ, ಉಪಕಾರಕವೆನಿಸಿದ ಬೀಜಧಾನ್ಯ, ಔಷಧಿ ಮುಂತಾದುವು ಎಂದು ನಿಂಗಡಿಸಿ, ಹೆಸರಿಸಿ, ಅವಕ್ಕೆ ತೆರಿಗೆ ವಿನಾಯಿತಿಗಳನ್ನೂ ಅವನು ನೀಡಿದ್ದ! (೩೯-೪೨) ವಿನಾ ಹೋಪಯುಕ್ತ ಸಾಮಗ್ರಿಗಳು, ಗಂಡನೊಡನೆ ಸಂಸಾರಕ್ಕೆ ಹೊರಟ ಹೆಣ್ಣಿನ ಆವಶ್ಯವಸ್ತುಗಳು, ಅನ್ನದಾನಗೃಹದ ವಸ್ತುಗಳು, ಬಾಣಂತಿಯರಿಗೆ ಉಪಯುಕ್ತವಾಗುವ ಬೆಣ್ಣೆತುಪ್ಪ ಮುಂತಾದ ಸಾಮಗ್ರಿಗಳಿಗೆ ಸಂಪೂರ್ಣ ವಿನಾಯಿತಿ ನೀಡಿ, ದಂಡ್ಯಾದಂಡ್ಯ (ಟ್ಯಾಕ್ಸ್‌ಬಲ್, ಅನ್‌ಟ್ಯಾಕ್ಸ್‌ಬಲ್) ವಸ್ತು ವಿವೇಕವಿಟ್ಟು ಬಡವರನ್ನು ತೆರಬಾರದ ಭಾರದಿಂದ ರಕ್ಷಿಸಿದ ಬಡವರ

ದೈವ ಇವನು. ಈ ಹೆಸರಲ್ಲಿ ನುಣುಚಿ ಸರ್ಕಾರವನ್ನು ವಂಚಿಸುವವರನ್ನು ಅವನ ಲಕ್ಷಾಂತರ ಗೂಢಚಾರರು ಪರಿಪರಿಯಿಂದ ಕಣ್ಣಿಟ್ಟು ಕಂಡು ವರದಿ ಮಾಡಿ ಅತಿಕ್ರಮಣಕ್ಕೆ ಅವಕಾಶವಿರದಂತೆ ಮಾಡಿದ್ದರು! ಗೂಢಚಾರರ ಮೇಲೂ ಗೂಢಚಾರರನ್ನಿಟ್ಟಿದ್ದ ಇವನು ಎಷ್ಟು ಚಾಣಾಕ್ಷ!! ಎತ್ತರದ ಪರೀಕ್ಷೆಗಳಲ್ಲಿ ಸಿಕ್ಕಿಬಿದ್ದವರಿಗೆ ಮರಣವೇ ಮೊದಲಾದ ಶಿಕ್ಷೆ, ಆಸ್ತಿಯ ಮುಟ್ಟುಗೋಲು ಕಾದಿದ್ದವು. ಅದು ಸರ್ವಾಧಿಕಾರವೆನಿಸಿದ್ದರೂ ಜನ ಹಿತವೇ ಅವನ ಆಡಳಿತದ ಉಸಿರಾಗಿತ್ತು.

ಅವನು ಹುಟ್ಟಿದ್ದು ಮಲಬಾರಿನ ಸಮೀಪದ ತಮಿಳು ನಾಡಿನ ಅಜ್ಞಾತ ಹಳ್ಳಿಯೊಂದರಲ್ಲಿ. ಬೆಳೆದದ್ದು ಎಲ್ಲೆಂದು ಗೊತ್ತಿಲ್ಲ. ನಾಲ್ಕು ವೇದಗಳೂ ಇವನಿಗೆ ಕಂಠಸ್ಥ. ಸಾಮವೇದಿಯಾಗಿಯೂ, ಅಥರ್ವವೇದ ವನ್ನು ವಿಶೇಷ ಅಭ್ಯಸಿಸಿದ್ದ ವ್ಯವಹಾರ ಚತುರನೀತ. ವೇದಕ್ಕೆ ಮೀರಿದ ಧರ್ಮವಿಲ್ಲವೆಂದೂ, ವೇದವನ್ನು ಮೀರಿದವರಲ್ಲಿ ಧರ್ಮವಿರಲಾರದೆಂದೂ (ನೀತಿಸೂತ್ರ, ೬–೪೫) ಬರೆದರೂ, ಪಾರಲೌಕಿಕ ಉಪಯುಕ್ತ ಧರ್ಮಕ್ಕಿಂತ ರಾಜಾಯತ್ತವಾದ ಲೋಕ ವ್ಯವಹಾರದ ಮರ್ಯಾದಾ ಪಾಲನೆಯೇ ಹೆಚ್ಚು ಮುಖ್ಯವೆಂದೂ (ಧರ್ಮಾದಪಿ ವ್ಯವಹಾರೋ ಗರೀಯಾನ್, ನೀತಿಸೂತ್ರ, ೮–೩೦) ಬರೆದಿಟ್ಟು, ಆಚರಿಸಿದ ಪ್ರಾಜ್ಞ, ಪ್ರಗತಿಶೀಲ ಆಡಳಿತಗಾರನೀತ. ಶಸ್ತ್ರವಿದ್ಯೆ, ಶಾಸ್ತ್ರಗಳೆಲ್ಲದರ ಪೂರ್ಣಜ್ಞಾನ, ಅನುಷ್ಠಾನ, ಲೋಹವಿಜ್ಞಾನ, ಮಣಿ, ಮಂತ್ರ ಔಷಧ ವಿದ್ಯೆಗಳ ಸಂಪೂರ್ಣ ಪರಿಣತಿ, ಅಭಿಚಾರವಿದ್ಯೆ, ವಿಷವಿದ್ಯೆ, ಇಂದಿನವರಿಗೆ ಗೊತ್ತಿರದ ಇನ್ನೆಷ್ಟೋ ವಿದ್ಯೆಗಳು, ಬೆರಗುಗೊಳಿಸುವಂಥವು – ಇವೆಲ್ಲದರ ವಶೀಕರಣ, ಶಿಲ್ಪ, ಆಯುರ್ವೇದ, ರಸವಿದ್ಯೆ, ದುರ್ಗರಚನೆ, ಸೇನಾನಿರ್ಮಾಣ, ರಾಜನೀತಿ, ಅರ್ಥಶಾಸ್ತ್ರ ಎಲ್ಲದರಲ್ಲೂ-ಪರಿಚಯವಲ್ಲ! ಸಿದ್ಧಹಸ್ತನಿವನು.

ಇಷ್ಟು ವ್ಯವಹಾರ ಕುಶಲನೂ, ರಾಷ್ಟ್ರ ನಿರ್ಮಾಪಕನೂ, ಶತ್ರು ಭಯಂಕರನೂ ಆಗಿಯೂ ಇವನ ವಿರಕ್ತಿ ವರ್ಣನಾತೀತ !

"ಇವನೆಂದೂ ದಾನ ಸ್ವೀಕಾರ ಮಾಡಿದವನಲ್ಲ" ಎಂದು ಇವನ ಸ್ವಂತ ಶಿಷ್ಯ, ಕಾಮಂದಕನು ಪ್ರಮಾಣಿಸಿದ್ದಾನೆ! ಚಕ್ರವರ್ತಿಯ ಪ್ರಧಾನಿಯಾಗಿ ಗುರುಭಾರವನ್ನು ಹೊತ್ತಾಗಲೂ ಅವನಿಂದಲೂ ಒಂದು ಕವಡೆಯಷ್ಟು ಸಂಬಳ ಪಡೆಯಲಿಲ್ಲ. ನಿತ್ಯ ಅಧ್ಯಯನ, ಅಧ್ಯಾಪನ, ಅಗ್ನಿಹೋತ್ರಗಳನ್ನು ಬಿಡದೆ, ಶಿಷ್ಯಾರ್ಜಿತಗಳಾದ ವಸ್ತುಗಳಿಂದ ಮಾತ್ರ ಜೀವನ ಸಾಗಿಸುತ್ತ, ಸರ್ಕಾರಿ ಅಧಿಕಾರಿಗಳು ಅನುಕರಿಸಲು ಅತಿ ಎತ್ತರದ ಧ್ಯೇಯಗಳನ್ನು ಸ್ವಯಂ ಆಚರಿಸಿ ತೋರಿ, ಇಂದಿನವರು ಎಂದೂ ಅವನೆತ್ತರಕ್ಕೇರದಷ್ಟು ಪ್ರಾಮಾಣಿಕತೆ, ರಾಷ್ಟ್ರನಿಷ್ಠೆ, ಸ್ವಚ್ಛತೆಗಳಿಗೆ ಆದರ್ಶನಾಗಿ ಬದುಕಿ, ಇಂದಿನ ಅಂಧಕಾರಕ್ಕೂ ದೀಪಪ್ರಾಯನಾದ ವಿಸ್ಮಯಕಾರಕ ವ್ಯಕ್ತಿತ್ವ ಇವನದು.

ಮೊನ್ನೆಮೊನ್ನೆಯ ದಿವಾನ್ ವಿಶ್ವೇಶ್ವರಯ್ಯನವರು, ಚಕ್ರವರ್ತಿರಾಜ ಗೋಪಾಲಾಚಾರ್ಯರು ಇವನ ಜ್ಯೋತಿರ್ಮಯ ವ್ಯಕ್ತಿತ್ವದ ಅಗ್ನಿಶಿಖೆಯ ಕಿಡಿಗಳೆಂಬಂತೆ, ತೋರುವಂತೆ, ಅವರನ್ನೂ ಪ್ರೇರಿಸಿ, ಚಿರಂತನ ಸ್ಫೂರ್ತಿಯಾಗಿದ್ದ ಪ್ರಾಚೀನ ಪುಣ್ಯ ಪುರುಷ.

ಇವನಾರೆಂಬ ಕುತೂಹಲ ನಿಮಗೆ ಇಲ್ಲವೆ ? ಕೇಳಿ : **ಅವನೇ ಆಚಾರ್ಯ ಚಾಣಕ್ಯ.** ಚಣಕನ ಮಗ ಎಂಬ ರೂಢಿಯ ಅರ್ಥದಲ್ಲಿ ಅವನು ಹಾಗೆ ಕರೆಯಲ್ಪಟ್ಟರೂ, ತಂದೆ ತಾಯಿ ಇಟ್ಟ ಹೆಸರು ವಿಷ್ಣುಗುಪ್ತ ಎಂದು. ಪರಂಪರೆಯಿಂದ ಶುದ್ಧಾಚಾರದ, ಅವ್ಯಭಿಚರಿತ ವಿಷ್ಣುಭಕ್ತಿ ಈ ಮನೆತನದಲ್ಲಿದ್ದದ್ದಕ್ಕೆ ಇದು ಸಾಕ್ಷಿ. "ವಿಷ್ಣುವಿನಿಂದ ರಕ್ಷಿಸಲ್ಪಟ್ಟವನು" ಎಂಬುದು ಈ ಹೆಸರಿನ ಅರ್ಥ. ಕುಟಿಲಗೋತ್ರದವನಾಗಿ ಕೌಟಿಲನೆಂಬುದೂ ಒಂದು ಅನ್ವರ್ಥನಾಮ ಇವನಿಗೆ. ಅದನ್ನು ಹೇಳಲು ಬಾರದವರೋ, ಅವನಿಗಾಗದವರೋ, ಅವನಿಂದ ದಂಡಿಸಲ್ಪಟ್ಟ ವಂಚಕರ ಜಾಲವೋ, ಅವನು ಎತ್ತಿ ಹಿಡಿದ ವೈದಿಕ ಧರ್ಮ, ಮೌಲ್ಯಗಳನ್ನು ದ್ವೇಷಿಸಿದವರೋ ಅವನನ್ನು "ಕೌಟಿಲ್ಯ" ಎಂದು ಜರೆದರು. ವ್ಯಾಕರಣ ಶುದ್ಧವಲ್ಲದ ಈ

ಈ ಹೆಸರೇ ಜನಸಾಮಾನ್ಯರ ಬಾಯಲ್ಲಿ ಉಳಿಯಿತೆಂದರೆ, ಶಿಸ್ತನ್ನು, ಕಟ್ಟು ನಿಟ್ಟನ್ನು, ಅಂದೂ ಎಷ್ಟು ಜನ ದ್ವೇಷಿಸಿದರು, ಊಹಿಸಿ. ಅವನುದಿಸಿದ ಕಾಲ ನಮ್ಮ ದೇಶಕ್ಕೆ, ಸಂಸ್ಕೃತಿಗೆ ಮಹಾಭಯಂಕರ ಕಾಲವಾಗಿತ್ತು. ಸನಾತನ ಧರ್ಮಕ್ಕೆ ಗ್ರಹಣ ಹಿಡಿದು ಅದರ ಮೌಲ್ಯಗಳು ಮುಸಕಾಗಿ ಅಪಹಾಸ್ಯಕ್ಕೀಡಾಗಿದ್ದವು. ವೇದವನ್ನೂ, ವೇದಾರ್ಥರಕ್ಷಕರನ್ನೂ, ತ್ಯಾಗ, ಶೀಲ, ಸಂಯಮ, ದೇವರು, ಪುಣ್ಯಪಾಪ ಪರಲೋಕಗಳನ್ನೂ ಹೀಗಳೆಯುವ ಧರ್ಮಗಳು ತಲೆಎತ್ತಿ ಜನರಿಗೆ ಬದುಕಲು ಗುರಿ ತಿಳಿಯದೆ ಗೊಂದಲ ವಾಗಿತ್ತು. ಬುದ್ಧ, ಮಹಾವೀರರು ಕ್ಷತ್ರಿಯರಾಗಿ, ಜನಿಸಿಯೂ ಕ್ಷತ್ರ ವರ್ಣವನ್ನು ತ್ಯಜಿಸಿ, ಸಂನ್ಯಾಸಧರ್ಮವೇ ಶ್ರೇಷ್ಠವೆಂದು ಬೋಧಿಸಿ ಇಡೀ ಮಗಧರಾಜ್ಯವೇ 'ವಿಹಾರ' (ಬಿಹಾರ)ವಾಗಿ ಭಿಕ್ಷುಗಳ ತಾಣವಾಗಿ, ಬೀದಿ ಗೊಂದು ಬಸದಿ, ಮಠ, ಊರಿಗೊಬ್ಬ ಜಗದ್ಗುರು, ಓಣಿಗೆ ನೂರು ಭಿಕ್ಷುಕರು ಆಗಿ ಬಿಟ್ಟರು! ಅವರು ಮಹಾಸಮಾಧಿ ಹೊಂದಿದ ಮುಂದಿನ ಶತಮಾನ ದಲ್ಲೀ ಆಚಾರ್ಯ ಚಾಣಕ್ಯನ ಅವತಾರವಾಗಿ, ಎಂಥ ರಾಷ್ಟ್ರೀಯ ಸಮಸ್ಯೆ ಗಳನ್ನು ಅವನೆದುರಿಸಬೇಕಾಯಿತೆಂದು ಊಹಿಸಿರಿ. ಸಂನ್ಯಾಸಿಗಳ ಬಗೆಗೆ ಆಚಾರ್ಯ ಚಾಣಕ್ಯನು ಬರೆದಿರುವ ಕಠಿಣ ವಾಕ್ಯಗಳಿಂದ ಆ ಗೊಂದಲವ ನ್ನರಿಯಬಹುದು,

"ಹೆಂಡತಿ ಮಕ್ಕಳಿಗೆ ಜೀವನಾಧಾರವನ್ನೇರ್ಪಡಿಸದೆ ಸಂನ್ಯಾಸ ತೆಗೆದುಕೊಳ್ಳುವವನಿಗೆ; ಮತ್ತು ಸ್ತ್ರೀಯರನ್ನೂ ಸಂನ್ಯಾಸಿಗಳನ್ನಾಗಿ ಮಾಡು ವವನಿಗೆ, ಹಾಗೆ ಪ್ರೇರಿಸುವವನಿಗೆ ಇನ್ನೂರೈವತ್ತು ಪಣ ದಂಡ ವಿಧಿಸ ಬೇಕು.'' (೧೯-೨೨).

"ಮೈಥುನಶಕ್ತಿ ಕಳೆದುಕೊಂಡ ಮೇಲೆ ಮಾತ್ರ ಗಂಡಸು ಧರ್ಮ ಶಾಸ್ತ್ರರೀತ್ಯಾ ಅದೂ ನ್ಯಾಯಾಧಿಪತಿಯ ಅಪ್ಪಣೆ ಪಡೆದ ಮೇಲೆಯೇ ಸಂನ್ಯಾಸವನ್ನು ಸ್ವೀಕರಿಸಬಹುದು ಹೀಗೆ ಅಪ್ಪಣೆ ಪಡೆಯದೆ ಸಂನ್ಯಾ ಸಿಯಾದವನನ್ನು ಸೆರೆಮನೆಯಲ್ಲಿ ಬಂಧಿಸಿಡಬೇಕು'' ಎಂಬ ಈ ವಿಧಿ

ಹುಟ್ಟಬೇಕಾದರೆ ಸಂನ್ಯಾಸಿಗಳ ಹಾವಳಿ ಬಹಳ ಆಗಿ, ದುಡಿಯದೇ ಉಣ್ಣುವವರ ಸಂಖ್ಯೆಯೂ, ಸಂನ್ಯಾಸಿ ವೇಷದ ವಾಮಾಚಾರಿಗಳ ಪಿಡುಗೂ, ಜನರಿಗೆ ಅವರಿಂದ ಮಾದಕ ವಸ್ತುಗಳ ಚಟ ವೃದ್ಧಿಯೂ, ನರಬಲಿಯ ಅತ್ಯಾಚಾರವೂ, ಸದ್ ಗೃಹಸ್ಥ ಪೀಡೆಯೂ, ಸುಲಭವಾಗಿ ಬದುಕಲು, ಜನರನ್ನು ನಂಬಿಸಿ ಸುಲಿಯಲು, ಸುಲಭ ಗೌರವ ಗಿಟ್ಟಿಸಲು ಕಾಷಾಯವೇ ಉಪಾಯವೆಂಬ ಕುಟಿಲಬುದ್ಧಿಯೂ ಬೆಳೆದು, ದುಡಿಮೆಯ ಗೌರವ, ದುಡಿಮೆಯಿಂದಲೇ ರಾಷ್ಟ್ರಬೆಳೆಯುವುದೆಂಬ ನೀತಿಯಲ್ಲಿ ಶ್ರದ್ಧೆಗಳು ಕಳೆದು, ಇಡೀ ರಾಷ್ಟ್ರವೇ ಸೋಮಾರಿತನದ ಕುಂಭೀಪಾಕಕ್ಕೆ ಇಳಿದಿತ್ತು. ದೇವ ಋಷಿ ಪಿತೃ ಋಣಗಳನ್ನು ತೀರಿಸದೆ ವಿವಾಹವೇ ಆಗದೆ, ಅಧ್ಯಾಯನ ಮಾಡದೆ, ವಯಸ್ಸಾಗದೇ, ಜೀವನವೇ ಏನೆಂದು ತಿಳಿಯದ ಬಾಲಸಂನ್ಯಾಸ ಪದ್ಧತಿಗೆ ಮನುವಿನಂತೆ ಚಾಣಕ್ಯನೂ ಪೂರ್ಣ ವಿರೋಧಿಯಾಗಿದ್ದುದು ಇಲ್ಲಿ ಸ್ಪಷ್ಟವಿದೆ. ಅದನ್ನು ಬಳಕೆಗೆ ಮೊದಲು ತಂದ ವೇದ ಬಾಹ್ಯರ ಬಗೆಗೆ ಚಾಣಕ್ಯ ನಿರ್ದಯನಾಗಿದ್ದ ! ಈ ಮತಗಳ ಪ್ರಚಾರಕರು ಅವಮಾಯಕರಾದ ಅರಮನೆಯ ರಾಣೀವರ್ಗದವರನ್ನು ವಶೀಕರಿಸಿಕೊಂಡು ಆ ಮೂಲಕ ದೊರೆಯ ತಲೆಯನ್ನು ಕೆಡಿಸುತ್ತಿದ್ದ ರೀತಿಯನ್ನು ಗಮನಿಸಿಯೇ ಚಾಣಕ್ಯನು :- ''ರಾಣೀವಾಸದವರಿಗೆ ಬೌದ್ಧ ಸಂನ್ಯಾಸಿಗಳೊಡನೆಯೂ, ಜೈನಮುನಿಗಳೊಡನೆಯೂ, ಶೈವ ಪಾಶುಪತ ಸಂನ್ಯಾಸಿಗಳೊಡನೆಯೂ, ಮಾಯಾವಾದಿಗಳೊಡನೆಯೂ, ಮಾಯ ಮಾಟ ಮಾಡುವ ವಾಮಾಚಾರಿಗಳೊಡನೆಯೂ, ಸಂಪರ್ಕವಿಲ್ಲದಂತೆ ರಾಜನು ಎಚ್ಚರವಹಿಸಬೇಕು'' (೧೭-೨೦) ಎಂದು ವಿಧಿಸುವುದರಲ್ಲಿ ಹೀಗೆ ಸಂನ್ಯಾಸೀ ಸಂತಾನವನ್ನು ಬೆಳೆಸುತ್ತಿದ್ದ ಮತಗಳಾವುವೆಂಬುದನ್ನು ನೇರವಾಗಿಯೇ ಹೆಸರಿಸಿದ್ದಾನೆ.

ಬಹು ಸಂಖ್ಯೆಯ ಜನರಿದ್ದ ಈ ಮತಗಳು ಸಾಮಾನ್ಯರನ್ನು ಬ್ರಾಹ್ಮಣರ ವಿರುದ್ಧ ಎತ್ತಿಕಟ್ಟಿ, ಸಂಸ್ಕೃತವನ್ನೂ, ಅದರಲ್ಲಿನ ಜ್ಞಾನವನ್ನೂ, ವೇದದ ಹೃದಯವಾದ ಮೌಲ್ಯಗಳನ್ನೂ ಅಪಹಾಸ್ಯ ಮಾಡುತ್ತಾ, ಭಾಷೆ, ಜಾತಿ, ಪದವಿ, ಜ್ಞಾನ, ಗೌರವಗಳಹೆಸರಿನಲ್ಲಿ, ಇಂದಿನಂತೆ

ಅಂದೂ, ದೊಡ್ಡ ಅಂತರ್ಯುದ್ಧವೇ ಏರ್ಪಟ್ಟು, ಭಾರತೀಯ ಸಮಾಜ ವನ್ನು ಒಳಗೊಳಗೇ ಸುಡುತ್ತಿತ್ತು. ಚಾಣಕ್ಯ ಬಹುಜನ ವಿರೋಧಿಯಾದ ಹೊರತು ದೇಶಕ್ಕೆ ಸುಸ್ಥಿತಿ ಬರುವಂತಿರಲಿಲ್ಲ. ವ್ಯವಸ್ಥಿತರುವ ಹೊಣೆ ಹೊತ್ತವನನ್ನು (ಅವನು ಚಾಣಕ್ಯನೇ ಆಗಿರಲೀ, ನೆನ್ನೆಯ ಕಾಶ್ಮೀರದ ಗೌರ್ನರ್ ಜಗಮೋಹನ್ ಆಗಿರಲಿ !) ಅವ್ಯವಸ್ಥಾಪ್ರಿಯರು ದ್ವೇಷಿಸದೇ ಏನು ಮಾಡಿಯಾರು? ಬೌದ್ಧರ 'ಆರ್ಯಮಂಜು ಶ್ರೀ ಮೂಲಕಲ್ಪ'ವೂ, ಜೈನರ 'ಪರಿಶಿಷ್ಟ ಪರ್ವ'ವೂ ಚಾಣಕ್ಯನನ್ನು ಪ್ರಕಟವಾಗಿಯೇ ನಿಂದಿಸಿರು ವುದು ಗಮನೀಯ.

ವ್ಯವಹಾರಕ್ಕೇ ಅಂಟಿಕೊಂಡ ವರ್ತಕ ಜನಾಂಗ, ತಮ್ಮ ಜೀವನೋ ಪಾಯವನ್ನೂ ತಮ್ಮನ್ನೂ ರಕ್ಷಿಸಿಕೊಳ್ಳಲು, ಆಗಾಗ ಯಾವುದು ಪ್ರಬಲ ಮತವೋ ಅದನ್ನೇ ಆಶ್ರಯಿಸುತ್ತಾ ಮತಾಂತರ ಹೊಂದುತ್ತಾ, ಆರ್ಯ ವೈಶ್ಯರ ದೊಡ್ಡ ಸಮೂಹವೇ ಈ ಕಾಲದಲ್ಲಿ ವ್ರತ ಬಿಟ್ಟ "ವೃಷಲ" ರೆನಿಸಿದ್ದರು; ಕ್ಷತ್ರಧರ್ಮಬಿಟ್ಟವರು "ವ್ರಾತ್ಯ"ರೆನಿಸಿದ್ದರು; ಕುಲಗೆಟ್ಟು ವೇದ ಬಾಹ್ಯರಾದ ಬ್ರಾಹ್ಮಣರ ಸಂಖ್ಯೆಯೂ ಬೆಳೆಯುತ್ತಿತ್ತು. ಸಮಾಜಾ ವಶ್ಯಕ ವೃತ್ತಿಗಳಿಗೆ ಆಘಾತದ ಪೆಟ್ಟುಬಿದ್ದು ಯಾವ ವೃತ್ತಿಗೂ ಯಾರೂ ದೃಢವಾಗಿ ಬಹುಕಾಲ ಅಂಟಿದೆ ಪಾರಂಪರಿಕ ವಿದ್ಯೆಗಳೂ, ಆ ವಿದ್ಯೆಗಳಿಂದ ಬರುವ ರಾಷ್ಟ್ರಸಂಪತ್ತೂ ಮಣ್ಣುಪಾಲಾಗಿದ್ದವು.

ಅಲೆಗ್ಸಾಂಡರನ ದಂಡಯಾತ್ರೆ ಬೇರೆ ಇದೇ ಕಾಲಕ್ಕೆ ಸಿಡಿಲಿನಂತೆ ಬಂದೆರಗಿತು ! (ಕ್ರಿ. ಪೂ. ३२६.) 'ಮಾಸಿಕಾ' ಎಂಬಲ್ಲಿ ಅವನು ಸಹಸ್ರಾರು ಜನರನ್ನೂ, ಮೂಲವ ಕೋಟೆಯಲ್ಲಿಯೂ ಬೇರೆಡೆಯಲ್ಲಿಯೂ ಲಕ್ಷಾಂತರ ಸ್ತ್ರೀ ಬಾಲವೃದ್ಧ ಪುರುಷರನ್ನೂ, ಕೊಲ್ಲಿಸಿ, ತನ್ನನ್ನೆ ದುರಿಸಿದ ಅಸಂಖ್ಯಾತ ಬ್ರಾಹ್ಮಣರನ್ನು ಗಿಡಮರಗಳಲ್ಲಿ ನೇಣುಹಾಕಿ ಕೊಂದುದನ್ನು ಇತಿಹಾಸ ತಿಳಿಸುತ್ತದೆ. ಪುರೂರವ (ಪೋರಸ್) ನನ್ನು ಸೋಲಿಸಿ, ಅವನಿಗೇ ಅವನ ರಾಜ್ಯ ಮತ್ತೆ ಕೊಟ್ಟು ರಾತ್ರೋರಾತ್ರಿ ತನ್ನ

ದೇಶಕ್ಕೆ ಓಡಿಹೋದ ಈ ಗ್ರೀಕ್ ವೀರನ '' ಔದಾರ್ಯ "ವನ್ನು ಕೊಂಡಾಡುವ ನಮ್ಮವರಿಗೆ ಆ ಅಲೆಗ್ಸಾಂಡರನು ನಂದರ ಸೇನಾ ಸಂಘಟನ ಶಕ್ತಿಗೂ, ಚಾಣಕ್ಯ–ಚಂದ್ರಗುಪ್ತರ ತಂತ್ರ, ಬಲ, ಬುದ್ಧಿಶಕ್ತಿಗೂ ಹೆದರಿ ಪಲಾಯನ ಮಾಡಿದ್ದು ತಿಳಿಯುವುದಿದೆ!

ಬುದ್ಧ ಮಹಾವೀರರ ಸಮಕಾಲೀನ ದೊರೆಗಳ, ಅವರ ಒಂದೆರಡು ಉತ್ತರಾಧಿಕಾರಿಗಳ ಕಾಲ ಮುಗಿದಾಗಿತ್ತು. ಬಿಂಬಸಾರ, ಅಜಾತಶತ್ರು ಗಳು ಕಾಶಿ, ಕೋಸಲ, ಮಗಧ, ಅವಂತಿ, ಚೇದೀ ರಾಜ್ಯಗಳೊಡನೆ ಉತ್ತರ ಭಾರತದ ಅನೇಕ ಪ್ರಾಂತಗಳನ್ನು ಒಗ್ಗೂಡಿಸಲು ಯತ್ನಿಸಿ ಬಲಿಷ್ಠರಾಗ ಹೊರಟಿದ್ದರು.

ನಂದರಷ್ಟು ಯಶಸ್ಸನ್ನು ಅವರಾರೂ ಪಡೆಯಲಿಲ್ಲ. ನಂದರು ಅಧಿ ಕಾರಕ್ಕೆ ಬರುವ ವೇಳೆಗೆ ದೇಶದಲ್ಲಿ ಧರ್ಮವಿಪ್ಲವವಾಗಿ ರಾಜಕೀಯಕ್ಕೆ ದಿಕ್ಕೇ ತಪ್ಪಿತ್ತು. ಯಾವ ಧರ್ಮವನ್ನೂ ನಂಬದೆ ಎಲ್ಲರನ್ನೂ ಪೀಡಿಸು ತ್ತಿದ್ದ ಅವರು ಅಧಿಕಾರ, ಹಣವನ್ನು ಮಾತ್ರ ಬಯಸಿ, ಇಂದಿನ ಆಳುಗ ರಂತೆ ''ಧರ್ಮಾತೀತ''ರಾಗಿ, ಕೊಬ್ಬಿ, ಬೀಗಿ ಮರೆಯುತ್ತಿದ್ದರು.

ರಾಜ ನೀತಿಗಾಗಲಿ, ಆಡಳಿತಕ್ಕಾಗಲಿ, ದಿನನಿತ್ಯದ ಮಾಂಟದ ನಿಯಮಗಳಿಗಾಗಲಿ ಅವರು ಗಮನ ಕೊಡದೆ ಜನರಿಗೆ ಕಳ್ಳಕಾಕರ ಕಾಟವೂ, ವ್ಯಾಪಾರಿಗಳಿಂದ ಮೋಸವೂ, ಸರ್ಕಾರದ ಅಧಿಕಾರಿಗಳಿಂದ ಲಂಚದ ಹೊರೆಯೂ, ನಾನಾ ಕಿರುಕುಳ ಕೀಟಲೆಗಳೂ, ವಿವಿಧ ವೇಷದ ಭಿಕ್ಷುಕರಿಂದ, ಪರದೇಶದ ಗೂಢಚಾರರಿಂದ ಹಿಂಸೆಯೂ ಆಗುತ್ತಿದ್ದು ರಾಷ್ಟ್ರಕ್ಕೆ ನಿರಾಶಾ ವಾದ, ಜುಗುಪ್ಸೆ ಅಂಟಿತ್ತು.

ದೇಶಭಕ್ತಿಯ ಕೊರತೆ, ಪ್ರಾಮಾಣಿಕತೆಯ ಅಭಾವ ಆಗಿ, ವ್ಯಕ್ತಿನಿಷ್ಠೆ, ಸ್ನೇಹ, ಜನ ಜನರಲ್ಲಿ ಸೌಹಾರ್ದ ಮೈತ್ರೀ ಭಾವಗಳೂ ಅಳಿಸಿ, ಸಂಶಯ, ದ್ವೇಷಗಳು ತಲೆಎತ್ತಿ, (ಇಂದಿನಂತೆ) ಯಾರೂ ಯಾರನ್ನೂ ನಂಬದ

ಗಾಢಾಂಧಕಾರದಲ್ಲಿ ಚಂದ್ರಗುಪ್ತನೆಂಬ ಸೂರ್ಯನ ಆಗಮನದ ಅರುಣೋದ ಯವಾಗಿ ವಿಷ್ಣುಗುಪ್ತನೆಂಬ ಚಾಣಕ್ಯನ ಅರುಣೋದಯ ಆದದ್ದು ರಾಷ್ಟ್ರದ ಪುಣ್ಯ.

ಭಗವಂತನ ಅಂಶಸಂಭೂತನಾಗಿ, ಅವತಾರ ಪುರುಷನಾಗಿ ಜನಿಸಿದ ಈ ಪುಣ್ಯಮೂರ್ತಿಯ, ಬೆರಗುಗೊಳಿಸುವ ಮೇಧಾವಿಲಾಸ, ದಕ್ಷತೆ, ತಂತ್ರ ಶಕ್ತಿ, ರಾಷ್ಟ್ರಪ್ರೇಮ, ಸ್ವಾರ್ಥತ್ಯಾಗ, ಸರಳತೆ, ವೈರಾಗ್ಯ, ನಾನಾ ಶಾಸ್ತ್ರ ಪರಿಶ್ರಮ, ಅವಿರತ ದುಡಿಮೆ, ಜವಾಬ್ದಾರೀ ವರ್ತನೆ, ಸಜ್ಜನ ಪ್ರೇಮ ಇತ್ಯಾದಿ ಗುಣಗಳಿಗೆ ಕನ್ನಡಿ ಹಿಡಿಯುವ ಅವನ ಅರ್ಥಶಾಸ್ತ್ರವನ್ನೂ, ಇತಿಹಾಸದಾಖಲೆಗಳನ್ನೂ, ಪ್ರಸಿದ್ಧ ರೋಚಕ ವೃತ್ತಾಂತಗಳನ್ನೂ ಆಧರಿಸಿ ಬರೆದ ಈ ಆಚಾರ್ಯಚಾಣಕ್ಯ ವ್ಯಕ್ತಿತ್ವವನ್ನು ಚಿತ್ರಿಸುವ ಲೇಖನ ಮಾಲೆಯು ಇಂದಿನ ನಮ್ಮ ಪರಿಸ್ಥಿತಿ ರಾಜಕೀಯ ಸಾಮಾಜಿಕ ಧಾರ್ಮಿಕ ಪರಿಸರಗಳಿಗೂ ಬೆಳಗಾಗಿ ಹೊಸ ಯುಗದ ಅವತಾರಕ್ಕೆ ಕಾರಣವಾದೀತೇ ?

ಔಸ

## ಎರಡನೆಯ ಅಧ್ಯಾಯ

# ಅನ್ನಸತ್ರದ ಬಾಗಿಲಲ್ಲಿ

ಸುಮಾರು ಕ್ರಿ. ಪೂ. ೩೨೬ ನೇ ವರ್ಷದ ಹೇಮಂತ ಋತುವಿನ ಲ್ಲೊಂದು ಶುಭ ಪ್ರಾತಃಕಾಲ. ಮಗಧರಾಜ್ಯದ ಕೇಂದ್ರವಾದ ಪಾಟಲೀ ಪುತ್ರದಲ್ಲಿ ಮಾತ್ರ ಅದು ವಿಧಿ ಬಲದಿಂದ ಅಶುಭವೆನಿಸಿತ್ತು. ನವನಂದರ ಸೊಕ್ಕಿನ ಆಡಳಿತದ ಕಾಲ ಅದು. ಅವರ ಪೂರ್ವಜರ ಕಾಲದಿಂದ ಊಂನ ರಾಜಾಶ್ರಯದ ಅನ್ನಶಾಲೆಯಲ್ಲಿ ದಿನಾ ಸಾವಿರಾರು ಬ್ರಾಹ್ಮಣರಿಗೆ ಮಧ್ಯಾಹ್ನಕ್ಕೆ ಅನ್ನಸಂತರ್ಪಣೆ ನಡೆಯುತ್ತಿತ್ತು. ಲೋಭಿಗಳಾದ ನಂದರು ಅದನ್ನಿನ್ನೂ ನಿಲ್ಲಿಸಲು 'ಅಪ್ಪಣೆ ಮಾಡಿರಲಿಲ್ಲ; ಕಾಲಕಾಯುತ್ತಿದ್ದರು. ಕಾಲ ಬೇರೆ ರೀತಿಯಲ್ಲಿ ಬಂದೊದಗಿತು. ಅರಮನೆಯಲ್ಲಿ ಬೌದ್ಧರ, ಜೈನರ ಪ್ರಭಾವ ಹೆಚ್ಚಿದ್ದು ''ಈ ಬ್ರಾಹ್ಮಣರಿಗೇನು ಕೊಂಬು ?'' ಎಂಬ ವಾದ ಹೆಚ್ಚಿ ಅನ್ನಶಾಲೆ ಇನ್ನೇನು ಮುಚ್ಚುವುದರಲ್ಲಿತ್ತು. ಬ್ರಾಹ್ಮಣರಿಗೆ ನಿತ್ಯಾವ ಮಾನ ನಡೆದಿತ್ತು. ಗತಿಗೆಟ್ಟ ಏದ್ಯಾರ್ಥಿ ಬ್ರಾಹ್ಮಣರು ಸಹಿಸಿ, ಎಂದಿನಂತೆ

ಉಣ್ಣುತ್ತಾ, ತಮ್ಮ ವಿದ್ಯಾರ್ಜನೆ, ವಿದ್ಯಾಪೋಷಣೆ, ಪಾಠ, ಪ್ರವಚನ ಗಳನ್ನು ನಡೆಸಿದ್ದರು

ಹಿರಿಯ ದೊರೆ ಮಹಾನಂದಿ "ಕೀರಿಕೊಂಡಿದ್ದ," ಎಂದೇ ಸಾಮಾನ್ಯರು ನಂಬಿದ್ದರು. ಅವನು ಕೊಲೆಯಾಗಿದ್ದನ್ನು ಬಹು ಜನ ಅರಿಯರು. ದೊರೆಗೆ ಸುನಂದಾದೇವಿಯೆಂಬ ಪಟ್ಟಮಹಿಷಿಯಲ್ಲಿ ಇಬ್ಬರು ಪುತ್ರರು ಜನಿಸಿದ್ದರು. ಇನ್ನೊಬ್ಬ ಹೆಂಡತಿ ಮುರಾದೇವಿ ಪಿಪ್ಪಲವನದ ಮೋರಿಯಾ ಕುಲದ (ಶೂದ್ರ) ಹೆಣ್ಣು. ಇವಳಲ್ಲಿ ದೊರೆಗೆ ಮೌರ್ಯನೆಂಬ ವಿನಯಾನ್ವಿತ, ಶೂರ, ವಿದ್ವಾಂಸ, ಪ್ರಜಾನುರಾಗಿ ಮಗ ಹುಟ್ಟಿದ್ದ. ಇವನು ಅಧಿಕಾರಕ್ಕೆ ಬರದಂತೆ ಅವನ ಜಾತಿ ಅಡ್ಡಮಾಡಿತು. ಈ ಮೋರಿಯರೂ ಒಂದು ಕಾಲದಲ್ಲಿ ಕ್ಷತ್ರಿಯರೇ ಆಗಿದ್ದು, ಯಾವಾಗಲೋ ಅವೈದಿಕ ಮತ ಪ್ರಭಾವದಿಂದ ವರ್ಣ ತ್ಯಜಿಸಿ ''ವ್ರಾತ್ಯ''ರೆನಿಸಿ, ಕ್ರಮೇಣ ಶೂದ್ರರೆನಿಸಿದ್ದರು.

ದೊರೆಗೆ ಒಬ್ಬ ಪ್ರೇಮಾಸ್ಪದ "ಸಾಕು" ಮಗನೂ ಇದ್ದ! (ಬಂಗಾರದವನು ಎಂದರೆ ಹಲವರಿಗೆ ತಿಳಿದೀತು!) ಯಾವಳೋ ಶೂದ್ರ ಸ್ತ್ರೀಯಲ್ಲಿ, 'ಯಾವನೋ' ಕ್ಷತ್ರಿಯನಿಗೆ ಹುಟ್ಟಿದ್ದ ಅವನನ್ನು ದೊರೆಯೇ ಮುದ್ದಿನಿಂದ ಬೆಳೆಸಿ, ಜನ ಆಡಿಕೊಳ್ಳಲಾರಂಭಿಸಿದ ಮೇಲೆ, ಅವನನ್ನು ಎಲ್ಲೋ ಹೊರಗೆ ಬಿಟ್ಟು ಬೆಳೆಸಿದ. ಈ ಸಾಕು ಮಗನೇ ಮಹಾಪದ್ಮನೆನಿಸಿದ.ದೊರೆಯ ಆಜ್ಞಾನುವರ್ತಿಗಳು ಇವನನ್ನು ಸರಿಯಾಗಿ ನೋಡಿಕೊಳ್ಳಲಿಲ್ಲ. ಅರಮನೆಯ ಹಣ ಇವನ ತನಕ ಬಾರದೆ, ಇವನು ಆ ಬೇರೆಲ್ಲೋ ಕ್ಷೌರವೃತ್ತಿಗೆ ಇಳಿದ. ತಾನಾರೆಂದು ತಿಳಿದಮೇಲೆ, ಸೇಡಿಗಾಗಿ ಹೂಡಿದ ಸಂಚಿನ ಮೊದಲ ಹೆಜ್ಜೆ ಈ ವೃತ್ತಿ. ಎರಡನೆಯದು ಪಾಟಲೀಪುರಕ್ಕೇ ಬಂದದ್ದು. ಊರ ಜನ ಅಷ್ಟರಲ್ಲಿ ಇವನನ್ನೂ, ಇವನ ಪೂರ್ವೋತ್ತರವನ್ನೂ ಮರೆತಿದ್ದರು. ಊರಿಗೆ ಬಂದರೂ ಸಾಮಾನ್ಯ ಹಜಾಮನೆನಿಸದೇ ಕೊಂಚ ಉತ್ತಮ ಜಾತಿಯವನೆಂದು ಪ್ರಸಿದ್ಧಿ ಇದ್ದು ಹಲವಾರು ಗಣ್ಯರು ಇವನಿಗೆ ಆಶ್ರಯ

ಕೊಟ್ಟರು. ಇವರ ಶಿಫಾರಸಿನಂತೆ ದೊರೆ ಮಹಾನಂದಿ ಇವನನ್ನು ತನ್ನ ಸ್ವಂತ ಕ್ಷೌರಿಕನನ್ನಾಗಿಸಿಕೊಂಡ; ತನ್ನ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ಅವನಿಗೆ ವೃತ್ತಿಗಧಿಕವಾದ ಹಣವನ್ನೂ ಭೋಗವನ್ನೂ ಕೊಡುತ್ತ ಬಂದ.

ಮಹಾಪದ್ಮ ಅರಮನೆಯನ್ನು ಮತ್ತೆ ಹೀಗೆ ಸೇರಿದ ಮೇಲೆ, ತಾನು ಆ ಮುಂಚೆ ಕಲಿತ ಯುದ್ಧವಿದ್ಯೆಯನ್ನು, ಅಜ್ಞಾತವಾಸಕಾಲದಲ್ಲಿ ಕಲಿತ ಕತ್ತಿವರಸೆ, ಮಲ್ಲಯುದ್ಧ, ನಾನಾ ಆಯುಧಗಳ ಪರಿಶ್ರಮ, ಸೇನಾ ಕೌಶಲ ಗಳನ್ನು ಒಮ್ಮೆ ದೊರೆಗೂ, ಅರಮನೆಯ ಸೇನಾವರ್ಗಕ್ಕೂ ತೋರಿಸಿದ. ದೊರೆಗೆ ಸಂತುಷ್ಟಿಯಾಗಿ ಸಣ್ಣ ತುಕಡಿಯೊಂದಕ್ಕೆ ಅವನನ್ನು ಅಧಿಕಾರಿ ಯಾಗಿಸಿದ. ದೊರೆಯ ವಿಶ್ವಾಸಾರ್ಹನಾದ ಇವನನ್ನು ಸೇನಾಪತಿಗಳು ಗೌರವದಿಂದಲೇ ನೋಡಬೇಕಾಯಿತು. ಆ ಮುಂಚಿನ ಅಜ್ಞಾತ ಕಾಲದಲ್ಲಿ ಇವನು ನಡೆಸಿದ ದರೋಡೆಗಳು, ಆ ಗುಂಪಿಗೆ ಇವನು ಮುಖಂಡನಾದದ್ದು, ಇವರಿಗೆ ತಿಳಿದಿದ್ದರೂ ದೊರೆಗೆ ತಿಳಿಸಲು ಅಂಜಿದರು. ''ಬಂಗಾರ''ದ ಮಗನಲ್ಲವೆ ?

ಕ್ರಮೇಣ ಮಹಾಪದ್ಮನೇ ಪ್ರಧಾನ ಸೇನಾಪತಿಯೂ ಆಗಿ ಹೋದ! ಇಂದು ಪುಂಡರೇ ಚುನಾವಣೆಗಳಲ್ಲಿ ಆರಿಸಿ ಬಂದು ಸಭ್ಯರಾಗುವಂತೆ ಅಂದೂ ಆಗಿ ಹೋಯಿತು ! ಜನಬಲ, ಸೇನಾನುರಾಗವಿದ್ದ ಇವನಿಗೆ ಪರಂಪರೆಯ ಅಧಿಕಾರಿಗಳು ಅಂಜುತ್ತಿದ್ದರು.

ಮಹಾಪದ್ಮನ ಸಂಚಿನ ಕೊನೆಯ ಹಂತಕ್ಕೆ ಕಾಲ ಬಂತು. ಸುಂದರ ಕಾಯನಾದ ಇವನ ರೂಪಕ್ಕೆ, ಬಲಕ್ಕೆ, ದೊರೆಯ ಪಟ್ಟದರಾಣಿ, ಚಿಕ್ಕ ವಯಸ್ಸಿನ ಸುನಂದಾದೇವಿ ಸೋತು, ಇಬ್ಬರ ಪ್ರಣಯಲೀಲೆಗಳೂ ಮುದುಕ ಮಹಾನಂದಿಯ ಗಮನಕ್ಕೆ ಬರಲೇ ಇಲ್ಲ. ಆ ರಾಣಿಯ ನೆರವಿ ನಿಂದಲೇ ಒಂದು ರಾತ್ರಿ ಮಹಾಪದ್ಮ , ನಿದ್ರೆಯಲ್ಲಿದ್ದ ಮಹಾನಂದಿಯನ್ನು ದೀರ್ಘನಿದ್ರೆಗಟ್ಟಿ, ದೊರೆಯು ಸ್ವಾಭಾವಿಕವಾಗಿ ಸತ್ತನೆಂದು ಸುದ್ದಿ ಹಬ್ಬಿಸಿ ಅವನ ಅಂತ್ಯಕ್ರಿಯೆಯನ್ನು ಮುಗಿಸಿದ. ಆಕಸ್ಮಿಕವೊಂದರಲ್ಲಿ ಸತ್ತರೆಂಬಂತೆ

ದೊರೆಯ ಸಿಂಹಾಸನಾರ್ಹ ಪುತ್ರರು, ಆದಿನಂದರೂ ಸತ್ತರು ! ಸುನಂದೆಗೆ ಇಷ್ಟವಿಲ್ಲದೆಯೇ ಇದು ನಡೆಯಿತೇ ಎಂಬುದಕ್ಕೆ ದೇವರೇ ಉತ್ತರಿಸಬೇಕು ! ವಿಧಿಯಿಲ್ಲವೆಂಬಂತೆ, ಮಹಾಪದ್ಮನೇ ಸಿಂಹಾಸನವನ್ನೇರಿದ !

ಬ್ರಾಹ್ಮಣ ಮುಖ್ಯರು ಅವನನ್ನಾಶೀರ್ವದಿಸಲಿಲ್ಲ ! "ಹಜಾಮನಿಗೆ ರಾಜ್ಯವೇ ?" ಎಂದುದ್ಗರಿಸಿ, ಅಣಕಿಸಿದರು. ಮಹಾಪದ್ಮನ ಬ್ರಾಹ್ಮಣ ದ್ವೇಷ ಅಂದಿನಿಂದ ಆರಂಭವಾಯಿತು. ಹೊಸದೊರೆಯ ಬಲಕ್ಕೆ ಅಂಜಿ ದುರ್ಬ್ರಾಹ್ಮಣರು, ಬಡತನದ ಬೇನೆಯಿಂದ ಆಸ್ಥಾನದಲ್ಲಿ ಉಳಿದವರೂ ಉಂಟು.

ಹಳೆಯ ದೊರೆಯ ಶ್ರಾದ್ಧಗಳೆಲ್ಲ, ಮುಗಿದು, ರಾಣಿಯ ದುಃಖದ ನಾಟಕ ತೀರಿದ ಮೇಲೆ ಬಹಿರಂಗವಾಗಿಯೇ ಒಂದು ದಿನ ಮಹಾಪದ್ಮ ಸುನಂದೆಯನ್ನು ತನ್ನ ಮಡದಿಯೆಂದೂ, ಪಟ್ಟದ ರಾಣಿಯಾಗಿ ಮುಂದು ವರೆಯುವಳೆಂದೂ ಘೋಷಿಸಿದ. ಅದೆಲ್ಲ ಅರಮನೆಗಳ ವಾಡಿಕೆಯೆಂದು ಗೊಣಗಿ ಆಮೇಲೆ ಜನ ಮರೆತರು.

ಸುನಂದೆಯಲ್ಲಿ ಹೊಸ ದೊರೆ ಮಹಾಪದ್ಮನಿಗೆ ಒಂಭತ್ತು ಗಂಡು ಮಕ್ಕಳು ಜನಿಸಿ, ಅವರಿಗೆ ಕ್ರಮವಾಗಿ ಉಗ್ರಸೇನ, ಪಾಂಡುಕ, ಪಾಂಡು ಗತಿ, ಭೂತಪಾಲ, ರಾಷ್ಟ್ರಪಾಲ, ಗೋವಿಷಾಣಕ, ದಶಸಿದ್ಧಕ, ಕೈವರ್ತ ಮತ್ತು ಧನ ಎಂಬ ಹೆಸರಾಗಿ, ಇವರೆಲ್ಲರೂ ತಮ್ಮ ಹೆಸರಿನ ಮುಂದೆ 'ನಂದ' ಶಬ್ದವನ್ನು ಸೇರಿಸಿಕೊಂಡು, ಇತ್ತ 'ನವ' ಎಂದರೆ 'ಒಂಭತ್ತು' ಎಂಬರ್ಥ ದಲ್ಲೂ, ಅತ್ತ ಹಳಬರು ಸತ್ತು 'ಹೊಸಬರು' ಎಂಬರ್ಥದಲ್ಲೂ ನವನಂದರಾಗಿ ಹೋದರು. ಮಹಾಪದ್ಮನೂ 'ನಂದ'ನೆಂದೇ ತನ್ನನ್ನು ವ್ಯವಹರಿಸಲೂ ಆರಂಭಿಸಿದ್ದ !

ಮಹಾಪದ್ಮ ಶೂರನಿದ್ದ. ಇವನನ್ನು "ಎರಡನೆಯ ಪರಶುರಾಮ" ನೆಂದು ಇತಿಹಾಸ ಹೊಗಳಿದೆ. ಕೆಲಕಾಲ ಕ್ಷೌರವೃತ್ತಿಗೆ ತನ್ನನ್ನಿಳಿಸಿದ

ಕ್ಷತ್ರಿಯ ಕುಲದ ಮೇಲೆ ಇವನಿಗೆ ರೋಷ ಉಂಟಾಗಿ, ಆ ವಂಶಕ್ಕೆ ಇವನು ಮೃತ್ಯುವಾದ ಸ್ಮರಣೆಗೆ ಇರಬೇಕು! ಕಾಶಿ, ಕೋಸಲ, ಕುರು, ಪಾಂಚಾಲ, ಮೈಥಿಲ, ಶೂರಸೇನ, ವೀತಿಹೋತ್ರ, ಹೈಹಯ, ಕಳಿಂಗ, ಅಶ್ಮಕ ಮೊದಲಾದ ದೇಶಗಳನ್ನೆಲ್ಲ ಗೆದ್ದು, ನಮಗೆ ತಿಳಿದ ಇತಿಹಾಸದಲ್ಲಿ ಇವನೇ ಮೊದಲ ಪ್ರಬಲ ಚಕ್ರವರ್ತಿ ಎನಿಸಿದ್ದಾನೆ.

ಪದ್ಮ ಎಂದರೆ "ಹತ್ತುಸಾವಿರ ಕೋಟಿ" ಎಂಬ ಅಂಕಿಗೆ ಸಮ. ಇಷ್ಟು ಸಾವಿರ ಸೈನ್ಯವುಳ್ಳವನೆಂದೂ, ಅಷ್ಟು ಹೊನ್ನಿನ ನಾಣ್ಯಗಳ ಬೊಕ್ಕಸವುಳ್ಳವನೆಂದೂ, "ಮಹಾಪದ್ಮ"ನನ್ನು ಆಸ್ಥಾನದ ಹೊಗಳು ಭಟ್ಟರು ಹೊಗಳಿದರು.

ಕ್ಷತ್ರಿಯದ್ವೇಷ, ಬ್ರಾಹ್ಮಣದ್ವೇಷ ತುಂಬಿದ್ದ ಇವನು ಪ್ರಕಟವಾಗಿಯೇ ವೈದಿಕಧರ್ಮ ವಿರೋಧಿಯಾಗಿ ವೇದವಿದರ ಸ್ಥಾನಮಾನಗಳನ್ನೆಲ್ಲ ಕ್ರಮವಾಗಿ ಜೈನಬೌದ್ಧರಿಗೇ ಕೊಟ್ಟು, ತಾನೂ ಇಳಿವಯಸ್ಸಿನಲ್ಲಿ ಹೆಸರನ್ನು ಬದಲಿಸಿಕೊಂಡು ಜೈನಮತಕ್ಕೆ ಪರಿವರ್ತಿತನಾಗಿ "ಸರ್ವಾರ್ಥಸಿದ್ಧಿ" ಆಗಿ ಹೋದ! ಅವನ ಸರ್ವಾರ್ಥಸಿದ್ಧಿ ಆ ವೇಳೆ ಆಗಿತ್ತಲ್ಲವೆ! ಅವನಿಗೆ ಪಾರ್ಶ್ವವಾಯುವೂ ಬಡಿದು, ಮಾತೂ ಆಡಲಾಗದೆ, ರಾಜಕಾರಣವನ್ನೆಲ್ಲ ಮಕ್ಕಳಿಗೇ ಬಿಡಬೇಕಾಯಿತು. ಸಮರ್ಥ ಬ್ರಾಹ್ಮಣಮಂತ್ರಿ ಅಮಾತ್ಯ ರಾಕ್ಷಸನೂ, ಇನ್ನುಳಿದ ಅಧಿಕಾರಿವರ್ಗದವರೂ ರಾಜ್ಯವನ್ನು ಚೆನ್ನಾಗಿಯೇ ನಡೆಸಿದರು. ಉಗ್ರಸೇನನಂದ ದೊರೆಯಾದ. ಸಮರ್ಥನಲ್ಲದ ಅವನಿಗೆ ತಮ್ಮಂದಿರು, ಮುಖ್ಯವಾಗಿ ಕೊನೆಯ ಧನನಂದ, ನೆರವಾದ. ಬ್ರಾಹ್ಮಣರನ್ನು ಪೂರ್ತಿಬಿಡಲೂ, ಆಗದೆ, ಅವರಿಗೆ ಪೂಜ್ಯತೆಯೂ ಇಲ್ಲದೆ, ಜೈನಬೌದ್ಧರಿಂದ ಕಿರುಕುಳ ಆರಂಭವಾದ ಆ ಕಾಲದಲ್ಲಿ ಆ ಕ್ರಿಸ್ತಪೂರ್ವ ೩೦೦ರ ಹೇಮಂತ ಪ್ರಾತಃಕಾಲ, ನಂದರಾಜ್ಯದ, ನಂದ ದೊರೆಗಳ, ಭಾರತ ದೇಶದ ಇತಿಹಾಸವನ್ನೇ ಬದಲಿ ಮಾಡ ಹೊರಟಿತ್ತು!

ಅನ್ನಸತ್ರದ ಬಾಗಿಲಲ್ಲಿ ಇಪ್ಪತ್ತರ ಪ್ರಾಯದ ಒಬ್ಬ ತೇಜಸ್ವೀ ಯುವಕ ನಿಂತು ಒಳ ಹೊರಗೆ ನಡೆಯುತ್ತಿದ್ದ ಕಾರ್ಯಗಳನ್ನು ಗಮನಿಸು

ತ್ತಿದ್ದಂತೆ ಕಂಡರೂ, ಅದು ಅವನ ರೂಢಿಯಾಗಿದ್ದು, ಅವನ ವಿಶೇಷ ಗಮನ ಅನ್ನಸತ್ರದ ಹೊರ ಪ್ರಾಕಾರದಲ್ಲಿ ಶಿಷ್ಯರೊಡನೆ ಆಗ ತಾನೇ ಮಹಾದ್ವಾರ ದತ್ತ ಪಾದಾರ್ಪಣೆ ಮಾಡಿದ್ದ ಮಧ್ಯವಯಸ್ಸಿನ ಒಬ್ಬ ತೇಜೋವಂತ ಬ್ರಾಹ್ಮಣನ ಕಡೆಗೆ ಇತ್ತು.

ಬ್ರಾಹ್ಮಣನ ಮೈ ಬಣ್ಣ ಕಪ್ಪುಮಿಶ್ರಿತ ಕೆಂಪಾಗಿದ್ದರೂ ಅವನ ಹಣೆಯಲ್ಲಿ ಸೂರ್ಯಪ್ರಕಾಶ, ಅಗ್ನಿಪ್ರಕಾಶ, ಮಿಂಚುತ್ತಿತ್ತು. ನಾಸ್ತಿ ಕರೂ ಅವನ ಪಾದಗಳಿಗೆ ನಮಸ್ಕರಿಸುವಂತೆ ಆ ತೇಜಸ್ಸು ಯಾರನ್ನೂ ಬಗ್ಗಿಸುತ್ತಿತ್ತು. ನೆತ್ತಿಯಲ್ಲಿ ಬಂಗಾರದ ಎರಡು ಗೆರೆಗಳಿಂದ, ಬರೆದಂತೆ, ಗಂಧದಿಂದಾದ ಊರ್ಧ್ವಪುಂಡ್ರ ಮಿಂಚುತ್ತಿತ್ತು. ಸ್ಫುರದ್ರೂಪಿ ಎನಿಸಿ ದರೂ ಸುಂದರ ಎನಿಸದ ಆ ಮುಖದಲ್ಲಿ ಮೇಲುನೋಟಕ್ಕೆ ಕ್ರೌರ್ಯ ಕಾಣು ತ್ತಿದ್ದರೂ ಅವನ ಹೃದಯ ಆಶ್ರಿತರ ಕಾರುಣ್ಯದಿಂದ ಪರಿಪ್ಲುತವಾದದ್ದು ಹತ್ತಿರದ ಶಿಷ್ಯರಿಗೆ ಮಾತ್ರ ಗೊತ್ತಿತ್ತು. ಹತ್ತು ಶಿಷ್ಯರು ಅವನೊಡನೆ ವೇದಘೋಷವನ್ನು ಮಾಡುತ್ತಾ, ಪರಶುರಾಮರ ಗೋಷ್ಠಿಯೊಂದು ತ್ರೇತಾ ಯುಗದಿಂದ ಧರೆಗಿಳಿದಂತೆ ಅನ್ನಸತ್ರದ ಹೆಬ್ಬಾಗಿಲಿಗೆ ಬಂದಿದ್ದರು. ಗಂಗೆ ಯಲ್ಲಿ ಪ್ರಾತಃಸ್ನಾನ ಆಹ್ನಿಕ ಮುಗಿಸಿದ್ದ ಅವರು ಅಂದಲ್ಲಿ ಅನ್ನಾರ್ಥಿಗಳಾಗಿ ಅವಕಾಶವುಂಟೇ ? ಎಂದು ವಿಚಾರಿಸಲು ಬಂದಿದ್ದರು.

ದೂರದಿಂದ ನೋಡಿದ ಅನ್ನಸತ್ರ ಪಾಲಕನಾದ ಯುವಕನಿಗೆ ಆ ಪೂಜ್ಯ ವ್ಯಕ್ತಿಯ ಗುರುತು ಮೊದಲು ತಿಳಿಯದೇ ಹೋದರೂ, ಆ ಮೇಲೆ ತಿಳಿಯಿತು. ತಾನಿದ್ದ ಶಾಲೆಯ ಬಾಗಿಲಿನಿಂದ ಅತ್ತ ಹೆಜ್ಜೆ ಇಟ್ಟ. ಅಷ್ಟ ರಲ್ಲಿ ವೇದಘೋಷವೇಕೋ ನಿಂತಿತ್ತು!

ಬ್ರಾಹ್ಮಣತಾಪಸ ಹೆಬ್ಬಾಗಿಲಿಂದ ಅನ್ನಶಾಲೆಗೆ ಬರುವ ಬಳಸಿನ ರಾಜ ಮಾರ್ಗವನ್ನು ಬಿಟ್ಟು, ಉದ್ಯಾನದ ಹುಲ್ಲುಗಾವಲಿನ ಮೇಲೆ ಅಡ್ಡ ದಾರಿಯಿಂದ ಬರುತ್ತಾ ಎಡವಿ ಬಿದ್ದ. ಶಿಷ್ಯರು "ಹಾ, ಹಾ'' ಕರಿಸಿ, ಅವನನ್ನೆತ್ತಿದ್ದರು; ಮಧ್ಯವಯಸ್ಸಾಗಿದ್ದು ಬ್ರಾಹ್ಮಣನಿಗೆ ಮುಗ್ಗರಿಸಿ ಬಿದ್ದ

ಭಾರದಲ್ಲಿ, ಮೊದಲೇ ದಾಗಿದ್ದ ಕಾಲುಗಳಿಗೆ ನೋವಾಗಿದ್ದುದು ಸಹಜ. ಪ್ರಾಯದಲ್ಲಿ ಅವನನ್ನು ಜನ "ಮಲ್ಲನಾಗ"ನೆಂದೂ ಕರೆಯುತ್ತಿದ್ದರು. ಗರಡೀ ಸಾಮು ಮಾಡಿ, ಕುಸ್ತಿಮಾಡಿ, ಅನೇಗಳನ್ನೂ ಪಳಗಿಸಿದ್ದ ದೇಹ ಅದಾದರೂ ಈಗ ಅವನು ಶಾಸ್ತ್ರಾಧ್ಯಯನ; ಬೋಧನಗಳಲ್ಲಿ ತೊಡಗಿ ಶರೀರ ಹಳೆಯ ಸ್ಥಿತಿಯಲ್ಲಿರಲಿಲ್ಲ. ತೀರ ಕುಳ್ಳಾಗಿದ್ದ ಅವನನ್ನು "ಅಂಗುಲ" ನೆಂದೂ ಜನ ವ್ಯಂಗ್ಯ ಮಾಡುತ್ತಿದ್ದರು. ಸದ್ಯ ನಗುವುದಕ್ಕೆ ಅಲ್ಲಾರೂ ಇರಲಿಲ್ಲ: ಪ್ರಾತಃಕಾಲವಾಗಿದ್ದು ಅನ್ನಶಾಲೆಗೆ ಇನ್ನೂ ಅಭ್ಯರ್ಥಿಗಳು ಬರುವುದಕ್ಕೆ ತಡವಾಗಿತ್ತು.

ಬ್ರಾಹ್ಮಣನ ಹುಬ್ಬುಗಳು ಗಂಟಿಕ್ಕಿದುವು; "ಇಷ್ಟು ಸುಂದರ ತೋಟ ದಲ್ಲಿ ಸರಿಯಾಗಿ ಹುಲ್ಲು ಕತ್ತರಿಸುವವರಿಗೆ ರಾಜನಿಗೆ ಕೊರತೆಯೇ! ಈ ಸಣ್ಣ ಕೆಲಸದಲ್ಲೂ ಇಷ್ಟು ಅಶಿಸ್ತಾಗಿ ನಂದರಾಜ್ಯ ಇಷ್ಟು ಹದಗೆಟ್ಟಿದೆಯೇ! ಇಲ್ಲಿ ಬರುವವರು ಬ್ರಾಹ್ಮಣರು ತಾನೆ! ಬ್ರಾಹ್ಮಣರು ಸತ್ತರೆ ಬೌದ್ಧನಿ ಗೇನು ನಷ್ಟ! ಎಲೋ ಸಿದ್ಧಾರ್ಥಕ! ನನ್ನ ಜೋಳಿಗೆಯಲ್ಲಿ ಕಂದಮೂಲ ಗಳನ್ನಗೆಯುವ ಸಣ್ಣಗುದ್ದಲಿ ಇದೆ; ಇತ್ತ ಕೊಡು" ಎಂದು ಗರ್ಜಿಸಿದ.

ಗುರುವಿನ ಸ್ವಭಾವ ತಿಳಿದಿದ್ದ ಶಿಷ್ಯ ಆ ಕುದ್ದಾಲಲಾಂಗಲಿಯನ್ನು ಕೊಟ್ಟೊಡನೆ, ಬ್ರಾಹ್ಮಣ ತನ್ನನ್ನು ಕೆಳಗೆ ಬೀಳಿಸಿದ್ದ ಅಲ್ಲಿನ ಸಣ್ಣ ಬಲಿಷ್ಠ ಬಳ್ಳಿಯೊಂದನ್ನು ಹಿಡಿದೆಳೆದು ನೋಡಿದ! ನೆಲಕ್ಕೆ ಹುಲ್ಲಿನಲ್ಲಿ ಬಲವಾಗಿ ಕಚ್ಚಿತ್ತು! ಎಳೆಯುತ್ತ ಅದರ ಮೂಲಬೇರು ಬೇರತ್ತ ಇರುವುದು ತಾಪಸನ ಕಣ್ಣಿಗೆ ಬಿತ್ತು. ಸಮೂಲವಾಗಿ ಆ ಬಳ್ಳಿಯನ್ನು ಕಿತ್ತು ಹಾಕಲು ಯತ್ನಿಸಿದ; ಒಂದಷ್ಟು ಬೇರು ನೆಲದಲ್ಲೇ ಇದ್ದುದನ್ನು ನೋಡಿ, ಗುದ್ದಲಿಯಿಂದ ಅಗೆದು ತೆಗೆದು, ಆ ಬಳ್ಳಿ, ಬೇರು ಎಲ್ಲವನ್ನು ರಾಶಿ ಹಾಕಿದ. "ಛೇ! ಇಲ್ಲಿ ಹುಲ್ಲಿನ ಮೇಲೆ ಸುಟ್ಟರೆ, ಸಿರಪರಾಧೀ ಗರಿಕೆಗೆ ಬಿಸಿತಾಗಿ, ಹುಲ್ಲು ಗಾವಲು ಅಂದಗೆಡುತ್ತದೆ" ಎಂದು ಗೊಣಗಿದವನೇ, ಒಂದು ಮೂಲೆಗೆ ಹೋಗಿ, ಜೋಳಿಗೆಯ ಬೆಂಡು ಬೆಣಚುಕಲ್ಲುಗಳನ್ನು ತರಿಸಿ, ಅಗ್ನಿ ಉಂಟು

ಮಾಡಿ, ಅದರಿಂದ ಆ ಬಳ್ಳಿಯನ್ನು ಸುಟ್ಟು ಬೂದಿ ಮಾಡಿ, "ಸಮಿದ್ಧಾರ್ಥಕ! ನನ್ನ ಕಮಂಡಲುವನ್ನು ಇತ್ತ ಕೊಡು'' ಎಂದವನೇ, ಆ ನೀರಿನಿಂದ ಅದನ್ನು ತನ್ನ ತೀರ್ಥಪಾತ್ರೆಯಲ್ಲಿ ಕಲೆಸಿ, ಅದನ್ನು ಕುಡಿದು ತೇಗಿದ. ಮುಖದಲ್ಲಿ ಮಂದಹಾಸ ಕೊಂಡ ಮಿಂಚಿತು ! ಕೋಪ ಇನ್ನೂ ಪೂರ್ತಿ ಆರಲಿಲ್ಲ. "ಎಲೋ! ಪಶುಲೋಮ! ಅನ್ನಶಾಲೆಯಲ್ಲಿ ಹೋಗಿ ಪಾಲಕನಿಗೆ ಹೇಳಿ ಆರ್ಯಚಾಣಕ್ಯನಿಗೆಂದು ಹೇಳಿ, ಅತಿಥಿಗಳಿಗೆ ಉಪಯೋಗಕ್ಕೆ ಬಾರದ ಹುಳಿ ಮಜ್ಜಿಗೆ ಇದ್ದರೆ ಶೀಘ್ರವಾಗಿ ಕೊಂಚ ತಾ" ಎನ್ನುತ್ತಾ, ತಾನು ಬೂದಿಕಷಾಯ ಕುಡಿದಿದ್ದ ಬಟ್ಟಲನ್ನು ಕೊಟ್ಟ. ಪಶುಲೋಮ ಅತ್ತ ಹೊರಳಿ ಪಾದ ಇಡುವಷ್ಟರಲ್ಲಿ ಅನ್ನಸತ್ರದ ಅಧಿಕಾರಿಯಾದ ಯುವಕ ತಾನೇ ಅಲ್ಲಿ ಬಂದಿದ್ದು "ಗುರುವರ್ಯ! ಏನಿದು? ಇತ್ತ ದಯ ಮಾಡಿಸುವ ಮುಂಚೆ, ನನಗಷ್ಟು ಸಮಾಚಾರವೂ ತಿಳಿಸಬಾರದೆ!" ಎನ್ನುತ್ತ ಗುರುವಿನ ಪಾದಗಳನ್ನು ಶಿರಸ್ಸಿಗೊತ್ತಿ ಆನಂದಬಾಷ್ಪ ಹಾಕಿ ತೊಳೆದ! ಪಶುಲೋಮ ಅನ್ನಸತ್ರದೊಳಕ್ಕೆ ಓಡಿದ.

ನಮಸ್ಕರಿಸಿ ತಲೆ ಎತ್ತಿದ ಯುವಕನನ್ನು ತಾಪಸಬ್ರಾಹ್ಮಣ ದಿಟ್ಟಿಸಿ ನೋಡಿದ. ಹಣೆಯಲ್ಲಿನ ಹುಬ್ಬು ಗಂಟು ಸಡಲಿತು. ಕಂಗಳಲ್ಲಿ ಕಾರುಣ್ಯ ಭಾವ ಮಿಂಚಿ ಅಮೃತ ವರ್ಷ ಸುರಿಸಿತು: "ಚಂದ್ರಗುಪ್ತ! ನೀನೇ!! ಇಲ್ಲೇಕೆ ಬಂದೆಯಪ್ಪ ! ಹತ್ತು ವರ್ಷಗಳ ಹಿಂದೆ ನೀನು ನಮ್ಮಲ್ಲಿ ತಕ್ಷಶಿಲೆಯಲ್ಲಿ ಅಭ್ಯಸಿಸಿದ ದಂಡನೀತಿ, ರಾಜನೀತಿ, ಅರ್ಥಶಾಸ್ತ್ರಗಳಿಗೂ ಇಂದಿನ ನಿನ್ನ ವೃತ್ತಿಗೂ ಸಂಬಂಧವಿಲ್ಲವಷ್ಟೆ? ಯೋಗ್ಯರನ್ನು ಯೋಗ್ಯವೃತ್ತಿಗೆ ಆರಿಸಿಕೊಳ್ಳದ ಈ ಅರಸ ಬಲು ಮೂರ್ಖ ! ಎಲ್ಲವೂ ಇಲ್ಲಿ ಹೀಗೆಯೇ ನಡೆದಿದೆಯೋ ಹೇಗೆ?" ಎನ್ನುತ್ತಾ ಯುವಕನ ನೆತ್ತಿಯನ್ನು ಸವರಿ ಆಶೀರ್ವದಿಸಿದ. ಬ್ರಾಹ್ಮಣನ ಮುಖದಲ್ಲಿ ಮತ್ತೆ ಹುಬ್ಬು ಗಂಟಿಕ್ಕಿತು. ಅವ್ಯವಸ್ಥೆಯ ಲವಲೇಶ ಕಂಡರೂ ಆ ಹುಟ್ಟಿನ ಒಳತುದಿಗಳು ಒಂದು ಗೂಡಿ, ಕಾಳಮೇಘಾದ್ಯಗಳೇ ಸಂಘರ್ಷಕ್ಕಿಳಿದು ಸಿಡಿಲು ಮಿಂಚುಗಳನ್ನು ಪೋಣಿಸುವಂತೆ, ಅವನ ನೆತ್ತಿಯಲ್ಲಿ ಕ್ರೌರ್ಯಮುದ್ರೆಯನ್ನು ಒತ್ತಿ ಬಿಡುತ್ತಿದ್ದುವು.

ಪಸುಲೋವು ಅಷ್ಟರಲ್ಲಿ ತಂದ ಹುಳಿಮಜ್ಜಿಗೆಯನ್ನು ಬಳ್ಳಿಯ ಬೇರಿದ್ದ ಗುಳಿಯಲ್ಲಿ ಹುಯ್ದು ಬ್ರಾಹ್ಮಣ "ಇನ್ನು ಈ ಕೆಟ್ಟ ಬಳ್ಳಿಯ ಬೇರು ಬೆಳೆಯಲಾರದು !" ಎನ್ನುತ್ತಾ ಸಂತಸಬಟ್ಟವನಂತೆ ಕಂಡ.

''ಗುರುವೆ ! ಇಂದಿಲ್ಲಿ ತಾವು ಭೋಜನ ಮಾಡಬಹುದು ಆದರೆ ಆ ವೇಳೆಗೆ ನಾನಿಲ್ಲಿರುವುದಿಲ್ಲ. ಇಂದು ನನ್ನ ತಂದೆಯ ಶ್ರಾದ್ಧ!!'' ಎನ್ನುತ್ತಾ ಭಾವಪರವಶನಾದ! ಉಕ್ಕಿಬರುತ್ತಿದ್ದ ಆವನ ಕಂಬನಿಗಳನ್ನು ಕಂಡು ಚಾಣಕ್ಯನಿಗೂ ಹೃದಯ ಕರಗಿತು. ಹಳೆಯ ಕಥೆಯೆಲ್ಲ ನೆನಪಾಯಿತು.

''ಆಚಾರ್ಯ, ನನಗೆ ವೇದಾಂತವನ್ನುಪದೇಶಿಸಿ, ಮೋಕ್ಷೋಪಾಯವನ್ನು ಬೋಧಿಸಿ ಕೃತಾರ್ಥನನ್ನಾಗಿಸಬೇಕು, ನಾನಿನ್ನು ಈ ಅನ್ನಸತ್ರದ ಮೇಲ್ವಿಚಾರಕನಾಗಿ ಜೀವ ಸವೆಸಲಾರೆ'' ಎನ್ನುತ್ತಾ ಗದ್ಗದಿತನಾಗಿ ಮತ್ತೆ ಗುರುಪಾದಕ್ಕೆರಗಿದ ಶಿಷ್ಯನಿಗೆ ಗುರು ಹೇಳಿದ: ''ನಿನಗೀಗ ಮೋಕ್ಷದ ಕಾಲವಲ್ಲ; ಗೃಹಸ್ಥನಾಗದೆ ಮೋಕ್ಷಕ್ಕೆ ಯತ್ನಿಸಬಾರದೆಂದು ನಾನು ಹೇಳುತ್ತಿದ್ದುದನ್ನು ಮರೆತೆಯ ? ಊಂ... ಈ ರಾಜ್ಯದಲ್ಲಿ ಎಲ್ಲೂ ಬೌದ್ಧ ಪ್ರಭಾವ ಎಂತ ಕಾಣುತ್ತದೆ! ನಿನ್ನ ಶಾಸ್ತ್ರಾಭ್ಯಾಸ, ಶಸ್ತ್ರಾಭ್ಯಾಸಗಳು ಸಫಲವಾಗಬೇಡವೆ ? ರಾಷ್ಟ್ರಕ್ಕೆ ನಿನ್ನ ಸೇವೆ ಬಹಳ ಆಗುವುದಿದೆ. ಸಕಾಲದಲ್ಲಿ ಅದನ್ನು ಸಲ್ಲಿಸಲು ಹಿಂಜರಿಯಬೇಡ. ಆ ಹಾಳು ಯವನ ವೀರ ಜೀರೆ ಪಶ್ಚಿಮದತ್ತ ಹಾವಳಿ ನಡೆಸುತ್ತಿದ್ದಾನೆ. ಈ ದೊರೆಗೆ ಯಾವುದೂ ಬೇಡವೊ, ಏನೋ !'' ಎನ್ನುತ್ತಾ ಕೋಪವನ್ನು ತಡೆಯಲಾರದೆ ಹಲ್ಲುಗಳನ್ನು ಕಟಕಟಿಸಿದ. ಆಕಾಶದಲ್ಲಿ ಏನನ್ನೋ ನೋಡುತ್ತ ಮುಖ ಕೊಂಚ ಪ್ರಸನ್ನವಾಯಿತು. ಕೈಬೆರಳೆಣಿಸುತ್ತಾ "ಇಂದು ದರ್ಶವೊ! ನಿನ್ನನ್ನು ಈಗ ಕಂಡ ಮುಹೂರ್ತ ಬಹು ಪ್ರಶಸ್ತವಾಗಿದೆ. ನಿನ್ನ ದುರ್ಗತಿ ಬೇಗ ತೀರುವುದು!" ಎನ್ನುತ್ತ ಚಂದ್ರಗುಪ್ತನಿಗೆ ಅಭಯ ಪ್ರದಾನ ಮಾಡಿದ

"ಗುರುದೇವ, ಈ ಅನ್ನಶಾಲೆಯಲ್ಲೂ ಏನಾದರೂ ಅಪಚಾರ ನಡೆದೀತು. ದೊರೆಗಳಿಗೆ ಬ್ರಾಹ್ಮಣರಲ್ಲಿ ಕೊಂಚವೂ ಗೌರವವಿಲ್ಲ. ದಿನಾ

ಏನಾದರೂ ನೆಪದಿಂದ ಅರಮನೆಯವರು ಅವರನ್ನು ಅಪಮಾನಿಸಿ, ಈ ಅನ್ನಸತ್ರ ತಾನೇ ನಿಲ್ಲುವಂತೆ ಯತ್ನಿಸುತ್ತಿದ್ದಾರೆ. ತಾವು ನನ್ನ ಮೇಲೆ ಕೋಪಿಸ ಬಾರದು. ಅಗೋ, ಆ ಅನ್ನ ಶಾಲೆಯ ಎದುರಿನ ಮನೆಯೇ ನನ್ನ ನಿವಾಸ. ತಾವು ಭೋಜನ ಮುಗಿಸಿ, ತೋಟದಲ್ಲಿ ವಿಶ್ರಾಂತರಾಗಿ, ಸಂಜೆ ನನ್ನಲ್ಲಿಗೆ ದಯ ಮಾಡಿಸಬೇಕು. ನನಗೆ ಈ ದುರ್ಗತಿಮೋಕ್ಷಕ್ಕೆ ಉಪಾಯ ತೋರಿಸಬೇಕು. ನಾನೂ ಶ್ರಾದ್ಧ ಮುಗಿಸಿ ತಮ್ಮನ್ನು ನಿರೀಕ್ಷಿಸು ತ್ತಿರುತ್ತೇನೆ'' ಎನ್ನುತ್ತಾ ಅನ್ನಶಾಲೆಯ ಕಡೆ ಹೊರಟ.

ಚಾಣಕ್ಯನಿಗೆ ಮನ ಕರಗಿತು. ಶಿಷ್ಯರಿಗೆ ಏನೂ ತಿಳಿಯಲಿಲ್ಲ! ಚಿಕ್ಕವನಾದ ಸಿದ್ಧಾರ್ಥಕ ''ಆಚಾರ್ಯ, ಇವನಾರು? ಇವನು ತಮ್ಮಲ್ಲಿ ಅಭ್ಯಾಸ ಮಾಡಿದ್ದು ಯಾವಾಗ? ಪೂಜ್ಯರಿಗೆ ಎಲ್ಲೆಲ್ಲೂ ಶಿಷ್ಯರೇ! ಆದರೂ ಈತ ಬಹು ವಿಲಕ್ಷಣ. ನಮಗೆ ಹೇಳಬಹುದಾದ ಕಥೆಯಾದರೆ, ನಮಗೂ ಇದರಲ್ಲಿ ಬೋಧೆ ಇರುವುದಾದರೆ ಅನುಗ್ರಹಿಸಬೇಕು" ಎಂದು ಯಾಚಿಸಿದ. ಉಳಿದ ಶಿಷ್ಯರೂ ಮುಖದಲ್ಲಿ ಕುತೂಹಲ ತೋರಿಸಿದರು.

ಮೇಲೆದ್ದ ಚಾಣಕ್ಯ: ''ಅಗೋ ಆ ದೊಡ್ಡ ವೃಕ್ಷದಡಿಯಲ್ಲಿ ವಿಶ್ರಾಮ ವೇದಿಕೆ ಇದೆ. ನಮ್ಮ ಪಾಠಕ್ಕೂ ಸರಿಯಾದ ಜಾಗ ಅದು. ಅಲ್ಲಿಗೆ ನಡೆಯಿರಿ. ಹೇಳುತ್ತೇನೆ. ಈ ದಾರಿಯಲ್ಲಿ ಬೇಡ. ರಾಜ ವೃತ್ತಾಂತವನ್ನು ಹೇಳುವುದಕ್ಕೂ ಕೇಳುವುದಕ್ಕೂ ಸರಿಯಾದ ಜಾಗಬೇಕು. ನೀವು ಅವಶ್ಯ ತಿಳಿಯಬೇಕಾದ ವೃತ್ತಾಂತ ಇದು. ನಿಮ್ಮ ಸಹಕಾರವೂ ಬೇಕಾದೀತು, ಮುಂದಿನ ವಿಷಯಗಳಲ್ಲಿ. ಎಲ್ಲ ದೈವ ಚಿತ್ತ." ಎನ್ನುತ್ತಾ ಗುರುಶಿಷ್ಯರು ಆ ವೃಕ್ಷಮೂಲವನ್ನು ಸೇರಿದರು. ಚಾಣಕ್ಯ ಕಥೆ ಹೇಳಿದ.

ಜ಼ಽ

## ಮೂರನೆಯ ಅಧ್ಯಾಯ

# ಅಪಮಾನ !

ಚಾಣಕ್ಯ ಶಿಷ್ಯರಿಗೆ ಹೇಳಿದ ಕಥೆಯ ಸಾರ ಇಷ್ಟು: ಈಗಿನ ಅನ್ನ ಶಾಲೆಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿರುವ ಆ ಯುವಕ, ಚಂದ್ರ ಗುಪ್ತ, ಹಿಂದಿನ ದೊರೆ ಮಹಾನಂದಿಯ ಮಗನಾದ ಮೌರ್ಯನ ಮೊಮ್ಮಗ. ಇಷ್ಟು ನಿಕಟಸಂಬಂಧವಿದ್ದೂ, ಅರಸು ಪೀಠಕ್ಕೆ ಅರ್ಹನಿದ್ದೂ ಅವನ ದುರ್ವಿಧಿ, ನಂದರ ದುರ್ನಯ ಅವನನ್ನು ಈ ದುಃಸ್ಥಿತಿಗೆ ನೂಕಿತು.

ಹತ್ತು ವರ್ಷಕ್ಕೆ ಹಿಂದಿನ ಮಾತು. ಚಾಣಕ್ಯ ತಕ್ಷಶಿಲೆಯಲ್ಲಿ ಅರ್ಥ ಶಾಸ್ತ್ರ ಪ್ರಾಧ್ಯಾಪಕನಾಗಿದ್ದು ವ್ಯವಹಾರ ಶಿಕ್ಷಣೆಗೆ ಶಿಷ್ಯರೊಡನೆ ಸಮಗ್ರ ದೇಶಾಟನದಲ್ಲಿದ್ದ ಕಾಲ. ನೇಪಾಳದ ಅಡವಿಗಳಲ್ಲಿ ಸಂಚರಿಸುತ್ತಾ ಕಿರಾತರ ರೀತಿ, ನೀತಿ, ಸೈನ್ಯ, ಬಲಗಳನ್ನು ಪರಿಚಯಿಸುತ್ತಿದ್ದಾಗ ಅವನ ದೃಷ್ಟಿಗೆ ಒಬ್ಬ ಆಶ್ಚರ್ಯದ ಬಾಲಕ ಬಿದ್ದ. ಅವನಿಗಾಗ ಎಂಟೋ ಒಂಭತ್ತೋ ವಯಸ್ಸಿರಬೇಕು. ಜೊತೆಯ ಕಿರಾತ ಬಾಲಕರೊಡನೆ ''ರಾಜ

ಮಂತ್ರಿ–ಸೈನ್ಯ''ದ 'ರಾಜಕೀಲ'ವೆಂಬ ಆಟವನ್ನು ಆಡುತ್ತಿದ್ದ. ಚಾಣಕ್ಯ ಆಟವನ್ನು ಕುತೂಹಲದಿಂದ ವೀಕ್ಷಿಸತೊಡಗಿದ. ಬಾಲಕರು ಆಟದಲ್ಲಿ ಮುಳುಗಿದ್ದರು ಒಬ್ಬನನ್ನು ಸೆರೆಹಿಡಿದಂತೆ ನಾಲ್ವರು ಎಳೆತಂದರು. ರಾಜನ ಪಾತ್ರ ವಹಿಸಿದ್ದ ಎಳೆಯ ಚಂದ್ರಗುಪ್ತ, ಇನ್ನೊಬ್ಬನನ್ನು ಕುರಿತು ''ಮಂತ್ರಿ! ಅದೇನು ಸಮಾಚಾರ, ನೋಡು" ಎಂದಾಜ್ಞಾಪಿಸಿದ. "ಪರ ದೇಶದ ಗುಪ್ತಚಾರನಂತೆ ! ನಮ್ಮ ಚಾರರಿಗೆ ಸಿಕ್ಕಿ ಬಿದ್ದಿದ್ದಾನೆ. ಇವ ನನ್ನು ಕೊಲ್ಲುವುದೇ ಸರಿ'' ಎಂದು ಮಂತ್ರಿಪಾತ್ರದ ಹುಡುಗ ಹೇಳಿದ. ಚಂದ್ರಗುಪ್ತ ಹೇಳಿದ: ''ಚಾರರನ್ನು ಹಾಗೆ ಕೊಲ್ಲಬಾರದು; ಅವರಿಂದ ಮೊದಲು ಶತ್ರು ಸಮಾಚಾರವನ್ನು ತಿಳಿಯಬೇಕು. ಧೂರ್ತ ನಂತೆ ಕಾಣದಿದ್ದರೆ ನಾವೇ ಸರಿಯಾದ ಉದ್ಯೋಗ ಒದಗಿಸಿ, ನಮ್ಮ ಸೇವೆ ಯಲ್ಲಿಟ್ಟುಕೊಳ್ಳಬೇಕು. ಹಲವು ದಿನ ಅವನ ಚಲ್ಯೆಗಳನ್ನು ನೋಡಬೇಕು. ಉಭಯದ್ರೋಹಿ ಎನಿಸಿದರೆ ಮಾತ್ರ ಕೊಲ್ಲಬೇಕು.'' ಎಂದು.

''ನಿನ್ನ ಸುತ್ತಮುತ್ತಿನ ಆಪ್ತರೆನಿಸಿದವರೆಲ್ಲ ಪರರ ಗೂಢಚಾರರೇ ಆದರೆ ಏನು ಮಾಡುವೆ ?'' ಎಂದು ಚಾಣಕ್ಯ ದಿಢೀರನೆ ಕಿರಾತ ಭಾಷೆ ಯಲ್ಲೇ ಬಾಲಕನನ್ನು ಪ್ರಶ್ನಿಸಿದ !

ಧಿಗ್ಗನೆದ್ದು ಸಮಯಪ್ರಜ್ಞೆಯಿಂದ ಬಾಲಕ ಚಾಣಕ್ಯನಿಗೆ ನಮಸ್ಕರಿಸಿ "ಪೂಜ್ಯರೆ ! ಎಲ್ಲರೂ ಪರರಗೂಢಚಾರರೇ ಆಗಿ ಸುತ್ತುವರೆ ದರೆ, ಹುಚ್ಚನಂತೆಯೋ, ರೋಗಿಯಂತೆಯೋ ನಟಿಸಿ, ಸಮಯದಲ್ಲ ಆ ಜಾಲದಿಂದ ಮೊದಲು ತಪ್ಪಿಸಿಕೊಳ್ಳುವೆ. ಆಮೇಲೆ ಸೈನ್ಯ ಕಟ್ಟಲು ಯತ್ನಿಸುವೆ. ಧನ ಸಂಗ್ರಹಿಸಿ, ಆಪ್ತರನ್ನು ಸೇರಿಸಿಕೊಂಡು, ಶತ್ರುಗಳನ್ನು ಸದೆಬಡೆಯಲು ಕಾಲ ಕಾಯ್ದು ಸಾಧಿಸುವೆ." ಎಂದುತ್ತರಿಸಿದ.

''ಎಂಥ ಮಂತ್ರಿಯನ್ನು ಸಂಗ್ರಹಿಸುವೆ?'' ಎಂದು ಚಾಣಕ್ಯ ಮರು ಪ್ರಶ್ನೆ ಹಾಕಿದ.

"ಎಂಥ ಮಂತ್ರಿಯೆ ? ತಕ್ಷಶಿಲೆಯಲ್ಲಿನ ಆಚಾರ್ಯ ಚಾಣಕ್ಯರಂಥ ಶೀಘ್ರಕೋಪಿ, ಮೃದು ಹೃದಯದ, ಅಸಾಧಾರಣ ಮೇಧಾಶಕ್ತಿಯ, ಸಕಲ ರಾಜ ನೀತಿಜ್ಞನನ್ನು ಬಿಟ್ಟು ಬೇರೆ ಮಂತ್ರಿಯನ್ನು ಯಾರು ಚಿಂತಿಸಿ ಯಾರು? ಜನ ಅವರನ್ನು ಕುಟಿಲರೆಂದರೂ ಅವರ ಕರುಣೆಯ ಬಗೆಗೂ ಕೇಳಿ ರುವೆ. ಸಾವಿರಾರು ಪಕ್ಷಿಗಳನ್ನು, ಗಿಣಿ, ಪಾರಿವಾಳಗಳನ್ನು ದಿನಂಪ್ರತಿ ರಾಜಕಾರ್ಯದಲ್ಲಿ ಉಪಯೋಗಿಸಿ ಪಳಗಿಸಿದ ಅವರು ಪಕ್ಷಿಪ್ರಿಯರಾಗಿ ಪಕ್ಷಿಲ ಸ್ವಾಮಿ ಎಂದೇ ಪ್ರಸಿದ್ಧರಾಗಿರುವಾಗ, ಈ ಕಿರಾತ ಬಾಲಕನ ಕೋರಿಕೆಗೆ ಮನಗೊಡಲಾರರೆ? ಅವರ ನೆನಪಿನ ಶಕ್ತಿಯೂ ಅಗಾಧ. ಒಮ್ಮೆ ಕೇಳಿದ, ಓದಿದ ಸಾಧಾರಣ ವಿಷಯವನ್ನು ಒಂದು ಪಕ್ಷಕಾಲ ಹಾಗೇ ನೆನಪಿಡುವ ಅವರು ಅಸಾಮಾನ್ಯ ಪುರುಷರು. ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕೂ ಪುರುಷಾರ್ಥಗಳ ಬಗೆಗೆ ಗ್ರಂಥ ಬರೆದಿರುವಂತೆ. ದೂರದ ದಕ್ಷಿಣದ ತಮಿಳು ನಾಡಿನ ಈ ದ್ರಮಿಡಾಚಾರ್ಯನಿಗೆ ಯಾರ ಮೇಲೂ ಪಕ್ಷಪಾತ ವಿಲ್ಲ. ಇವನಲ್ಲದೆ ಬೇರಾರು ಮಂತ್ರಿಪದವಿಗೆ ಅರ್ಹರು ?" ಎಂದು ದೊರೆಯ ಪಾತ್ರಧಾರಿ ಉತ್ತರಿಸಿದ.

"ಆ ಚಾಣಕ್ಯ ನಿನ್ನನ್ನು ನಿರಾಕರಿಸಿದರೆ ಏನು ಮಾಡುವೆ ?" ಎಂದು ನಸುನಗುತ್ತಾ ಆಚಾರ್ಯ ಮರು ಪ್ರಶ್ನಿಸಿದ.

"ನಿರಾಕರಿಸಲು ಬಿಡುವವರಾರು ? ಅವರ ಪಾದಗಳ ಮೇಲೆ ಬಿದ್ದು ಶರಣಾಗತಿ ಮಾಡಿ ವಶೀಕರಿಸುವೆ. ಶರಣಾಗತರನ್ನೆಂದೂ ಅವರು ಕೈ ಬಿಡ ರೆಂದು ಕೇಳಿರುವೆ." ಎಂದ ಬಾಲಕ.

ಚಕಿತನಾದ ಚಾಣಕ್ಯನ ಕಣ್ಣು ಹನಿಗೂಡಿತು. "ಎಲೈ ಬಾಲ! ನೂರಾರು ಜನರಲ್ಲಿ ಅವರನ್ನು ಹೇಗೆ ಪತ್ತೆ ಮಾಡುವೆಯೋ ?" ಎಂದು ಕೇಳಿದ್ದಕ್ಕೆ, ಬಾಲಕ, "ಅವರು ಕುಳ್ಳಾದ, ಕಪ್ಪುಬಣ್ಣದ ಬ್ರಾಹ್ಮಣರಂತೆ, ಹತ್ತಾರು ಭಾಷೆಬಲ್ಲವರಂತೆ. ಅವರ ಕಾಲುಗಳು ನಿರಂತರ ಸುತ್ತಾಟದಿಂದ ಬಾಗಿ, ಕೋಳಿಕಾಲಿನಂತೆ ಆಗಿದೆಯಂತೆ; ಗಡಸು ಧ್ವನಿಯ ಬೆಣ್ಣೆ ಹೃದಯದ

ಆತನನ್ನು ಪತ್ತೆ ಮಾಡಲು ಏನು ಕಷ್ಟ...?'' ಎನ್ನುತ್ತಾ, ತನ್ನನ್ನು ಪ್ರಶ್ನಿಸಿದವನ ಧ್ವನಿಯ ಗಡಸುತನವನ್ನು ನೆನೆದ !! ಆತನ ಕಾಲುಗಳನ್ನೂ ಗಮನಿಸಿದ !!...ಭಾವಪರವಶನಾಗಿ ಆಚಾರ್ಯನ ಪಾದಗಳ ಮೇಲೆ ಬಿದ್ದು ನಮಸ್ಕರಿಸಿ, ಕಣ್ಣೀರಿಟ್ಟ. ಚಾಣಕ್ಯನಿಗೂ ಅಭಿಮಾನ ಉಕ್ಕೇರಿ ಆನಂದ ಬಾಷ್ಪವಾಯಿತು. ಹುಡುಗನ ತಲೆ ಎತ್ತಿ ನಿಟ್ಟಿಸಿ ನೋಡಿದ. ಸಮಸ್ತ ರಾಜ ಲಕ್ಷಣಗಳನ್ನೂ ಕಂಡ. ಬಾಲಕನ ಬಲಹಸ್ತವನ್ನು ಕೈಗೆ ತೆಗೆದುಕೊಂಡು ರೇಖೆಗಳನ್ನು ಪರೀಕ್ಷಿಸಿದ. ಹೃದಯ ಆನಂದದಿಂದ ತುಂಬಿತು. ''ಮಗು ! ನೀನೊಂದು ದಿನ ಈ ದೇಶವನ್ನೇ ಆಳುವ ಸಮ್ರಾಟನಾಗುವುದು ಖಂಡಿತ. ನೀನು ಸಾಮಾನ್ಯ ಕಿರಾತ ಬಾಲಕನಲ್ಲ; ನೀನಾರು ?'' ಎಂದು ಪ್ರಶ್ನಿಸಿದ.

ಕಿರಾತರ ದೊರೆ ಅಷ್ಟರಲ್ಲಿ ಬಂದ. ಬ್ರಾಹ್ಮಣನೆಂದು ಗೌರವಿಸಿ, ತನ್ನ ಊರಿಗೆ ಕರೆದು ಆತಿಥ್ಯ ಮಾಡಿ ಬಾಲಕನ ಕಥೆಯನ್ನೆಲ್ಲ ಹೇಳಿದ.

ಮಹಾನಂದಿಯ ಶೂದ್ರ ಪತ್ನಿ ಮುರಾದೇವಿ ಆ ಕುಲದವಳಂತೆ. ಆಕೆಯ ಸೋದರನಿಗೂ ಈ ಕಿರಾತನಿಗೂ ಬಾಂಧವ್ಯ. ದೊರೆಗೆ ಶಾಸ್ತ್ರೋಕ್ತವಾಗಿ ಪಟ್ಟದರಾಣಿಯೊಬ್ಬಳು ಕ್ಷತ್ರಿಯ ಕುಲದವಳು, ಬರುವ ಮೊದಲೇ, ದೊರೆ ಮುರಾದೇವಿಯನ್ನು ಕೈ ಹಿಡಿದು ಮೌರ್ಯ ಹುಟ್ಟಿದ್ದ. ಸಕಲ ಶಸ್ತ್ರವಿದ್ಯೆಯನ್ನು, ರಾಜನೀತಿಯನ್ನು ಕಲಿತು ಬಲಾಢ್ಯನಿದ್ದರೂ, ಅವನಿಗೆ ಅಧಿಕಾರ ದೊರೆಯಲಿಲ್ಲ. ದೊರೆಗೆ ಸಹಾಯ ಮಾಡುತ್ತಾ ಸೈನ್ಯದ ಮೇಲ್ವಿಚಾರಕನಾಗಿ ನೇಮಕವಾದ. ದೊರೆಯನ್ನು ಮಹಾಪದ್ಮ ಕಪಟದಿಂದ ಕೊಂದ ಮೇಲೆ, ಕೆಲಕಾಲ ಮೌರ್ಯನ ಜನಪ್ರಿಯತೆಯನ್ನೂ, ಉಪಯುಕ್ತತೆಯನ್ನೂ, ಸ್ವಾಮಿನಿಷ್ಠೆಯನ್ನೂ ಮನಕ್ಕೆ ತಂದು, ಹೊಸದೊರೆ ಅವನನ್ನು ಆ ಸ್ಥಾನದಲ್ಲೇ ಮುಂದುವರೆಸಿದ. ಬೇರೆದಾರಿಯಿಲ್ಲದೆ ಮೌರ್ಯನೂ ಸಮ್ಮತಿಸಿದ್ದ. ದೊರೆಗೆ ಪಾರ್ಶ್ವವಾಯು ಹಿಡಿದು, ನವನಂದರು ಅಧಿಕಾರಕ್ಕೆ ಬಂದ ಮೇಲೆ, ಅವರಿಗೆ ಸಂಶಯ, ಮಾತ್ಸರ್ಯ

ಉಂಟಾಗಿ, ಆ ವೇಳೆಗೆ ವೃದ್ಧನಾಗಿದ್ದೂ ಜನಾನುರಾಗಿಯಾದ ಮೌರ್ಯನ ವಿನಾಶಕ್ಕೆ ಯತ್ನಿಸಿದರು. ಮೌರ್ಯನಿಗೆ ಸಮರ್ಥನಾದ ಪುತ್ರನೂ, ನೂರು ಜನ ಆಪ್ತ ಶಿಷ್ಯಪ್ರಾಯಮಿತ್ರರೂ ಇದ್ದು, ಇವರೆಲ್ಲರನ್ನೂ ಅರಮನೆಯಲ್ಲಿ ಮೌರ್ಯಪುತ್ರರೆಂದೇ ಕರೆಯುತ್ತಿದ್ದರು. ಅಭೇದ್ಯಕೋಟೆಯಂತಿದ್ದ ಈ ಪರಿವಾರ ಕವಚವನ್ನು ನಂದರು ಏನೂ ಮಾಡುವಂತಿರಲಿಲ್ಲ. ಅಮಾತ್ಯ ರಾಕ್ಷಸನೊಡನೆ ಯೋಚಿಸಿದರು. ಪ್ರಬಲನೂ, ಪ್ರಸಿದ್ಧನೂ, ಪ್ರಜಾಪ್ರಿಯನೂ, ಸ್ವಾಮಿಭಕ್ತನೂ, ಸ್ವಸ್ಥಾನದಲ್ಲಿ ತೃಪ್ತನೂ, ಮಹತ್ವಾಕಾಂಕ್ಷೆಯಿರದವನೂ ಆದ ಮೌರ್ಯನನ್ನು ವಿನಾ ಕಾರಣ ಕೊಲ್ಲಿಸಿದರೆ, ಅಪವಾದವೂ ಅಲ್ಲದೆ ರಾಷ್ಟ್ರವೂ ದುರ್ಬಲವಾದೀತೆಂದು ರಾಕ್ಷಸ ಎಚ್ಚರಿಸಿದ. ನಂದರು ಕೇಳಲಿಲ್ಲ. ವಿಧಿಯಿಲ್ಲದೆ ರಾಕ್ಷಸ ಬೇರೊಂದು ತಂತ್ರ ಸೂಚಿಸಿದ.

ಗಂಗಾ ದಡದಲ್ಲಿ ನಂದರ ಗುಪ್ತನಿಧಿ ಇದ್ದ ನೆಲಮಾಳಿಗೆಯ ಕಟ್ಟಡಕ್ಕೆ ಬೊಕ್ಕಸ ಪರೀಕ್ಷೆಯ ನೆಪದಲ್ಲಿ ನಂದರು ಮೌರ್ಯನನ್ನೂ, "ಮೌರ್ಯ ಪುತ್ರರನ್ನೂ" ಕರೆದೊಯ್ದರು. ಚಂದ್ರಗುಪ್ತನೂ ತಂದೆ ತಾತಂದಿರೊಡನೆ ಅಂದು ಹಿಂಬಾಲಿಸಿದ. ಅಡವಿಯಲ್ಲಿ ಬೇಟೆಯಾಡಿ, ಗಂಗೆಯಲ್ಲಿ ಮಿಂದು ಈಸಿ, ಆಯಾಸ ಪರಿಹಾರಾನಂತರ, ಎಲ್ಲರೂ ನೆಲಮಾಳಿಗೆಯಲ್ಲಿ ಸೇರಿದರು. ವಿಶಾಲವಾದ ಔತಣಶಾಲೆಯಲ್ಲಿ ಸಭೆ ಸೇರಿತು. ಬೊಕ್ಕಸವನ್ನೆಣಿಸಲು ಮೌರ್ಯರಿಗೆ ಬಿಟ್ಟು. ಮೇಲೆ ಕೆಳಗೆ ಒಬ್ಬರ ತಪ್ಪ ಒಬ್ಬರು ಓಡಾಡುತ್ತಿದ್ದ ನಾಟಕ ಮಾಡಿದ ನಂದರು ಕ್ರಮೇಣ ಎಲ್ಲರೂ ಮೇಲೆ ಬಂದರು. ನೆಲಮಾಳಿಗೆಯ ಉಕ್ಕಿನ ಕದ ಮುಚ್ಚಿತು! ಅಷ್ಟಷ್ಟು ಎತ್ತರಕ್ಕೆ ಒಂದರ ಮೇಲೊಂದಾದ ಏಳು ಉಕ್ಕಿನ ಬಾಗಿಲುಗಳನ್ನು ಬಿಟ್ಟರೆ, ಅಲ್ಲಿ ಉಸಿರಾಡಲೂ ಹೊರಗೆ ನೋಡಲೂ ಕಿಡಿಕಿ ಇರಲಿಲ್ಲ. ಮೌರ್ಯನ ಉಸ್ತುವಾರಿಯಲ್ಲೇ ಕಟ್ಟಿದ ಕಟ್ಟಡ ಅದು. ಬೇರಾವ ನಿರ್ಗಮ ಮಾರ್ಗವೂ ಇಲ್ಲದುದನ್ನು ಬಲ್ಲ ಆತ ನಂದರ ಈ ಕಪಟವನ್ನು ನಿರೀಕ್ಷಿಸಿರಲಿಲ್ಲ! ತನ್ನ, ತನ್ನವರ ಮರಣದಿಂದ ನಂದರಿಗೇನು ಸಾಧನೆಯೆಂದು ಚಿಂತಿಸಿಯೂ ಉತ್ತರ ಹೊಳೆಯಲಿಲ್ಲ. ಕೇವಲ ಮಾತ್ಸರ್ಯವೆಂದು ಮನದಟ್ಟಾದ ಮೇಲೆ ಮುಂದಿನ ಕಾರ್ಯದ ಬಗ್ಗೆ ಚಿಂತೆ ಹುಟ್ಟಿತು. ಔತಣ ಶಾಲೆಯ ಪಕ್ಕದಲ್ಲೇ ಒಳಗೆ ಅಡುಗೆಯ

ಶಾಲೆಯೂ ಇತ್ತು. ಮೌರ್ಯರು ಉಗ್ರಾಣವನ್ನು ಪರೀಕ್ಷಿಸಿದರು. ಒಬ್ಬ ನಿಗೆ ಮಾತ್ರ ಆರುತಿಂಗಳಿಗಾಗುವಷ್ಟು ಆಹಾರ ದಾಸ್ತಾನಿತ್ತು! ನಂದರ ಸಂಚು ಸ್ಪಷ್ಟವಾದ ಮೇಲೆ, ಸಮರ್ಥನಾದ ಮೌರ್ಯ ತನ್ನವರಿಗೆಂದ :

"ಒಡನೆಯೇ ಈ ಆಹಾರವನ್ನು ನಾವು ಮುಗಿಸಿದರೆ ಎರಡೇ ದಿನಕ್ಕೇ ಮುಗಿದು. ಎಲ್ಲರೂ ಆ ಮೇಲೆ ಸಾಯುತ್ತೇವೆ. ಅದರ ಬದಲು, ನಮ್ಮಲ್ಲಿ ಸಮರ್ಥನೊಬ್ಬ ಬದುಕಿ, ಉಳಿದವರು ಕತ್ತಿ ಚುಚ್ಚಿಕೊಂಡು ಸತ್ತರೆ, ಆತ ಈ ಆಹಾರದಿಂದ ಬದುಕಿ, ಆಕಸ್ಮಾತ್ ಬಿಡುಗಡೆಯಾದರೆ, ಸೇಡಾದರೂ ತೀರಿಸಿಕೊಂಡಾನು. ಯಾರು ಸಿದ್ಧರಿರುವಿರಿ ?"

ಉಳಿದವರು ಮೌರ್ಯನ್ನನೇ ಪ್ರಾರ್ಥಿಸಿದರು. ಅವನೊಪ್ಪಲಿಲ್ಲ. "ನಾನು ಮುದಿಯಾಗುತ್ತಿರುವೆ. ಬದುಕಿಯೂ ಉಪಯೋಗವಿಲ್ಲ. ಹೊರಗೆ ಅವರು ನನ್ನನ್ನು ಬಿಡುವುದೂ ಇಲ್ಲ. ನನಗೆಂದೇ ಅಲ್ಲವೆ ಈ ಮೃತ್ಯು ಕೂಪ ಏರ್ಪಟ್ಟಿತು ?" ಎಂದಾಗ, ಎಲ್ಲರೂ ಚಂದ್ರಗುಪ್ತನನ್ನು ಆರಿಸಿ, ಎಂಟೊಂಭತ್ತು ವರ್ಷದ ಆ ಬಾಲನನ್ನು ಮುದ್ದಿಸಿ, ಅವನಿಗೆ ವಿವರಿಸಿ, ಅವನು ಎಂತೂ ಯಾವಾಗಲೂ ಆತ್ಮಹತ್ಯೆಗೆಳೆಸದೆ, ಈ ಸೇಡು ತೀರಿಸಿಕೊಳ್ಳ ಬೇಕೆಂದು ಪ್ರಮಾಣ ಮಾಡಿಸಿಕೊಂಡು, ಉಳಿದವರು ಒಬ್ಬೊಬ್ಬರಾಗಿ ಕತ್ತಿ ಚುಚ್ಚಿಕೊಂಡು ಸತ್ತರು !

ಚಂದ್ರಗುಪ್ತನ ಎದೆಯೊಡೆಯಿತು. ನೆಲಮಾಳಿಗೆ ರಕ್ತದ ಮಡು ವಾಯ್ತು. ಆ ಹೆಣಗಳನ್ನು ಏನು ಮಾಡುವುದೆಂದೂ ತಿಳಿಯದ ಬಾಲಕ, ಒಂದೆರಡು ದಿನ ಉಣ್ಣದೆ, ಅಳುತ್ತಾ ಗೋಡೆಗೊರಗಿ ಆ ಪ್ರತ್ಯಕ್ಷ ಕೆಟ್ಟ ಕನಸಿನಲ್ಲಿ ಪಟ್ಟ ಯಾತನೆಯನ್ನು ಯಾರು ವರ್ಣಿಸಿಯಾರು ?

ಕರ್ತವ್ಯ ಪ್ರಜ್ಞೆ, ಪ್ರತಿಜ್ಞೆಗಳು ಎಚ್ಚರಿಸಿದ ಮೇಲೆ, ಆ ಹೆಣಗಳನ್ನು ಅಡಿಗೆಯ ಮನೆಯಲ್ಲೇ ಸುಟ್ಟದ್ದಾಯಿತು. ಕಟ್ಟಿಗೆಯ ದಾಸ್ತಾನು ಹೇರಳ ವಾಗಿತ್ತು! ಹೊಗೆ ಹೋಗಲೂ ಜಾಗವಿಲ್ಲದೆ, ಉಸಿರು ಕಟ್ಟಿಸುವ ಆ

ಜಾಗೆಯಲ್ಲಿ, ಪ್ರಜ್ಞೆಯಿಲ್ಲದವನು ಮನೋಧೈರ್ಯವಿಲ್ಲದವನು ಖಂಡಿತ ಸಾಯುತ್ತಿದ್ದ. ತಂದೆ, ತಾತಂದಿರ ಆಣತಿಯಂತೆ ಮುಂದಿನ ನಂದರ ವಧೆಗೆಂದು ಬದುಕಲು, ಅಡಿಗೆ ಮಾಡಿ ನಾಲ್ಕು ತಿಂಗಳು ಹೇಗೋ ಬದುಕಿದ.

ಎಲ್ಲರೂ ಸತ್ತಿದ್ದಾರೆಂಬ ನಂಬಿಕೆಯೊಡನೆ ಐದನೇ ತಿಂಗಳಲ್ಲಿ ನಂದರು ಬಂದು ಉಕ್ಕಿನ ಬಾಗಿಲು ತೆಗೆದು ನೋಡಿದರು. ದುರ್ವಾಸನೆ ಒಳಗೆ ಅವರನ್ನು ಬಿಡಲಿಲ್ಲ. ರಾಕ್ಷಸ ಒಳಗೆ ಬಂದು ನೋಡಿದ. ಬದುಕುಳಿದ ಬಾಲಕನನ್ನು ಕಂಡು ಆಚ್ಚರಿಯಾಯಿತು! ತಾನು ಕಾರಣನಾದ ಈ ಸಾಮೂಹಿಕ ಕೊಲೆಗೆ ತಾನೇ ಹೇಸಿ, ಬಾಲಕನನ್ನು ಸಂತೈಸಿದ. ಎಂಥವರನ್ನೂ ಕರಗಿಸುವ ದೃಶ್ಯ ಅದು. ನಂದರಿಗೆ ಅಮಾತ್ಯ ರಾಕ್ಷಸ ಸೂಚಿಸಿದ: "ನಿಮ್ಮ ಶತ್ರು ತೀರಿದ್ದಾನೆ. ಏನೂ ಅರಿಯದ ಈ ಬಾಲಕನಿಂದ ನಿಮಗೇನೂ ತೊಂದರೆಯಿಲ್ಲ. ಪ್ರಕೃತದ ಸಿಂಹಳಾಧಿಪತಿಯಿಂದ ಬಂದ ಸವಾಲನ್ನೂ ಈತ ಎದುರಿಸಲು ಉಪಯುಕ್ತವಾದಾನು. ಬಿಟ್ಟು ನೋಡಿ'' ಎಂದು.

ಧನನಂದ ಒಳಗೆ ಬಂದ; "ಚಂದ್ರಗುಪ್ತ! ಇದು ಆಕಸ್ಮಿಕವಾಗಿ ನಡೆಯಿತಪ್ಪ! ನಾವು ಗಾಳಿಗೆಂದು ಹೊರಗೆ ಬಂದೊಡನೆಯೇ ಬಲವಾದ ಉಕ್ಕಿನ ಬಾಗಿಲು ದಿಢೀರನೆ ತಾನೇ ಮುಚ್ಚಿಕೊಂಡಿತು. ತೆರೆಸಲು ಉಪಾಯವಿರಲಿಲ್ಲ. ಚಿಂತಿಸಿ ಏನು ಮಾಡುವುದೆಂಬುದರಲ್ಲಿ ಇಷ್ಟು ಕಾಲವಾಯ್ತು. ಉಪಾಯಗಾರನಾದ ನಿನ್ನ ತಾತ ಹೇಗೂ ನಿಮ್ಮನ್ನೆಲ್ಲ ಪಾರು ಮಾಡಿಯಾನೆಂದು ಭಾವಿಸಿದ್ದೆವು. ದೈವವೆ ಬೇರೆ ಚಿಂತಿಸಿತು! '' ಎಂದು ಕಪಟದ ಕಣ್ಣೀರಿಟ್ಟು, ''ಈಗ ನಮಗೊಂದು ಆಪತ್ತು; ಗೌರವದ ಪ್ರಶ್ನೆಯಾಗಿದೆ ಸಿಂಹಳದ ದೊರೆ, ಒಂದು ಪಂಜರದಲ್ಲಿ ಸಿಂಹವನ್ನಿಟ್ಟು ಕಳುಹಿ, ಅದನ್ನು ಜೀವಂತ ಹೊರ ತೆಗೆಯುವ ಉಪಾಯಗಾರರು ನಮ್ಮಲ್ಲುಂಟೆ ? ಎಂದು ಪರೀಕ್ಷೆಯೊಡ್ಡಿದ್ದಾನೆ. ಚಿಕ್ಕಂದಿನಿಂದಲೂ ನೀನು ಉಪಾಯಕುಶಲ. ಬಂದು ನೋಡಿ, ರಾಷ್ಟ್ರದ ಮರ್ಯಾದೆಯುಳುಹು" ಎಂದು ಕೇಳಿದ.

ಚಂದ್ರಗುಪ್ತ ಆ ಹೆಣಗಳ ಮೂಳೆಗಳನ್ನು ತೋರಿಸಿ, ಸತ್ತವರ ಸದ್ಗತಿಗೆ ತನಗೆ ಅಪ್ಪಣೆಯಿತ್ತರೆ, ತನ್ನ ಜೀವರಕ್ಷೆಯ ಅಭಯವಿತ್ತರೆ ಪರೀಕ್ಷಿಸುವುದಾಗಿ ಹೇಳಿ, ವಿಶ್ವಾಸ ಪಡೆದು, ಹೊರಬಂದ. ಆ ಸಿಂಹ ಮೇಣ ದ್ದೆಂದು ಅವನ ಬುದ್ಧಿ ಕ್ಷಣದಲ್ಲಿ ಸೂಚಿಸಿತು. ಒಳಗಿದ್ದ ಕಬ್ಬಿಣ ಪಂಜರ ರಕ್ಷಕನ ಕೈ ಈಟಿಯ ತುದಿಯ ಅಯಸ್ಕಾಂತ ಶಕ್ತಿಯಿಂದ ಎತ್ತ ಬೇಕಲ್ಲಿ ತಿರುಗುತ್ತ, ಮಾಂಸ ಕಚ್ಚುವಂತೆ ತೋರುತ್ತ ಊರವರನ್ನೆಲ್ಲ ಚಕಿತ ಗೊಳಿಸಿ, ಜನ ಜಾತ್ರೆಯಾಗಿ ಬಂದು ನೋಡುತ್ತಿದ್ದರು. ಚಂದ್ರಗುಪ್ತ ಪಂಜರದೊಡೆಯನಿಗೆ, ಆ ಈಟಿಯನ್ನು ತನ್ನ ಕೈಗೆ ಕೊಡುವಂತೆ ಕೇಳಿದ. ರಕ್ಷಕ ಒಪ್ಪದೆ, ಏನೇನೋ ಹೇಳಿದ. ಚಂದ್ರಗುಪ್ತನ ಅನುಮಾನ ಪ್ರಬಲ ವಾಯ್ತು. ಉರಿಗೊಳ್ಳಿಯನ್ನು ತರಿಸಿ, ಬೊಂಬಿನ ತುದಿಯಿಂದ ಪಂಜರ ದೊಳಗೆ ಇಡಿಸಿದಾಗ, ಸಿಂಹ ಕರಗಿ ಪಂಜರದಿಂದ ಹೊರಬಂದಿತು! ಜನ ಜಂಗುಳಿಯಲ್ಲಿ ರಕ್ಷಕರು ತಲೆ ತಪ್ಪಿಸಿಕೊಂಡರು. ಚಂದ್ರಗುಪ್ತನಿಂದ ರಾಷ್ಟ್ರದ ಮಾನ ಉಳಿಯಿತು!

ಚಂದ್ರಗುಪ್ತ, ಮೌರ್ಯರಿಗೆ ಶ್ರಾದ್ಧ ಮಾಡಿದ. ರಾಕ್ಷಸನ ಸೂಚನೆ ಯಂತೆ ನಂದರು ಅವನಿಗೆ ಅನ್ನಸತ್ರದ ಪಾರುಪತ್ಯ ವಹಿಸಿದರು. ನಿರುಪ ಯುಕ್ತ ಪದವಿ ಎಂದೋ, ಬ್ರಾಹ್ಮಣಾಪಮಾನದಿಂದ ಉರಿದು ಬೂದಿಯಾ ದಾನೆಂದೋ ಎಣಿಸಿದರು. ಚಂದ್ರಗುಪ್ತ ಅದನ್ನೊಲ್ಲದೆ, ಪರಿಚಿತರ ಮನೆ ಯಲ್ಲಿ ಒಂದೆರಡು ದಿನ ಇದ್ದು ಊರಿಂದ ಕಣ್ಮರೆಯಾಗಿ ಅಡವಿ ಸೇರಿ, ಅಲ್ಲಿ ಇಲ್ಲಿ ವಿಚಾರಿಸುತ್ತ ತನ್ನ ಅಜ್ಜನ, ತಾಯಿಯ ಬಳಗದವರ ಈ ಅಡವಿ, ನೇಪಾಳದ ಅರಣ್ಯ ಸೇರಿ, ಸೈನ್ಯ ತರಬೇತಿ ಪಡೆಯುತ್ತಿದ್ದ ಎಂದು ವೃದ್ಧ ಕಿರಾತ ಕಥೆ ಹೇಳಿದ.

ಚಾಣಕ್ಯ, ಅವನ ಶಿಷ್ಯರು ಇದನ್ನೆಲ್ಲ ಕೇಳಿ ಮರುಗಿದರು. ಅವರೆಲ್ಲ ರಿಗೂ ಒಂದೆರಡು ದಿನ ಆ ಕಿರಾತರಲ್ಲಿ ಆತಿಥ್ಯವಾಯಿತು. ಆಹ್ನಿಕಕ್ಕೂ, ದಿನಂಪ್ರತಿಯ ಪಾಠಪ್ರವಚನಕ್ಕೂ ಎಲ್ಲ ಸೌಕರ್ಯ ಆ ಅಡವಿಯಲ್ಲಿತ್ತು.

ಒಂದೇ, ಹೊತ್ತು ಉಣ್ಣುವ ಗುರುವಿನ ಅಲ್ಪ ಅವಶ್ಯಕತೆಗಳನ್ನು ಶಿಷ್ಯರು ಗಮನಿಸಿಕೊಂಡರು. ಕಿರಾತರು ವಸ್ತುಗಳನ್ನೊದಗಿಸಿದರು.

ಕಿರಾತರೊಡೆಯನನ್ನು ಚಾಣಕ್ಯ ಕೇಳಿದ; "ಈ ಬಾಲಕನನ್ನು ನನ್ನ ವಶಕ್ಕೆ ಒಪ್ಪಿಸುವಿರಾ ? ಅವನನ್ನು ದೊರೆ ಮಾಡುತ್ತೇನೆ."

ಮುಖ್ಯಸ್ಥನಿಗೆ ಅದು ಇಷ್ಟವಿರಲಿಲ್ಲ. ಕಿರಿಯರಿಗೆ ಅದು ಸಂಪ್ರೀತ ವಿತ್ತು. ಎಲ್ಲರೂ ಕೂಡಿ ಚರ್ಚಿಸಿ, ಗುರುವಿನ ವಶಕ್ಕೆ ಅವನನ್ನು ಕಳುಹಿ ಸಲು ತೀರ್ಮಾನಿಸಿದರು. ಹೊರಡುವ ಮುಂಚೆ ಚಾಣಕ್ಯ ಹತ್ತು ಸಾವಿರ ಹೊನ್ನನ್ನು ಅವರಿಗೆ ಕೊಟ್ಟು, ವಿಷಯವನ್ನು ರಹಸ್ಯವಾಗಿಡುವಂತೆ ಹೇಳಿದ. ಕೆಲವು ತಾಮ್ರ ಪ್ರಕಾರಗಳಿಂದ ಬೇಕಾದಲ್ಲಿ ಬಂಗಾರವನ್ನು ತಯಾರಿಸುವ ವಿದ್ಯೆ ಚಾಣಕ್ಯನಿಗೆ ವಶವಿತ್ತು. ಅವನ ರಾಜಕಾರ್ಯಕ್ಕೆ ಹಣದ ಅಡಚಣೆ ಎಂದೂ ಬಾರದುದಕ್ಕೆ ಇದೇ ಕಾರಣ !

ತಕ್ಷಶಿಲೆಯಲ್ಲಿ ಹುಡುಗನಿಗೆ ಚಾಣಕ್ಯ ಸಕಲ ರಾಜ ವಿದ್ಯೆಯನ್ನೂ, ಶಾಂತಿ, ಯುದ್ಧಕಾಲದ ರಾಜ ಕರ್ತವ್ಯಗಳನ್ನೂ, ಸೇನಾನಿರ್ಮಾಣ, ಆಡಳಿತಾದಿ ಸಕಲ ವಿದ್ಯೆಯನ್ನೂ ನೂರೈದು ಇತರ ರಾಜಕುಮಾರರೊಡನೆ ಉಪದೇಶಿಸಿದ. ಕೆಲ ವರ್ಷಗಳ ನಂತರ ಗುರುಶಿಷ್ಯರು ಅಗಲಿದರು. ಅಲೆಗ್ಸಾಂಡರನ ಮೃತ್ಯುಸೈನ್ಯ ಪರ್ಷಿಯಾವನ್ನು ನೆಲಸಮ ಮಾಡಿ ತಕ್ಷ ಶಿಲೆಗೂ ಮುತ್ತಿಗೆ ಹಾಕಿತು. ವಿದ್ವಾಂಸರು ಓಡಿ ಹೋಗಿ ನಿರಾಶ್ರಿತ ರಾದರು. ಅರಸರು ಮಣ್ಣುಮುಕ್ಕಿದರು. ಚಂದ್ರಗುಪ್ತನನ್ನು ಅರಸನಾಗ್ತಾ ಉಳಿದ ಶಿಷ್ಯರಿಗೆ ಭಾರತ ಪರಿಚಯ ಮಾಡಿಸುತ್ತಾ, ಚಾಣಕ್ಯ ಮಗಧಕ್ಕೆ ಬಂದಿದ್ದ. ಅತ್ತ ತಕ್ಷ ಶಿಲೆಯಿಂದ ಹೊರಟ ಚಂದ್ರಗುಪ್ತ, ಮತ್ತೆ ನೇಪಾಳ ಸೇರಿ ಕುಲವೃದ್ಧರ ಸೂಚನೆಯಂತೆ, ಮಗಧಕ್ಕೆ ಬಂದು ಸೇರಿದ್ದ. ಮತ್ತೆ ಅದೇ ಅನ್ನ ಶಾಲೆಯ ಯಾಜಮಾನ್ಯಕ್ಕೆ ರಾಕ್ಷಸನಲ್ಲಿ ಪ್ರಾರ್ಥಿಸಿದ್ದ. ತನ್ನ ಪಾಪ ಕೃತ್ಯಕ್ಕೆ ಪ್ರಾಯಶ್ಚಿತ್ತವಾಗಿ ಅಮಾತ್ಯ ಅದನ್ನು ಹರೆಯುದ ಚಂದ್ರ ಗುಪ್ತನಿಗೆ ಕೊಟ್ಟಾಯಿತು.

ಕಥೆ ಮುಗಿಸಿ, ಅಂದಿನ ಪಾಠ ಹೇಳಿ ಚಾಣಕ್ಯ ಏಳುವ ವೇಳೆಗೆ ಮಧ್ಯಾಹ್ನದ ಸಮೀಪ. ಮತ್ತೆ ಸ್ನಾನ ಸಂಧ್ಯೆ ಮುಗಿಸಿ ಗುರು ಶಿಷ್ಯರು ಅನ್ನ ಶಾಲೆಗೆ ಬರುವಷ್ಟರಲ್ಲಿ ಬ್ರಾಹ್ಮಣರು ತಂಡ ತಂಡವಾಗಿ ಬರುತ್ತಿದ್ದರು. ಅನ್ನಶಾಲೆಯ ದೊಡ್ಡಗಂಟೆ ಊರಿಗೆಲ್ಲ ಕೇಳಿಸುವಂತೆ ಸಪ್ಪಳ ಮಾಡು ತ್ತಿತ್ತು. ಚಂದ್ರಗುಪ್ತನ ಪ್ರತಿನಿಧಿ ಅಂದಿನ ಸಭೆಗೆ ಮೇಲ್ವಿಚಾರಕ ನಾಗಿದ್ದ. ಅಂದು ಇನ್ನೊಂದು ವಿಶೇಷವೂ ಇತ್ತು. ನಂದರೇ ಅಂದು ಬ್ರಾಹ್ಮಣರೊಡನೆ ಭೋಜನಕ್ಕೆ ಬರುವವರಿದ್ದರು. ಮೌರ್ಯನೂ ಅವನ ಪುತ್ರರೂ "ಸತ್ತ" ದಿನದ ವಾರ್ಷಿಕ ನೆನಪಿಗೆ ಅಂದು ವಿಶೇಷ ಬ್ರಾಹ್ಮಣ ಭೋಜನ!

ಅಗ್ರ ಪಂಕ್ತಿಯಲ್ಲಿ ಹತ್ತು ಬಂಗಾರದ ತಟ್ಟೆಗಳನ್ನೂ, ಉಳಿದಲ್ಲಿ ಬೆಳ್ಳಿಯ ಸಹಸ್ರಾರು ತಟ್ಟೆಗಳನ್ನೂ ಊಟಕ್ಕೆ ಅಣಿಮಾಡಿದ್ದರು. "ಅವು ಯಾರಿಗಾಗಿ ?" ಎಂದು ಒಳಹೊಕ್ಕ ಚಾಣಕ್ಯ ಅಂದಿನ ತಾತ್ಕಾಲಿಕ ಮೇಲ್ವಿ ಚಾರಕನನ್ನು ಕೇಳಿದ. ''ಒಂಭತ್ತು ನವನಂದರಿಗಾಗಿ, ಹತ್ತನೆಯದು, ಇಂದಿನ ಸಭೆಯ ಶ್ರೇಷ್ಠವಿದ್ವನ್ಮಣಿ ಬ್ರಾಹ್ಮಣನಿಗಾಗಿ'' ಎಂದು ಅವನು ತ್ತರಿಸಿದ.

ನಸುನಕ್ಕು ಚಾಣಕ್ಯ ಕೂಡಲೇ ಆ ಹತ್ತನೆಯ ಬಂಗಾರದ ತಟ್ಟೆಯ ಬಳಿ ಕುಳಿತ. ಶಿಷ್ಯರು ಸಮೀಪದ ಬೆಳ್ಳಿ ತಟ್ಟೆಗಳ ಬಳಿ ಕುಳಿತರು. ಊರಿನ ಬ್ರಾಹ್ಮಣ ವಿದ್ವಾಂಸರು ಬಹಳರು ಚಾಣಕ್ಯನ ಬಗೆಗೆ ಕೇಳಿದ್ದರು; ನೋಡಿರಲಿಲ್ಲ. ಕೇಳದವರೂ ಇದ್ದರು. ಗಂಟೆ ಸಪ್ಪಳ ನಿಂತಿತು.

ದೊರೆಗಳು ಪುರೋಹಿತ ಸುಬಂಧುವಿನೊಡನೆಯೂ, ಅಮಾತ್ಯರಾಕ್ಷಸ ನಾದಿ ಬ್ರಾಹ್ಮಣ ಮಂತ್ರಿಗಳೊಡನೆಯೂ ಬಂದರು. ಬ್ರಾಹ್ಮಣ ಸಮೂಹ ಎದ್ದು ನಿಂತಿತು ! ಜಯಕಾರ ಮುಗಿಲನ್ನೊಡೆಯಿತು.

ಆಸನದಿಂದೇಳದ ಚಾಣಕ್ಯನ ಬಗೆಗೆ ನಂದರ ದೃಷ್ಟಿ ಹರಿಯಿತು ! ಅದೂ ಬಂಗಾರದ ತಟ್ಟೆಯ ಜಾಗೆಯನ್ನು ಅವನು ಹಿಡಿದಿದ್ದುದು ಗಮನಕ್ಕೆ ಬಂತು : ''ಯಾರೀ ಬ್ರಾಹ್ಮಣಾಧಮ!'' ಎಂದು ಗರ್ಜಿಸಿದರು!

ಸಮಿದ್ಧಾರ್ಥಕ ಮೇಲೆದ್ದ. "ದೊರೆಗಳೇ ! ಇವರು ಬ್ರಾಹ್ಮಣೋತ್ತಮರಾದ ಆರ್ಯಚಾಣಕ್ಯರು. ಬ್ರಾಹ್ಮಣಾಧಮ ಶಬ್ದ ಹೇಳಿ ಅವರನ್ನು ಕೆರಳಿಸಬೇಡಿ. ಅವರಿಲ್ಲಿ ಇಂದು ಅಭ್ಯರ್ಥಿಗಳಾಗಿ ಬಂದುದು ನಿಮ್ಮ, ನಿಮ್ಮ ನಾಡಿನ ಪುಣ್ಯ; ತಿಳಿಯಿರಿ. ರಾಜಸೂಯಯಾಗ ಬಿಟ್ಟರೆ, ಕ್ಷತ್ರಿಯನಿಗಿಂತ ಬ್ರಾಹ್ಮಣನದು ಸದಾ ಉನ್ನತಾಸನ; ನಿಮ್ಮಂಥ ಬ್ರಾಹ್ಮಣರಿಗೆ ತಿಳಿಯದು, ಪಾಪ ! ದೊರೆ ಬಂದರೆ ಅವರೇಳಬಾರದು; ಬ್ರಾಹ್ಮಣ ಬಂದರೆ ದೊರೆ ಏಳಬೇಕು; ಶಾಸ್ತ್ರ ಮರ್ಯಾದೆಯಂತೆ ನಡೆದರೆ ನಿಮಗೂ ಲೋಕಕ್ಕೂ ಕ್ಷೇಮ'' ಎಂದ.

''ಯಾರಿವನು, ತಲೆ ತಿರುಕ ? ಅವನನ್ನು ಕೇಳಿದರಲ್ಲವೆ ಉತ್ತರಿಸಬೇಕು? ದಬ್ಬಿರಿ, ಹೊರಗೆ ಈ ಅಧಮನನ್ನು'' ಎಂದು, ಧನನಂದ ಗರ್ಜಿಸಿದ. ಅಮಾತ್ಯ ರಾಕ್ಷಸ ನಡುವೆ ಬಂದು ಬಿಡಿಸಿ, ಚಾಣಕ್ಯನ ಬಳಿ ಬಂದು ''ಆರ್ಯರೇ, ಈ ಬಂಗಾರದ ತಟ್ಟೆ ಇಂದಿನ ಶ್ರೇಷ್ಠ ವಿದ್ವನ್ಮಣಿಗೆ ಎಂಬುದು ಹಿಂದಿನಿಂದ ರೂಢಿಯಲ್ಲಿದ್ದುದುಂಟು. ಆದರೆ ಕೆಲವೇ ವರ್ಷಗಳಿಂದ ಈಚೆ ಅದು ರಾಜಪುರೋಹಿತ ಸುಬಂಧುವಿಗೆ ಎಂದು ನಿಗದಿಯಾಗಿದೆ. ನೀವು ಎದ್ದು ಇತ್ತ ಬೆಳ್ಳಿಯ ತಟ್ಟೆಗೆ ಬರಬೇಕು. ನಿಮ್ಮ ಮರ್ಯಾದೆಗೆ ಕುಂದು ಬಾರದಂತೆ ನಾನು ನೋಡಿಕೊಳ್ಳುವೆ" ಎಂದು ಉಸುರಿದ.

ಚಾಣಕ್ಯ ಹೇಳಿದ; ''ನಿಮ್ಮ ಅನ್ನಶಾಲೆಯ ಉಸ್ತುವಾರ ಶ್ರೇಷ್ಠ ವಿದ್ವಾಂಸನಿಗೆಂದು ಹೇಳಿದ್ದರಿಂದ ನಾನಿಲ್ಲಿ ಕುಳಿತೆ. ನಿಮ್ಮ ಬದಲಾದ ಪದ್ಧತಿ ಇದ್ದರೆ ಇಂದಿನಿಂದ ಇದು ಶ್ರೇಷ್ಠ ವಿದ್ವನ್ಮಣಿಗಲ್ಲ ಎಂದು ಘೋಷಿಸಬಾರದೆ? ಅರಸರು ದಿನಕ್ಕೊಂದು ಪದ್ಧತಿ ಮಾಡಬಾರದು. ಊಟಕ್ಕೆ ಕುಳಿತ ಕ್ಷುಧಾರ್ತನೊಡನೆ ವಾದಕ್ಕಿಳಿಯದೆ, ಅಪಮಾನಿಸದೆ, ಗೌರವದಿಂದ

ಬಡಿಸಿ ಸತ್ಕರಿಸಬೇಕೆಂಬ ಸಾಮಾನ್ಯ ಮರ್ಯಾದೆಯೂ ಉಂಟು. ನಾನು ಶ್ರೇಷ್ಠ ವಿದ್ವಾಂಸನೋ ಅಲ್ಲವೋ ಎಂಬುದನ್ನು ಇಲ್ಲಿನ ಯಾವ ಬ್ರಾಹ್ಮಣನೂ ಯಾವ ಶಾಸ್ತ್ರದಲ್ಲಾದರೂ ಈಗಲೇ ಪರೀಕ್ಷಿಸಬಹುದು. ವಾದಕ್ಕೆ ಯಾರು ಬರುತ್ತಾರೋ ಬರಲಿ. ನಿಮ್ಮ ಪುರೋಹಿತನೇ ಇಲ್ಲಿ ಕೂಡಬೇಕಾದರೆ ನನ್ನೊಡನೆ ವಾದ ಮಾಡಲಿ'' ಎಂದು ಸಮಾಧಾನವಾಗಿಯೇ ಉತ್ತರಿಸಿದ.

ಅನ್ನಶಾಲೆಯ ಮೇಲ್ವಿಚಾರಕ ಪ್ರತಿನಿಧಿ ನಡುಗಿ ಹೋದ; ತಾನು ಸರಿಯಾಗಿ ಹೇಳಲಿಲ್ಲ ಎಂಬ ಕಳವಳ; ಇದು ಎಲ್ಲಿ ಮುಗಿದೀತೋ ? ಎಂಬ ಆತಂಕ. ಅಮಾತ್ಯ ರಾಕ್ಷಸನೇನೋ ಚಾಣಕ್ಯನ ಅಪಾರ ಪಾಂಡಿತ್ಯದ ಬಗೆಗೆ ಕೇಳಿದ್ದು ಅವನನ್ನಾರೂ ಗೆಲ್ಲಲಾರರೆಂದು ನಂಬಿದ್ದ. ರಾಜಪುರೋಹಿತ ಸುಬಂಧು, ಕಲಿತ ಕೊಂಚ ಬ್ರಾಹ್ಮಣವಿದ್ಯೆಯನ್ನೂ ಮರೆಯುತ್ತ, ಪರಿಸರದ ಬೌದ್ಧಜೈನವಾದಗಳಿಗೆ ಸರಿಹೊಂದಿಕೊಳ್ಳಲಾರಂಭಿಸಿದ್ದು, ಕೇವಲ ಬ್ರಾಹ್ಮಣ ವೇಷದ ನಾಸ್ತಿಕನಿದ್ದನೇ ಹೊರತು, ಬ್ರಾಹ್ಮಣ್ಯದ ಶ್ರದ್ಧೆಯೇ ಅವನಲ್ಲಿರಲಿಲ್ಲ !

ಚಾಣಕ್ಯನೇ ಆರಂಭಿಸಿದ; "ವೇದಾಂತದಲ್ಲೆ ಚರ್ಚೆ ಆರಂಭವಾಗಲಿ. ಅಳಿವಿಲ್ಲದ ಮೋಕ್ಷಲೋಕದಲ್ಲೂ ಅಪ್ಸರೆಯರುಂಟು ಎಂದು ಉಪನಿಷತ್ತು ಹೇಳುವುದೇಕೆ ? ಸ್ವರ್ಗಲೋಕಕ್ಕೂ ಇದಕ್ಕೂ ಆಗ ಏನು ವ್ಯತ್ಯಾಸ?''

ಸುಬಂಧು ತಲೆ ತಗ್ಗಿಸಿದ ! ಬ್ರಾಹ್ಮಣ ಗೋಷ್ಠಿ ನಗಲಾರಂಭಿಸಿತು. ನಂದರ ಕೋಪ ಉಕ್ಕಿತು. ''ಪುರೋಹಿತಾಪಮಾನ ರಾಜಾಪಮಾನಕ್ಕೆ ಸಮಾನ ! ವಾದಾರಂಭಕ್ಕೆ ಅಪ್ಪಣೆಕೊಟ್ಟವರಾರು?" ಎಂದು ಗುಡುಗಾಡಿದರು. ನೌಕರರಿಗೂ, ರಾಕ್ಷಸನಿಗೂ ಪೇಚಾಟವಾಯಿತು.

ಚಾಣಕ್ಯ ಮುಂದುವರೆದ: "ಪಂಡಿತರೆ, ವೇದಾಂತ ಬೇಡವಾದರೆ, ದಂಡನೀತಿಯನ್ನೇ ಅವಲಂಬಿಸೋಣ. ದೊರೆಗೆ ರಾಜಪುತ್ರರು ಹುಟ್ಟಿದರೆ,

ಮುಂದೆ ದೊರೆಗೆ ಅವರು ವೈರಿಗಳಾಗದಂತೆ ಸಂರಕ್ಷಿಸುವುದೆಂತು ? ದ್ರೋಣ ಮತದಂತೆ ಮಗುವನ್ನು ಕೊಲ್ಲಬೇಕೊ? ವಿಶಾಲಾಕ್ಷಮತದಂತೆ ಸೆರೆಯಲ್ಲಿಡ ಬೇಕೊ? ಭೀಷ್ಮ ಮತವೇನು ? ನಾರದ ಮತವೇನು ? ಉದ್ಧವನ ಮತ ವೇನು ? ನಿಮ್ಮ ಮತವೇನು ? ಪಂಡಿತರೇ ?''

ಸುಬಂಧು ಭಯದಿಂದ ನಡುಗುತ್ತಿದ್ದ. ಬ್ರಾಹ್ಮಣರು ಹೊಟ್ಟೆ ಬಿರಿಯುವಂತೆ ನಗುತ್ತಿದ್ದರು ! ಶಾಲೆಯಲ್ಲಿ ಶಿಸ್ತು ಮಾಯವಾಯಿತು !!

ಚಾಣಕ್ಯ ಕೇಳಿದ; "ಅದೂ ಬಿಡಿ! ಪುರಾಣಕ್ಕೆ ಬರೋಣ. ಇಂದ್ರ ನನ್ನು ಪುರಾಣಗಳು ಸಹಸ್ರಾಕ್ಷ ಎಂದು ಕರೆಯುವಲ್ಲಿ ವ್ಯವಹಾರದ ಔಚಿತ್ಯ ವೇನು ?"

ಪ್ರಶ್ನೆ ಮುಗಿಯುವಲ್ಲಿ ನಂದರ ಕಣ್ಣುಸನ್ನೆಯಿಂದ ಶೂದ್ರಸೇವಕ ನೊಬ್ಬ ಬಂದು ಚಾಣಕ್ಯನನ್ನು ಜುಟ್ಟು ಹಿಡಿದು ಮೇಲೆಳೆದ ! ಅರ್ಧ ತಲೆ ಯನ್ನು ಆಕ್ರಮಿಸಿದ್ದ ನೀಳವಾದ ಆ ಜುಟ್ಟು ಬಿಚ್ಚಿ ಕಾಳಸರ್ಪದಂತೆ ಕಾಣುತ್ತಿತ್ತು ! ದಕ್ಷಯಜ್ಞಧ್ವಂಸಿ ವೀರಭದ್ರನಂತೆ ಮೇಲೆದ್ದು ಅಪ ಮಾನಿತನಾದ ಚಾಣಕ್ಯ ಉಚ್ಚ ಸ್ವರದಲ್ಲಿ ಕಿರುಚಿದ:

''ಎಲೋ ಮದಾನ್ವಿತ ದೊರೆಗಳೇ ? ಬ್ರಾಹ್ಮಣೋತ್ತಮರಿಗೆ ನಿಮ್ಮ ನಾಡಿನಲ್ಲಿ ಈ ಅಪಮಾನವೆ? ನಿಮ್ಮ ಪಿಂಡ ದಿನ ತಿನ್ನುವ ಈ ಮೂರ್ಖ ಬ್ರಾಹ್ಮಣರಿಗೂ, ನಿಮಗೂ, ನಿಮ್ಮ ದುರ್ಬೋಧಕರಿಗೂ ಧಿಕ್ಕಾರವಿರಲಿ! ಮಡಿಯಲ್ಲಿದ್ದ ನನ್ನನ್ನು ಶೂದ್ರನಿಂದ ಹಿಡಿದು ಎಳೆಸಿದಿರಿ ! ಬ್ರಾಹ್ಮಣನ ಶಿಖೆ ಅವನ ವೇದದಷ್ಟು ಪೂಜ್ಯ; ಅದಕ್ಕಾದ ಅಪಮಾನ ವೇದಕ್ಕೆ; ವೇದ ಪುರುಷನಿಗೆ; ಇಡೀ ಬ್ರಾಹ್ಮಣ ಸಮೂಹಕ್ಕೆ!! ನಾನು ಇಲ್ಲಿ ಅಭ್ಯಾಗತ; ಅನ್ನಾರ್ಥಿ; ನನ್ನನ್ನು ವಿನಾ ಕಾರಣ ಕೆಣಕಿ, ನನ್ನ ಪ್ರಶ್ನೆಗಳಿಗೂ ನಿಮ್ಮ ಪಂಡಿತ ಉತ್ತರ ಕೊಡದಿರುವಾಗ ನನ್ನನ್ನು ಬ್ರಾಹ್ಮಣಾಧಮನೆಂದು ಬೈದಿರಿ!!! ಇಗೋ, ನನ್ನ ಪ್ರತಿಜ್ಞೆ ಕೇಳಿರಿ; ನಿಮ್ಮ ಕೊರಳಿಗೆ ಹಗ್ಗಗಳನ್ನು

ನೇಣುಹಾಕಿ ನಿಮ್ಮನ್ನು ನಿಗ್ರಹಿಸದಿದ್ದರೆ ನಾನು ಚಾಣಕ್ಯನಲ್ಲದೆ ಹೋಗಲಿ; ನನ್ನ ಪಿತೃಗಳಿಗೆ ಸದ್ಗತಿಯಾಗದಿರಲಿ: ನಿಮ್ಮನ್ನು ನಿಗ್ರಹಿಸಿ ಯೋಗ್ಯ ಅರಸನನ್ನು ನಾನು ಇಲ್ಲಿ ಪ್ರತಿಷ್ಠಿಸದಿದ್ದರೆ ನನ್ನ ಗುರುಗಳ ಶಾಪ ನನಗೆ ತಟ್ಟಲಿ" ಎನ್ನುತ್ತಾ ಅನ್ನಶಾಲೆಯನ್ನು ಬಿಟ್ಟು ನಡೆದೇ ಬಿಟ್ಟ! ಶಿಷ್ಯರು ಹಿಂಬಾಲಿಸಿದರು. ರಾಕ್ಷಸ ಹಿಂದೆ ನಡೆದು ಏನನ್ನೋ ಹೇಳಹೋದ; ನಂದರು ಅವನನ್ನೆಳೆದು ನಿಲ್ಲಿಸಿಕೊಂಡರು; ಹಿಂದಿರುಗಿ ನೋಡಿದ ಚಾಣಕ್ಯ: "ಎಲೋ ರಾಕ್ಷಸ! ನೀನು ಜಾತಿಯಲ್ಲಿ ಬ್ರಾಹ್ಮಣನೆಂದೂ ಮಂತ್ರಿಗಳಲ್ಲಿ ರಾಕ್ಷಸಪ್ರಾಯನೆಂದೂ ತಿಳಿದಿದ್ದೆ! ನೀನು ಈಗ ನಿಜವಾಗಿ ರಾಕ್ಷಸನೇ ಆಗಿ ಹೋದೆ! ನಿನ್ನ ಸ್ವಾಮಿಭಕ್ತಿ ನಂದರನ್ನು ಹೇಗೆ ಕಾಪಾಡೀತೋ, ನೋಡುತ್ತೇನೆ! ರಾಜರ ದುರ್ನಡತೆಯಲ್ಲಿ ಮಂತ್ರಿಗೂ ಪಾಲಿದೆ ! ನಾನಾರೆಂದು ನೀನಾದರೂ ಅವರಿಗೆ ಹೇಳಬೇಡವೆ ? ನಂದಕುಲವನ್ನು ನಿರ್ನಾಮ ಮಾಡಿದ ಹೊರತು ಈ ಶಿಖೆಯನ್ನು ಬಂಧಿಸುವುದಿಲ್ಲ! ಬೌದ್ಧರಾದ ನೀವೆಲ್ಲ ನಿಮ್ಮ ಶಿಖೆಯನ್ನು ಬೋಳಿಸಿಕೊಳ್ಳಿ ! ಬ್ರಾಹ್ಮಣ್ಯದ ಈ ನಾಟಕ ಏಕೆ?" ಎನ್ನುತ್ತಾ ಭಯಂಕರವಾಗಿ ಗಹಗಹಿಸಿ ನಕ್ಕು ಚಂಡಮಾರುತದ ವೇಗದಲ್ಲಿ ಅಲ್ಲಿಂದ ಮಾಯವಾದ.

ನಂದರು ಕ್ಷಣಕಾಲ ದಿಗ್ಭ್ರಾಂತರಾದರು : ರಾಕ್ಷಸನ ಮುಖ ನೋಡಿದರು. ''ಯಾವನೋ ತಲೆ ತಿರುಕ ಬ್ರಾಹ್ಮಣ ! ಈ ಹುಚ್ಚು ಮಾತುಗಳಿಗೆಲ್ಲ ಅರ್ಥ ಹಚ್ಚಬಾರದು ! ನಾನಿರುವಾಗ ನಿಮಗೇತರ ಚಿಂತೆ? ಉಣ್ಣದಿದ್ದರೆ ಹೋಗುತ್ತಾನೆ ! ನಾವೇನೂ ಅನ್ನ ನಿರಾಕರಿಸಲಿಲ್ಲವಲ್ಲ? ಆ ಆಸನ ಬೇಡವೆಂದುದಕ್ಕೆ ಇಷ್ಟು ಅಬ್ಬರ ಮಾಡಿದ ಇವನು ದುರಹಂಕಾರಿಯೇ! ದಿನಾ ಉಳಿದ ಬ್ರಾಹ್ಮಣರ ಭೋಜನದಿಂದ ಏನು ಉಪಚಾರವಿದ್ದರೂ ಕಳೆಯುತ್ತೆ'' ಎನ್ನುತ್ತಾ ''ಪಂಕ್ತಿ ಕೂಡಬಹುದು" ಎಂದು ಆಜ್ಞಾಪಿಸಿದ. ಆಕಾಶ ಬಿರಿಯುವಂತೆ ಬ್ರಾಹ್ಮಣರು ''ತ್ರಿಸುವರ್ಣಮಯಾಚಿತಂ ಬ್ರಾಹ್ಮಣಾಯ ದದ್ಯಾತ್, ಬ್ರಹ್ಮಹತ್ಯಾಂ ವಾ ಏತೇ: ಘ್ನನ್ತಿ...." ಮಂತ್ರ ಹೇಳುತ್ತಾ ಪರಿಷೇಚನ ಆರಂಭಿಸಿದರು.

ಶಿಷ್ಯರೊಡನೆ ಹೊರಹೊರಟ ಚಾಣಾಕ್ಯ ಚಂದ್ರಗುಪ್ತನನ್ನು ರಹಸ್ಯದಲ್ಲಿ ಕಂಡು, ತಾನು ಪ್ರಯಾಗಿಯ ದಡದ ಇಂದು ಶರ್ಮನ ಆಶ್ರಮದಲ್ಲಿರುವುದಾಗಿಯೂ, ದ್ವಾದಶಿಯಂದು ಸಂಜೆ ಅವನು ತನ್ನನ್ನು ಭೇಟಿ ಮಾಡತಕ್ಕದೆಂದೂ, ಆ ಊರಿಂದ ಅವನು ಒಡನೆಯೇ ತಪ್ಪಿಸಿಕೊಳ್ಳತಕ್ಕದ್ದೆಂದೂ ಹೇಳಿ, ತಪ್ಪಿಸಿಕೊಳ್ಳುವ ಉಪಾಯವನ್ನು ಸೂಚಿಸಿದ.

ತಾನು ಆಜೀವಕ ಜೈನನ ವೇಷದಲ್ಲೂ, ಇತರರು ಭಿಕ್ಷು, ಮಂತ್ರವಾದಿ, ವೈದ್ಯಾದಿ ವೇಷದಲ್ಲೂ ಪಾಟಲೀಪುತ್ರ ಬಿಟ್ಟರು. ತಿಂಗಳು ಗಟ್ಟಳೆ ಹಸಿವಡಗಿಸುವ ಮೂಲಿಕೆಗಳ ಉಪಯೋಗ ತಿಳಿದಿದ್ದ ಗುರುಶಿಷ್ಯರಿಗೆ ಊಟದ, ವಿಶ್ರಾಂತಿಯ ಯೋಚನೆಯೇ ಇರಲಿಲ್ಲ. ಆ ಶುಭ ಪ್ರಾತಃಕಾಲ ಪಾಟಲೀಪುತ್ರಕ್ಕೆ ಅಶುಭವಾದದ್ದು ಹೀಗೆ.



## ಅಧ್ಯಾಯ ನಾಲ್ಕು

# ಕಾರ್ಯಾಲೋಚನೆ

ಅಂದಿನ ಭೋಜನ ಮುಗಿದ ಮೇಲೆ ಪಾಟಲೀಪುತ್ರದ ಮತ್ತು ಮಗಧದ ಇನ್ನಿತರ ಮುಖ್ಯ ನಗರಗಳ ಅನ್ನಸತ್ರಗಳು ಮುಚ್ಚಿದವು! "ಬ್ರಾಹ್ಮಣರು ಜಗಳಗಂಟರು; ನಿರುದ್ಯೋಗಿಗಳಾದ ಅವರಿಗೆ ಅನ್ನ ಹಾಕುವುದರಿಂದ ರಾಷ್ಟ್ರಕ್ಕೆ ಪ್ರಯೋಜನವೇನೂ ಇಲ್ಲ. ಹಾನಿಯೇ ಮಾತ್ರ.'' ಎಂಬ ಘೋಷಣೆಯೊಂದಿಗೆ ನಂದರು ತಮ್ಮ ಈ ಕೃತ್ಯವನ್ನು ಸಮರ್ಥಿಸಿಕೊಂಡರು. "ಇದರಿಂದ ಪ್ರಜಾನುರಾಗ ಕೆಡುವುದಲ್ಲದೆ, ಧರ್ಮನಾಶವೂ ಆದೀತು'' ಎಂದು ಅಮಾತ್ಯ ರಾಕ್ಷಸನೆಂದುದಕ್ಕೆ, ನಂದರು "ಬೌದ್ಧರೂ ಪ್ರಜೆಗಳೇ! ಜೈನರೂ ಪ್ರಜೆಗಳೇ!! ದಂಡಪಿಂಡವನ್ನು ತಡೆದದ್ದರಿಂದ ಧರ್ಮನಾಶವಿಲ್ಲ'' ಎಂದುತ್ತರಿಸಿ, ರಾಕ್ಷಸನ ಬಾಯನ್ನು ಮುಚ್ಚಿದರು. ''ನಂದರ ಕೇಡು ಸಮೀಪವಾದಂತಿದೆ; ದೈವೇಚ್ಛೆ" ಎಂದು ರಾಕ್ಷಸ ಸುಮ್ಮನಾದ.

ಅಂದು ರಾತ್ರಿ ನಂದರಿಗೆ ಸರಿಯಾಗಿ ನಿದ್ರೆ ಬರಲಿಲ್ಲ. ನೆಲವನ್ನು ಕಾಲಿಂದೊದೆದು, ಕ್ರೂರವಾಗಿ ಹುಬ್ಬುಗಂಟಿಕ್ಕಿ, ಭಯಂಕರ ಧ್ವನಿಯಲ್ಲಿ ಚಾಣಕ್ಯ ಮಾಡಿದ ಪ್ರತಿಜ್ಞೆಯೇ, ಆ ದೃಶ್ಯವೇ, ಸಂಯಮ ತಪ್ಪಿಸುವಂತೆ, ನಂದರ ತಾಳ್ಮೆ ತಪ್ಪಿಸಿ, ಸದಾ ಕಣ್ಣ ಮುಂದೆ ಬರುತ್ತಾ, "ತಪ್ಪಿದೆವೋ, ಹೇಗೆ!" ಎಂದು ಒಮ್ಮೊಮ್ಮೆ ಎನಿಸಿದರೂ ಅವರ ದುರಭಿಮಾನ ಅದನ್ನು ಹತ್ತಿಕ್ಕಿತು. ಎಲ್ಲ ನಂದರಿಗೂ ಒಮ್ಮೆಲೆಗೆ ಕ್ರೂರವಾದ ಕನಸುಗಳು ಬಿದ್ದುವು. ಅರಮನೆಯಲ್ಲಿ ಅಪಶಕುನಗಳಾದವು. ಭಯ ಬೆಳೆಯ ಲಾರಂಭಿಸಿತು.

ಬೆಳಗಾದೊಡನೆಯೇ ಅಮಾತ್ಯನನ್ನು ಕರೆಸಿ "ನೆನ್ನೆ ನಾವು ಆ ಮಂಗನ ಮುಸುಡಿಯ ಬ್ರಾಹ್ಮಣನನ್ನು ಹಾಗೇ ಬಿಟ್ಟಿದ್ದು ತಪ್ಪಾಯಿ ತೆನಿಸುತ್ತದೆ. ತಂತ್ರಗಾರನೂ, ಯಾವುದಾದರೂ ಬಲವಿದ್ದವನೂ ಮಾತ್ರ ಹಾಗೆ ಮಾತಾಡಲು ಶಕ್ಯ. ಅವನ ಸರಳ ವೇಷ ನಮಗೆ ಮೋಸ ಮಾಡಿತು. ಅವನನ್ನು ಸೆರೆಯಿಟ್ಟೋ, ಕೊಂದೋ ಆಗಲೇ ಮುಗಿಸಿದ್ದರೆ ಚೆನ್ನಾಗಿರು ತ್ತಿತ್ತು. ಈಗಲೂ ಕಾಲಮಿಂಚಿಲ್ಲ. ಹುಡುಕಿಸಿ ಬಂಧಿಸಿ ತರಬೇಕು" ಎಂದಾ ಜ್ಞಾಪಿಸಿದರು.

ರಾಕ್ಷಸನೆಂದ: "ಆತ ತಕ್ಷಶಿಲೆಯ ಪ್ರಾಧ್ಯಾಪಕ, ದಂಡನೀತಿ ನಿಪುಣ; ಶುಕ್ರಬೃಹಸ್ಪತಿ ನೀತಿಗಳಲ್ಲಿ ನಿಸ್ಸೀಮ. ತಪಸ್ವೀ ಬೇರೆ. ಅಗ್ನಿ ಸಮನಾದ ಅವನನ್ನು ಆಗ ಮುಟ್ಟಿದ್ದರೆ, ಆಗಲೇ ಶಾಪದಿಂದ ನಿಮ್ಮನ್ನು ಸುಟ್ಟು ಬೂದಿಮಾಡುತ್ತಿದ್ದ. ಅದಕ್ಕೆಂದೇ ಸುಮ್ಮನಿದ್ದೆ. ಆದರವನು ಶಾಸ್ತ್ರ ನಿಪುಣ ಮಾತ್ರವಲ್ಲದೆ, ಶಾಸ್ತ್ರಮರ್ಯಾದೆಗೆ ಬದ್ಧನೂ ಇದ್ದಾನೆ. ಅವನೊಡನೆ ಯಾವನಾದರೂ ಕ್ಷತ್ರಿಯನೊಬ್ಬ ಕೂಡಿಕೊಳ್ಳುವ ತನಕ ಅವನಿಂದೇನೂ ಭಯವಿಲ್ಲ."

ನಂದರಿಗೆ ಅಂತರಾತ್ಮ ಫಕ್ಕನೆ ಚುಚ್ಚಿತು. "ಚಂದ್ರಗುಪ್ತನಿಗೂ ಅವನಿಗೂ ಏನಾದರೂ ಸಂಬಂಧವುಂಟೇ ಎಂದು ವಿಚಾರಿಸಿ, ಇಬ್ಬರೂ

ಕೂಡಿ ಕೊಳ್ಳದಂತೆ ತಂತ್ರ ನಿರೂಪಿಸಿ'' ಎಂದು ರಾಕ್ಷಸನಿಗೆ ಅಪ್ಪಣೆಯಿತ್ತ ಮರುಗಳಿಗೆಯಲ್ಲೇ ಚಾರನೊಬ್ಬ ಬಂದು ''ಬುದ್ಧಿ, ಚಂದ್ರಗುಪ್ತ ರಾಜ ಕುಮಾರರು ಇಂದು ಅನ್ನಶಾಲೆಯಲ್ಲಿ ಕಾಣಿಸಿಕೊಳ್ಳಲಿಲ್ಲ. ಅನ್ನಶಾಲೆ ಯನ್ನು ಮುಚ್ಚಿದ ರಾಜಾಜ್ಞೆಯನ್ನು ಅವರಿಗೆ ತಿಳಿಸಲು ಎಲ್ಲೆಲ್ಲೂ ಹುಡುಕಾಡಿದೆವು. ಊರಲ್ಲಿ ಎಲ್ಲೂ ಪತ್ತೆಯಿಲ್ಲ" ಎಂಬ ಸಮಾಚಾರ ಉಸುರಿದನು.

ನಂದರು ಒಬ್ಬರ ಮುಖ ಒಬ್ಬರು ನೋಡಿಕೊಂಡರು! ವಿಚಿತ್ರ ಭಯ ವೊಂದು ಅವರನ್ನಾವರಿಸಿತು!

''ಎಲ್ಲಿ ಹೋಗಿದ್ದಾನು! ರಾಷ್ಟ್ರದ ಗಡಿಯನ್ನೇನೂ ಧಾಟಿಲಿಕ್ಕಿಲ್ಲ ವಲ್ಲ! ಎಲ್ಲಿದ್ದರೂ ಹುಡುಕಿ ಬಂದು ಸೆರೆ ಹಿಡಿತು ತನ್ನಿ" ಎಂದಪ್ಪಣೆ ಮಾಡಿ ಹೊರಟು ಹೋದರು.

ಅಮಾತ್ಯ ರಾಕ್ಷಸ ಕೆಲಕಾಲ ಯೋಚಿಸಿ ಗೂಢಚಾರರನ್ನು ಕರೆದು ಪಾಟಲೀಪುತ್ರದ ಒಳಗಿಂದ ಹೊರಡುವ ಎಂಟೂ ಮಾರ್ಗಗಳಲ್ಲಿ ವೇಗಶಾಲಿ ಗಳಾದ ಕುದುರೆಗಳೊಡನೆ ಸಮರ್ಥಚಾರರನ್ನು ಅಟ್ಟಿದ. ಹಿಡಿದು ತಂದ ವರಿಗೆ ಲಕ್ಷಹೊನ್ನೆಂದು ಬಹುಮಾನವನ್ನೂ ಘೋಷಿಸಿದ. ಚಾರರು ಹೊರಟರು. ಆದರೆ ಪಕ್ಷಿ ಗೂಡಿಂದ ಹೊರ ಹಾರಿತ್ತು!

ಆಜೀವಕನ ವೇಷದಲ್ಲಿ ನಗರದಿಂದ ಹೊರಬಿದ್ದ ಚಾಣಕ್ಯನನ್ನು ಯಾರೂ ಎಲ್ಲೂ ತಡೆಯಲಿಲ್ಲ. ಸಂಜೆಯಾಗುವುದರೊಳಗೆ ಚಾಣಕ್ಯ ಒಂದು ಬ್ರಾಹ್ಮಣ ಅಗ್ರಹಾರಕ್ಕೆ ಬಂದಿದ್ದ. ವೇಷ ಬದಲಿಸಿ, ನದಿಯಲ್ಲಿ ಸ್ನಾನ ಮಾಡಿ ಸಂಧ್ಯೋಪಾಸನೆ ಮುಗಿಸಿ, ನದೀ ದಡದಲ್ಲಿದ್ದ ಶಿವಾಲಯದ ಕಟ್ಟೆಯ ಮೇಲೆ ಚಾಣಕ್ಯ ವಿಶ್ರಾಂತನಾಗಿದ್ದ. ಸಿದ್ಧಾರ್ಥಕ, ಸಮಿದ್ಧಾರ್ಥಕ ಮೊದಲಾದ ಶಿಷ್ಯರೂ ವೇಷಾಂತರದಲ್ಲಿ ಅಲ್ಲಿಗೇ ಬಂದು ತಂತಮ್ಮ ಆಹ್ನಿಕಗಳನ್ನು ಮುಗಿಸಿ, ಗುರುವಿನೊಡನೆ ತಾವೂ ಸೇರಿಕೊಂಡರು.

ನದೀ ನೀರಿಗಾಗಿ ಬಂದಿದ್ದ ಅಗ್ರಹಾರದ ಸ್ತ್ರೀಯರು "ಯಾರೋ ತಪಸ್ವಿಗಳು ಶಿಷ್ಯರೊಡನೆ ಬಂದಿರುವರು." ಎನ್ನಲು ವೈದಿಕ, ದುಃಖುಂಡರು ಬಂದು ಸ್ವಾಗತಿಸಿ, ಭೋಜನಕ್ಕೆ ನಿಮಂತ್ರಿಸಿದರು. ಚಾಣಕ್ಯ ತನ್ನನ್ನು ದೇಶಾಂತರಿ ಎಂದು ಪರಿಚಯಿಸಿಕೊಂಡು, ಅವರಿಗೆ ತಿಳಿಯದ ಶಕ್ಷ ಶಿಲೆಯ ಭಾಷೆಯಲ್ಲಿ ಏನೇನೋ ಹೇಳಿದ. ಶಿಷ್ಯನೊಬ್ಬ ಮಗಧದ ಭಾಷೆಯಲ್ಲಿ ಅದನ್ನು ತಿಳಿಯ ಹೇಳಲು ವೈದಿಕರು ಸಂತುಷ್ಟರಾಗಿ ಆತಿಥ್ಯ ನೀಡಿದರು. ಮಗಧದ ಬ್ರಾಹ್ಮಣರ ದುಃಸ್ಥಿತಿಯನ್ನು ಅವರ ಮೂಲಕ ಚಾಣಕ್ಯ ಕೇಳಿ ಸೂಕ್ಷ್ಮವಾಗಿ ಅರಿತ. "ದೇವಾಲಯಗಳೆಲ್ಲ ಪಾಳಾಗುತ್ತಿವೆ. ಅಧ್ಯಯನ ಮಾಡಿದವರಿಗೆ ಆಶ್ರಯವಿಲ್ಲ. ಹಿಂದಿನ ಅರಸರು ಬ್ರಾಹ್ಮಣರಿಗೆ ಕೊಟ್ಟ ಭೂಮಿಗಳನ್ನೆಲ್ಲ ದೊರೆಗಳು ಕಸಿದು, ಬೌದ್ಧ ಜೈನರಿಗೆ ಕೊಡುತ್ತಿದ್ದಾರೆ; ವರ್ತಕರು ಅಳತೆಗಳಲ್ಲಿ ಮೋಸ ಮಾಡುತ್ತಾರೆ: ಹೇಳುವರಿಲ್ಲ, ಕೇಳುವರಿಲ್ಲ. ಅರಮನೆಯ ಸಂಪರ್ಕ, ಸಂಬಂಧವಿದ್ದವರು ಸಾವಿರಾರು ಎಕರೆ ಭೂಮಿ ಹೊಂದಿದ್ದು, ಅಷ್ಟನ್ನೂ ಸಾಗುವಳಿ ಮಾಡದೆ ಬಿಟ್ಟು ಎಷ್ಟೋ ಭೂಮಿ ಬಂಜರಾಗಿದೆ; ನಾಲೆಗಳಲ್ಲಿ ಹೂಳೆತ್ತುವವರಿಲ್ಲ; ಕಂದಾಯ ಮಾತ್ರ ದಿನೇ ದಿನೇ ಹೆಚ್ಚುತ್ತಿದೆ. ಪಾಟಲೀಪುತ್ರದಲ್ಲಿ ವಿಲಾಸಿಗಳ ಹಾವಳಿ ಹೆಚ್ಚಾಗಿದೆ; ದೊರೆಗಳು ಸಂಗೀತಕ್ಕೆ, ಸೂಳೆಗಾರಿಕೆಗೆ, ನಾಟ್ಯ, ನಾಟಕಗಳಿಗೆ ಖರ್ಚುಮಾಡುವುದಕ್ಕೆ ಕೈ ತಡೆಯುವವರೇ ಇಲ್ಲ; ಅಮಾತ್ಯರಾಕ್ಷಸನೇನೋ ಬುದ್ಧಿವಂತ; ಆದರೆ ನಿಸ್ಸಹಾಯಕ" ಇತ್ಯಾದಿ ಸಮಾಚಾರಗಳನ್ನೆಲ್ಲ ಆಪ್ತತೆಯಿಂದ ತಪಸ್ವೀ ಬ್ರಾಹ್ಮಣನಿಗೆ ಹೇಳಿ ತಮ್ಮ ಅಳಲನ್ನು ತೋಡಿ ಕೊಂಡರು. "ನೀವೆಲ್ಲ ಹೇಗೆ ಜೀವಿಸಿರುವಿರಿ?" ಎಂದು ಚಾಣಕ್ಯ ವಿದೇಶ ಭಾಷೆಯಲ್ಲೇ ಕೇಳಿದ. ಶಿಷ್ಯರಿಂದ ಅರ್ಥವರಿತು ಬ್ರಾಹ್ಮಣರು ಹೇಳಿದರು: ದೊರೆಗಳಿಗೆ ತಲೆ ಕೆಟ್ಟರೂ, ಮಂತ್ರಿ ನಿರುಪಾಯನಾದರೂ, "ಸೇನಾಪತಿ ಬಾಗುರಾಯಣ, ಗಜಾಧ್ಯಕ್ಷ ಭದ್ರಭಟ, ಅಶ್ವಾಧ್ಯಕ್ಷ ಡಿಂಗಿರಾತ ಮೊದ ಲಾದ ಗಣ್ಯರೂ, ಹಿಂದೆ ಮೌರ್ಯನಿಂದ ಪೋಷಿತರಾದ, ಉಪಕೃತರಾದ ಇತರ ಗಣ್ಯ ವರ್ತಕರೂ, ಧರ್ಮಾಧಿಕಾರಿಗಳೂ, ಧನಿಕರೂ ಆ ಮೌರ್ಯನ ಅಪ್ಪಣೆಯಂತೆ ಆಗಾಗ ಬಂದು ವಿಚಾರಿಸಿ, ನಮ್ಮ ಯಾಗ ಹೋಮಾದಿ

ಗಳಿಗೂ, ಪೂಜೆ, ಅನುಷ್ಠಾನಗಳಿಗೂ ಅಷ್ಟಿಷ್ಟು ಹೊನ್ನುಕೊಟ್ಟು ಹೋಗು ತ್ತಾರೆ. ಮೌರ್ಯ ಮಾಡಿದ ಧರ್ಮ ನಮ್ಮನ್ನು ಕಾಪಾಡಿದೆ. ಬೌದ್ಧ ಜೈನರ ಪ್ರಭಾವವೆಲ್ಲ ಅರಮನೆಯಲ್ಲಿ ಕೇಂದ್ರೀಕೃತವಾಗಿದೆ. ದೊಡ್ಡನಗರ ಗಳಲ್ಲಿ ಭಿಕ್ಷುಕರ ಕಾಟ ಅತಿಯಾಗಿದೆ. ಇದು ಕುಗ್ರಾಮ, ಇತ್ತ ಬಹು ಜನ ಬರುವುದಿಲ್ಲ. ಆದರೂ ರಾಜಭಟರು ಅತ್ತಿತ್ತ ಹಾಯುವಾಗ ನಮ್ಮನ್ನು ಸಂಶಯದ ಕ್ರೂರದೃಷ್ಟಿಯಿಂದ ನೋಡುವುದುಂಟು. ಬ್ರಾಹ್ಮಣ್ಯ ಎಷ್ಟು ದಿನ ಉಳಿಯುವುದೋ, ಹೇಗೋ!" ಎಂದು ಕಣ್ಣೀರಿಟ್ಟರು. ಚಾಣಕ್ಯ ನಿಗೂ ಕಣ್ಣು ಹನಿಗೂಡಿತು. ಕ್ಷಣಕಾಲ ಮೌನದಲ್ಲಿ ಧ್ಯಾನಾವಿಷ್ಟ ನಾಗಿದ್ದು, ಕೈಯೆತ್ತಿ ''ಸತ್ಯಮೇವ ಜಯತೇ, ನಾನೃತಂ" ಎಂದು ಗಟ್ಟಿ ಯಾಗಿ ಮೂರುಸಲ ಹೇಳಿ, ಅಲ್ಲಿನವರಿಗೆ ಅಭಯದಾನ ಮಾಡಿ ವಿಶ್ರಾಂತಿ ಗೆಂದು ಎದ್ದ. ಸನ್ನೆಯಂತೆ ಶಿಷ್ಯರು ಬ್ರಾಹ್ಮಣಮುಖ್ಯನಿಗರುಹಿದರು: "ಗುರುಗಳು ಇನ್ನು ಮೌನದಲ್ಲಿರುವರು. ಇಗೋ ಈ ಜಗಲಿಯ ಮೇಲೆ ವಿಶ್ರಾಂತಿ ತೆಗೆದುಕೊಂಡು, ಉಷಃ ಕಾಲಕ್ಕೆ ಮುಂದೆ ಪ್ರಯಾಣ ಮಾಡು ವೆವು" ಎಂದು ಹೇಳಿ, ಜಗಲಿ ಕಟ್ಟೆಗೆ ಬಂದರು.

ಸಮಯ ಸಂನ್ನಿವೇಶಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಾ, ರಾಜ ಮಾರ್ಗವನ್ನು ತ್ಯಜಿಸುತ್ತಾ, ಕೆರೆ, ಕಾಲುವೆ, ನದೀ ತಟಗಳ ಮಾರ್ಗದಲ್ಲಿ, ಕುಗ್ರಾಮಗಳನ್ನೇ ಹಾಯುತ್ತಾ, ಚಾಣಕ್ಯನೂ ಶಿಷ್ಯರೂ ಅಲ್ಲಲ್ಲಿ ಮಗಧ ರಾಜ್ಯದ ಸ್ಥಿತಿಗತಿಗಳನ್ನು ಕಣ್ಣಿಂದ ಕಾಣುತ್ತಾ, ಆಪ್ತ ಬ್ರಾಹ್ಮಣರಿಂದ ಅವರವರಿಗೆ ತಿಳಿದಷ್ಟು ಅರಮನೆಯ, ಆಡಳಿತದ ಸಮಾಚಾರಗಳನ್ನು ಸಂಗ್ರ ಹಿಸುತ್ತಾ, ಅಲ್ಲಲ್ಲಿ ಯಾತ್ರಿಕರ ತಂಡಗಳೊಡನೆ ಸೇರುತ್ತಲೂ, ರಾಜಭಟ ರಿದ್ದ ಊರುಗಳೊಳಗೆ ಹಾಯುವಾಗ ವೇಷಾಂತರಗಳಲ್ಲೂ, ಚದುರಿಯೂ ಹೇಗೋ, ಅಧಿಕಾರಿಗಳಿಗೆ ತೊಂದರೆಯಿಲ್ಲದಂತೆ ಪ್ರಯಾಗೆಯನ್ನು ಸೇರಿ ದರು. ಒಮ್ಮೆ ಜೈನಶೆಟ್ಟಿಯೊಬ್ಬನ ಸರಕು ಸಾಗಿಸುವ ಗಾಡಿಗಳಲ್ಲೂ ಸೇರಿಕೊಂಡು, ಅವರ ಭಾಷೆಯಲ್ಲೇ ಮಾತಾಡುತ್ತ, ಅವರ ಅಭ್ಯುದಯ ವನ್ನೂ ನಿರಾತಂಕವನ್ನೂ, ''ಕಾಲಬದಲಾಗುತ್ತಿದೆ" ಎಂಬ ಅವರ ಅನಿಸಿಕೆ ಯನ್ನೂ ಗ್ರಹಿಸಿ, ಮನಸ್ಸಿನಲ್ಲೇ ಏನೇನೋ ಗುಣಾಕಾರ ಮಾಡಿದರು.

ಇಂದುಶರ್ಮನ ಆಶ್ರಮ ತ್ರಿವೇಣಿಗೆ ಬಹುದೂರದ ಏಕಾಂತ ಪ್ರದೇಶದಲ್ಲಿತ್ತು. ಯಾತ್ರಿಕರ ಸಂಪರ್ಕವಿಲ್ಲದ ಪ್ರಶಾಂತ ಪ್ರದೇಶ ಅದು. ಚಾಣಕ್ಯ ಶಿಷ್ಯರೊಡನೆ ಅಲ್ಲಿ ಸೇರುವ ವೇಳೆಗೆ ಏಕಾದಶೀ ರಾತ್ರಿಯಾಗಿತ್ತು. ಕತ್ತಲಲ್ಲಿ ಆಶ್ರಮದ ಬಾಗಿಲಿಗೆ ಬಂದ ಚಾಣಕ್ಯ "ತಕ್ಷಕನು ಎಲ್ಲರನ್ನೂ ಕಚ್ಚುವುದಿಲ್ಲ!" ಎಂದು ಗಟ್ಟಿಯಾಗಿ ಆಶ್ರಮದ ದ್ವಾರದಲ್ಲಿ ಹೇಳಿದ. ಒಳಗಿಂದ ಇಂದು ಶರ್ಮನ ಶಿಷ್ಯನೊಬ್ಬ ಬಂದು "ಹಾಗೆಂದವರಾರು? ಹಾಗೆಂದರೇನು?" ಎಂದ ಕೇಳಿದ. "ನಿನ್ನ ಗುರು ಈ ಪ್ರಶ್ನೆಗಳಿಗೆ ಅರ್ಥ ಹೇಳಬಲ್ಲ; ಅವನನ್ನೇ ಕೇಳಿ ಬಾ" ಎಂದು ಚಾಣಕ್ಯ ಹೇಳಿದ. ಒಳಗಿಂದಲೇ ಈ ಸಂಭಾಷಣೆಯನ್ನು ಕೇಳುತ್ತಿದ್ದ ಇಂದು ಶರ್ಮ "ಕಚ್ಚದಿರುವ ಸರ್ಪಕ್ಕೆ ಸ್ವಾಗತ!" ಎನ್ನುತ್ತಾ ಓಡಿ ಬಂದು ಚಾಣಕ್ಯನನ್ನು ಆಲಿಂಗಿಸಿದ. ತಾನು ತಕ್ಷಶಿಲೆಯಿಂದ ಬಂದ ಚಾಣಕ್ಯನೇ ಎಂಬುದನ್ನು ಗೂಢ ಭಾಷೆಯಲ್ಲಿ ಚಾಣಕ್ಯ ತಿಳಿಸಿದ ಬಗೆ ಅದು.

ಮಿತ್ರರು ಒಬ್ಬರನ್ನೊಬ್ಬರು ಕಂಡು ಆನಂದಿಸಿದರು. "ಎಲ್ಲಿಂದ ಬಂದೆ? ಏಕಿಷ್ಟು ದಣಿದಿರುವೆ? ಏನಿಷ್ಟು ಆತುರ?" ಎಂದ ಇಂದು ಶರ್ಮನ ಪ್ರಶ್ನೆಗಳಿಗೆ ಚಾಣಕ್ಯ "ಎಲ್ಲ ಹೇಳುತ್ತೇನೆ. ಪ್ರಾಯಃ ನಾಳೆ ಬೆಳಿಗ್ಗೆಯೋ, ಈ ರಾತ್ರಿ ಮುಗಿಯುವುದರೊಳಗೋ ಒಂದು ಅಪೂರ್ವ ಚಂದ್ರೋದಯವಾಗಲಿದೆ! ನೀನು ಆ ಹಗಲಿನ ಚಂದ್ರನನ್ನು ರಾತ್ರಿಯ ನಿರ್ಮಲಾಕಾಶದಲ್ಲಿ ಪ್ರತಿಷ್ಠಿಸಲು ನನಗೆ ಸಹಾಯ ಮಾಡುವುದಿದೆ. ಅದಕ್ಕೆಂದೇ ಬಂದೆ" ಎಂದುತ್ತರಿಸದ.

ಭಾಷೆಯ ಗೂಢತೆಯಲ್ಲಿನ ಜಾಣ್ಮೆ ಇಂದುಶರ್ಮನಿಗೆ ಮೆಚ್ಚಾದರೂ ಪೂರ್ತಿ ಅರ್ಥ ತಿಳಿಯಲಿಲ್ಲ. ಏನೋ ರಹಸ್ಯವಿದೆ ಎಂದಷ್ಟು ತಿಳಿದವನೇ ಶಿಷ್ಯರ ಮುಖ ನೋಡಿದ. ಅರ್ಥವಾದ ಆ ಚತುರ ಬಾಲಕರು "ಅಪ್ಪಣೆ" ಎನ್ನುತ್ತಾ ಆಶ್ರಮದ ಅತಿಥಿಶಾಲೆಯಿಂದ ಹೊರ ನಡೆಯುತ್ತಾ ಅಲ್ಲಿ ತೂಗು ಹಾಕಿದ್ದ ಗಿಣಿಗಳ ಪಂಜರಗಳನ್ನೂ ಹೊರಕ್ಕೊಯ್ದರು. ಅಷ್ಟು ರಹಸ್ಯ

ಆ ಮಾತು ಎಂದು ಅವರಿಗನ್ನಿಸಿ, ಗುರುಸಂಜ್ಞೆಯಿಂದ ಹಾಗೆ ನಡೆದು ಕೊಂಡರು. ಬಾಗಿಲು ಮುಚ್ಚಿ ಬಂದ ಇಂದು ಶರ್ಮ ಚಾಣಕ್ಯನೊಡನೆ ದರ್ಭಾಸನದಲ್ಲಿ ಏಕಾಂತವಾಗಿ ಕುಳಿತು "ಯಾರು ಆ ಹಗಲಿನ ಚಂದ್ರ?" ಎಂದು ಕೇಳಿದ.

ಚಾಣಕ್ಯ ಪಾಟಲೀಪುತ್ರದಲ್ಲಿ ನಡೆದುದನ್ನೆಲ್ಲ ಹೇಳಿದ. "ತಕ್ಷಶಿಲೆ ಮಣ್ಣು ಗೂಡಿತು. ಅಲ್ಲಿನ ದೊರೆ ಓಡಿಹೋದ. ತನ್ನ ರಾಜಕಾರಣಕ್ಕೆ ನನ್ನನ್ನು ಉಪಯೋಗಿಸಿಕೊಳ್ಳಲಿಲ್ಲ. ನಾನು ಬರೀ ಅಧ್ಯಾಪಕ, ವ್ಯವಹಾರ ಕುಶಲನಲ್ಲ ಎಂದು ತಿಳಿದನೋ, ಏನೋ ? ಯವನ ದೇಶದ ಆ ವಿಧವಾ ಪುತ್ರ, ಪ್ರಳಯರುದ್ರನಂತೆ ವಿಜೃಂಭಿಸಿ, ಅಭಿಸಾರದ ದೊರೆಯನ್ನೂ, ಅಂಭಿಯನ್ನೂ ಸೋಲಿಸಿ, ಪರ್ವತನನ್ನೂ ಸದೆ ಬಡಿದು, ಇವರೆಲ್ಲರನ್ನೂ ಗುಲಾಮರಾಗಿಸಿ, ಇವರ ಉಸ್ತುವಾರಿಗೆ ಯಾವನೋ ಸೈಲೂಷಕ (ಸೆಲ್ಯೂಕಸ್) ನೆಂಬವನನ್ನು ಸಿಂಧುವಿನ ಪ್ರಾಂತದಲ್ಲಿ ಇಟ್ಟು ಹೋದನಂತೆ. ಕಚ್ಚಾಡಿ ಪರಸ್ಪರ ಸಾಯುತ್ತಿರುವ ಈ ಗೂಟಿಗಣ್ಣಿನವರಿಂದ ಆರ್ಯಧರ್ಮ ರಕ್ಷಣೆ ಎಂತು ? ಇಂದೂ ! ನಿನ್ನ ಗೂಢಚಾರರು ನಿನಗಿದನ್ನೆಲ್ಲ ತಿಳಿಸಲಿ ಲ್ಲವೆ ? ಇತ್ತ ಮಗಧದಲ್ಲೂ ಒಳ್ಳೆಯ ಸದಾಚಾರವಿಲ್ಲ; ಆ ಹಜಾಮನ ಮಕ್ಕಳು–ನಂದರು–ಆ ಯವನನಿಗಿಂತ ಕ್ರೂರರು; ಸಂಸ್ಕೃತಿ ದ್ವೇಷಿಗಳು. ನನ್ನನ್ನೇ ಬ್ರಾಹ್ಮಣಾಧಮನೆಂದು ಬೈದು ಶಿಖೆ ಎಳೆಸಿ ಅಪಮಾನಿಸಿದರು. ಇಲ್ಲಿಯೇ ಇರುವ ನಿನಗೆ ಪೂರ್ಣ ಸತ್ತ್ವ ಪರಿ ತಿಳಿದಿರಬೇಕು; ಅವನ ಮೊಮ್ಮಗ ಚಂದ್ರಗುಪ್ತ ಈಗ ನನ್ನ ಆಶ್ರಿತ. ಇವನೇ ಈಗ ನಂದರ ಜೀವಿತದ ಹಗಲಿನ ಚಂದ್ರ. ನಂದಾಸ್ತವಾಗಿ ಮಗಧಕ್ಕೆ ರಾತ್ರಿಯಾದಾಗ ಉದಿಸಬೇಕಾದ ಚಂದ್ರ. ಆ ನಂದಾಸ್ತಕ್ಕೆ, ಈ ಚಂದ್ರೋದಯಕ್ಕೆ ಈಗ ನಿನ್ನ ನೆರವು ಬೇಕಿದೆ. ನನ್ನ ಪ್ರತಿಜ್ಞೆಯೂ ಪೂರೈಸಬೇಕು; ನಮ್ಮಿಬ್ಬರ ಗುರುಗಳ ಋಣವೂ ತೀರಬೇಕು. ಶುಕ್ರನೀತಿಯ ಉಪಯೋಗ ಮತ್ತೆ ಭಾರತ ನಾಡಿಗೆ ಬೇಕಾಗಿದೆ." ಎನ್ನುತ್ತಾ ಚಂದ್ರಗುಪ್ತನ ವಿನಯ, ಪರಾಕ್ರಮ, ಬುದ್ಧಿವಂತಿಕೆ, ರಾಜ್ಯಾರ್ಹತೆ, ಸನಾತನ ಸಂಸ್ಕೃತಿಯ ಪ್ರೇಮಾದಿಗಳನ್ನು ಚಾಣಕ್ಯ ಬಣ್ಣಿಸಿದ. ಇಂದುಶರ್ಮ ಎಲ್ಲವನ್ನೂ

ಕೇಳಿಕೊಂಡ. "ಮಿತ್ರ, ಕಲಿತವಿದ್ಯೆ ಸಾರ್ಥಕವಾಗುವುದು ಅದರ ಪ್ರಯೋಗ ದಿಂದ, ಲೋಕೋಪಕಾರದಿಂದ; ನೀನು ರಾಜನೀತಿಜ್ಞ. ನಾನು ಜ್ಯೋತಿಷಿ, ಯಾಜ್ಞಿಕ, ಶಕುನಶಾಸ್ತ್ರಜ್ಞ, ಅಷ್ಟೇಕೆ, ವೇದಬಾಹ್ಯಶಾಸ್ತ್ರಗಳ ಜ್ಞಾನ ವನ್ನೂ ವೇದಾಂತದೊಡನೆ ಪಡೆದಿರುವೆ. ರಾಜಕಾರ್ಯದಲ್ಲಿ ನನ್ನ ಸಹಾಯ ಹೇಗೆ ಉಪಯುಕ್ತವೋ ಕಾಣೆ! ಆದರೆ ನಮ್ಮ ಗುರುಗಳು 'ಚಾಣಕ್ಯ ನೆಂದುದಕ್ಕೆ ಎಂದೂ ಪ್ರತ್ಯುತ್ತರ ಹೇಳಬೇಡ; ಏಕೆಂದೂ ಕೇಳಹೋಗಬೇಡ; ಅವನ ಉದ್ದೇಶ್ಯ ಸಕಾಲದಲ್ಲಿ ತಾನೇ ತಿಳಿಯುತ್ತದೆ; ದೀರ್ಘಾಲೋಚನೆ ಯಿಲ್ಲದೆ ಅವನೇನೂ ಹೇಳುವುದಿಲ್ಲ; ಆಗಿಂದಾಗ್ಗೆ ಅವಕ್ಕೆ ಸುಲಭ ಅರ್ಥ ತಿಳಿಯಬಾರದು, ಎನ್ನುತ್ತಿದ್ದರಷ್ಟೆ! ಮಿತ್ರನಾದರೂ ಶಿಷ್ಯಪ್ರಾಯನಾದ ನನಗೆ ನಾನೇನು ಮಾಡಬೇಕೋ ತಿಳಿಸು'' ಎಂದು ಇಂದುಶರ್ಮ ನಿವೇದಿ ಸಿಕೊಂಡ.

"ಎಲ್ಲರೂ ರಾಜನೀತಿಜ್ಞರಾದರೆ ಬರೀ ಕಲಹವೇ ಆಗುವುದು; ಗೋಡೆ ಯನ್ನು ಬರೀ ಕಲ್ಲಿನಿಂದಲೇ ಕಟ್ಟಲಾಗದಷ್ಟೆ! ಗಾರೆ, ನೀರು, ಸುಣ್ಣ ಎಲ್ಲ ಬೇಕಲ್ಲವೆ ? ನನಗೀಗ ನಿನ್ನ ಅವಶ್ಯಕತೆ ಪೂರ್ಣವಾಗಿದೆ" ಎಂದ ಚಾಣಕ್ಯ, ಮುಂದೆ ಇಂದುಶರ್ಮನಿಗೆ ಏನೇನು ಮಾಡಬೇಕೆಂಬುದನ್ನು ಸ್ಥೂಲವಾಗಿ ವಿವರಿಸಿದ. ಜೀವಸಿದ್ಧಿಯೆಂಬ ಕ್ಷಪಣಕ ಸಂನ್ಯಾಸಿಯ ವೇಷದಲ್ಲಿ ಅವನು ಪಾಟಲೀಪುತ್ರಕ್ಕೆ ಹೋಗಿ ಜ್ಯೋತಿಷ, ತಂತ್ರ, ಮಂತ್ರ, ಶಕುನಗಳ ಪ್ರದರ್ಶನ ದಿಂದ ನಂದರನ್ನೂ, ರಾಕ್ಷಸನನ್ನೂ ವಶೀಕರಿಸಿಕೊಂಡು, ಅಲ್ಲಿರುತ್ತಾ, ಯಾರಿಗೂ ಸಂಶಯಬಾರದಂತೆ ಅಲ್ಲಿನ ಸಕಲ ರಾಜರಹಸ್ಯಗಳನ್ನೂ ತಿಳಿದು ಆಗಾಗ್ಗೆ ಶಿಷ್ಯರ ಮೂಲಕ ತನಗೆ ಗುಟ್ಟಾಗಿ ತಿಳಿಸುತ್ತಿರಬೇಕೆಂದು ಸೂಚಿಸಿ ದನು. ಇಂದು ಶರ್ಮ ಒಪ್ಪಿಗೆ ಸೂಚಿಸಿ, ಚಾಣಕ್ಯನ ಫಲಾಹಾರಕ್ಕೆ ಹಾಲು ಹಣ್ಣು ತರಿಸಿಕೊಟ್ಟ. ಶಿಷ್ಯರೂ ಯಥಾರ್ಹವಾಗಿ ಹಸಿವಾರಿಸಿ ಕೊಂಡು ವಿಶ್ರಾಂತಿಗೆ ಅಣಿಯಾದರು.

ನಡುರಾತ್ರಿಯಲ್ಲಿ ಆಶ್ರಮದ ಬಾಗಿಲಲ್ಲಿ ''ಪಕ್ಷಿಗಳಿಗಾಶ್ರಯನಾದ ವೃಕ್ಷಕ್ಕೆ ಪಕ್ಷಿಗಳು ಬರುವುದುಂಟಲ್ಲವೆ ?'' ಎಂಬ ಪ್ರಶ್ನೆಯನ್ನು ಯಾರೋ ಗಟ್ಟಿಯಾಗಿ ಕೇಳಿದಂತಾಯ್ತು.

ಚಕಿತನಾಗಿ ಚಾಣಕ್ಯ ಮೇಲೆದ್ದ. "ಎಲವೋ ! ವೃಕ್ಷವು ಯಾವ ಪಕ್ಷಿಯನ್ನಾದರೂ ನಿರಾಕರಿಸಿರುವುದನ್ನು ಯಾರಾದರೂ ಕೇಳಿರುವರೇನೊ?" ಎಂದುತ್ತರಿಸುತ್ತಾ ಬಾಗಿಲು ತೆರೆದು ಚಂದ್ರಗುಪ್ತನನ್ನು ಸ್ವಾಗತಿಸಿದ. ಬೈರಾಗಿಯ ವೇಷದಲ್ಲಿದ್ದ ಚಂದ್ರಗುಪ್ತ ಪ್ರಯಾಣದ ಆಯಾಸದಿಂದ ಬಹು ಬಸವಳಿದವನಂತೆ ತೋರಿದ. ಇಂದುಶರ್ಮನೂ ಹೊರಗೆ ಬಂದು "ಹಗಲಿನ ಚಂದ್ರನಿಗೆ ಸ್ವಾಗತ, ರಾತ್ರಿ ದೂರವಿಲ್ಲ ಎಂದ." ಆಯಾಸದಲ್ಲೂ ಚಂದ್ರಗುಪ್ತ ಚಂದ್ರನಂತೆಯೇ ಆಹ್ಲಾದಕರವಾಗಿ ನಕ್ಕ! ಅವನನ್ನು ನೋಡುತ್ತಲೇ ಇಂದುಶರ್ಮನಿಗೆ ಚಾಣಕ್ಯ ಮಾಡಿದ ಅವನ ಗುಣ ವರ್ಣನೆ ಯಥಾರ್ಥವೆನಿಸಿತು. ಚಾಣಕ್ಯನ ಜಾಣತನವನ್ನು ಮೆಚ್ಚಿದ.

ಚಂದ್ರಗುಪ್ತ ವೇಷ ಬದಲಿಸಿ, ಸ್ನಾನ ಮಾಡಿ, ಕೊಂಚ ಆಹಾರ ಸ್ವೀಕರಿಸಿದ ನಂತರ ಮತ್ತೆ ಆಶ್ರಮದ ಅತಿಥಿಶಾಲೆಯಲ್ಲಿ ಆಚಾರ್ಯನೂ, ಇಂದುಶರ್ಮನೂ, ಚಂದ್ರಗುಪ್ತನೂ ಸೇರಿದರು. ರಾತ್ರಿ ಅರ್ಧಕಳೆದಿತ್ತು. ದಿನಾ ಚಾಣಕ್ಯನ ಉತ್ಥಾನ ಸಮಯ ಅದು. ಇಂದು ಶರ್ಮನಿಗೂ ಆ ಅಭ್ಯಾಸವೇ ಇತ್ತು. ಚಂದ್ರಗುಪ್ತ ಬಳಲಿದ್ದವನಾಗಿದ್ದರೂ, ವೇಳೆಯಿಲ್ಲ ದ್ದರಿಂದ ಚಾಣಕ್ಯ ಅವನು ಸುರಕ್ಷಿತನಾಗಿ ಬಂದು ಸೇರಿದ ಬಗೆಗೆ ಕೇಳಿದ. ಚಂದ್ರಗುಪ್ತ ತನ್ನ ವೃತ್ತಾಂತ ಹೇಳಿದ.

"ಗುರುವರ್ಯ! ದಶಮಿಯ ಸಂಜೆವರೆಗೆ ನಾನು ಕೊಂಚ ಸುಲಭವಾಗಿ ತಲೆತಪ್ಪಿಸಿ, ಹೊರ ಬಿದ್ದು ಪ್ರಯಾಣ ಮಾಡಿದೆ. ಭಿಕ್ಷುಕನ ವೇಷದಲ್ಲಿದ್ದ ನನ್ನನ್ನು ಯಾರೂ ಸುಲಭವಾಗಿ ಗುರುತು ಹಿಡಿಯಲಿಲ್ಲ. ಏಕಾದಶೀ ಬೆಳಗ್ಗೆ ಒಂದು ಚಾವಡಿಯಲ್ಲಿ ಒಬ್ಬ ಕುರುಡನಂತೆ ಕಂಡ ಭಿಕ್ಷುಕ ನನ್ನ ಭಿಕ್ಷುಕ ವೇಷ ಕಾಣದವನಂತೆ ನನ್ನೆದುರು ಕೈಯೊಡ್ಡಿದ. ನಾನು ಅಭ್ಯಾಸ ದಂತೆ ಒಂದು ಮೊಹರು ನಾಣ್ಯಬಂಗಾರವನ್ನು ಅವನ ಕೈಗೆ ನೀಡಿದೆ. ಆ ಕುರುಡ ಕಣ್ಣು ಬಿಟ್ಟುನೋಡಿ, "ಓಹೋ, ಭಿಕ್ಷುಕನಿಗೆ ಇಷ್ಟು ದೊಡ್ಡ ಭಿಕ್ಷೆ ಕೊಡುವವರುಂಟೋ ! ನೀನು ಅರಸು ಕುಲದ ಚಂದ್ರಗುಪ್ತನಿರಲಾರೆ ಯಷ್ಟೆ! ನಿನ್ನನ್ನು ಜೀವಸಹಿತ ಹಿಡಿದು ಕೊಟ್ಟರೆ ನನ್ನ ಬಡತನ ನೀಗಿ,

ಲಕ್ಷ ಹೊನ್ನು ದೊರೆತೀತು!!'' ಎನ್ನುತ್ತಾ ನನ್ನನ್ನು ಕುತ್ತಿಗೆ ಹಿಡಿದ. ನನ್ನ ತಪ್ಪಿಗೆ ಲಜ್ಜೆಯಾಗಿ, ನನ್ನ ಸೊಂಟದ ಗೂಢ ಕಠಾರಿಯಿಂದ ಅವನನ್ನು ಮುಗಿಸಿ, ಪಕ್ಕದ ನದಿಗೆ ತಳ್ಳಿ ಬಂದೆ. ರಾಕ್ಷಸನ ಗೂಢಚಾರರ ಜಾಲ ಎಲ್ಲೆಲ್ಲೂ ಬಳಸಿಕೊಂಡಿತ್ತು. ತಾಸಿಗೊಂದು ವೇಷ ಬದಲಿಸುತ್ತಾ, ಯಾತ್ರಿಕರ ತಂಡಗಳನ್ನು ಅಲ್ಲಲ್ಲಿ ಸೇರುತ್ತಾ ಬಂದರೂ ಒಮ್ಮೆ ನಂದರ ಸೈನಿಕರಿಗೆ ಸಿಕ್ಕು ಬಿದ್ದೆ. ನನ್ನ ಆಕಾರ, ರೂಪ, ವಯಸ್ಸುಗಳನ್ನು ಮರೆಮಾಚುವಂತಿರಲಿಲ್ಲವಷ್ಟೆ! ಸೈನ್ಯದ ಉಪಾಧ್ಯಕ್ಷನ ಬಳಿ ನನ್ನನ್ನು ಅಲ್ಲಿನ ಶಿಬಿರಕ್ಕೆ ಕೊಂಡೊಯ್ದರು. ಅವನು ಬಲಗುಪ್ತನೆಂಬ ಅಧಿಕಾರಿ, ನನ್ನ ತಾತ ಮೌರ್ಯನಿಂದ ಮುಂದೆ ಬಂದವನು; ನನ್ನನ್ನು ನೋಡಿ "ಈ ನಿರಪರಾಧಿಯನ್ನೇಕೆ ಕರೆತಂದಿರಿ ?" ಎಂದು ಸೈನಿಕರನ್ನು ಬೈದು ಕಳುಹಿ, ನನ್ನನ್ನು ಏಕಾಂತದಲ್ಲಿ ಸಂತೈಸಿ "ತನ್ನ ಮುಂದೆ ಬಲಗುಪ್ತನ ಆಪ್ತಚಾರನೆಂದು ಹೇಳಿಕೊಂಡು, ಈ ಕುದುರೆಯನ್ನೇರಿ, ಈ ಪೋಷಾಕಿನಲ್ಲಿ ಸಂಚರಿಸು; ಯಾರೂ ನಿನ್ನನ್ನು ಹಿಡಿಯಲಾರರು'' ಎಂದುಪಾಯ ಸೂಚಿಸಿ, ಕುದುರೆಯನ್ನು ಪ್ರಯಾಗದ ಹೊರವಳಯದ ಉಕ್ಕಡದ ಕಾವಲುಗಾರನಿಗೊಪ್ಪಿಸಿ, ತನ್ನ ಹೆಸರು ಹೇಳುವಂತೆ ಹೇಳಿ ಕಳುಹಿದ್ದರಿಂದ ಜೀವ ಸಮೇತ ಇಷ್ಟು ದೂರ ಬರುವುದಾಯಿತು'' ಎನ್ನುತ್ತಾ ಕುಸಿದು ಬಿದ್ದ.

ಇಂದುಶರ್ಮ ಅವನಿಗೆ ಅನ್ನಾಹಾರಗಳನ್ನು ಒದಗಿಸಿ ಉಪಚರಿಸಿದ. ಒಂದೆರಡು ಗಂಟೆ ವಿಶ್ರಾಂತಿಯಾಗುವ ವೇಳೆಗೆ ಚಾಣಕ್ಯ ತನ್ನ ಜಪ-ತಪಾನುಷ್ಠಾನ ಮುಗಿಸಿದ್ದ. ಇಂದು ಶರ್ಮ ಸ್ನಾನಕ್ಕೆ ಹೊರಟಿದ್ದ. ನಿದ್ರೆಯಿಂದೆದ್ದ ಚಂದ್ರಗುಪ್ತನನ್ನು ಅತಿಥಿಶಾಲೆಯ ಏಕಾಂತದಲ್ಲಿ ಚಾಣಕ್ಯ ಮಾತಾಡಿಸಿದ;

''ವತ್ಸ! ದಣಿದಿದ್ದರೂ ನೀನೀಗ ಕರ್ತವ್ಯಶೀಲನಾಗಬೇಕಾದ ಕಾಲ ಬಂದಿದೆ. ಇಂದು ಶರ್ಮ ಇದೀಗ ಪಾಟಲೀಪುತ್ರಕ್ಕೆ ಜೈನ ಮುನಿಯ ವೇಷದಲ್ಲಿ ಗೂಢಚಾರನಾಗಿ ಹೊರಟಿದ್ದಾನೆ. ನಾವು ಮುಂದಿನ ರಾಜಕಾರ್ಯವನ್ನು ಆಲೋಚಿಸಬೇಕಾಗಿದೆ. ನಿನ್ನಿಂದ ಹಲವು ಸಂಗತಿಗಳನ್ನು ನಾನರಿ

ಯುವುದಿದೆ. ನನ್ನ ಪ್ರಶ್ನೆಗಳಿಗೆ ತೃಪ್ತಿಕರವಾದ ಸಮಂಜಸ ಉತ್ತರ ಕೊಡು. ಮೊದಲು ನಂದರ ಜನಪ್ರಿಯತೆ ಎಷ್ಟು ಮಟ್ಟಿಗೆ ಉಳಿದಿದೆ, ಹೇಳು."

ಚಂದ್ರಗುಪ್ತನೆಂದ: "ಜೀಯಾ! ಅರಮನೆಯಲ್ಲಿಯೇ ನಂದರು ಅಪ್ರಿಯರು. ಊಳಿಗದವರೆಲ್ಲ ನನ್ನ ತಂದೆ ತಾತನನ್ನು ಸದಾ ಅವರ ಔದಾರ್ಯಕ್ಕಾಗಿ, ವಾತ್ಸಲ್ಯಕ್ಕಾಗಿ ನೆನೆಯುತ್ತಾರೆ. ನಂದರು ಸತ್ತರೆ ಅಳುವವರು ಬಹಳವಿಲ್ಲ. ಅಮಾತ್ಯ ರಾಕ್ಷಸ ಮಾತ್ರ ಬಲು ವಿಚಿತ್ರ. ದುಷ್ಟರೋ ಶಿಷ್ಟರೋ, ಅರಸರು ದೇವಾಂಶಭೂತರು; ಅವರಿಗೆ ನಿಷ್ಠೆಯಿಂದ ನಡೆದುಕೊಳ್ಳಬೇಕೆಂಬುದು ಅವನ ಮತ. ಅವನ ಈ ವಿಚಿತ್ರವಾದವನ್ನು ಇನ್ನುಳಿದ ಕಿರಿಯ ಅಮಾತ್ಯರಾಗಲಿ ಗಜಾಧ್ಯಕ್ಷ, ಅಶ್ವಾಧ್ಯಕ್ಷ, ಕೋಶಾಧ್ಯಕ್ಷ, ನಗರಾಧ್ಯಕ್ಷ ಮುಂತಾಗಿ ಬೇರಾರೂ ಅಂತರಂಗದಲ್ಲಿ ಒಪ್ಪದಿದ್ದರೂ, ಬೇರೆಮಾರ್ಗವಿಲ್ಲದೆ ಅನುಸರಿಸುತ್ತಿರುವರು. ಇವರನ್ನು ನಮ್ಮ ಕಡೆ ಸೆಳೆದುಕೊಳ್ಳುವುದು ಕಷ್ಟವಿಲ್ಲ. ಊರಲ್ಲಿ ಸಾಮಾನ್ಯರಂತೂ ನಂದರಿಗೆ ಶಾಪ ಹಾಕುತ್ತಾರೆ. ಕಳ್ಳಸಂತೆ ವರ್ತಕರ ಹೊರತು, ಸಾಮಾನ್ಯ ವರ್ತಕರೂ ನಂದರತ್ತ ಒಲವಿಲ್ಲದವರು. ಸಿಕ್ಕಿದ ವಸ್ತುಗಳ ಮೇಲಿನ ತೆರಿಗೆಗಳಿಂದ ಬೇಸತ್ತಿರುವರು. ಕುಡುಕರ ಸಂಖ್ಯೆ ಬೆಳೆಯುತ್ತಿದೆ. ನಂದರ ವ್ಯವಸಾಯ ನೀತಿಯಿಂದ ರಾಷ್ಟ್ರದ ಉತ್ಪನ್ನ ವರ್ಷೇವರ್ಷೇ ಕಡಿಮೆಯಾಗುತ್ತಿದೆ. ರೈತರೂ ತಿರುಗಿ ಬೀಳುವ ಕಾಲ ದೂರವಿಲ್ಲ."

ಚಾಣಕ್ಯ: "ನಂದರ ವೈರಿ, ಮಿತ್ರ ವರ್ಗಗಳ ರಾಷ್ಟ್ರಗಳನ್ನು ಹೆಸರಿಸ ಬಲ್ಲೆಯ ? ನಮಗೆ ಎತ್ತ ಕಡೆಯಿಂದ ಸೈನ್ಯ ಸಹಾಯ ಸಿಕ್ಕೀತು, ಕೇಳಬಲ್ಲೆಯಾ ?"

ಚಂದ್ರಗುಪ್ತ: "ಆರ್ಯರೇ ! ನೇಪಾಳದ ದೊರೆ ನಂದರಿಗೆ ಆಗದವ. ಆದರೆ ಅವನ ಸೈನ್ಯದ ಬಹುಭಾಗ ಅನಾಗರಿಕ ಕಿರಾತ, ಪುಳಿಂದರ ಅಶಿಕ್ಷಿತ ಪಡೆ. ಇದನ್ನು ಪ್ರತ್ಯಕ್ಷ ನೋಡಿದವ ನಾನು. ಆ ಸೈನ್ಯವನ್ನು ಕಟ್ಟು

ವಲ್ಲಿ ನನ್ನ ಪಾಲೂ ಇದೆ. ಇವರ ನಿಷ್ಠೆ ನನಗುಂಟು. ಕಾಶಿ ಕೋಸಲ, ವಂಗ, ಅಂಗ, ಕಳಿಂಗ, ಪುಂಡ್ರ ದೇಶಗಳವರು ಶಿಶುನಾಗರ ಕಾಲದಿಂದ ಮಗಧದವರ ಕಡೆ ಒಲವುಳ್ಳವರು. ಮಹಾಪದ್ಮ ಇವರ ಸ್ನೇಹದ ಬೆಸುಗೆಗೆ ಭದ್ರ ಬುನಾದಿ ಹಾಕಿರುವನು. ಇವರಾರಿಗೂ ಸಾಮ್ರಾಜ್ಯಕಾಂಕ್ಷೆಯಿಲ್ಲ. ದಕ್ಷಿಣದ ಅವಂತಿ, ಚೇದಿ ರಾಜರಿಗೆ ತಟಸ್ಥತನಬೇಕಾಗಿರುವಂತಿದೆ. ಇಂದ್ರ ಪ್ರಸ್ಥದ ಕುರುಗಳು ಬಲಿಷ್ಠರಲ್ಲ. ಮೇಲಾಗಿ ನೆರೆಯವರು; ಅವರು ನಂದ ರಿಂದ ಹಿಂಸಿಸಲ್ಪಟ್ಟವರಾದರೂ ಈಗ ಸ್ವಾಭಿಮಾನ ಕಳೆದವರು. ಇವ ರಿಂದಲೂ ನಮಗೆ ಸಹಾಯ ದೊರೆಯುವುದು ಕಠಿಣ. ಪಂಚನದೀ ಪ್ರದೇಶದ ಅರಸರು ಬಲಿಷ್ಠರಾಗಿದ್ದು ನಂದರ ಕಡುವೈರಿಗಳೂ ಸಾಮ್ರಾಜ್ಯಕಾಂಕ್ಷೆ ಯುಳ್ಳವರೆಂಬುದೂ ನಿಜವಾದರೂ, ಈಗ ತಾನೇ ಯವನ ವೀರನೊಬ್ಬನ ಚಂಡಮಾರುತದಂಥ ದಂಡಯಾತ್ರೆಯಿಂದ ಜರ್ಝರಿತರಾಗಿರುವವರು. ಅಪ ಮಾನವೊಂದು ಕಡೆ, ಸೈನ್ಯನಷ್ಟ ಒಂದು ಕಡೆ, ಆರ್ಥಿಕ ಮುಗ್ಗಟ್ಟು ಮತ್ತೊಂದು ಕಡೆ. ಈ ಮನದ ನೆಲೆಯಲ್ಲಿ ಅವರು ನಂದರಾಜ್ಯಕ್ಕೆ ಎರಗಲು ಒಪ್ಪುವರೋ, ಹೇಗೋ ತಾವೇ ಚಿಂತಿಸಬೇಕು. ಆ ಕೈಲೂಷಕ ಬೇರೆ! ಯವನನ ಪ್ರತಿನಿಧಿಯಾಗಿ ಸಿಂಧುವನದಲ್ಲಿರುತ್ತ ಮನ ಬಂದಂತೆ ಪದೇ ಪದೇ ಇವರನ್ನು ಹಣಕ್ಕೆ ಪೀಡಿಸುತ್ತಿರುವನು. ಯವನ ಸೇನಾನಾಯಕರ ಸಣ್ಣ ತುಕಡಿಗಳು ಈ ಅಭಿಸಾರ, ಅಂಭಿ, ಪುರೂರವನೆಂದು ಕರೆದುಕೊಳ್ಳುವ ಪರ್ವತೇಶ, ಅವನ ಪುತ್ರರ ನಾಡುಗಳಲ್ಲಿ ಉಳಿದು, ಇವರನ್ನು ಸ್ವತಂತ್ರ ರಾಗಲೂ, ಒಗ್ಗೂಡಲೂ ಬಿಡುತ್ತಿಲ್ಲ. ಪಂಚನದದ ಆಜಿನ, ಗಾಂಧಾರ, ತಕ್ಷಶಿಲೆ, ಮದ್ರಕ, ವಾಹ್ಲೀಕ, ದರದ, ಆರಟ್ಟ ದೇಶಗಳ ಸ್ಥಿತಿ ನೆಲಸಮ ವಾಗಿದೆ. ಯವನ ಅಲ್ಲೆಲ್ಲ ಸ್ಮಶಾನ ಮಾಡಿಯೇ ಬಂದಿದ್ದಾನೆ. ಅವು ಮಗಧಕ್ಕೆ ದೂರ ಬೇರೆ. ಪಂಚನದ ಪ್ರಾಂತವನ್ನು ದಾಟದೇ ಆ ಸೈನ್ಯ ಗಳು ಇತ್ತ ಬರುವಂತೆಯೂ ಇಲ್ಲ! ಈ ಪ್ರಾಂತದವರು ಅವರನ್ನು ಬಿಡು ವುದೂ ಇಲ್ಲ. ಇನ್ನು ಸೌರಾಷ್ಟ್ರದ ಯಾದವರು, ಗುರ್ಜರರು. ಅವ ರಾರಿಗೂ ಯುದ್ಧ ಬೇಡವಾದಂತಿದೆ. ಸಾಮ್ರಾಜ್ಯ ಕಟ್ಟುವ ಸ್ಥಿತಿಯಲ್ಲೂ, ಬಯಕೆಯಲ್ಲೂ ಅವರಿಲ್ಲ. ನನಗೆ ತಿಳಿದುದು ಇಷ್ಟು. ಆದರೆ ಒಂದು ಮಾತು. "ಪುರೂರವ'' ಪರ್ವತೇಶ ತನ್ನನ್ನು ಶುದ್ಧ ಕ್ಷತ್ರಿಯ ವಂಶದವನೆ

ನ್ನಾತ್ತಾ, ಮಹಾಪದ್ಮನನ್ನು ಹಣಾವು ದೊರೆಯೆಂದು ಬಹಿರಂಗವಾಗಿಯೇ ಛೇಡಿಸಿ, ಯುದ್ಧಕ್ಕೆ ಹಾತೊರೆಯುತ್ತಿದ್ದ. ಆದರೂ ಅವನ ಸೈನ್ಯಕ್ಕೂ, ಯುದ್ಧ ಕೌಶಲಕ್ಕೂ ಕೊಂಚ ಅಂಜಿದನೇನೋ! ಇತ್ತ ಬರಲಿಲ್ಲ. ಮಹಾ ಪದ್ಮ ''ಸರ್ವಾರ್ಥಸಿದ್ಧಿ''ಯಾಗಿ ಪಾರ್ಶ್ವವಾಯು ಪೀಡಿತನಾದ ಮೇಲೆ, ನಂದರ ಅಧಿಕಾರ ಪ್ರಾಪ್ತಿ ಆದ ಮೇಲೆ ಇತ್ತ ದಂಡಯಾತ್ರೆ ಬರುವವನಿದ್ದ. ಅಷ್ಟರಲ್ಲಿ ಆ ಯವನ ಶನಿಯಕಾಟ ಆ ವಾಯವ್ಯ ಪ್ರಾಂತದ ಮೇಲಾ ಯಿತು. ಈಗ ಪರ್ವತನ ಸ್ಥಿತಿ ತಿಳಿಯದು.''

ಚಾಣಕ್ಯ ಚಂದ್ರಗುಪ್ತನ ಈ ಪ್ರಬುದ್ಧ ರಾಜಕೀಯ ವಿವೇಚನೆ, ವಿಶ್ಲೇಷಣೆಗೆ ಮನದಲ್ಲೇ ಬಹುಮೆಚ್ಚಿದರೂ, ಮೇಲೆ ತೋರಗೊಡದೆ, ಹುಬ್ಬುಗಂಟಿಕ್ಕಿ ಕ್ಷಣಕಾಲ ಏನನ್ನೋ ಚಿಂತಿಸಿ, ಪ್ರಸನ್ನಮುಖನಾದ. ಆಮೇಲೆ ಇಂತೆಂದ:

''ಎಲೋ ವೃಷಲ! ಪರ್ವತನ ಅಪಮಾನವನ್ನು ನಾವು ತೀರಿಸಿ, ಅವನ ಕ್ಷೀಣಕೋಶವನ್ನು ತುಂಬಿಕೊಟ್ಟರೆ, ನಮ್ಮ ಕೆಲಸವನ್ನು ಅವನು ಮಾಡಿ ಯಾನೇನೋ? ಮೌರ್ಯನಿಗೂ ಅವನಿಗೂ ಸಂಬಂಧ. ಒಲವುಗಳು ಹೇಗಿ ದ್ದವೋ ? ಬಲ್ಲೆಯಾ ?''

ಚಂದ್ರಗುಪ್ತ: "ಪೂಜ್ಯರೇ! ಯವನನಿಂದ ಪರ್ವತನಿಗಾದ ಅಪಮಾನ ವನ್ನು ಪೂಜ್ಯರು ಹೇಗೆ ತೀರಿಸಿಯಾರೆಂಬುದು ಜಗದೀಶ್ವರನಿಗೂ ತಿಳಿಯದ, ಆಚಾರ್ಯರೊಬ್ಬರಿಗೆ ಮಾತ್ರ ಶಕ್ಯವಾದ ದುರೂಹ್ಯ ವಿಷಯ. ನಾನದನ್ನು ಊಹಿಸಲಾರೆ; ಆದರೆ ತಮ್ಮ ಶಕ್ತಿಯಲ್ಲಿ ನನಗೆ ನಂಬಿಕೆಯುಂಟು. ಅವನ ಬೊಕ್ಕಸ ತುಂಬುವ ವಿಚಾರ ತಮ್ಮ ಶಕ್ತಿಯೊಳಗೇ ಇದೆ. ಆದರೆ ಪರ್ವತೇಶ ದುರಾಸೆಯವನು; ಬೆಂಕಿಯನ್ನು ಕಟ್ಟಿಗೆಯಿಂದ ಆರಿಸುವುದಾದಾಗ ಮಾತ್ರ ಅವನ ಆಸೆ ತೀರೀತು ! ಮೌರ್ಯನಿಗೆ ಅವನು ಅಂಜುತ್ತಿದ್ದ. ಮೌರ್ಯ ಹಠಾತ್ತನೆ ತನ್ನ ನೂರ್ವರು ಅನುಚರರೊಡನೆ "ಸತ್ತ" ವಿಷಯದಲ್ಲಿ ಅವನಿಗೆ ನಂಬಿಕೆ ಇಲ್ಲವಾದೀತು. ಅವನ ಮೊಮ್ಮಗನನ್ನು ಅವನು ನಂಬಿಯಾನೋ

ಇಲ್ಲವೋ. ಮೌರ್‍ಯ ತನಗೇ ಮಂತ್ರಿಯಾಗಿದ್ದರೆ! ಎಂದು ಆಸೆಪಡು ತ್ತಿದ್ದ ಕಾಲವೊಂದಿದ್ದಿತು. ತನ್ನತ್ತ ಸೆಳೆಯಲೂ ಪ್ರಯತ್ನಿಸಿದ. ಬುದ್ಧಿ ವಂತನಾದ ಅಮಾತ್ಯರಾಕ್ಷಸ ಅದನ್ನು ಆಗಗೊಡಲಿಲ್ಲ. ಮೌರ್‍ಯನನ್ನು ಬಹುಮಾನಗಳಿಂದ ತೃಪ್ತಿಪಡಿಸಿ, ಅವನಿಗಿಷ್ಟವಾದ ಅಗ್ರಹಾರಗಳನ್ನು ಸ್ಥಾಪಿಸಿ, ದೇವಾಲಯ, ಬ್ರಾಹ್ಮಣ ಭೋಜನಗಳಿಗೆ ದತ್ತಿ ವ್ಯವಸ್ಥೆ ಮಾಡಿಸಿ, ಅವನನ್ನು ಇತ್ತ ಉಳಿಯುವಂತೆ ಮಾಡಿದ. ಈಗ ಪರ್ವತನ ಮನದಲ್ಲಿ ಏನಿದೆಯೋ ಪೂಜ್ಯರು ಮಾತ್ರ ತಿಳಿಯಬಲ್ಲರು."

ಚಾಣಕ್ಯ: "ವತ್ಸ, ಪರ್ವತನನ್ನು ನೀನು ನಂಬುವೆಯ? ಕೊಂಚ ಕಾಲಕ್ಕಾದರೂ ಅವನ ಅಧೀನದಲ್ಲಿರಲು ಒಪ್ಪುವೆಯ?"

ಚಂದ್ರಗುಪ್ತ: "ಆರ್ಯರು ಯಾರನ್ನು ನಂಬಿದರೂ ನಾನೂ ನಂಬುವೆ. ನನ್ನ ಹಿತವಲ್ಲದ್ದನ್ನು ತಾವೆಂದೂ ಚಿಂತಿಸಲಾರಿರಿ. ಬಾಗುವ ಗಿಡ ಬೆಳೆಯಬಲ್ಲುದೆಂದು ತಾವೇ ಹೇಳುತ್ತಿದ್ದಿರಿ. ತಮ್ಮ ಸಲಹೆ, ಏರ್ಪಾ ಡುಗಳನ್ನೆಂದೂ ಉಲ್ಲಂಘಿಸಲಾರೆ. ಅವು ನನಗೆ ತಿಳಿಯಲಿ, ಬಿಡಲಿ. ದೈವಕ್ಕೇ ಅರ್ಥವಾಗದ ಚಾಣಕ್ಯ ಹೃದಯ ವೃಷಲನಿಗೆಂತು ತಿಳಿಯ ಬೇಕು?"

ಚಾಣಕ್ಯ: "ಹಾಗಿದ್ದರೆ ನುತ್ತೆ ಸಾವಿರ ಗಾವುದ ಪ್ರಯಾಣಕ್ಕೆ ಸಿದ್ಧನಾಗು. ವಿಜಯಾಭವ. ನಾಳಿದ್ದು ಬೆಳಿಗ್ಗೆ ಸೂರ್ಯೋದಯಕ್ಕೆ ಪಶ್ಚಿಮ ಪ್ರಯಾಣಕ್ಕೆ ಅನುಕೂಲವಾದ ಮುಹೂರ್ತವಿದೆ. ನಾಳೆ ಜೀವ ಸಿದ್ಧಿ (ಇಂದುಶರ್ಮ) ಮೌನವ್ರತ ಧರಿಸುತ್ತಾನೆ. ಪಾಟಲೀಪುತ್ರಕ್ಕೆ ಅವನ ಪ್ರಯಾಣ ಸೂರ್ಯೋದಯಕ್ಕೆ ನಾಲ್ಕು ಗಳಿಗೆ ಮುಂಚೆ ಆಗುವು ದಿದೆ. ಅವನ ಶಿಷ್ಯರು ಈಗಾಗಲೇ ಸಿದ್ಧರಾಗುತ್ತಿರುವರು. ಜೀವಸಿದ್ಧಿಗೆ ಅರಮನೆಯಲ್ಲಿ ಉಪಯೋಗವಾಗುವ, ಬೇರಾರಿಗೂ ಗೊತ್ತಿರದ, ನಿನ್ನ ತಂದೆಗೋ ತಾತನಿಗೋ ಮಾತ್ರ ಗೊತ್ತಿದ್ದ ಯಾವುದಾದರೂ ರಹಸ್ಯಗಳಿ ದ್ದರೆ ಬೇಗ ಹೇಳು. ನಿನ್ನ ಹಿತ ಚಿಂತನೆಗೆ ಇವು ಸಾಧಕ."

ಚಂದ್ರಗುಪ್ತ: (ಕೊಂಚ ಯೋಚಿಸಿ) "ಗುರುದೇವ, ಸಾಯುವ ಮುಂಚೆ ನನ್ನ ಅಜ್ಜ ಹೇಳಿದ ಮಾತಿದು. ಯಾವಾಗಲಾದರೂ ಉಪ ಯೋಗಕ್ಕೆ ಬಂದೀತೆಂದು ಇತ್ತ ಗುಪ್ತ ಮಾಹಿತಿ. ಮಹಾನಂದಿಯನ್ನು ಮಹಾಪದ್ಮ ನಿದ್ರೆಯಲ್ಲಿ ಕೊಂದ ವಿಷಯ, ರಾಣಿ ಸುನಂದಾದೇವಿ ಇದಕ್ಕೆ ಪ್ರೇರಣೆ, ಅನುಮತಿ, ಸಹಾಯ ಇತ್ತದ್ದು ಒಬ್ಬ ಧೀರ ಬ್ರಾಹ್ಮಣ ಯುವಕ ನಿಗೆ ಮಾತ್ರ ಗೊತ್ತಿತ್ತು. ಮಂತ್ರಿಮಂಡಲದ ರಹಸ್ಯ ಕಾಗದ ಪತ್ರಗಳನ್ನು ತನ್ನ ಕೈಯಿಂದಲೇ ಬರೆಯುತ್ತಿದ್ದ ಶಕಟಾಯನನ ಏಕ ಮಾತ್ರ ಪುತ್ರ ವಿನಯಶರ್ಮನೇ ಆ ಯುವಕನಂತೆ. ರಾಣಿಯ ಆಪ್ತವರ್ಗದಲ್ಲಿ ಸೇರಿದ್ದ ಇವನು ಅಕಾಲದಲ್ಲೂ ನಿರ್ಭೀತನಾಗಿ ಅರಮನೆಯ ಎಲ್ಲೆಡೆ ಸಂಚರಿಸುತ್ತಿದ್ದ. ಹಳೆಯ ದೊರೆಯ ಕೊಲೆಯಾದ ಮೇಲೆ ಒಂದು ರಾತ್ರಿ ಹೊಸ ದೊರೆಯ ಶಯ್ಯಾ ಗೃಹದಲ್ಲಿ ಬಚ್ಚಿಟ್ಟುಕೊಂಡ ಅವನು ರಾಜ-ರಾಣಿಯರು ಕೂಡಿ ದೊಡನೆಯೇ ಭೂತದಂತೆ ಮಂಚದಡಿಯಿಂದೆದ್ದು ಭಯಂಕರನಾಗಿ ನರ್ತಿ ಸುತ್ತ, ''ಹಜಾಮ ದೊರೆಯನ್ನು ಹೀನಾಮಾನವಾಗಿ ಬೈದು 'ಹಜಾ ಮರೂ ಸೂಳೆಯರೂ ರಾಜಾ-ರಾಣಿಯರಾದರೆ ರಾಜ್ಯದ ಬ್ರಾಹ್ಮಣರು ಎಂತು ಆಶೀರ್ವದಿಸಬೇಕು? ಗತಿಯಿಲ್ಲದೆ ದೇವರು ಮಾತ್ರ ದೇವಾಲಯ ಗಳಲ್ಲಿ ಉಳಿಯಬೇಕಷ್ಟೆ?" ಎಂದು ಆಕ್ರೋಶ ಮಾಡಿದನಂತೆ ! ಕಾಮಾತು ರನಾಗಿದ್ದ ಮಹಾಪದ್ಮ ಒಡನೆಯೇ ಆ ಬ್ರಾಹ್ಮಣ ಯುವಕನನ್ನು ಕತ್ತಿ ಯಿಂದ ಸಂಹರಿಸಿ, ಶಯ್ಯಾಗೃಹದ ನೆಲಮಾಳಿಗೆಯಡಿಯಲ್ಲಿ ಹಳ್ಳ ತೋಡಿಸಿ ಆಗಿಂದಾಗ್ಗೆ ಅವನ ಸಮಾಧಿ ಮಾಡಿಸಿದನಂತೆ. ಶಯ್ಯಾಗೃಹ ದಿಢೀರನೆ ಬೇರೊಂದು ಕೊಠಡಿಗೆ ವರ್ಗವಾಯಿತಂತೆ ! ಹೊಸ ದೊರೆಯ ಹುಚ್ಚಿರ ಬೇಕೆಂದು ಅರಮನೆಯವರು ಇದನ್ನು ಪರೀಕ್ಷಿಸಿ ಶೋಧಿಸುವ ಗೊಡವೆಗೆ ಹೋಗಲಿಲ್ಲ. ದಿಢೀರನೆ ಮಗ ಕಾಣೆಯಾಗಿ ಶಕಟಾಯನನಿಗೆ ಹುಚ್ಚು ಹಿಡಿಯಿತು ! ಎಂಟು ಹತ್ತು ದಿನಗಳಾದ ಮೇಲೆ ಗಂಗೆಯಲ್ಲಿ ತೇಲಿ ಬಂದ ಮತ್ತೊಬ್ಬ ಯುವಕನ ಹೆಣವನ್ನು ವಿನಯ ಶರ್ಮನದೇ ಎಂದು ಸಾಧಿಸಿ, ಅವನು ಆತ್ಮಹತ್ಯೆ ಮಾಡಿಕೊಂಡನೆಂದು ವದಂತಿ ಎಬ್ಬಿಸಿದರಂತೆ. ಅರ ಮನೆಯ ವೈದ್ಯ ಚಿಕಿತ್ಸೆಯಿಂದ ಶಕಟಾಯನ ಈಗ ಗುಣವಾಗಿದ್ದರೂ, ಸಂಶಯ ಹೋಗಿಲ್ಲ. ಅವನು ಅರಮನೆ ಬಿಡದಂತೆ ಯಥೇಷ್ಟ ಹೊನ್ನು

ಕೊಟ್ಟು ಮಹಾಪದ್ಮ ಗೌರವಿಸಿದ. ನಂದರು ಹುಟ್ಟುವ ಮೊದಲು ನಡೆದ ಇದನ್ನು ಅವರೂ ಅರಿಯರು. ಶಕಟಾಯನ ಮಾತ್ರ ಇನ್ನೂ ಕೊರಗುತ್ತಿದ್ದಾನೆ. ಇದು ವಿಶೇಷ" ಎಂದ.

ಆ ವೇಳೆಗೆ ಆಹ್ನಿಕ ಮುಗಿಸಿ ಅಲ್ಲಿಗೆ ಬಂದಿದ್ದ ಇಂದುಶರ್ಮ ಅದನ್ನೆಲ್ಲ ಏಕಾಗ್ರವಾಗಿ ಕೇಳಿ, "ಮಿತ್ರ, ಇದು ಚಂದ್ರೋದಯ ಸಾಧನೆಗೆ ಬಹು ಉಪಯುಕ್ತ ಮಾಹಿತಿ'' ಎಂದು ಹೇಳಿ, ಇಂತಹ ಮತ್ತಿತರ ವಿಷಯಗಳನ್ನೂ ರಹಸ್ಯವಾಗಿ ಗ್ರಹಿಸಿದ.

ಚಾಣಕ್ಯ ಅವನಿಗೆ ಅನೇಕ ಗುಪ್ತನಿಧಿಗಳನ್ನಿತ್ತು, ನಂದರ ವಶೀಕಾರಕ್ಕೆಬೇಕಾದ ಉಪಾಯಗಳನ್ನು ಅರುಹಿ, ಚಂದ್ರಗುಪ್ತನಿಗಿಂತೆಂದ:

''ವೃಷಲ, ನೀನು ರಹಸ್ಯವಾಗಿ ಬಲಗುಪ್ತನ ಚಾರವೇಷದಲ್ಲಿ ಅವನ ಕುದುರೆಯನ್ನೇರಿ ಪಾಟಲೀಪುತ್ರಕ್ಕೆ ಜಾಗರೂಕನಾಗಿ ಹೋಗಿ ಬಾ. ರಹಸ್ಯದಲ್ಲಿ ಬಾಗುರಾಯಣಾದಿ ಸೇನಾನಾಯಕರನ್ನು ಕಂಡು ಈ ಪತ್ರಕ್ಕೆ ಅವರ ಸಹಿ ಹಾಕಿಸಿ ತಾ." ಎನ್ನುತ್ತಾ ಅಲ್ಲಿಂದಲ್ಲೇ ಒಂದು ಪತ್ರವನ್ನು ಬರೆದು ಕೊಟ್ಟ. ಅದರ ಒಕ್ಕಣೆ ಹೀಗಿತ್ತು.

"ಪ್ರಯಾಗದ ಸಮೀಪದ ವ್ಯಾಘ್ರಪುರವಾಸಿಯಾದ ಧನಗುಪ್ತನಿಗೆ ನಂದರಾಜ್ಯದ ಸೇನಾಪತಿ, ಗಜಾಧ್ಯಕ್ಷ, ಕೋಶಾಧ್ಯಕ್ಷ, ಅಶ್ವಾಧ್ಯಕ್ಷರುಗಳಾದ ನಾವು ಬರೆದು ನಿರೂಪಿಸುವುದೇನೆಂದರೆ, ನಾವು ಪೂರ್ವದಲ್ಲಿ ಮೌರ್ಯ ಮಹಾಶಯನ ಕೃಪಾಪೋಷಿತರಾಗಿ ಬೆಳೆದು ಅವನ ಸ್ಮರಣೆಯಿಂಲಲೇ ಬದುಕಿರುವವರು. ಆ ಮಹಾತ್ಮನು ಅಕಾಲಿಕನಾಗಿ ದೈವಾಧೀನನಾಗಿ ನಮ್ಮನ್ನಗಲಿದುದು ನಮ್ಮ ದುರ್ದೈವ. ಆದರೂ ಆತನ ಮೊಮ್ಮಗ ಚಂದ್ರಗುಪ್ತನು ಈಗ ಶುಕ್ಲಪಕ್ಷಪ್ರಥಮೆಯ ಚಂದ್ರನಂತಿದ್ದು ಹುಣ್ಣಿಮೆಯು ಬಹುದೂರದಲ್ಲಿಲ್ಲ. ಮೌರ್ಯನು ಆರಂಭಿಸಿದ ಶುಭಕಾರ್ಯಗಳೆಗೆಲ್ಲ ನಮ್ಮ ಸಮ್ಮತಿ ಸಹಾಯಗಳಿದ್ದುವು. ಈಗ ಅವನ ಮೊಮ್ಮಗ ಚಂದ್ರಗುಪ್ತನು

ಆರಂಭಿಸುವ ಜೀರ್ಣೋದ್ಧಾರ ಕಾರ್ಯಾದಿ ಸಮಸ್ತ ಶ್ರೇಯೋವ್ಯಾಪಾರ ಗಳಲ್ಲೂ ತನುಮನಧನದಿಂದ ನಾವೂ ದುಡಿದು ಸಹಾಯ ನೀಡುವೆವು. ಅನನುದ್ದೇಶಿಸಿರುವ ಮಹಾಕಾರ್ಯಗಳೆಲ್ಲ ನಮಗೆ ಪೂರ್ಣ ಸಂಮ್ಮತ ವಾಗಿವೆ. ಸಂಪತ್ತು, ವಿವೇಕ, ಜನಬಲ ಇರುವ ತಾವೂ ಯಥೇಷ್ಟವಾಗಿ ಸಹಾಯ ಮಾಡತಕ್ಕದ್ದು. ಇದರ ಪುಣ್ಯಫಲ ನಮಗೆ ಮಾತ್ರವಲ್ಲದೆ ರಾಷ್ಟ್ರಕ್ಕೇ ಸೇರಿದ್ದಾಗಿದೆ. ಇಂತು..." ಇತ್ಯಾದಿ.

"ವತ್ಸ, ಈ ಪತ್ರದ ಮಾತುಗಳನ್ನು ನೆನಪಿಟ್ಟು, ನೀನೇ ಸ್ವಯಂ ಸ್ಫೂರ್ತಿಯಿಂದ ಬರೆದಂತೆ ಬರೆದು, ಬಾಗುರಾಯಣಾದಿಗಳ ಹಸ್ತಾಕ್ಷರ ಗಳನ್ನು ಜಾಗ್ರತೆಯಿಂದ ಪಡೆದು ಬಾ. ನಾನು ಶಿಷ್ಯಸಮೇತನಾಗಿ ಮಧುರೆಯ ಪಾಂಚರಾತ್ರಿಗಳ ಸನಾತನ ಸಂಕರ್ಷಣಾಲಯದಲ್ಲಿರುತ್ತೇನೆ. ಮುಂದಿನ ಕೃಷ್ಣ ಪಂಚಮೀ ಷಷ್ಠಿಯೊಳಗೆ ಅಲ್ಲಿಗೆ ಬರತಕ್ಕದ್ದು. ಪಾಟಲೀ ಪುತ್ರದ ಯಾವತ್ತೂ ಹೊಸ ಸಮಾಚಾರಗಳನ್ನೂ ಸಂಗ್ರಹಿಸಿ ಬಾ" ಎನ್ನುತಾ ಚಾಣಕ್ಯ ಚಂದ್ರಗುಪ್ತನ ಕೈಗೆ ಇದನ್ನಿತ್ತ. ಚಂದ್ರಗುಪ್ತ ಮಿಂಚಿನಂತೆ ಅದರ ಹಿಂದಿನ ಭಾವ ಗ್ರಹಿಸಿ, ತಲೆದೂಗಿದ.

ಮರುದಿನ ಅರ್ಧರಾತ್ರಿಯಲ್ಲಿ ಇಂದುಶರ್ಮ ಯಜ್ಞೋಪವೀತವನ್ನು ಆಶ್ರಮದ ಅರಳೀ ಮರಕ್ಕೆ ಕಟ್ಟಿ, ವೃತ್ತಿಕಾ ಸ್ನಾನ ಮಾಡಿ, ತಲೆ ಹುಬ್ಬು ಮೊದಲಾಗಿ ಸರ್ವಾಂಗ ಕ್ಷೌರಮಾಡಿಕೊಂಡು ದಿಗಂಬರ ಜೈನಸಂನ್ಯಾಸಿ ಯಾಗಿ, ನವಿಲುಗರಿಯ ಪಿಂಛದೊಡನೆ ''ಜಿನೇಶ್ವರಾ...'' ಎನ್ನುತ್ತಾ ನಿಧಾನವಾಗಿ ಪಾಟಲೀಪುತ್ರದತ್ತ ಅಡಿಯಿಟ್ಟ. ಅವನ ಶಿಷ್ಯ ನಿತ್ಯೋಪ ವಾಸಿ, ಮಾಸೋಪವಾಸಿಗಳು ಮೊದಲೇ ಅತ್ತ ಹೊರಟಿದ್ದರು. ಚಾಣಕ್ಯನ ಅಪ್ತಶಿಷ್ಯ ಸಿದ್ಧಾರ್ಥಕನೂ ಸಹ !

ಅದರ ಮರುದಿನ ಚಂದ್ರಗುಪ್ತ ಕುದುರೆಯನ್ನೇರಿ ಅದೇ ದಿಕ್ಕಿನತ್ತ ಹೊರಟ. ಚಾಣಕ್ಯ ಮಧುರೆಯ ಸಂಕರ್ಷಣಾಲಯದ ಯಾತ್ರಿಕರ ಜೊತೆ ಗೂಡಿ ಹೊರಟ. ಆಶ್ರಮ ಖಾಲಿಯಾಯಿತು.

## ಐದನೆಯ ಅಧ್ಯಾಯ

# ಇಂದುಶರ್ಮ-"ಜೀವಸಿದ್ಧಿ"ಯಾದದ್ದು

ಜೈನ ಬಸದಿಗಳಲ್ಲಿ ಜೀವಸಿದ್ಧಿಗೆ ಅದ್ಧೂರಿಯಾದ ಸ್ವಾಗತ ದೊರೆಯಿತು. ಧನಿಕರಾದ ಜೈನ ವರ್ತಕರು ಅವನ ಪಾದಗಳಲ್ಲಿ ಹೊನ್ನಿನ ಮಳೆಯನ್ನೇ ಸುರಿದರು. ಹಸಿವಡಗಿಸುವ ಮೂಲಿಕೆಗಳನ್ನು ಚಾಣಕ್ಯನಿಂದ ಪಡೆದಿದ್ದ ಜೀವಸಿದ್ಧಿ ನಾಲ್ಕೋ ಐದೋ ದಿನಗಳಿಗೊಮ್ಮೆ ಹಗಲಲ್ಲಿ ಮಾತ್ರ ಒಂದು ತುತ್ತು ಅನ್ನ ಉಣ್ಣುವನು. ಸಂಜೆಯಾದೊಡನೆ ಮೌನ ವ್ರತ! ದೃಷ್ಟಿಯನ್ನು ಅತ್ತಿತ್ತ ಹಾಯಿಸದೆ, ಸದಾ ಧ್ಯಾನಾಸಕ್ತನಾದ ಅವನು ಜೈನಧರ್ಮವನ್ನೂ, ಪರಿಭಾಷೆಯನ್ನೂ ಹೃದ್ಗತಮಾಡಿಕೊಂಡಿದ್ದು ಬ್ರಾಹ್ಮಣರೂ ಅವನನ್ನು ಎಂತೂ ಗುರುತು ಹಿಡಿಯುವಂತಿರಲಿಲ್ಲ. ಅವರಿವರು ಕೊಟ್ಟ ಹೊನ್ನನ್ನು ಬಡಬಗ್ಗರಿಗೆ ಅಲ್ಲಿಂದಲ್ಲೇ ದಾನ ಮಾಡಿ "ಅಪರಿಗ್ರಹದ" ತತ್ತ್ವದ ಸಾಕಾರ ಮೂರ್ತಿಯಾಗಿದ್ದ.

ದಿನಾ ಪಾದ ಯಾತ್ರೆ ನಡೆದು ನಾಲ್ಕಾರು ದಿನಗಳಲ್ಲಿ ಜೀವಸಿದ್ಧಿ ಪಾಟಲೀಪುತ್ರಕ್ಕೆ ಸಮೀಪದ ಉದ್ಯಾನವನದಲ್ಲಿ ಬೀಡು ಬಿಟ್ಟ. ಜಿನ ಮುನಿಯ ಖ್ಯಾತಿ, ಶಕ್ತಿ, ವೈರಾಗ್ಯಗಳನ್ನು ಜನಜಂಗುಳಿ ಕಾಳ್ಗಿಚ್ಚಿನಂತೆ ಹಬ್ಬಿಸಿತು. ನಂದರೂ ಅಮಾತ್ಯರಾಕ್ಷಸನೂ ಚಾರರ ಮೂಲಕ ಇದನ್ನು ಕೇಳಿ ವಿಸ್ಮಿತರಾಗಿ, ಆಕರ್ಷಿತರಾಗಿ ಅತ್ತ ಒಮ್ಮೆ ಬಂದರು. ಎರಡು ಗಂಟೆ ಯಾದರೂ ಕಣ್ಣು ಬಿಡದ ಇವನ ಏಕಾಗ್ರತೆಗೆ ನಂದರು ಮರುಳಾದರೂ ರಾಕ್ಷಸ ಯುಕ್ತಿ ಮಾಡಿದ :-

"ದೊರೆಗಳೇ ! ಈತ ಯೋಗೀಶ್ವರನಿರಬೇಕು. ಇವನ ಶಿಷ್ಯರು ಇವ ನನ್ನು ಮಂತ್ರಶಾಸ್ತ್ರಬಲ್ಲವನೆನ್ನುತ್ತಾ ಪವಾಡಗಳನ್ನು ಉದಾಹರಿಸುತ್ತಾರೆ. ಇವನಿಗೆ ಜ್ಯೋತಿಷವೂ ಗೊತ್ತಂತೆ. ನಾನು ರಹಸ್ಯದಲ್ಲಿ ಇವನ ಕಪಟ ನಿಜ ಸ್ವಭಾವಗಳನ್ನು ಪರೀಕ್ಷಿಸಿ, ಸರಿಕಂಡು ಬಂದರೆ ನಿಮ್ಮ ಉಪಯೋಗಕ್ಕೆ ಬಳಸುವೆ" ಎಂದ ರಾಕ್ಷಸನಿಗೆ, ನಂದರು ''ನಿಮ್ಮ ಸಲಹೆ ಏರ್ಪಾಡುಗಳಿಗೆ ನಮ್ಮ ಪೂರ್ಣ ಸಮ್ಮತಿಯುಂಟು'' ಎಂದರು. ರಾಕ್ಷಸ ಹೇಳಿದಃ ''ಆ ಕಪಿ ಮುಖದ ಬ್ರಾಹ್ಮಣ ಈಗಾಗಲೇ ನಿಮ್ಮ ವಿರುದ್ಧ ಅಭಿಚಾರಿಕ ಕ್ರಿಯೆ ಗಳನ್ನು ಆರಂಭಿಸಿರುವನೆಂದು ಚಾರರ ಸಮಾಚಾರ ! ಅದೃಶ್ಯನಾಗಿ ಬಿಡುವ ವಿದ್ಯೆ ಅವನಿಗೆ ವಶವಿದೆಯಂತೆ!! ಹಾಗೇ ಪ್ರತಿಕ್ರಿಯೆ ಇಲ್ಲದೆ ಬಿಟ್ಟರೆ ಏನೆಲ್ಲ ಅವಾಂತರ ಮಾಡಿ ಬಿಡುವನೋ, ಹೇಳಲಾಗದು. ಸಮರ್ಥ ಮಂತ್ರ ವಾದಿ ದೊರೆತಿರುವಾಗ ಬಿಡಬಾರದು. ದೈವಯೋಗದಿಂದ ಒದಗಿದ ಸಹಾಯ ಇದು'' ಎಂದು. ನಂದರು ಜೀವಸಿದ್ಧಿಗೆ ವಂದಿಸಿ ಹೊರಟರು. ಮುನಿ ಕಣ್ಣು ತೆರೆಯುವುದಕ್ಕೆ ಇನ್ನೂ ಒಂದು ಗಂಟೆಯಿತ್ತು. ರಾಕ್ಷಸ ಅಲ್ಲೇ ಕುಳಿತಿದ್ದ. ಸೂರ್ಯಾಸ್ತಮಾನಕ್ಕೆ ಇನ್ನು ಅರ್ಧ ಗಂಟೆ ವೇಳೆ ಯಿತ್ತು. ಜನಚದುರಿತ್ತು.

ಹತ್ತಿರ ಬಂದ ರಾಕ್ಷಸ ತನ್ನ ಪರಿಚಯ ಮಾಡಿಕೊಂಡ : "ಮುನಿ ರತ್ನರೇ, ತಾವು ಇತ್ತ ಬಂದುದು ನಮ್ಮ ದೊರೆಗಳ ಭಾಗ್ಯ. ಅರಮನೆ ಯಲ್ಲಿ ಪಾದಪೂಜೆಗೆ ದಯಮಾಡಬೇಕು" ಎಂದು ಪ್ರಾರ್ಥಿಸಿದ. ಜೀವ

ಸಿದ್ಧಿ ಮಾಗಧೀ ಭಾಷೆಯಲ್ಲಿ "ವಿರಕ್ತರಾದ ನಮಗೆ ಅರಮನೆಯೂ ಒಂದೆ, ಸೆರೆಮನೆಯೂ ಒಂದೆ, ಬಯಲು, ಮಾಳಿಗೆ ಎಲ್ಲ ಒಂದೆ. ಸಕಲ ಜೀವ ಕ್ಷೇಮಕ್ಕಾಗಿ ನಮ್ಮ ಪರ್ಯಟನೆ." ಎಂದವನೇ, ಕೈಯ್ಯನ್ನು ಆಕಾಶ ದಲ್ಲೆಲ್ಲ ಆಡಿಸಿ, ಮೂಗಿನ ಹೊಳ್ಳೆಗಳನ್ನು ಆಗಾಗ ದೊಡ್ಡದು ಮಾಡಿ, ಉಸಿರೆಳೆಯುತ್ತಾ, "ಈ ನಗರದಲ್ಲಿ ಯಾರಾದರೂ ಮಾಂತ್ರಿಕರಿರುವರೋ? ಜನೋಪದ್ರವದ ಮಂತ್ರಜ್ವಾಲೆ ಬೀಸುತ್ತಿವೆ ? ಅರಸರು ಕ್ಷೇಮವಷ್ಟೆ?" ಎಂದು ದಿಢೀರನೆ ಪ್ರಶ್ನಿಸಿದ.

ರಾಕ್ಷಸನಿಗೆ ಹೊಟ್ಟೆಯಲ್ಲಿ ಬೆಂಕಿ ಬಿದ್ದ ಅನುಭವವಾಯಿತು! "ನಾನು ತಿಳಿದಂತೆಯೇ ನಡೆದಿದೆ !!" ಎಂದು ಒಳಗೇ ಅಂದುಕೊಂಡು, "ಪೂಜ್ಯ ಮುನಿಗಳೇ, ಈಗ ವಾರದ ಹಿಂದೆ ಒಬ್ಬ ಬ್ರಾಹ್ಮಣ ಸಿಡಿಮಿಡಿ ಗುಟ್ಟಿ, ಹುಚ್ಚು ಪ್ರತಿಜ್ಞೆಗಳನ್ನು ಮಾಡುತ್ತಾ ಅರಸರನ್ನು ದೂಷಿಸಿ ಹೊರ ನಡೆದ. ಅವನು ಮಂತ್ರವಾದಿ ಎನ್ನುತ್ತಾರೆ. ತಾವು...." ಎನ್ನುವಷ್ಟರಲ್ಲಿ, ಮತ್ತೆ ಧ್ಯಾನಾಸಕ್ತನಾದ ಮುನಿ, ಕ್ಷಣ ಬಿಟ್ಟು ಕಣ್ಣು ತೆರೆದು; "ಓಹೋ! ಅಂದು ದ್ವಾದಶೀ, ಹೌದೇ ! ಅದೋ ಬಂಗಾರದ ತಟ್ಟೆ!! ಕಪ್ಪು ಬಣ್ಣದ ಕುಳ್ಳ ಬ್ರಾಹ್ಮಣ! ಕೆದರಿದ ತಲೆಜುಟ್ಟು! ಕೋಳಿಕಾಲು; ಗೊಜ್ಜುಗೊರಲು ಧ್ವನಿ; ಹತ್ತು ಶಿಷ್ಯರು!! ಭೋಜನ ಸಮಯದಲ್ಲಿ ಅವನಿಗೆ ಅಪಮಾನ ವಾಗಿರಬೇಕು. ಹೌದೆ ? ಇಕೋ, ಈ ಅಂಜನ ಹಾಕಿದ ದೃಷ್ಟಿಗೆ ಕಾಣು ತ್ತಿದೆ.....ಅವನೊಡನೆ ಒಬ್ಬ ಅಮಾಯಕ ಯುವಕನೂ ಸೇರಿದ್ದಾನೆ..... ಬ್ರಾಹ್ಮಣನ ಅಭಿಚಾರ ಕರ್ಮ ಪ್ರಬಲವಾಗಿದೆ. ನನ್ನ ಕೈಲಾದ ಯತ್ನ ಮಾಡುತ್ತೇನೆ. ಏನು ವೇದವೋ ! ಏನು ಬ್ರಾಹ್ಮಣರೋ ! ಜನೇಶ್ವರಾ! ಜನೇಶ್ವರಾ !!" ಎನ್ನುತ್ತಾ ಮೇಲೆದ್ದು ಮೌನ ತಾಳಿದ.

ರಾಕ್ಷಸನಿಗೆ ಇವನ ಶಕ್ತಿ ಖಾತರಿಯಾಯಿತು. ದೀರ್ಘಪ್ರಣಾಮ ಮಾಡಿದ. ಅರಮನೆಯ ಪಲ್ಲಕ್ಕಿಯಲ್ಲಿ ಕೂಡಿಸಿ, ನಗರ ಪ್ರದಕ್ಷಿಣೆಯೊಂದಿಗೆ ಮುನಿಯನ್ನು ಅರಮನೆಯ ಅತಿಥಿ ಶಾಲೆಯಲ್ಲಿ ಬಿಡಾರ ಮಾಡಿಸಿ, ಶಿಷ್ಯ ರಿಗೂ ಸ್ವಾಗತಿಸಿ, ರಾಕ್ಷಸ ಜೀವಸಿದ್ಧಿಯ ಸ್ವಾಗತ ಮಾಡಿದ. ಊರಿನ

ಜೈನರಿಗೆಲ್ಲ ಹಬ್ಬವಾದಂತಾಯಿತು. ಅನ್ನಶಾಲೆಯನ್ನು ಮುಚ್ಚಿದ ಅನತಿ ಕಾಲದಲ್ಲೇ ಈ ಮುನಿಯು ನಗರ ಪ್ರದೇಶವಾಗಿದ್ದು ಬ್ರಾಹ್ಮಣರು ಕುಪಿತ ರಾದರೂ ಹಲ್ಲು ನುಂಗಿಕೊಂಡರು. ವೈದಿಕಾಭಿಮಾನೀ ವರ್ತಕರೂ ವರ್ಣಾಶ್ರಮಿಗಳೂ ಅಸಮಾಧಾನಗೊಂಡರು. ಆಶ್ರಯರಹಿತರಾದ ಅವರು ಏನೂ ಮಾಡುವಂತಿರಲಿಲ್ಲ.

ಮರುದಿನ ರಾಕ್ಷಸ ಜೀವಸಿದ್ಧಿಯನ್ನು ನಾನಾ ಪರೀಕ್ಷೆಗಳಿಗೆ ಗುರಿ ಮಾಡಿದ. ಅರಮನೆಯ ಗಣಿಕೆಯರನ್ನು ಇವನ ಉಪಚಾರಕ್ಕೆ ನಿಯಮಿಸ ಲಾಯಿತು. ಅರೆನಗ್ನ ಉಡುಪುಗಳಿಂದ, ಹಾವಭಾವ ವಿಲಾಸ ಪ್ರದರ್ಶನ ಗಳಿಂದ ಅವರು ಮುನಿಯ ಎಚ್ಚರಾವಸ್ಥೆಯಲ್ಲಿ ಅವನ ಮನಸೆಳೆಯಲು ಪ್ರಯತ್ನಿಸಿದರು. ಅವರ ವೇಷ, ಚರ್ಯೆಗಳನ್ನು ಗಮನಿಸಿದ ಜೀವಸಿದ್ಧಿ, ಮನದಲ್ಲೆ, ''ಓಹೋ, ಇವರು ವೇಶ್ಯೆಯರು! ಇವರ ವಿಲಾಸ ಚೇಷ್ಟಿತಗಳಲ್ಲಿ ವೃತ್ತಿಯ ಪರಿಣತಿ ಇರುವಂತಿದೆ! ಕುಲಸ್ತ್ರೀಯರಿಗೆ ಇವು ಹೇಗೆ ಬರಬೇಕು!" ಎಂದು ನಿಶ್ಚಯಿಸಿದವನೇ "ಎಲ, ಎಲ, ರಾಕ್ಷಸ, ನಾನು ಎಚ್ಚರವಾಗಿಯೇ ಇರುವೆನಷ್ಟೆ!!" ಎಂದು ನುಡಿದುಕೊಂಡನು. ಸಂಜೆಯತನಕ ಮೌನ ಧ್ಯಾನಾಸಕ್ತನಾಗಿದ್ದನ್ನು ಕಂಡು ಗಣಿಕೆಯರು ರಾಕ್ಷಸನಿಗರುಹಿದರು. ರಾಕ್ಷಸ ಆಶ್ಚರ್ಯಪಟ್ಟ! ಸಂಜೆ ಸ್ವಯಂ ನಂದ ಪತ್ನಿಯರೇ ಜಿನಮುನಿಯ ಸೇವೆಗೆಂದು ಬಂದರು. ದಿಗಂಬರನಾದ ಮುನಿ ಆಸನ ಬಿಟ್ಟೇಳಲೇ ಇಲ್ಲ! ಮೌನವನ್ನೂ ಮುರಿಯಲಿಲ್ಲ. ಉಪವಾಸ ಮುಂದುವರೆಯಿತು. ಮರು ದಿನ ರಾಕ್ಷಸ ಆಸ್ಥಾನದ ಜೈನ ಶಾಸ್ತ್ರ ವಿದ್ವಾಂಸರನ್ನು ಕರೆಯಿಸಿ ಮುನಿಯು ನಿಜ ಜೈನನೋ ಹೇಗೆಂದು ಪರೀಕ್ಷಿಸಲು ಹೇಳಿದ. ಅವರು ಅವನ ರೀತಿ ನೀತಿಗಳನ್ನು ಹತ್ತಿರದಿಂದಲೂ ದೂರದಿಂದಲೂ ಮೊದಲು ಪರೀಕ್ಷಿಸಿ, ಅವನ ಎಚ್ಚರಾವಸ್ಥೆಯಲ್ಲಿ ಜಿನಶಾಸ್ತ್ರ ಪರಿಚಯದ ಬಗೆಗೆ ನಾನಾ ಯುಕ್ತಿಗಳಿಂದ ಪರೀಕ್ಷಿಸಲಾರಂಭಿಸಿದರು.

ಅದರ ಮರುದಿನ ಬೆಳಗ್ಗೆ ಎಂದಿನಂತೆ ರಾಕ್ಷಸ ಮುನಿದರ್ಶನಕ್ಕೆ ಹೋಗಲು, ಜೀವಸಿದ್ಧಿಯು ಶಾಂತನಾಗಿಯೇ ಹೀಗೆಂದ; "ಅಮಾತ್ಯರೇ !

ಇನ್ನು ಕಪಟ ಸಾಕು; ನೀವು ನಮ್ಮನ್ನು ಪರೀಕ್ಷಿಸುತ್ತಿರುವಂತಿದೆ. ಅಂದು ಗಣಿಕೆಯರನ್ನು ನಮ್ಮ ಬಳಿ ಕಳುಹಿದಿರಿ. ಇಂದು ನಮ್ಮ ಶಾಸ್ತ್ರ ಪರೀಕ್ಷೆ ಆಯಿತು! ಇನ್ನಾವ ಪರೀಕ್ಷೆಗಳಿವೆ, ಹೇಳಿಬಿಡಿ. ವಿರಕ್ತರಾದ ನಮಗೆ ನಿಮ್ಮಿಂದಾಗಬೇಕಾದುದೇನು? ಲೋಕೋಪಕಾರಕ್ಕಾಗಿ ದೇಶಾಟನ ಮಾಡುತ್ತಿರುವ ನಮಗೆ ನಿಮ್ಮ ಅರಮನೆಯ ರಾಜವೈಭವ, ರಾಜೋಪಚಾರ ಬೇಕಾಗಿಲ್ಲ! ಜಿನೇಶ್ವರಾ!'' ಎನ್ನುತ್ತಾ ಹೊರ ನಡೆದೇ ಬಿಟ್ಟ!

ಅಮಾತ್ಯ ಕೆಲಸ ಕೆಟ್ಟಿತೆಂದು ಚಿಂತಿಸಿ "ಮಹಾತ್ಮರು ಕ್ಷಮಿಸಬೇಕು; ಅರಮನೆಯ ಗೌರವಕ್ಕನುಗುಣವಾಗಿ ತಮಗೆ .ಉಪಚರಿಸಲಾಯಿತು. ಸ್ತ್ರೀಯರು ಇಲ್ಲಿ ಬರುವುದು ಬೇಡವಾದರೆ, ಅಪ್ಪಣೆ. ನಿಲ್ಲಿಸುತ್ತೇನೆ. ಇನ್ನು ನಮ್ಮ ಆಸ್ಥಾನಪಂಡಿತರು ಸ್ವಯಂ ಪ್ರೇರಣೆಯಿಂದ ತಮ್ಮ ಜ್ಞಾನ ಬೆಳೆಸಿಕೊಳ್ಳಲು ತಮ್ಮನ್ನಾಶ್ರಯಿಸ ಬಂದವರು. ಅದರಲ್ಲೇನು ಪರೀಕ್ಷೆ? ವಿದ್ವಾಂಸನು ವಿದ್ವಾಂಸನನ್ನು ಕಂಡಾಗಲೆಲ್ಲ ನಡೆಯುವ ವ್ಯವಹಾರವಷ್ಟೆ? ಎಲ್ಲ ಮತದ ಪಂಡಿತರೂ ಅಷ್ಟೆ ತಾನೇ? ವಿದ್ವಾಂಸರ ಭೇಟಿಯೂ ತಮಗೆ ಇಷ್ಟವಲ್ಲದಿದ್ದರೆ ತಮ್ಮ ಏಕಾಂತಕ್ಕೆ ಯಾವ ಭಂಗವೂ ಇಲ್ಲದಂತೆ ವ್ಯವಸ್ಥೆ ಮಾಡಲಾಗುವುದು" ಎಂದು ಭರವಸೆಯಿತ್ತು, ಮುನಿಯನ್ನು ಕರೆತಂದಾಯ್ತು.

ಪ್ರಸನ್ನನಾದ ಜೀವಸಿದ್ಧಿಯನ್ನು ನಾಲ್ಕಾರು ದಿನ ಯಾರೂ ಭೇಟಿಯಾಗಲಿಲ್ಲ. ಈ ಪ್ರಸಂಗದಿಂದ ರಾಕ್ಷಸನಿಗೆ ಮುನಿಯ ವಿಷಯದಲ್ಲಿ ಗೌರವ ಹೆಚ್ಚೇ ಆಯಿತು.

ಜೀವಸಿದ್ಧಿಗೆ ಅರಮನೆಯ ಆವರಣದಲ್ಲೇ ಪ್ರತ್ಯೇಕ ಆಶ್ರಮ ವ್ಯವಸ್ಥೆ ಆಯಿತು. ಅವನಿಗೂ ಅವನ ಶಿಷ್ಯರಿಗೂ ಬೇರೆ ಗೋಕ್ಷೀರ, ಹಣ್ಣುಹಂಪಲು ವ್ಯವಸ್ಥೆಯಾದವು. ಆಗಾಗ ನಂದರು ಬರುವುದೂ, ಆಶ್ರಮದಲ್ಲಿ ಅವರಿಗೂ ಮುನಿಯ ವತಿಯಿಂದ ಹಾಲುಹಣ್ಣು ಆಶೀರ್ವಾದವೂ ಪದ್ಧತಿಯಾಯಿತು. ಮುನಿ ಪ್ರಸಾದವೆಂದು ಅವರೂ ಶ್ರದ್ಧೆಯಿಂದ ಸ್ವೀಕರಿಸಲಾರಂಭಿಸಿದರು.

ಚಾಣಕ್ಯ ತನ್ನ ವಿಷಯದಲ್ಲಿ ಈಗ ಏನು ನಡೆಸುತ್ತಿರುವನೋ ಎಂದು ತಿಳಿಯಲು ಕುತೂಹಲ; ಅದಕ್ಕೆ ಪ್ರತಿಕ್ರಿಯೆ ನಡೆಸಬೇಕೆಂಬ ಉತ್ಸುಕತೆ ಇನ್ನೊಂದು ಕಡೆ; ಹೇಳಲು ಕಷ್ಟ. ರಾಕ್ಷಸನನ್ನೊಮ್ಮೆ 'ಛೂ' ಬಿಟ್ಟರು. ಇತ್ತ ಯಾವ ಗೂಢಚಾರನಿಂದಲೂ ಎಲ್ಲೂ ಚಾಣಕ್ಯ ಚಂದ್ರಗುಪ್ತರ ಸಮಾಚಾರವಿಲ್ಲವಾಯಿತು.

"ಮಹಾತ್ಮರೆ, ಆ ಕುರೂಪಿ ಬ್ರಾಹ್ಮಣ ಈಗ ಏನು ನಡೆಸಿರುವನು?" ಎಂದೊಮ್ಮೆ ಲೋಕಾಭಿರಾಮವಾಗೆಂಬಂತೆ ರಾಕ್ಷಸ ನಂದರೆದುರು ಮುನಿಯನ್ನು ಪ್ರಶ್ನಿಸಿದ. ಮುನಿ ಅಂಜನ ತರಿಸಿ ಕಣ್ಣಿಗೆ ಹಾಕಿಕೊಂಡು ''ಅಂ! ಅಯ್ಯೋ, ಪ್ರಬಲವಾದ ಒಂದು ಅಭಿಚಾರ ಕೃತ್ಯವನ್ನವನು ಆರಂಭಿಸಿರುವಂತಿದೆ. ಆದರೆ ಈ ರಾಷ್ಟ್ರದಲ್ಲಿ ಅವನಿಲ್ಲ. ಪಶ್ಚಿಮಕ್ಕೆ ಎಲ್ಲೋ ಇದ್ದಾನೆ'' ಎಂದವನೇ ಕೊಂಚ ಕಣ್ಣುಮುಚ್ಚಿ, ''ಇಂದು ರಾತ್ರಿ ನಂದರಿಗೆ ಮೃತ್ಯು ಬಾಧೆ ಇದೆ. ಇಕೋ, ಈ ಭಸ್ಮವನ್ನು ಕಲೆಸಿ ಈ ಹಾಲನ್ನು ಕುಡಿಸಿರಿ; ಮೃತ್ಯು ನಿವಾರಣೆಯಾಗುವುದು'' ಎನ್ನುತ್ತಾ ಜ್ವರ ಉಂಟು ಮಾಡುವ ಭಸ್ಮವೊಂದನ್ನು ಹಾಲಿನಲ್ಲಿ ಬೆರೆಸಿ ನಂದರಿಗೆ ಪ್ರಾಶನ ಮಾಡಿಸಿದ.

ರಾತ್ರಿ ಅವರಿಗೆ ಜ್ವರ ಬಂದು ಬಳಲಿದರು; ಮಾರುದಿನ ರಾಕ್ಷಸನಿಂದ ದನ್ನರಿತು ಜೀವಸಿದ್ಧಿ "ಅಮಾತ್ಯ! ಪ್ರಾಣವೇ ಹೋಗುವುದರಲ್ಲಿತ್ತು! ಸದ್ಯ, ಜ್ವರದಲ್ಲಿ ಹೋಯಿತು ! ಈ ಕಷಾಯ ಕುಡಿದರೆ ಆ ಜ್ವರವೂ ಹೋಗುತ್ತ" ಎಂದವನೇ, ಕಷಾಯವೊಂದನ್ನು ಕೊಟ್ಟು, "ನನ್ನ ಭಸ್ಮಕ್ಕೆ ಆ ಜ್ವರ ಸಹ ಬರಬಾರದಿತ್ತು! ನನ್ನ ಮಂತ್ರ ಔಷಧಗಳು ಕೆಲಸ ಮಾಡದಂತೆ ಈ ಅರಮನೆಯ ಆವರಣದಲ್ಲಿ ಯಾವುದೋ ಪ್ರೇತಶಕ್ತಿ ಇರುವಂತಿದೆ; ಎಲ್ಲೆಂದು ಶೋಧಿಸಬೇಕಾಗಿದೆ; ಶೋಧಿಸಿ ಹೇಳುವಿರಾ ?'' ಎಂದು ಕೇಳಿದ.

ರಾಕ್ಷಸನಿಗೆ ದಿಗ್ಭ್ರಾಂತಿಯಾಯಿತು. "ಶಿವ ಶಿವ! ಪ್ರೇತ ಶಕ್ತಿಯೇ!! ಅರಮನೆಯಲ್ಲೇ !! ಅಸಂಭವ !!!" ಎಂದು ಕಿವಿಗಳನ್ನು ಕೈಯ್ಯಿಂದ

ಮುಚ್ಚಿದ. ಜೀವಸಿದ್ಧಿ ಧೃತಿಗೆಡಲಿಲ್ಲ. ''ಅಮಾತ್ಯರೇ ! ಶಾಸ್ತ್ರ, ಮಂತ್ರ ಶಕ್ತಿ, ಸುಳ್ಳಾಗದು ! ನಿಮಗೆ ಗೊತ್ತಿಲ್ಲ. ತಿಳಿದವರನ್ನು ಕೇಳಿ" ಎಂದವನೇ ಧ್ಯಾನಾಸಕ್ತನಾದ.

ರಾಕ್ಷಸ ನಂದರಿಗಿದನ್ನರುಹಿದ. ನಂದರಿಗೂ ಭಯವಾಯಿತು ! ಎಲ್ಲಿಂದಲೋ ಪ್ರೇತಶಕ್ತಿಗಳನ್ನು ಚಾಣಕ್ಯ ಇಲ್ಲಿ ತಂದು ಪ್ರತಿಷ್ಠಿಸಿರಬಾರದೇಕೆ?'' ಎನ್ನಿಸಿತು. ಒಳಗಿನ ಪ್ರೇತಶಕ್ತಿಯಿಲ್ಲದಿದ್ದರೆ ಹೊರಗಿನವು ಕೆಲಸ ಮಾಡಲಾರವು ಎಂದೂ, ಅರಮನೆಯಲ್ಲೆಲ್ಲೋ ಗುಪ್ತವಾಗಿ ಅದು ಇರಬೇಕೆಂದೂ ಕ್ಷಪಣಕ ಪಟ್ಟು ಹಿಡಿದು ಹೇಳಿದ.

''ತಾವೇ ಅರಮನೆಯನ್ನು ಶೋಧಿಸಿ, ಅದು ಎಲ್ಲಿದೆಯೆಂದು ತೋರಿಸಬೇಕು" ಎಂದು ನಂದರು ರಾಕ್ಷಸನ ಮೂಲಕ ಬಿನ್ನವಿಸಿದರು.

ಜೀವಸಿದ್ಧಿ ಅರಮನೆಗೆ ಬಂದು ಹದಿನೈದು ದಿನಗಳ ಮೇಲಾಗಿದ್ದುವು. ಒಂದುದಿನ ರಾಕ್ಷಸನ ಕೋರಿಕೆಯಂತೆ ಜೀವಸಿದ್ಧಿ, ಒಂದು ಎಲುಬು ತುಂಡನ್ನು ಕೈಯ್ಯಲ್ಲಿ ಹಿಡಿಯುತ್ತ ಅರಮನೆಯ ಒಂದೊಂದೂ ಅಂಕಣವನ್ನು ಕೊಠಡಿಯನ್ನೂ ಪರೀಕ್ಷಿಸುವ ನಾಟಕ ಮಾಡಿದ. ಮೂಸಿ ನೋಡುತ್ತ, ಕಣ್ಣರಳಿಸುತ್ತ ''ಹಾ, ಹೂ" ಎನ್ನುತ್ತಾ, ಕುಣಿಯುತ್ತ, ಒಂದು ಕಡೆ ಪ್ರೇತಶಕ್ತಿ ಹೆಚ್ಚಿದೆಯೆಂದೂ, ಮತ್ತೊಂದು ಕಡೆ ಕಮ್ಮಿಯಾಗಿದೆಯೆಂದೂ ಹೇಳುತ್ತಾ, ರಾಕ್ಷಸ ನಂದರೊಡಗೂಡಿ, ಕ್ರಮವಾಗಿ ಮಹಾಪದ್ಮನ ಮೊದಲ ಶಯ್ಯಾಗೃಹ–ಮಹಾನಂದಿಯ ಕೊಲೆಯಾದ ಹಳೆಯ ಶಯ್ಯಾಗೃಹಕ್ಕೆ ಬಂದು, ಹುಚ್ಚನಂತೆ ಕುಣಿಯುತ್ತ, ಬಾಯಲ್ಲಿ ನೊರೆಬರಲಾರಂಭಿಸಿ, ನೋಡಿದವರಿಗೆ ಮಹಾಭಯ ಬರುವಂತೆ, ಪಿಂಛವನ್ನೂ ದೂರಕ್ಕೆ ಎಸೆದು, ತನ್ನ ದಿಗಂಬರ ದೇಹವನ್ನು ವಿಕಟವಾಗಿ ಪ್ರದರ್ಶಿಸುತ್ತಾ ನಗ್ನ ನೃತ್ಯ ಮಾಡಿ ದಣಿದು; ''ಇಕೋ, ಈ ಶಯ್ಯಾಗೃಹದ ಕೆಳಗೇ ಎಲ್ಲೋ ಆ ಪ್ರೇತವಿದೆ! ಬ್ರಾಹ್ಮಣನ ಪ್ರೇತ! ಇಲ್ಲಿ ಕೊಲೆ ನಡೆದುದುಂಟೋ?" ಎಂದು ಕೇಳಿಬಿಟ್ಟ! ನಂದರಿಗೆ ಜೀವವೇ ಬಾಯಿಗೆ ಬಂದಂತಾಯಿತು. ರಾಕ್ಷಸ ನಂಬಲಿಲ್ಲ!

"ಹಳೆಯ ತಲೆಮಾರಿನವರಾರೂ ಬದುಕಿಲ್ಲವೊ? ಹೋಗಿ ಕೇಳಿ ಬನ್ನಿ'' ಎಂದು ಮುನಿ ಹೇಳಿದ. ಮಹಾಪದ್ಮನಿದ್ದ ಆಶ್ರಮಕ್ಕೆ ಹೋಗಲು ರಾಕ್ಷಸ ಯೋಚಿಸಿದ. ಹೋಗಿಯೂ ಮಾಡುವುದೇನು? ಅವನೀಗ ಮಾತಿಲ್ಲದವ ನಲ್ಲವೆ? ಎಂದು ಸಮಾಧಾನ ತಂದುಕೊಂಡ. "ಪೂಜ್ಯರು ತಾವೇ ಅದೆಲ್ಲಿ ದೆಯೋ ನೋಡಿ ಹೇಳಬೇಕು.'' ಎಂದು ಪ್ರಾರ್ಥಿಸಿದ.

ಜೀವಸಿದ್ಧಿ ''ಈ ಕೊಠಡಿಗೆ ನೆಲಮಾಳಿಗೆಯುಂಟೊ ?" ಎಂದು ಕೇಳಿದ. ನಂದರು ರಾಕ್ಷಸನ ಮುಖ ನೋಡಿದರು ! "ಹೌದು'' ಎಂದ ಮೇಲೆ ಎಲ್ಲರೂ ಅಲ್ಲಿ ಕೂಡಿ, ನೆಲ ಅಗೆಯುವವರನ್ನು ಕರೆಸಿ, ಜೀವಸಿದ್ಧಿ ಎಲುಬಿನಿಂದ ಗೆರೆ ಹಾಕಿದ ಕಡೆಯಲ್ಲಿ ಅಗೆಸಿದರು. ಬ್ರಾಹ್ಮಣ ಯುವಕ ನೊಬ್ಬನ ಅಸ್ಥಿಪಂಜರ ಅಲ್ಲಿ ಕಾಣಿಸಿಕೊಂಡಿತು. ಅವನ ಕೈಯ್ಯಲ್ಲಿದ್ದ ಉಂಗುರದ ಮೇಲೆ ''ವಿನಯ'' ಅಕ್ಷರಗಳು ದೇವನಾಗರ ಲಿಪಿಯಲ್ಲಿ ಕೆತ್ತಿ ದ್ದವು!! ರಾಕ್ಷಸನಿಗೆ ಎಡೆಯೊಡೆಯಿತು! ಇವನು ಶಕಟಾಯನನ ಮಗನೆಂಬು ದರಲ್ಲಿ ಸಂದೇಹ ಬರಲಿಲ್ಲ. ಮಹಾಪದ್ಮನ ಕೃತ್ಯ ಇದೆಂಬುದೂ ಅರಿ ವಾಯಿತು ! ಇದನ್ನೆಲ್ಲ ಕರಾರುವಾಕ್ಕಾಗಿ ಪತ್ತೆ ಹಚ್ಚಿದ ಕ್ಷಪಣಕನ ನೈಪುಣ್ಯಕ್ಕೆ ಮನಸ್ಸಿನಲ್ಲೇ ಮೆಚ್ಚಿ ತಲೆ ಬಾಗಿದ. ಜೀವಸಿದ್ಧಿಯ ಪ್ರಾಮಾಣಿ ಕತೆ, ಮಂತ್ರಶಕ್ತಿ, ವಿರಕ್ತಿಗಳಲ್ಲಿ ಅಚ್ಚಳಿಯದ ನಂಬುಗೆಯುಂಟಾಯಿತು.

"ಪೂಜ್ಯರು ಕ್ಷಮಿಸಬೇಕು. ಇನ್ನು ತಮ್ಮನ್ನು ಪರೀಕ್ಷಿಸಲಾರೆ ! ಈ ವಿಷಯ ತಮ್ಮಲ್ಲೇ ಗೂಢವಾಗಿರಬೇಕು?" ಎಂದವನೇ, "ಈಗ ಈ ಅಸ್ಥಿಪಂಜರವನ್ನೇನು ಮಾಡೋಣ ?" ಎಂದು ಕೇಳಿದ.

ಮುನಿ ಹೇಳಿದ: ''ನಮಗೆ ಎಲ್ಲ ಪುದ್ಗಲ (ಜೀವ)ಗಳೂ ಒಂದೇ; ಸಂಸ್ಕಾರವಿದ್ದರೆ ಜೈನ ಎನ್ನುತ್ತೇವೆ. ಸಂಸ್ಕಾರವಿಲ್ಲವಾದರೆ ಬ್ರಾಹ್ಮಣ ಎನ್ನುತ್ತೇವೆ. ಅದರ ಪಾಡಿಗೆ ಅದನ್ನು ಬಿಡಬೇಕು. ಶರೀರ ಬ್ರಾಹ್ಮಣ ನದಾದ್ದರಿಂದ ಈ ಮೂಳೆಗಳಿಗೆ ಅನಾಥ ಪ್ರೇತ ಸಂಸ್ಕಾರವನ್ನು ಬ್ರಾಹ್ಮಣರ ಕೈಲಿ ಮಾಡಿಸಿ ಬಿಡಿ" ಎನ್ನುತ್ತಾ, ಆ ಉಂಗುರವನ್ನು ತರಿಸಿಕೊಂಡು

''ಇದು ನನ್ನಲ್ಲಿರಲಿ; ಪ್ರೇತಕ್ಕೆ ಸಂಸ್ಕಾರ ಸರಿಯಾಗದಿದ್ದರೆ ಮತ್ತೆ ಬಾಧಿಸುವುದುಂಟು. ಆಗ ಪ್ರತಿಕ್ರಿಯೆಗೆ ಇದು ಬೇಕಾಗುತ್ತದೆ'' ಎನ್ನುತ್ತಾ ಶಿಷ್ಯನ ಕೈಲಿ ಕೊಟ್ಟು ಸಂದೂಕಕ್ಕೇರಿಸಿದ. ರಾಕ್ಷಸನಿಗೆ ಒಂದು ಕ್ಷಣ ಚಿಂತೆಯಾದರೂ, "ಹಳೆಯ ಈ ಸಮಾಚಾರದಿಂದ ಈ ವಿರಕ್ತನಿಗೇನು ಲಾಭ? ಇದರಿಂದೇನೂ ರಾಜಕಾರ್ಯ ಕೆಡದು" ಎಂದು ನೆಮ್ಮದಿಯಾದ.

ಅದಾದ ಮೇಲೆ ನಂದರಿಗೆ ಸರಿಯಾಗಿ ನಿದ್ರೆ ಬರಲಾರಂಭಿಸಿತು. ಚಾಣಕ್ಯನನ್ನು ಮರೆತರು. ರಾಕ್ಷಸ ನೆಮ್ಮದಿಯ ನಿಟ್ಟುಸಿರಿಟ್ಟ.

ಈ ನಡುವೆ ಒಂದು ದಿನ ಚಾಣಕ್ಯನ ಕಿರಿಯ ಶಿಷ್ಯನೂ ಕುಶಾಗ್ರಮತಿಯೂ ವಟುವೂ ಸ್ಫುರದ್ರೂಪಿಯೂ ಆದ ಸಿದ್ಧಾರ್ಥಕನು ಪಾಟಲೀಪುತ್ರಕ್ಕೆ ಬಂದು ರಹಸ್ಯದಲ್ಲಿ ಭಾಗುರಾಯಣನೆಂಬ ಸೇನಾಪತಿಯನ್ನು ಕಂಡನು. "ಏನಯ್ಯಾ! ವಟುವೆ?" ಎಂದ ಸೇನಾಪತಿಗೆ ಅವನು "ಒಡೆಯರೆ, ನನ್ನ ಮಾತಾಪಿತೃಗಳಿಬ್ಬರೂ ತೀರಿಕೊಂಡರು. ಕುಲಕ್ರಮಾಗತವಾದ, ಅಧ್ಯಯನವನ್ನು ಮಾಡೋಣವೆಂದರೆ ಸಮರ್ಥ ಅಧ್ಯಾಪಕ ಬ್ರಾಹ್ಮಣರೆಲ್ಲ ರಾಷ್ಟ್ರಬಿಟ್ಟು ಹೋಗಿರುವರು. ಉಳಿದವರು ಹೇಳಿಕೊಡಲು ಸಮರ್ಥರಿಲ್ಲ. ನನ್ನ ಪುಣ್ಯಕ್ಕೆ ಒಬ್ಬರು ದೊರೆತಿರುವರು; ಅವರೂ ಊರು ಬಿಡುವ ಸ್ಥಿತಿಯಲ್ಲಿದ್ದರು. "ಆಶ್ರಯವಿಲ್ಲದೆ ಹೇಗೆ ಬದುಕಲಿ?" ಎನ್ನುತ್ತಿದ್ದಾರೆ, ತಮ್ಮ ಚಿತ್ತಕ್ಕೆ ಬಂದರೆ ಅವರಿಗೆ ತಮ್ಮಲ್ಲಿ ಆಶ್ರಯಕೊಟ್ಟು ನನಗೆ ಅಧ್ಯಯನ ಮಾಡಿಸುವಂತೆ ಏರ್ಪಡಿಸಬೇಕು; ನಾನೋ ಅನಾಥ; ಅವರು ತಮ್ಮಂಥ ವೇದಾಭಿಮಾನೀ ನಾಥನಿದ್ದರೂ ಅನಾಥಪ್ರಾಯರು; ಈ ರಾಷ್ಟ್ರದಲ್ಲಿ ವೇದವನ್ನೂ ವೈದಿಕರನ್ನೂ ಕೇಳುವರಾರು ? ಮೌರ್ಯರಾಯರು ತೀರಿಕೊಂಡ ಮೇಲೆ ಬ್ರಾಹ್ಮಣರಿಗೆ ಈ ದುರ್ಗತಿಯೇ!'' ಎನ್ನುತ್ತಾ ಬಿಕ್ಕಿಬಿಕ್ಕಿ ಅತ್ತನು. ಎಳೇ ಹೃದಯದ ಭಾಗುರಾಯಣನ ಕಣ್ಣಲ್ಲೂ ನೀರು ಬಂತು! "ಎಲೋ ವಟುವೆ? ಈ ನಾಸ್ತಿಕ ಕಾಲದಲ್ಲೂ ವೇದಾಧ್ಯಯನಕ್ಕೆ ಇಷ್ಟು ಔತ್ಸುಕ್ಯವಿರುವ ವಟುಗಳುಂಟೋ ! ಯಾರವರು ನಿನಗೆ ಅಧ್ಯಯನ ಮಾಡಿಸಬಲ್ಲವರು ?'' ಎಂದು ಕೇಳಿದ್ದಕ್ಕೆ, ಅನತಿದೂರದ ವೃಕ್ಷದಡಿಯಲ್ಲಿ ಕುಳಿತು

ವೇದೋಚ್ಚಾರ ಮಾಡುತ್ತಿದ್ದ ವೇಗಶರ್ಮನೆಂಬ ಚಾಣಕ್ಯಶಿಷ್ಯನನ್ನು ಸಿದ್ಧಾರ್ಥಕ ತೋರಿದ. "ಇವರು ನೈಷ್ಠಿಕ ಬ್ರಹ್ಮಚಾರಿಗಳು. ವಿರಕ್ತರು. ಇವರು ಮಹಾ ಮಂತ್ರ ಶಕ್ತಿಯನ್ನೂ ಉಳ್ಳವರು'' ಎಂದು ವಟುವು ಹೇಳಲು ಬಾಗುರಾಯಣನು ಅವರನ್ನು ಬಳಿಸಾರ್ದು, ಅಭಿವಂದಿಸಿ, "ನಮ್ಮ ಬಿಡಾರದಲ್ಲಿರುತ್ತಾ ಈ ವಟುವಿಗೆ ಅಧ್ಯಯನ ಮಾಡಿಸಬೇಕು. ತಮ್ಮ ಬ್ಬರ ಯೋಗಕ್ಷೇಮ ನನ್ನದು" ಎಂದು ಕೋರಿದನು. ವೇಗಶರ್ಮ ''ತಥಾಸ್ತು! ಶ್ರೀ ಜನಾರ್ದನಃ ಪ್ರೀಯತಾಂ,'' ಎನ್ನುತ್ತಾ, ಜಪಮಾಲೆ ಹಿಡಿದ ಕೈಯಲ್ಲಿ ಅವನನ್ನಾಶೀರ್ವದಿಸಿದ. ಚತುರನಾದ ಸಿದ್ಧಾರ್ಥಕ ಬಾಗುರಾಯಣನಿಗೂ ಸಣ್ಣಪುಟ್ಟ ಕೆಲಸಗಳನ್ನೂ ಮಾಡಿಕೊಡುತ್ತಾ, ಅವನ ಮನಸ್ಸನ್ನು ವಶೀಕರಿಸಿಕೊಂಡು, ವೇಗಶರ್ಮನೊಂದಿಗೆ ಅರಮನೆಯ ಗೂಢಚರ್ಯೆಯನ್ನೂ ಜಾಗರೂಕನಾಗಿ ನಾಡುತ್ತಾ, ಆಗಾಗ ಜೀವ ಸಿದ್ಧಿಯ ಬಳಿಯೂ ಸುಳಿಯುತ್ತ, ರಾಕ್ಷಸನೂ ನಂದರೂ ಕ್ಷಪಣಕನ ಬಲೆ ಯಲ್ಲಿ ಬಿದ್ದ ಬಗೆಯನ್ನೂ, ನಾನಾ ವಿಷಯಗಳನ್ನೂ ಸಂಗ್ರಹಿಸಿ, ಚಾಣಕ್ಯ ನಿಗೆ ತಿಳಿಸಲು ಸಮಯ ಕಾಯುತ್ತಿದ್ದರು.

ವಟುವಿನ ಚಟುವಟಿಗೆ ಬಾಗುರಾಯಣ ಮೆಚ್ಚಿದ. ಆಗಾಗ ವೇಗ ಶರ್ಮ ಅವನೊಡನೆ ಮಾತಾಡುವನು. ''ಸೇನಾನಿಯೇ! ಇದು ಜರಾಸಂಧನ ಮಗಧವಲ್ಲವೆ? ಅಂದು ಮೂರ್ಧಾಭಿಷಿಕ್ತ ದೊರೆಗಳನ್ನೇ ಸೆರೆಯಲ್ಲಿಟ್ಟು, ಶಂಕರನಿಗೆ ಬಲಿಕೊಡುವ ರಾಕ್ಷಸ ಇಲ್ಲಿ ಆಳಿದ ಪರಿಣಾಮ ! ಕ್ಷತ್ರಿಯರಿಗೂ, ಅವರನ್ನಾಶ್ರಯಿಸಿದ ಬ್ರಾಹ್ಮಣರಿಗೂ ಉಳಿಗಾಲವೆಲ್ಲಿ? ಎಲ್ಲೋ ತಮ್ಮಂಥ ಒಬ್ಬ ಉತ್ತಮ ಕ್ಷತ್ರಸಂಭೂತರುಂಟು ! ನಂದರನ್ನು ನೋಡಿದರೆ, ಶೂದ್ರ ನಾದ ಮೌರ್ಯನೇ ವಾಸಿ'' ಎನ್ನುತ್ತಾ ಬಾಗುರಾಯಣನಿಗೆ ನಂದರಲ್ಲಿ ತಿರ ಸ್ಕಾರ ಬೆಳೆಸುವ, ಮೌರ್ಯಭಕ್ತಿಯನ್ನು ಕೆಣಕುವ ಮಾತನ್ನಾಡುವನು. ಮೊದಮೊದಲು ಉತ್ತರಿಸದ ಬಾಗುರಾಯಣ ಕ್ರಮೇಣ ಮೌರ್ಯ ಸ್ತುತಿಗೆ ಕರಗಿ, ಕಣ್ಣೀರು ಹಾಕುವನು. ''ಪಾಪ! ಸಾತ್ವಿಕನಾದ ಚಂದ್ರಗುಪ್ತ ನಿಗೂ ಈ ನೆಲದ ಋಣ ತೀರಿತು !! ಎಲ್ಲಿ ಹೋಗಿ ಪಾಡುಪಡುತ್ತಿದ್ದಾ ನೆಯೋ !'' ಎಂದೊಮ್ಮೆ ಉದ್ಗರಿಸಿದ.

ಅಂದು ರಾತ್ರಿ, ಚಂದ್ರಗುಪ್ತನು ಬಲಗುಪ್ತನ ಕುದುರೆಯೇರಿ, ಅವನು ಕೊಟ್ಟ ಚಿಹ್ನಿತಶಬ್ದ ಮುದ್ರಿಕೆಯನ್ನುಚ್ಚರಿಸಿ ವಿಶ್ರಾಂತಿಯಲ್ಲಿದ್ದ ಬಾಗು ರಾಯಣನಿಗೆ ಕಾಣಿಸಿಕೊಂಡನು. ವೇಷಭೂಷಣಗಳಿಂದ ಒಂದು ಕ್ಷಣ ಚಂದ್ರಗುಪ್ತನನ್ನು ಅವನು ತಿಳಿಯಲೇ ಇಲ್ಲ. "ಏನು?" ಎಂದು ಸಾಮಾನ್ಯ ಚಾರನನ್ನು ಕೇಳುವಂತೆ ಕೇಳಿದ. ಶಿರಸ್ತ್ರಾಣವನ್ನು ಚಂದ್ರಗುಪ್ತ ತೆಗೆದ ಮೇಲೆ "ಏನು, ಚಂದ್ರಗುಪ್ತನೇ !! ಎಲ್ಲಿಂದ ಬಂದೆಯಪ್ಪ! ಅಯ್ಯೋ, ಈ ಸ್ಥಳ ರಹಸ್ಯವಲ್ಲವಲ್ಲ!!" ಎನ್ನುತ್ತಾ ಅವನನ್ನು ಕೈ ಹಿಡಿದೆಳೆದು ಒಳ ಕೊಠಡಿಯೊಂದಕ್ಕೆ ಕರೆದೊಯ್ದು ಅವನ ಯೋಗಕ್ಷೇಮವನ್ನೆಲ್ಲ ಅಕ್ಕರೆ ಯಿಂದ ವಿಚಾರಿಸಿದ.

ಚಂದ್ರಗುಪ್ತ ತನಗೆ ಮಗಧದ ಋಣ ಹೀಗೆ ತೀರಿದುದಕ್ಕೆ ಕಣ್ಣೀರು ಹಾಕಿದ. ಬಾಗುರಾಯಣ: "ನಿನ್ನ ತಂದೆ ತಾತಂದಿರ ಋಣವನ್ನಿನ್ನೂ ತೀರಿಸುವುದಿದೆ. ನಾನು ಮಾತ್ರವಲ್ಲ; ಭದ್ರಭಟ, ಡಿಂಗಿರಾತ, ಬಲ ಗುಪ್ತ ಮೊದಲಾದವರೆಲ್ಲರೂ ಸಹ. ಇಲ್ಲಿದ್ದೂ ನಮ್ಮಿಂದ ನಿನಗೇನೂ ಸಹಾಯವಾಗಲಿಲ್ಲ. ನಾವು ನಿಷ್ಕಾರಣವಾಗಿ ಬಿಟ್ಟು ಹೋಗುವಂತೆಯೂ ಇಲ್ಲ. ಕ್ರೂರಿಗಳಾದ ನಂದರು ರಾಕ್ಷಸನ ತಂತ್ರಗಳಿಂದ ಎಲ್ಲಿದ್ದರಲ್ಲಿ ನಮ್ಮನ್ನು ಕೊಲ್ಲಿಸಿಯಾರು. ಇರುವುದಕ್ಕೂ ಇಲ್ಲ, ಹೋಗುವುದಕ್ಕೂ ಇಲ್ಲವಾಗಿದೆ," ಎಂದು ಪೇಚಾಡಿಕೊಂಡ. ಚಂದ್ರಗುಪ್ತ : "ಇದಿರಲಿ, ಸೇನಾಪತಿಗಳೇ! ಈ ಹಾಳು ರಾಜ್ಯ ಯಾರಿಗೆ ಬೇಕಾಗಿದೆ? ನನ್ನ ತಂದೆ ತಾತಂದಿರು ಎಷ್ಟು ಧಾರ್ಮಿಕರು, ನೀವು ಬಲ್ಲಿರಷ್ಟೆ. ನಾಡಿನ ದೇವಾಲಯಗಳೆಲ್ಲ ಅವರಿದ್ದಾಗ ಚೆನ್ನಾಗಿದ್ದುವು. ಪ್ರಯಾಗೆಯ ಬಳಿಯ ವ್ಯಾಘ್ರಪುರದ ದೇವಾಲಯ ಬಹು ಪ್ರಶಾಂತವಾದ ಸ್ಥಳದಲ್ಲಿದೆ. ಚೆನ್ನಾಗಿ ಅಲ್ಲಿಯೇ ಸೇವೆ ಮಾಡುತ್ತ ಬೈರಾಗಿಯಾಗಿ ಅಲ್ಲಿರೋಣವೆಂದು ಬಯಸಿ ಹೋದರೆ, ಆ ದೇವಾಲಯ ಸುತರಾಂ ಜೀರ್ಣವಾಗಿದೆ. ನನ್ನ ತಾತ ಅಲ್ಲಿನ ಧನಗುಪ್ತನಿಗೆ ಬೇಕಾದಷ್ಟು ಹಣಕೊಟ್ಟು ದೇವಾಲಯ ಕೆಲಸ ಶಾಶ್ವತವಾಗಿ ನಡೆಸಲು ಏರ್ಪಡಿಸಿದ್ದ. ಹಾಳು ಬಿಟ್ಟ! ಈಗ ಹೋಗಿ "ಏನಯ್ಯ! ಹೀಗಾಗಿದೆ." ಎಂದರೆ 'ನೀನಾರೋ, ನನಗೆ ಗೊತ್ತಿಲ್ಲ. ನಿನ್ನ ತಾತ ಹಣ ಕೊಟ್ಟದ್ದುಂಟು. ಇಲ್ಲವೆನ್ನಲಾರೆ.

ನೀನು ಮೌರ್ಯನ ಮೊಮ್ಮಗನೆಂಬುದನ್ನೂ, ನಿನಗಿಷ್ಟವಾದ ಈ ಜೀರ್ಣೋದ್ಧಾರ ಕೆಲಸ ಅವರಿಗೂ ಸಮ್ಮತವೆಂಬುದನ್ನೂ ನಿನ್ನ ತಾತನಿಗೆ ತೀರ ಪರಿಚಿತರಾದ ನಾಲ್ಕು ಗಣ್ಯರ ಕೈಲಿ ಬರೆಸಿಕೊಂಡು ಬಂದರೆ, ನಿನ್ನ ತಾತನ ನಿಧಿಯನ್ನು ನಿನ್ನ ಕೈಲೇ ಕೊಡುತ್ತೇನೆ. ನೀನೇ ದೇವಾಲಯವನ್ನು ಮತ್ತೆ ಉದ್ಧರಿಸಿ, ಸೇವೆಗೇರ್ಪಾಡುಮಾಡುವೆಯಂತೆ' ಎಂದಿದ್ದಾನೆ. ಆದ್ದರಿಂದ ಸೇನಾನಿಗಳೇ, ನೀವೂ, ಭದ್ರಭಟ, ಡಿಂಗಿರಾತ, ಬಲಗುಪ್ತಾದಿ ನನ್ನ ತಂದೆ ತಾತಂದಿರ ಆಪ್ತರೂ ಈ ಬಗ್ಗೆ ಒಂದು ಪ್ರಮಾಣ ಪತ್ರ ಬರೆದು ಕೊಟ್ಟರೆ ಉಪಕಾರವಾಗುತ್ತದೆ. ಧರ್ಮದ ಕೆಲಸವೂ ನಡೆದು ಪುಣ್ಯ ಸೇರುತ್ತದೆ" ಎಂದನು.

ಸೇನಾನಿ "ನಾವು ಬರೆಹದವರಲ್ಲ; ನಿನಗೆ ಹೇಗೆ ಬೇಕೋ ಹಾಗೆ ಬರೆ; ಹಸ್ತಾಕ್ಷರಗಳನ್ನು ನಾನು ಹಾಕಿಸಿ ಕೊಡುತ್ತೇನೆ" ಎಂದವನೇ ಎರಡು ದಿನದಲ್ಲಿ ಆ ಕೆಲಸ ಮುಗಿಸಿ ಕೊಟ್ಟ. ಚಂದ್ರಗುಪ್ತನು ಹರ್ಷದಿಂದ ಪಶ್ಚಿಮದತ್ತ ರಹಸ್ಯವಾಗಿ ಬಾಗುರಾಯಣನ ಏರ್ಪಾಡಿನಂತೆ ಹೊರಟು, ಮಗಧದ ಗಡೀ ದಾಟಿ, ಚಾಣಕ್ಯ ಹೇಳಿದ ದಿನಕ್ಕೆ ಮಥುರೆಯ ಸಂಕರ್ಷಣ ದೇವಾಲಯಕ್ಕೆ ಬಂದು ಸೇರಿದ.



## ಆರನೆಯ ಅಧ್ಯಾಯ

# ಪರ್ವತ ರಾಜ್ಯ ದತ್ತ

ಭಗವಾನ್ ಶ್ರೀಕೃಷ್ಣನ ಅವತಾರ ಸ್ಥಳ. ಮಾಘಮಾಸದ ಪೂರ್ಣಿಮೆಯ ಜಾತ್ರೆಗೆ ನಾಲ್ಕೆಂಟು ದಿನಗಳ ಮುಂಚೆಯೇ ಭಕ್ತ ಸಂದಣಿ ಊರಲ್ಲಿ ಬಂದು ಸೇರಿ, ಯಾವ ಧರ್ಮಶಾಲೆಯಲ್ಲೂ ಬರೀ ಭಕ್ತರೇ ತುಂಬಿದ್ದರು. ಪಂಡಿತರು, ವೇದಾನ್ತಿಗಳು, ಭಾವುಕರು, ಮುಗ್ಧಭಕ್ತರು ಎಂಬ ವ್ಯತ್ಯಾಸವಿಲ್ಲದೆ, ರಾತ್ರಿ ಹಗಲು ಭೇದವೂ ಇಲ್ಲದೆ ಊರೆಲ್ಲ ಭಜನೆಯ ವಾತಾವರಣ ತುಂಬಿತ್ತು.

"ಮಗಧದ ವಾತಾವರಣಕ್ಕೆ ಎಷ್ಟು ಭಿನ್ನ!" ಎಂದು ಚಾಣಕ್ಯ ಗಮನಿಸಿದ್ದ. ಚಂದ್ರಗುಪ್ತ ಅಲ್ಲಿಗೆ ತಲುಪುವ ವೇಳೆಗೆ ಸಂಕರ್ಷಣ ದೇವಾಲಯದಲ್ಲಿ ಪಾಂಚರಾತ್ರಿಗಳು ಗೋಷ್ಠಿ ಸೇರಿ ವೇದಾನ್ತಕ್ಕೂ ಆಗಮಕ್ಕೂ

ಸಮನ್ವಯ ಮಾಡುವ ಕೌಶಲ ತೋರುತ್ತಿದ್ದರು. ಚಾಣಕ್ಯನನ್ನು ಹುಡು ಕುತ್ತಾ ಚಂದ್ರಗುಪ್ತ ಜನಜಂಗುಳಿಯಲ್ಲಿ ಕಣ್ಣಿಟ್ಟು ನೋಡಿದ. ಗೊಡ್ಡು ವೇದಾಂತಿಯೊಬ್ಬ ವೇದಿಕೆಯ ಮೇಲೆದ್ದು "ಆಗಮಗಳೆಲ್ಲ ಅವೈದಿಕ; ವೇದ ವ್ಯಾಸರಿಗೆ ಇದು ಸಮ್ಮತವಲ್ಲ; ಈ ಮೂರ್ತಿಪೂಜೆ, ದೇವಾಲಯ ಅರ್ಚನೆ ಇವೆಲ್ಲ ಪಂಡಿತರ ಸ್ವಾರ್ಥದಿಂದ ಹುಟ್ಟಿದ ದುರಾಚಾರ; ಸರ್ವವ್ಯಾಪಿಯಾದ ಬ್ರಹ್ಮವು ಏಕದೇಶದಲ್ಲಿ ಮಾತ್ರ ವ್ಯಾಪ್ತವೂ ಸೀಮಿತವೂ ಆಗುವುದು ಅಸಂಭವ" ಎಂಬ ಪೂರ್ವಪಕ್ಷವನ್ನು ಒಡ್ಡಿದ.

ಚಾಣಕ್ಯ ಮೇಲೆದ್ದ: ''ಹಾಗೆನ್ನುವವನು ಮೂರ್ಖ! ಬ್ರಹ್ಮಸೂತ್ರ ಗಳನ್ನೂ ಶ್ರೀ ಮಹಾಭಾರತವನ್ನೂ ಓದದವನು ಮಾತ್ರ ಹಾಗೆ ಹೇಳಿ ಯಾನು...." ಎಂದು ಮುಂದುವರೆಸುವಷ್ಟರಲ್ಲಿ ಹತ್ತಾರು ಪಾಂಚರಾತ್ರಿ ಗಳು ಧ್ವನಿಗೂಡಿಸಿ, ಮೇಲೆದ್ದರು. ಚಾಣಕ್ಯ ಅವರನ್ನು ಕೈಸನ್ನೆಯಿಂದ ಕೂಡಿಸಿ, "ಇವನನ್ನು ನಾನು ವಿಚಾರಿಸಿಕೊಳ್ಳುತ್ತೇನೆ. ತಮಾಷೆ ನೋಡು ತ್ತಿರಿ," ಎಂದು ನಕ್ಕು ಆತ್ಮವಿಶ್ವಾಸದಿಂದ ಮುಂದುವರಿದ: "ಆಗಮಗಳು ಭಗವಂತನಿಂದಲೇ ಪ್ರವೃತ್ತವಾದವು. ಶ್ರುತಿ ಹೇಗೆ ಅವನ ಆಜ್ಞೆಯೋ ಇವೂ ಹಾಗೇ. ವೇದವ್ಯಾಸರು ತಾವೇ ಮಹಾಭಾರತದಲ್ಲಿ ಪ್ರಮಾಣೀಕರಿ ಸಿರುವ ಇದನ್ನು ಬ್ರಹ್ಮಸೂತ್ರಗಳಲ್ಲಿ ನಿರಾಕರಿಸಿರುವರೆಂಬ ನಿರೂಪಣೆ, ಹಾಗೆ, ಅರ್ಥೈಕೆ ಸಮಂಜಸವಲ್ಲ. ಎರಡನೆಯ ಅಧ್ಯಾಯದ ಎರಡನೇ ಪಾದದಲ್ಲಿ ಸಾಂಖ್ಯ, ಯೋಗ, ವೈಶೇಷಿಕ, ಶೈವ, ಕಾಪಾಲಿಕ ಮೊದಲಾದ ಮತಗಳ ಅಸಾಮಂಜಸ್ಯ ನಿರೂಪಿಸಿ, ಕೊನೆಗೆ ಪೂರ್ವಪಕ್ಷದ ಆಕ್ಷೇಪ ಗಳನ್ನು ಎತ್ತಿ ನಿರಾಕರಿಸಿ ಪಾಂಚರಾತ್ರವನ್ನು ಸಮರ್ಥಿಸಿರುವರು. ಇದೇ ಪ್ರಾಚೀನ ನಿರೂಪಣೆ."

ಗೊಡ್ಡುವೇದಾಂತಿ ಮೇಲೆದ್ದ: "ಹಾಗಾದರೆ ಪಾಂಚರಾತ್ರಿಗಳಿಗೆ ವೈದಿಕಾತಿರಿಕ್ತವಾಗಿ ಮತ್ತೊಂದು ದೀಕ್ಷೆ ಏಕೆ? ಅವರ ಗೋತ್ರ ಸೂತ್ರಗಳು ಭಿನ್ನವೇಕೆ ?" ಎಂದು ಕೇಳಿದ.

ಚಾಣಕ್ಯ ಮರು ಪ್ರಶ್ನೆ ಹಾಕಿದ : "ವೈದಿಕರೆಂಬ ನೀವು ಯಾಗ, ಯಜ್ಞ, ವಿವಾಹಾದಿ ಕರ್ಮಗಳಲ್ಲೂ ಪ್ರತ್ಯೇಕ ಕಂಕಣವನ್ನೇಕೆ ಕಟ್ಟಿ ಕೊಳ್ಳುವಿರಿ? ನಿಮ್ಮಲ್ಲಿ ಇಷ್ಟು ಗೋತ್ರಸೂತ್ರಗಳೇಕೆ ? ಹಾಗೇ ಇವರಲ್ಲೂ! ವ್ಯತ್ಯಾಸವೇನು ?"

ವೇದಾಸ್ತಿ : ''ನಾಲ್ಕುವೇದಗಳಲ್ಲೂ ಸಿಗದ ಪುರುಷಾರ್ಥವು ಶಾಂಡಿಲ್ಯರಿಗೆ ಈ ಪಾಂಚರಾತ್ರದಲ್ಲಿ ದೊರೆಯಿತೆಂದು ಹೇಳಿರುವುದರಿಂದ ಇದು ವೇದಬಾಹ್ಯ ಆಗಲಾರದೆ? "

ಚಾಣಕ್ಯ : ''ಅಯ್ಯಾ ಬೃಹಸ್ಪತಿಯೇ ! ಮನುಸ್ಮೃತಿಯಲ್ಲಿ ಸಾಮವೇದವು ಪಿತೃಸಂಬಂಧಿ ಎಂದೂ, ಅದರ ಧ್ವನಿ ಅಶುಚಿ ಎಂದೂ ಹೇಳಿ ರುವುದರಿಂದ ಸಾಮವೇದವು ವೇದ ಬಾಹ್ಯ ಆದೀತೆ? 'ವೇದಾನಾಂ ಸಾಮ ವೇದೋಽಸ್ಮಿ' ಎಂಬ ಗೀತಾವಾಕ್ಯಕ್ಕೆ ಅಗೇನರ್ಥ ?''

ವೇದಾಸ್ತಿ : ''ಇದನ್ನು ವಿದ್ಯಾಸ್ಥಾನಗಳಲ್ಲಿ ಪರಿಗಣಿಸಿಲ್ಲವಲ್ಲ !''

ಚಾಣಕ್ಯ : "ಅದರೇನು? ರಾಮಾಯಣ, ಮಹಾಭಾರತವನ್ನೂ ಹಾಗೆ ಪರಿಗಣಿಸಿಲ್ಲವಲ್ಲ? ಆದ್ದರಿಂದ ಇವು ಅಗ್ರಾಹ್ಯವಾಗುವುವೆ?"

ವೇದಾಸ್ತಿ : ''ಭಾಗವತರು ಬ್ರಾಹ್ಮಣರಲ್ಲ! ವ್ರಾತ್ಯವೈಶ್ಯರು!''

ಚಾಣಕ್ಯ : ''ಶಿಖಾ, ಯಜ್ಞೋಪವೀತ, ದಂಡ, ಮೌಂಜೀ, ಅಜಿನ ಯುಕ್ತರಾದ ಅವರ ವಟುಗಳನ್ನು ನೋಡಿದರೆ ಅವರೂ ಬ್ರಾಹ್ಮಣ ರೆಂದು ತಿಳಿಯಲಾರದೆ ?''

ವೇದಾಸ್ತಿ : "ಶೂದ್ರರೂ ಈ ಲಕ್ಷಣಗಳನ್ನು ಧರಿಸಿ, ಬ್ರಾಹ್ಮಣ ರೆಂದು ವಂಚಿಸುತ್ತಿರುವರು !"

ಚಾಣಕ್ಯ : (ಕೋಪದಿಂದ) ''ಎಲೋ ವೃದ್ಧಬ್ರಾಹ್ಮಣ ! ಪ್ರತಿ ವರ್ಷವೂ ತಂದೆಗೆ ಶ್ರಾದ್ಧಮಾಡುವೆಯಲ್ಲ ?''

ವೇದಾಂತಿ : "ಹೌದು! ಬ್ರಾಹ್ಮಣನಾದ ನನಗೆ ಅದು ಕರ್ತವ್ಯ. ಅದಕ್ಕೂ ಇದಕ್ಕೂ ಏನು ಸಂಬಂಧ?"

ಚಾಣಕ್ಯ : "ಸಂಬಂಧ ತೋರಿಸುತ್ತೇನೆ, ನೋಡುತ್ತಿರು, 'ಯನ್ಮೇ ಮಾತಾ ಪ್ರಲುಲೋಭ' ಎಂದು ಮಂತ್ರ ಹೇಳುತ್ತಾ, ನಿನ್ನ ತಾಯಿಯು ನಿನ್ನನ್ನು ವ್ಯಭಿಚಾರದಲ್ಲಿ ಹಡೆದಿರಬಹುದಾದ ಸಂಭವವನ್ನೊಪ್ಪಿ, ಚಂಡಾಲ ಪುತ್ರತ್ವವನ್ನು ನಾಚಿಕೆಯಿಲ್ಲದೆ ಆರೋಪಿಸಿಕೊಳ್ಳುವ ನೀನು ಈಗ ಶಂಕೆಯಿಲ್ಲದೆ ಬ್ರಾಹ್ಮಣನೆಂದು ಕರೆದುಕೊಂಡು ಹೇಗೆ ಅಧ್ಯಯನ ಮಾಡುವೆ ? ನಿನ್ನ ಬ್ರಾಹ್ಮಣ್ಯವೇ ನಿನಗೆ ನಂಬಿಕೆ ಇಲ್ಲ! ಪಾಂಚರಾತ್ರಿಗಳನ್ನು ಸಂದೇಹಿಸುವೆಯಾ ?"

ವೇದಾಂತಿ ಕುಸಿದು ಬಿದ್ದ! ಬ್ರಾಹ್ಮಣರು ಕರತಾಡನ ಮಾಡಿದರು! ಪಾಂಚರಾತ್ರಿಗಳು ಚಾಣಕ್ಯನಿಗೆ ಜಯಕಾರ ಹಾಕಿದರು.

ಮತ್ತೊಬ್ಬ ವೇದಾಂತಿ ಮೇಲೆದ್ದ : "ಆ ಇನ್ನೊಂದು ಪ್ರಶ್ನೆಗೆ ಉತ್ತರಿಸಲಿಲ್ಲವಲ್ಲ! ಅಮೂರ್ತವಾದ ಬ್ರಹ್ಮಕ್ಕೆ ಶರೀರ, ರೂಪ, ಆಕಾರಗಳನ್ನು ಆರೋಪಿಸುವ ಪಾಂಚರಾತ್ರ, ವೇದ ವಿರುದ್ಧವಲ್ಲವೆ ?"

ಚಾಣಕ್ಯ : "ಶ್ರುತಿಯಲ್ಲೇ ಭಗವದ್ರೂಪವರ್ಣನೆಯಿದೆಯಲ್ಲ ! 'ಹಿರಣ್ಮಯಃ ಪುರುಷೋ' 'ತತ್ತೇ ಕಲ್ಯಾಣತಮಂ ರೂಪಂ', ಇತ್ಯಾದಿ ಸೂಕ್ತಿಗಳಿಲ್ಲವೆ ?"

ವೇದಾಂತಿ : "ಅದೆಲ್ಲ ಮಂದಮತಿಗಳ ಅನುಗ್ರಹಕ್ಕಾಗಿ ಹೇಳಿದ್ದು; ಯಥಾರ್ಥವಲ್ಲ !"

ಚಾಣಕ್ಯ : "ಎಲೋ, ಪಿಶಾಚನೇ ? ನಾನು ಸಾಮವೇದೀ ! ಛಾಂದೋಗ್ಯ ಶಾಖೆಯವನು. ನೀನು ಯಾವ ಶಾಖೆಯೋ? ಪ್ರಾಚೀನರಾದ ಬೋಧಾಯನರು ಸಾಕ್ಷಾತ್ ವ್ಯಾಸ ಶಿಷ್ಯರು. ಅವರ ಪರಂಪರೆಯ

ವರು ಆತ್ರೇಯ ಟಂಕಾಚಾರ್ಯರೆಂಬ ಬ್ರಹ್ಮನಂದಿಗಳು. ಅವರ ವಾಕ್ಯ ಗ್ರಂಥವನ್ನು ನೋಡಿರುವೆಯಾ? 'ರೂಪಂ ವಾ ಅತೀಂದ್ರಿಯಂ ಅಂತಃಕರಣ ಪ್ರತ್ಯಕ್ಷ ನಿರ್ದೇಶಾತ್' ಎಂದು ಬರೆದಿರುವ ವಾಕ್ಯ ನೆನಪಿದೆಯೆ ? ಕಣ್ಣಿಗೆ ಕಾಣದ ದೇವರ ರೂಪ ಅಂತಃಕರಣಕ್ಕೆ ಪ್ರತ್ಯಕ್ಷವಾದೀತು, ಎಂದು ಅರ್ಥ. 'ನ ಚಕ್ಷುಷಾ ನಾಪಿ ವಾಚಾ, ಮನಸಾ ತು ವಿಶುದ್ಧೇನ' ಎಂಬ ಶ್ರುತಿಯೂ ಇದೆಯಲ್ಲವೆ? ದೇವರಿಗೆ ಇಲ್ಲದ ರೂಪವನ್ನು ಶ್ರುತಿ ಏಕೆ ಉಪದೇಶಿಸಬೇಕು? ಇದ್ದದ್ದನ್ನು ಹಾಗೇ ಹೇಳುವುದಲ್ಲವೆ ಶಾಸ್ತ್ರ?"

ವೇದಾನ್ತಿ : "ದೇವರಿಗೂ ಶರೀರಾದಿಗಳಿದ್ದರೆ, ನಮ್ಮಂತೆ ಅವನೂ ದುಃಖ, ಕ್ಲೇಶಗಳನ್ನು ಪಡಬೇಕಾಗುತ್ತದಲ್ಲವೆ ?"

ಚಾಣಕ್ಯ : "ಅಯ್ಯಾ ! ದೇವಾನಾಂಪ್ರಿಯನೇ ! ಕರ್ಮದಿಂದ ಸಂಪಾದಿಸಿದ ಶರೀರ ಬೇರೆ. ಭಕ್ತೋದ್ಧಾರಕ್ಕೆಂದು ಸ್ವಂತ ಇಚ್ಛೆಯಿಂದ ದೇವರು ಆನಂದದಿಂದ ಧರಿಸುವ ಶರೀರ ಬೇರೆ. ನಿನ್ನ ಕರ್ಮಕೃತ ಶರೀರ ವಾದರೂ ದುಃಖವನ್ನೇ ಸದಾ ಉಂಟು ಮಾಡಬೇಕೆಂಬುದಿಲ್ಲ! ರಾಜಪುತ್ರ ನಿಗೆ, ತಂದೆಯ ಲೀಲೆಗೆಂದಿರುವ ಆಟದ ಸಾಮಾನುಗಳು, ಆಯುಧಗಳು ಲೀಲಾ ದೃಷ್ಟಿಯಿಂದ ನೋಡಿದಾಗ ಸುಖಕರವೇ ಆಗುತ್ತವೆ. ಲೀಲೆಯನ್ನು ಮರೆತರೆ, ದುಃಖಕೊಡುತ್ತವೆ. ಪಿತ್ಥದವನು ಹಾಲು ಕುಡಿಯುವ ಅನು ಭವಕ್ಕೂ, ನಿರೋಗಿಯು ಅದನ್ನೇ ಕುಡಿಯುವುದಕ್ಕೂ ವ್ಯತ್ಯಾಸವಿಲ್ಲವೆ ? ದೇವರ ಮಂಗಳ ವಿಗ್ರಹವನ್ನೇಕೆ ವಕ್ರ ದೃಷ್ಟಿಯಿಂದ ನೋಡುವೆ ? ದಾರಿ ತಪ್ಪಿದ ರಾಜಕುಮಾರನಿಗೆ, ಅಡವಿಯಲ್ಲಿ ಬರುವ ಕೆಲವು ದೊರೆಯ ಆಪ್ತರು, 'ನೀನು ರಾಜಪುತ್ರ' ಎಂದು ಹೇಳಿದರೂ ಮೊದಲು ತಿಳಿಯದೆ, ಕ್ರಮೇಣ ಗುರುತುಗಳಿಂದ ನೆನಪುಂಟಾಗಿ, ಅವರು ಪಿತಾಪುತ್ರರನ್ನು ಒಗ್ಗೂಡಿಸಿ ಆನಂದಿಸುವಂತೆ, ಸಂಸಾರದಲ್ಲಿ ನಷ್ಟನಾದ ಚೇತನನು ಆಚಾರ್ಯ ಕಟಾಕ್ಷ ದಿಂದ ಸಾರ್ವಭೌಮನಾದ ಭಗವಂತನನ್ನು ಪಡೆದು ದಿವ್ಯಭೋಗಗಳಲ್ಲಿ ಮತ್ತೆ ಭಾಗಿಯಾಗುವುದೇ ಪುರುಷಾರ್ಥ. ಸಾರ್ವಭೌಮನಿಗೆ ಗುಣ, ರೂಪ

ಆಕಾರವಿಲ್ಲ ಎಂಬುವರುಂಟೋ ? ವೇದ, ಆಗಮಗಳು ಈ ಪಿತಾ-ಪುತ್ರ ರನ್ನು ಸೇರಿಸುವ ಘಟಕಕಾರ್ಯದಲ್ಲಿ ತೊಡಗಿವೆ. ಎಲ್ಲ ಸಮಂಜಸವಾಯಿತೆ?''

ವೇದಾನ್ತಿ : " 'ಅಶರೀರಂ ಶರೀರೇಷು...' 'ಅಶಬ್ದಂ, ಅರೂಪಂ, ಅವಾಕೀ....' ಇತ್ಯಾದಿ ಶ್ರುತಿಗಳಿವೆಯಲ್ಲ? ಇವು ಹೇಗೆ ಅರ್ಥ ಹೊಂದು ತ್ತವೆ?"

ಚಾಣಕ್ಯ ; ''ದೇವರಿಗೆ ಕರ್ಮಕೃತ ಶರೀರವಿಲ್ಲವೆಂದೂ, ಕಿವಿಗೆ ಕೇಳಲಾರನೆಂದೂ, ಹೊರಗಣ್ಣಿಗೆ ಕಾಣಲಾರನೆಂದೂ ಆಗಲೇ ಸಮನ್ವಯಿಸಿ ಹೇಳಲಿಲ್ಲವೆ ?"

ವೇದಾನ್ತಿ ; ''ದ್ರಮಿಡಾಚಾರ್ಯರೆಂಬುವರು ಹೊಸದೊಂದು ಭಾಷ್ಯಗ್ರಂಥ ಬರೆದಿರುವರಂತೆ ತಾವು ಅದನ್ನು ನೋಡಿರುವಿರಾ? ನಿಮ್ಮ ಅರ್ಥ ಅದಕ್ಕೆ ಹೊಂದುವುದೇ ?''

ಚಾಣಕ್ಯ : ''ನೋಡಿರುವೆ. ಅದರಿಂದೇನು ? (ನಗುತ್ತ) ದ್ರಮಿಡಾ ಚಾರ್ಯರನ್ನು ಪ್ರಮಾಣವೆಂದು ಒಪ್ಪುವೆಯಾ ?"

ವೇದಾನ್ತಿ : "ಅಯ್ಯಾ! ಅವರು ಪರಮಪ್ರಾಮಾಣಿಕರೆಂದೂ ಸಕಲಶಾಸ್ತ್ರಸಂಪನ್ನರೆಂದೂ, ದೇಶಾದ್ಯಂತ ಪರ್ಯಟನ ಮಾಡಿ ಉಪನಿಷದರ್ಥ ಗಳಲ್ಲಿ ಉತ್ಕ್ರಾಂತಿಯನ್ನು ಮಾಡಿ ಸುಂದರ ಗಂಭೀರ. ಭಾಷೆಯಲ್ಲಿ ಸರ್ವ ಗ್ರಾಹ್ಯವಾದ ಅರ್ಥಗಳನ್ನು ನಿರೂಪಿಸಿರುವರೆಂದೂ ನಮ್ಮ ಅಗ್ರಹಾರದ ಹಿರಿಯ ಪಂಡಿತರು ಹೇಳುತ್ತಿದ್ದುದುಂಟು. ಅವರು ಹೇಳಿದರೆ ಮುಗಿ ಯಿತು. ಆಕ್ಷೇಪವಿಲ್ಲ!"

ಚಾಣಕ್ಯ: ''ಎಲೋ ಪಂಡಿತ! ಹಾಗಾದರೆ ನಿನ್ನ ದುರ್ವಾದ ಪೂರ್ತಾ ಸತ್ತಿತು ಎಂದು ನೀನು ತಿಳಿಯಬೇಕು. ಏಕೆಂದರೆ ನಾನೇ ಆ ದ್ರಮಿಡಾಚಾರ್ಯ! ಭಾರತ ದೇಶದ ದಕ್ಷಿಣದ ತುಟ್ಟತುದಿಯಲ್ಲಿ ಜನಿಸಿದ

ನಾನು, ಪ್ರಸಿದ್ಧನಾದದ್ದು ತಕ್ಷಶಿಲೆಯಲ್ಲಾದರೂ, ರಾಷ್ಟ್ರದ ಎಲ್ಲ ವಿದ್ಯಾ ನಗರಗಳಲ್ಲೂ ನನ್ನ ಹೆಸರು ಕೇಳಿರುವರು! ನನ್ನ ತಾಯಿ ಶ್ರೀವತ್ಸ ಗೋತ್ರದವಳು. ಅವಳಿಗೂ ಮಗನಾಗಿ, ಅವಳ ತಂದೆಗೂ ದತ್ತಪುತ್ರನಾಗಿ ತಂದೆತಾಯಿಗಳ ಉಭಯಗೋತ್ರಕ್ಕೂ ವಾರಸುದಾರನಾದ ನನ್ನನ್ನು ಹಲ ವರು ವಾತ್ಸ್ಯಾಯನನೆನ್ನುವರು; ಹಲವರು ಕೌಟಿಲನೆನ್ನುವರು; ಈಗ ದ್ರವಿಡನೆಂದೂ ಕರೆಯುವರು; ಭಾಷ್ಯ ಬರೆದು ದ್ರವಿಡಭಾಷ್ಯಕಾರನೂ ಆಗಿ ಹೋದೆ."

ಸಭೆಯಲ್ಲಿ ನೀರವತೆ ಕ್ಷಣಕಾಲ ಆವರಿಸಿತು. ನಂತರ ಒಮ್ಮಿಂದೊ ಮ್ಮೆಲೇ ಕರತಾಡನ ಮುಗಿಲು ಮುಟ್ಟುವಂತೆ ಬಹುಕಾಲ ಆಯಿತು! ಪಂಡಿ ತರು ಚಾಣಕ್ಯನ ಕೊರಳಿಗೆ ಮಾಲೆ ಹಾಕಿದ್ದೂ ಹಾಕಿದ್ದೇ! ಜರತಾರಿ ಶಾಲುಗಳಲ್ಲಿ ಅವನ ಕುಳ್ಳ ದೇಹ ಮುಚ್ಚಿ ಹೋಯಿತು! ಪಾಂಚರಾತ್ರಿ ಗಳೂ ವೇದಾಂತಿಗಳೂ ಅವನ ಪಾದಗಳಲ್ಲಿ ಹೊರಳಾಡಿ ಆನಂದ ಬಾಷ್ಪ ಸುರಿಸಿದರು. ಸಭೆ ನಿಶಃಬ್ದವಾಯಿತು. ಚಾಣಕ್ಯ ಅಭಿನಂದಿಸಲು ಮೇಲೆದ್ದ.

ಮೊದಲು ಮಾತಾಡಿದ ಪಂಡಿತ ಮೇಲೆದ್ದ: "ಯಾವನೋ ಒಬ್ಬ ವಾತ್ಸ್ಯಾಯನನು ಕಾಮಸೂತ್ರಗಳನ್ನೂ ರಚಿಸಿ ಕೋಲಾಹಲವನ್ನೂ ಮಾಡಿರುವನಂತೆ! ತಾವು ಯಾವ ವಾತ್ಸ್ಯಾಯನರು?'' ಎಂದು ಕೇಳಿದ.

ಚಾಣಕ್ಯ: (ನಗುತ್ತಾ) ''ನಾನೇ ಆ ವಾತ್ಸ್ಯಾಯನ! ಚಿಕ್ಕ ವಯಸ್ಸಿನಲ್ಲಿ ಬರೆದದ್ದು ಆ ಗ್ರಂಥ. ನಾಲ್ಕೂ ಪುರುಷಾರ್ಥಗಳು ಉಪ ಯುಕ್ತವೆಂದು ಸಾಧಿಸಲು, ಕಾಮಕ್ಕೂ ಧರ್ಮಾವಿರುದ್ಧವಾಗಿ ಜೀವನದಲ್ಲಿ ಜಾಗವುಂಟೆಂದು ತೋರಿಸಲು ಬರೆದದ್ದು. ಯಾವುದೂ ಯಾವುದಕ್ಕೂ ವಿರೋಧವಿಲ್ಲ. ಕ್ರಮವಾಗಿ ಎಲ್ಲ ವ್ಯಕ್ತಿಯ ಪರಿಪೂರ್ಣತೆಗೇ ಎಡೆಮಾಡ ಬೇಕೆಂದು ನಾನು ತಿಳಿದವನು."

ಪಂಡಿತ : "ಅರ್ಥಶಾಸ್ತ್ರ ಪರಿಚಯವೂ ತಮಗಿರುವುದಾದರೆ, ಆಚಾರ್ಯ ಚಾಣಕ್ಯರೆಂಬುವರು ಹೊಸದೊಂದು ಅರ್ಥಶಾಸ್ತ್ರವನ್ನು ಬರೆಯು ತ್ತಿರುವರಂತೆ. ತಾವು ಅವರನ್ನು ಬಲ್ಲಿರಾ ? ಅದರ ಅನೇಕ ಭಾಗಗಳನ್ನು ಅಗ್ರಹಾರದ ಹಿರಿಯರು ನೋಡಿರುವಂತೆ !"

ಚಾಣಕ್ಯ : "ಅಯ್ಯಾ ! ಆ ಚಾಣಕ್ಯನೂ ನಾನೇ ! ಈಗ ವೇದ, ವೈದಿಕ ಮೌಲ್ಯಗಳನ್ನು ಪ್ರತಿಷ್ಠಿಸಲು, ಯವನರಿಂದ ಸೋತ ಆರ್ಯ ದೊರೆಗಳನ್ನು ಮತ್ತೆ ಸನ್ಮಾರ್ಗಕ್ಕೆ ಪ್ರೇರಿಸಲು ಯಾತ್ರೆ ಹೊರಟಿರುವೆ. ಅರ್ಥವಿದ್ದರೆ, ರಾಷ್ಟ್ರವಿದ್ದರೆ, ಪ್ರಜೆ. ಪ್ರಜೆ ಇದ್ದರೆ ಮೋಕ್ಷದ ಪ್ರಶ್ನೆ. ಆದ್ದರಿಂದ ಮೋಕ್ಷ ವಿಚಾರ ಕೊಂಚ ನಿಲ್ಲಿಸಿ, ಈಗ ರಾಷ್ಟ್ರದ ಏಕೀಕರಣಕ್ಕೆ ಯತ್ನಿಸುತ್ತಿರುವೆ. ನಮ್ಮನಮ್ಮಲ್ಲಿ 'ವೇದಾನ್ತಿ, ಪಾಂಚರಾತ್ರಿ' ಎಂಬ ಜಗಳ ಸಲ್ಲದು." ಎಂದು ಉಪನ್ಯಾಸ ಮುಗಿಸಿದ.

ಬಿಸಿಲೇರುತ್ತಿತ್ತು. ಪಂಡಿತರು ಜಯಕಾರ ಮಾಡಿ ಚದುರಿದರು. ಸಭೆಯಲ್ಲಿ ಬೇರಾರೂ ಇಲ್ಲವಾದಾಗ ಕೊನೆಯಲ್ಲಿ ದೂರದಲ್ಲಿ ಕುಳಿತಿದ್ದ ಸಿಪಾಯಿ ವೇಷದ ಚಂದ್ರಗುಪ್ತ ಕಣ್ಣಿಗೆ ಬಿದ್ದ. ಚಾಣಕ್ಯ ನಿಧಾನವಾಗಿ ತನ್ನ ಬಿಡಾರದತ್ತ ನಡೆದ. ಚಂದ್ರಗುಪ್ತ ಅವನನ್ನು ಕೊಂಚ ಅಂತರದಲ್ಲಿ ಹಿಂಬಾಲಿಸುತ್ತ ನಡೆದ. ಇಬ್ಬರೂ ಬಿಡಾರ ಸೇರಿ ಒಬ್ಬರ ಮುಖ ಒಬ್ಬರು ನೋಡಿಕೊಂಡರು.

ಬಾಗುರಾಯಣಾದಿಗಳ ಹಸ್ತಾಕ್ಷರವಿದ್ದ ಪತ್ರವನ್ನು ನೋಡಿ ಚಾಣಕ್ಯ ಸಂತುಷ್ಟನಾದ: "ವೃಷಲ! ಪಾಟಲೀಪುತ್ರದಲ್ಲಿ ವಿಶೇಷ ಸಮಾ ಚಾರವೇನು?" ಎಂದು ಕೇಳಿದ. ನಡೆದುದನ್ನೆಲ್ಲ ಚಂದ್ರಗುಪ್ತ ತಿಳಿಸಿ, ಸೇನಾನಾಯಕರಿಗೆ ಆಗಿರುವ ತೀವ್ರ ಅಸಮಾಧಾನ, ನಿಷ್ಠೆಯಲ್ಲಿ ದ್ವಂದ್ವತೆ ಗಳ ಬಗೆಗೂ, ಅನ್ನಸತ್ರಮುಚ್ಚಿ ಬ್ರಾಹ್ಮಣರಿಗೂ, ಸನಾತನ ಧರ್ಮಾವ ಲಂಬಿಗಳಿಗೂ ಆಗಿರುವ ಅತೃಪ್ತಿಯನ್ನೂ ಚಿತ್ರಿಸಿದ.

ಆ ಹೊತ್ತಿಗೆ ಬೀದಿಯ ಬಾಗಿಲಲ್ಲಿ ಯಾವನೋ ಭಿಕ್ಷುಕನು "ಈ ಊರಿನಲ್ಲಿ ಹಗಲನ್ನೂ ರಾತ್ರಿ ಮಾಡುವವರುಂಟೇ? ಅಮಾವಾಸ್ಯೆಯಂದು ಚಂದ್ರದರ್ಶನ ಮಾಡಿಸುಹವರುಂಟೇ?" ಎಂದು ಕೇಳುತ್ತಾ ನಿಂತ! ಪಕ್ಕದ ಮನೆಗಳವರು ಹೊರಬಂದು "ಏನು ಅಸಂಬದ್ಧವಾಗಿ ಮಾತಾಡುವೆಯೋ ? ಬುದ್ಧಿಕೆಟ್ಟಿದೆಯೋ ಹೇಗೆ?" ಎಂದು ಕೇಳಿ. ಹುಚ್ಚನಂತೆ ಹರಿದ ಬಟ್ಟೆಯನ್ನು ಧರಿಸಿದ್ದ ವೇಗ ಶರ್ಮನನ್ನು ಕಂಡು ಜುಗುಪ್ಸೆಯಿಂದ ಬಾಗಿಲು ಮುಚ್ಚಿಕೊಂಡರು.

ಚಾಣಕ್ಯನ ಸ್ನೇಹಿತ ಕಾತ್ಯಾಯನ ಬಾಗಿಲು ತೆಗೆದು, "ಇಲ್ಲಿ ಮಾತ್ರ ಎಂದೂ ಅಮಾವಾಸ್ಯೆಯಿಲ್ಲ! ಸದಾ ಹುಣ್ಣಿಮೆಯೇ !! ಚಂದ್ರಸೂರ್ಯರನ್ನು ಸೃಷ್ಟಿಸುವ ವಾಮದೇವರೇ ಇಲ್ಲಿರುವಾಗ ಏನು ಯೋಚನೆ?" ಎಂದು ತ್ತರಿಸಿ, ವೇಗಶರ್ಮನನ್ನು ಸರಕ್ಕನೆ ಒಳಕ್ಕೆಳೆದುಕೊಂಡ. ವೇಗಶರ್ಮ ಸ್ನಾನಾಹ್ನಿಕಗಳನ್ನು ಮುಗಿಸಿ ಬರುವಷ್ಟರಲ್ಲಿ ಚಂದ್ರಗುಪ್ತನೆಂದ:

"ಪೂಜ್ಯರಿಗೆ ನನ್ನಿಂದೆಷ್ಟು ತೊಂದರೆ! ಅದ್ಭುತವಾಗಿ ವೇದಾಂತ ವಾಕ್ಯಾರ್ಥ ಮಾಡುವ ತಮ್ಮನ್ನು ಈ ಹೀನ ರಾಜಕಾರ್ಯದಲ್ಲಿ ನನ್ನ ಸ್ವಾರ್ಥ ಬಿಗಿದಿರುವುದಕ್ಕೆ ನನಗೇ ನಾಚಿಕೆಯಾಗಿದೆ. ಯಾರಿಗೆ ರಾಜ್ಯ! ಸಿಕ್ಕರೂ ಶಾಶ್ವತವೇ? ಇಷ್ಟೆಲ್ಲ ಶ್ರಮಪಟ್ಟು ಪಡೆದೂ ನಾವೇ ಒಂದು ದಿನ ಸಾಯುತ್ತೇವಷ್ಟೆ! ಹಾಳು ಕ್ಷತ್ರಿಯರಿಗೆ ವೈರಾಗ್ಯ ಬರಲಾರದು! ಈ ವಿಷಯವನ್ನಿಲ್ಲೇ ಬಿಡೋಣವೆ? ಪೂಜ್ಯರೇ, ತಾವು ತಪಸ್ಸಿಗೆ ತೆರಳಬಹುದು. ನಾನು ಬೇರೊಂದು ವೃತ್ತಿಯಿಂದ ಬಾಳಲು ಯತ್ನಿಸುತ್ತೇನೆ."

ಚಾಣಕ್ಯನ ಹುಬ್ಬುಗಳು ಗಂಟಿಕ್ಕಿ ಕಣ್ಣುಗಳು ಕಿಡಿಗಾರಲಾರಂಭಿಸಿದವು ! "ಎಲೋ ವೃಷಲ! ಈ ತನಕ ನಿನ್ನನ್ನು ಮುದ್ದಿಗಾಗಿ 'ವೃಷಲ' ನೆನ್ನುತ್ತಿದ್ದೆ. ಜನರಿಗೆ, ದೊರೆಯಾಗಿ ಇಷ್ಟಾರ್ಥಗಳನ್ನು ವರ್ಷಿಸುವವನು, ಎಂದು. ಈಗ ನೀನು ನಿಜವಾಗಿಯೇ ಬೇರೊಂದು ಹೀನಾರ್ಥದಲ್ಲಿ ವೃಷಲನಾದೆ. ಎಲೋ ಶೂದ್ರ! ಕಲಿಯುಗದಲ್ಲಿ ನಿಜಕ್ಷತ್ರಿಯರಿಲ್ಲ ಎಂದು

ಶಾಸ್ತ್ರ ಹೇಳುವುದು ಹುಸಿಯಲ್ಲ! ಗುಣ ಕ್ಷತ್ರಿಯನಿಗೆ ಮಾತ್ರ ಅಭಿಷೇಕ ಎಂದು ನೆನೆಸಿ, ನಿನ್ನಲ್ಲಿ ಕ್ಷಾತ್ರಗುಣವಿದೆಯೆಂದು ನಾನು ಈ ವರೆಗೆ ಭ್ರಮಿಸಿದ್ದೆ! ಚಾಣಕ್ಯನೆಂದೂ ತಪ್ಪುಮಾಡಲಾರನೆಂಬುದನ್ನು ಇಂದು ನೀನು ಸುಳ್ಳು ಮಾಡಿ ತೋರಿಸಿದೆ. ಎಲ್ಲಿಯಾದರೂ ಹಾಳಾಗಿ ಹೋಗು!" ಎನ್ನುತ್ತಾ ಧ್ವನಿ ಎತ್ತರಿಸಿ, ''ಎಲೋ ಮೂರ್ಖ! ಗೀತೆಯ ಅರ್ಜುನನಂತೆ ಮಾತಾಡುವೆಯಲ್ಲ! ನಾಚಿಕೆ ಆಗಲಾರದೆ? ಯಾವುದು ಶಾಶ್ವತ, ಯಾವುದಲ್ಲ ಎಂಬುದನ್ನು ನಿಷ್ಕರ್ಷಿಸಲು ಜಗದೀಶ್ವರನಿದ್ದಾನೆ. ನಾನೂ ನೀನೂ ಇದನ್ನು ತೀರ್ಮಾನಿಸುವವರಲ್ಲ. ಯಾವ ಕಾರ್ಯವೂ, ಕರ್ತವ್ಯವಾಗಿ ಒಂದೊದಗಿದರೆ 'ಹೀನ'ವಲ್ಲ ಎಂದು ಹಲವು ಸಲ ನಾನು ಬೋಧಿಸಿದುದೆಲ್ಲ ಬೂದಿಯಲ್ಲಿ ಹೋಮ ಮಾಡಿದಂತಾಯ್ತು! ಇದು ವೇದಾಂತ ವಾಕ್ಯಾರ್ಥಕ್ಕೆ ನನಗೆ ಸಮಯವಲ್ಲ; ದಂಡ ನೀತಿ ಪ್ರಯೋಗಕ್ಕೆ ಸದವಕಾಶ, ಸತ್ಕರ್ತವ್ಯ. ನನ್ನ ಗುರುಗಳಾಣೆ, ಕೇಳು; ನೀನು ಓಡಿ ಹೋದರೂ, ನವನಂದರನ್ನು ನಿಗ್ರಹಿಸಿಯೇ ತೀರುವೆ. ಅದು ನನ್ನ ಆವಿಚಾಲ್ಯ ಪ್ರತಿಜ್ಞೆ! ಇತ್ತ ಈ ಶೈಲೂಷಕನೆಂಬ ಯವನನ್ನು ಸಂಹರಿಸಿಯೋ ಓಡಿಸಿಯೋ ಆರ್ಯಭೂಮಿಯನ್ನು ಒಗ್ಗೂಡಿಸಿ, ಆಳುಗರಲ್ಲಿ ನವಚೈತನ್ಯ, ನವವಿವೇಕ ತುಂಬುವುದೂ ಇದೆ. ನಾನಿದನ್ನು ಬಿಡಲಾರೆ. ಶೂದ್ರಪ್ರಾಯನಾದ ನೀನು ತಪೋಭೂಮಿಗೆ ಹೋದರೂ ನಿನಗೆ ಸದ್ಗತಿ ದೊರೆಯಲಾರದು. ಎಲ್ಲಿ ತೊಲಗುವೆಯೋ ಹೋಗು; ಬೇರೊಬ್ಬನನ್ನು ಹಿಡಿದು ನಂದರಾಜ್ಯದಲ್ಲಿ ಕೂಡಿಸಿ, ಪ್ರತಿಜ್ಞೆ ಪೂರೈಸಿ, ನೆಲದ ಋಣವನ್ನು ತೀರಿಸದಿದ್ದರೆ ನಾನು ಚಾಣಕ್ಯನಲ್ಲ, ವಾತ್ಸ್ಯಾಯನನಲ್ಲ, ದ್ರವಿಡನಲ್ಲ, ಪಕ್ಷಿಲನಲ್ಲ!'' ಎನ್ನುತ್ತಾ ನೆಲವನ್ನು ಕಾಲಿನಿಂದ ಬಲವಾಗಿ ಒದೆದ!

ಚಂದ್ರಗುಪ್ತ ಆಚಾರ್ಯನ ಪಾದಗಳಿಗೆರಗಿ ತನ್ನ ತಪ್ಪೊಪ್ಪಿಕೊಂಡ. ''ಇಲ್ಲ, ಗುರುವೆ, ನಿಮ್ಮ ಸೇವೆಯನ್ನು ಬಿಡಲಾರೆ. ನಾನು ಹೇಡಿಯಲ್ಲ. ಕರ್ತವ್ಯ ವಿಮುಖನೂ ಅಲ್ಲ. ತಮ್ಮ ಅಪಾರ ವಿದ್ಯೆಯ ಈ ಅಧ್ಯಾತ್ಮ ಮುಖಕ್ಕೆ, ಪ್ರಕೃತ ರಾಜಕೀಯ ಮುಖದಿಂದ ಮಸಕಾಗಬಾರದೆಂಬ ಪ್ರೀತ್ಯತಿಶಯದಿಂದ ಹಾಗೆ ನುಡಿದೆ.'' ಎನ್ನುತ್ತ ಮಗುವಿನಂತೆ ಅತ್ತ.

ಕೊಂಚ ಪ್ರಸನ್ನನಾದರೂ ಆಚಾರ್ಯನ ದುಗುಡ ನೀಗಲಿಲ್ಲ: "ಅಲ್ಲ! ನಿನ್ನಲ್ಲಿ ಈ ದೋಷ ಹುಟ್ಟಿನಿಂದ ಇರುವಂತಿದೆ. ನಾನೇನೋ ನಿನ್ನನ್ನು ರಾಜ್ಯದಲ್ಲಿ ಪ್ರತಿಷ್ಠಿಸುತ್ತೇನೆ. ಆದರೆ ನೀನು ಅನಾರ್ಯಮತಗಳ ಸುಳಿಯಲ್ಲಿ ಸಿಕ್ಕು ಒಂದು ದಿನ ಸಂನ್ಯಾಸಿಯಾಗೇ ತೀರುವೆ" ಎನ್ನುತ್ತಾ ಬಲವಾಗಿ ತಲೆಯಾಡಿಸುತ್ತಾ ತನ್ನ ನಿರೋಧವನ್ನೂ ಸೂಚಿಸಿದ.

ಅಷ್ಟರಲ್ಲಿ ಪಾಂಚರಾತ್ರಿಗಳ ಪ್ರಧಾನ ಆಚಾರ್ಯ ವಾಸುದೇವ ಭಟ್ಟಾರಕರು ಬಂದರು. ಚಾಣಕ್ಯ ಅವರನ್ನು ನೋಡಿ; "ಭಟ್ಟರೇ, ಯವನರಿಗೆ ಮೂರ್ತಿ ಪೂಜೆಯಲ್ಲಿ ನಂಬಿಕೆಯುಂಟು. ಆಗವುದಲ್ಲಿ ಮ್ಲೇಂಛ, ಹೂಣ, ಯವನಾದಿಗಳಿಗೂ ವೈಷ್ಣವರಾಗಲು ಅವಕಾಶವುಂಟು. ಆದರಿಂದ ಅವರಿಗೂ ಸದ್ಗತಿ, ರಾಷ್ಟ್ರಕ್ಕೂ ಅನೈಕ್ಯದ ಕುತ್ತು ತಪ್ಪುತ್ತದೆ. ನಿಮ್ಮ ಅನುಚರರು ಸಿಂಧು, ಗುರ್ಜರ, ವಿಂಶತಿಗ್ರಾಮ (ಬೀಸ್‌ನಗರ); ಹರಿಯೂಪ (ಹರಪ್ಪ), ಮಹಾಯಜ್ಞಧಾರಾ (ಮೊಹೆಂಜೊದಾರೋ), ಸೌರಾಷ್ಟ್ರ, ಭಲ್ಲೂಕದೇಶ (ಬಲೂಚಿ ಸ್ಥಾನ) ಮುಂತಾದ ಯವನ ಬಿಡಾರಗಳತ್ತ ನಡೆದು, ಧನಿಕರೂ ಆಸ್ತಿಕರೂ ಆದ ಅವರನ್ನು ಶಂಖಚಂಕ್ರಾಂಕನಗಳಿಂದ ವೈಷ್ಣರವನ್ನಾಗಿಸಬೇಕು. ನಿಮ್ಮ ಖರ್ಚಿಗೆ ಈ ಹಣ" ಎನ್ನುತ್ತಾ ಬಂಗಾರದ ಮೊಹರುಗಳ ಚೀಲವೊಂದನ್ನು ಅವರಿಗಿತ್ತು.

"ರಾಜಕೀಯ ಮಹತ್ವಾಕಾಂಕ್ಷೆಯ ಯವನರನ್ನು ನಾನು ವಿಚಾರಿಸಿಕೊಳ್ಳುತ್ತೇನೆ. ಇಲ್ಲಿಯೇ ಉಳಿಯುವವರು ಇಲ್ಲಿಯ ಜನಸಮೂಹದ ಸಂಸ್ಕೃತಿಗೆ, ಪ್ರವಾಹಕ್ಕೆ ಹೊಂದಿ ಈ ನೆಲ ಜಲದಲ್ಲೇ ಜೀರ್ಣರಾಗಲಿ. ಅಜೀರ್ಣರಾಗುವ ಅಮೇಧ್ಯರನ್ನು ನಾನು ಮುಗಿಸುವೆ" ಎನ್ನುತ್ತಾ ವೇಗಶರ್ಮನತ್ತ ನೋಡಿದ.

ವೇಗಶರ್ಮ : "ಜೀಯಾ, ಇಂದುಶರ್ಮನು ಜೀವಸಿದ್ಧಿಯಾಗಿ ನಂದರ ಅಮಾತ್ಯನ ಹೃದಯವನ್ನು ಗೆದ್ದಾಯಿತು'' ಎನ್ನುತ್ತಾ ವಿವರಗಳನ್ನು ನೀಡಿಯಾಯ್ತು. ಚಾಣಕ್ಯ ಬಹು ಸಂತೋಷಿಸಿದ.

"ವೃಷಲ, ಇಂದು ಸಂಜೆ, ಸಂಧ್ಯಾನಂತರ ವಾಯುವ್ಯದತ್ತ, ಪುರುಷ ಪುರಕ್ಕೆ ( ಪೇಶಾವರ್ ) ಪರ್ವತೇಶನೆಡೆಗೆ ನಮ್ಮ ಪ್ರಯಾಣಕ್ಕೆ ಶುಭ ಮುಹೂರ್ತವಿದೆ. ಮಥುರೆಯ ವೈಷ್ಣವ ಶ್ರೇಷ್ಠಿಯೊಬ್ಬನ ಸರಕುಗಾಡಿ ಗಳು ಅದೇ ದಿಕ್ಕಿನತ್ತ ಹೊರಡಲಿವೆ. ಸಿದ್ಧನಾಗು" ಎಂದು ಚಂದ್ರಗುಪ್ತ ನಿಗೆ ಚಾಣಕ್ಯ ಅಪ್ಪಣೆ ಮಾಡಿದ.

"ವೇಗಶರ್ಮ, ನೀನಿಂದು ದಣಿದಿರುವೆ! ಈ ಆಶ್ರಮದಲ್ಲಿ ವಿಶ್ರಾಂತ ನಾಗು. ಒಂದೆರಡು ದಿನದಲ್ಲಿ ಮತ್ತೆ ಪಾಟಲೀಪುತ್ರಕ್ಕೆ ಹೋಗಿ, ಸಿದ್ಧಾರ್ಥ ಕನೊಡಗೂಡಿ, ಸಮಯ ಬಂದಂತೆಲ್ಲ ಬಾಗುರಾಯಣಾದಿಗಳಿಗೆ ರಾಜರಲ್ಲಿ ಅಪ್ರೀತಿಯನ್ನು ಬೆಳೆಸುತ್ತಿರು. ಇನ್ನೊಂದು ತಿಂಗಳಲ್ಲಿ ಪರ್ವತೇಶನ ಸೈನ್ಯ ದೊಡನೆ ನಾನೂ ಚಂದ್ರಗುಪ್ತನೂ ಪಾಟಲೀಪುತ್ರದತ್ತ ಬಂದೆರಗುತ್ತೇವೆಂದು ಹೇಳು. ರಾಕ್ಷಸನಿಗೆ ನಮ್ಮ ಚರ್ಯೆಗಳು ತಿಳಿದಿಲ್ಲವಷ್ಟೆ ?" ಎಂದು ಕೇಳಿದ.

"ಪ್ರಭು ! ಚಾಣಕ್ಯರು ಮಾಟಮಂತ್ರ ಮಾಡಿಸುತ್ತಿರುವರೆಂದೂ, ಎಲ್ಲೋ ಪಶ್ಚಿಮದತ್ತ ಹೊರಟಿರುವರೆಂದೂ ಅವನ ಊಹೆ. ಚಂದ್ರಗುಪ್ತನ ತಾಯಿ, ಹೆಂಡತಿಯರನ್ನು ಗುಪ್ತಸ್ಥಳದಲ್ಲಿರಿಸಿದ್ದು ಅಮಾತ್ಯನಿಗೆ ಅದರ ಸುಳಿವಿನ್ನೂ ಸಿಕ್ಕಿಲ್ಲ. ರಾಕ್ಷಸ ಬುದ್ಧಿವಂತನಾದರೂ ಆರ್ಯರ ಸಮಕ್ಕೇರ ಲಾರ!" ಎಂದು ಹೊಗಳಿದ.

"ನೀನು ಹೇಗೆ ಬಂದೆ?" ಎಂಬ ಚಾಣಕ್ಯನ ಪ್ರಶ್ನೆಗೆ, ವೇಗಶರ್ಮ "ಯಾರದ್ದೋ ಕಾವಲಿನ ಕುದುರೆಗೆ ಜೀನುಲಗಾಮುಗಳನ್ನು ಸಿದ್ಧಪಡಿಸಿ ದ್ದರು; ಅದನ್ನೇರಿ ಹತ್ತುಗಾವುದ ಬಂದು, ಆ ಕುದುರೆಯನ್ನಲ್ಲಿ ಬಿಟ್ಟು, ಅಂಥದೇ ಬೇರೊಂದು ಕುದುರೆಯನ್ನೇರಿ ಅಲ್ಲಿಂದ ಬಂದೆ. ಊರ ಹೊರಗೆ

ಕುದುರೆ ಮೇಯುತ್ತಿದೆ. ನನ್ನ ಹಳೆಯ ಪರಿಚಯದವನೊಬ್ಬ ಅದರ ಉಸ್ತುವಾರಿ ನೋಡುತ್ತಿದ್ದಾನೆ." ಎಂದ. "ಸಿಕ್ಕಿ ಬೀಳಬೇಡ" ಎಂದು ಚಾಣಕ್ಯ ಆಶೀರ್ವದಿಸಿದ.

ವೈಷ್ಣವ ಶೆಟ್ಟಿಯ ಗಾಡಿಯಲ್ಲಿ ಚಾಣಕ್ಯನೂ, ವೇಷಾಂತರದ ಚಂದ್ರಗುಪ್ತನೂ ಆ ಸಂಜೆ ಪುರುಷಪುರದತ್ತ ಹೊರಟರು.

ಪಾಂಚರಾತ್ರಿಗಳು ಸಿಂಧುವನದತ್ತ ಹೊರಟರು. ಹದಿನೈದುದಿನಗಳಲ್ಲಿ ಅವರ ಪ್ರಗತಿಯನ್ನು ತಿಳಿಸುವಂತೆ ಚಾಣಕ್ಯ ವಾಸುದೇವಭಟ್ಟಾರಕರಿಗೆ ಅಪ್ಪಣೆ ಇತ್ತಿದ್ದ.



## ಏಳನೆಯ ಅಧ್ಯಾಯ

# ಪ್ರಥಮತಂತ್ರಫಲ

ಚಾಣಕ್ಯ ಚಂದ್ರಗುಪ್ತರು ಆ ವೈಷ್ಣವಶೆಟ್ಟಿಯ ಗಾಡಿಯಿಂದಿಳಿದು ಅಸಿಕ್ನೀನದಿಯ ಬಳಿ ಉಳಿದರು. ಏಳು ದಿನ, ಏಳುರಾತ್ರಿ ಅಲ್ಲಲ್ಲಿ ತಂಗುತ್ತಾ ಪ್ರಯಾಣ ಮಾಡಿ ದಣಿದಿದ್ದರು. ಪುರೂರವನೆಂಬ ಪರ್ವತೇಶನ ರಾಜಧಾನಿ ಆ ನದಿಯ ದಡದಲ್ಲೇ ಇತ್ತು. ವಿಪಾಶಾ, ಐರಾವತೀ ಮೊದಲಾದ ನದಿಗಳನ್ನು ಹಾಯ್ದು ಬಂದು ಚಾಣಕ್ಯನಿಗೆ ತಪೋಭೂಮಿಯಲ್ಲೇ ಇದ್ದಂತೆ ಎನ್ನಿಸುತ್ತಿತ್ತು. ಎಷ್ಟು ಮಹರ್ಷಿಗಳು ಈ ನದೀ ತಟಗಳಲ್ಲಿ ತಪಸ್ಸು ಮಾಡಿದ್ದರೋ! ಎಷ್ಟು ಸಾವಿರ ವೇದಮಂತ್ರಗಳು ಅಲ್ಲಿ ಅವರಿಗೆ ಪ್ರತ್ಯಕ್ಷವಾಗಿದ್ದವೋ! ಎಷ್ಟು ಸಹಸ್ರ ಯಜ್ಞಯಾಗಗಳು ಅಲ್ಲಿ ನಡೆದಿದ್ದವೋ!! ಮಹರ್ಷಿಗಳೆಲ್ಲ ಎತ್ತ ಹೋದರು?

ದಾರಿಯಲ್ಲಿ ಚಾಣಕ್ಯ ಮೌನವಹಿಸಿದ್ದ. ಗುರುಸ್ವಭಾವವನ್ನರಿತಿದ್ದ ಚಂದ್ರಗುಪ್ತ ಆ ಮೌನಕ್ಕೆ ಹೇಗೂ ಭಂಗ ತರಲಿಲ್ಲ. ಅಲ್ಲಲ್ಲಿ ಚಾಣಕ್ಯನ

ಕಣ್ಣಿಗೆ ಮರಗಳಿಂದ ನೇಣುಹಾಕಿ ಕೊಂದಿದ್ದ ಬ್ರಾಹ್ಮಣರ ಶವಗಳ್ಳಅವಶೇಷ ಗಳೂ, ನೆಲದಲ್ಲಿ ಉರುಳಿಬಿದ್ದ ಆನೆ, ಕುದುರೆಗಳ ಹೆಣಗಳೂ ಕಣ್ಣಿಗೆ ಬಿದ್ದವು. ದುರ್ವಾಸನೆಯೊಂದು ಕಡೆ. ಆರ್ಯಾವರ್ತ, ಪುಣ್ಯಭೂಮಿ ಅನಾಥವಾಯಿತಲ್ಲ ಎಂಬ ದುಃಖವೊಂದು ಕಡೆ. ಶತದ್ರೂ ನದಿಯು ಸಿಂಧುವನ್ನು ಸೇರುವ ಯೌಧೇಯ ಪ್ರಾಂತದಿಂದ ಹಿಡಿದು, ಕ್ಷುದ್ರಕರನಾಡು ಮಾಲವಕೋಟೆ, ಕಮಲಕೋಟೆ, ಇತ್ತ ಆರಟ್ಟಿಯ ವರೆಗೆ ವಿತಸ್ತಾ ನದಿಯ ವರೆಗೆ, ಪೌರವನ ರಾಷ್ಟ್ರವಾಗಿತ್ತು.

"ಸುಟ್ಟ ಯವನನಿಗೆ ಕರುಣೆಯೇ ಇಲ್ಲವಲ್ಲ! ಎಂಥ ನಾಡನ್ನು ನಿಷ್ಕಾರಣವಾಗಿ ಹಾಳುಗೆಡವಿದ!!" ಎಂದು ಚಾಣಕ್ಯ ಪರಿತಪಿಸಿದ್ದ. ಪ್ರಾಯೋಪವೇಶ ಮಾಡಿ ಸತ್ತ ಋಷಿಗಳೂ, ಅನಾಥರಾಗಿ ಕೊಲ್ಲಲ್ಪಟ್ಟ ಸ್ತ್ರೀಯರೂ ಅಲೆಕ್ಸಾಂಡರನ ಮಾರಣ ಹೋಮದಲ್ಲಿ ಸೇರಿದ್ದನ್ನು ದಾರಿ ಯಲ್ಲಿ ಗಾಡಿ ನಿಂತಾಗ ಅಲ್ಲಲ್ಲಿನ ಜನ ಚಾಣಕ್ಯನಿಗೆ ತಿಳಿಸಿದರು. ಪರ್ವತನ ಪರಾಕ್ರಮ, ದಿಟ್ಟ ಹೋರಾಟಗಳನ್ನೂ ತಿಳಿಸಿದರು. ಪರ್ವತನ ಉತ್ತರಕ್ಕೆ ಅವನ ತಮ್ಮ ವಿರೋಚಕನ ರಾಷ್ಟ್ರವಿತ್ತು. ತಕ್ಷಶಿಲೆ ಇದ್ದದ್ದು ಅವನ ನಾಡಿ ನಲ್ಲೇ! ವರುಣಾನದಿಯನ್ನು ಜೀವನಾಡಿಯಾಗಿ ಹೊಂದಿದ್ದ ಆ ನಾಡಿನ ಈ ನೀಚದೊರೆ ಓಡಿಹೋಗಿ, ಭಾರತೀಯರ ಮರ್ಯಾದೆಯನ್ನೇ ಕಳೆದಿದ್ದ! ಅಣ್ಣತಮ್ಮಂದಿರಲ್ಲಿ ಗುಣ ರೂಪಪರಾಕ್ರಮ ಸಾಮ್ಯ ಇರಲಿಲ್ಲ.

ವಿರೋಚಕನ ನಾಡಿನ ಪೂರ್ವಕ್ಕೆ ಅಭಿಸಾರ ದೇಶವಿತ್ತು. ಆ ಅರಸ ಯವನ ಸೇನೆಯ ಎದುರು ಎಷ್ಟೂ ನಿಲ್ಲಲಾಗದೆ ಹೋರಾಡಿ ಸತ್ತಿದ್ದ. ಉತ್ತರದ ಪುಷ್ಕಲಾವತಿ, ಅಶ್ವಕ, ಮೊದಲಾದ ಪುಟ್ಟಸಂಸ್ಥಾನಗಳ ಅರಸರು ಯವನರ ಕತ್ತಿಗಳಿಗೆ ನೊಣಗಳಷ್ಟೂ ಎದುರಾಗಲಿಲ್ಲ. ಅದರ ವಾಯುವ್ಯದ ದೊರೆ ಅಂಭಿಯ ರಾಷ್ಟ್ರದ್ರೋಹ ಈ ಅನರ್ಥಗಳಿಗೆಲ್ಲ ಕಾರಣ ಎಂದು ಎಲ್ಲೆಲ್ಲೂ ಜನ ಹೇಳುತ್ತಿದ್ದರು. ಯವನನನ್ನು ಸ್ವಾಗತಿಸಿ, ಒಳ ಕರೆದು ತನ್ನ ಸೈನ್ಯವನ್ನೂ ಅವನೊಡಗೂಡಿಸಿ, ಅಂಭಿಯು ಅಭಿಸಾರನ ಮೇಲೂ, ಅಶ್ವಕ, ವಾಹ್ಲಿಕ, ದರದ, ಮೊದಲಾದ ಅರಸರ ಮೇಲೆ ಹಳೆಯ ಹಗೆತನ

ವನ್ನು ತೀರಿಸಿಕೊಂಡಿದ್ದ. ಆದರೇನು ? ಯವನರಿಗೆ ಮೊದಲು ಬಲಿಪಶು ವಾದವನು ಅಂಭಿಯೇ ! ಅವನ ಸಹಾಯ ಪಡೆದಾದ ಮೇಲೆ ತನ್ನವರಿಗೆ ದ್ರೋಹ ಮಾಡಿದ ಅಂಭಿಯನ್ನು ಅಲೆಗ್ಸಾಂಡರ್ ಕ್ರೂರವಾಗಿ, ಕಣ್ಣು ಕೀಳಿಸಿ, ನಾಲಗೆ ಎಳೆಸಿ, ಸಜೀವ ಸುಡಿಸಿ ಕೊಂದಿದ್ದ! ಮಾಸಿಕವೆಂಬ ಅವನ ನಗರದಲ್ಲಿ ಏಳೆಂಟು ಸಾವಿರ ಸ್ತ್ರೀ ಪುರುಷರು ಶರಣಾಗತರಾದರು. ರಕ್ಷಣೆಯ ಭರವಸೆ ಕೊಟ್ಟಿದ್ದ ಯವನ, ಮನಸ್ಸು ಬದಲಿಸಿ, ಅಲ್ಲಿನ ಪುರುಷ ರನ್ನೂ ಬಾಲಕರನ್ನೂ ನಿಷ್ಕರುಣೆಯಾಗಿ ಕೊಲ್ಲಿಸಿದ ! ಸ್ತ್ರೀಯರು ವೀರಾ ವೇಶದಿಂದ ಹೋರಾಡಿ ಸತ್ತರು. ಯವನನನ್ನು ಸ್ತ್ರೀಯರು ಎದುರಿಸಿದ್ದು ಇದೊಂದೇ ನಾಡಿನಲ್ಲಿ. ಗೆದ್ದಾದರೂ ಯವನನಿಗೆ ಭಯವಾಗಿದ್ದಿರಲು ಸಾಕು; ಮುಂದುವರೆದರೆ ಇನ್ನೆಷ್ಟು ಸಾವಿರ ಸ್ತ್ರೀಯರು ಎದುರಾಗುವರೋ! ಎಂದು.

ಪೌರವ ಸೇನೆಯ ಆನೆಗಳನ್ನು, ಅಂಥ ಪ್ರಾಣಿಗಳನ್ನು ಯವನರು ಆ ಮೊದಲು ಕಂಡಿರಲಿಲ್ಲ ! ಕಂಡು ಹೆದರಿದರು! ದಣಿದೂ ಇದ್ದರು !!

"ಎಲೋ ! ಅಲೀಕಸುಂದರ ! (ಸುಳ್ಳು ಸೌಂದರ್ಯದವನೇ !) ನಾನು ಬದುಕಿರುವವರೆಗೂ ನಿನ್ನನ್ನು ಮುಂದುವರೆಯಲು ಬಿಡುವುದಿಲ್ಲ ! ನಾನು ಸತ್ತ ಮೇಲೆ ಆ ಕಡೆ ನಂದರಾಜ್ಯದ ಕೋಟ್ಯಾಂತರಸೇನೆ ಇದೆ ! ತಕ್ಷ ಶಿಲೆಯ ಚಾಣಕ್ಯನೊಬ್ಬನೇ ಸಾಕು, ನಿನ್ನನ್ನು ನಿಗ್ರಹಿಸಲು. ನನ್ನ ತಮ್ಮನ ಅವಿವೇಕದಿಂದ ತಕ್ಷಶಿಲೆ ನೆಲಸಮವಾಯಿತು! ಆಚಾರ್ಯನೆಲ್ಲಿ ಹೋದನೋ!! ಅವನ ತಪಸ್ಸಿನ ನೆರವು ನನಗೆ ಇಂದು ದೊರೆತಿದ್ದರೆ !...." ಎನ್ನುತ್ತಾ ವೀರಾ ವೇಶದಿಂದ ಹೋರಾಡಿದ್ದ ಪರ್ವತೇಶ. ಆದರೇನು, ಯವನರ ತಂತ್ರಗಳಿಗೆ ಸೆರೆಸಿಕ್ಕು ಬಿದ್ದ.

ಯವನ ತತ್ತರಿಸಿದ್ದ! ಗೌರವ ಸ್ಫೂರ್ತಿ ಕೆಡುವ ಮುಂಚೆ ಸೋತೂ ಗೆಲ್ಲುವ ಉಪಾಯದಿಂದ "ಅಯ್ಯಾ ಭಾರತವೀರ! ನಿನ್ನ ಆತ್ಮಗೌರವಕ್ಕೆ ಮೆಚ್ಚಿದೆ. ನಿನ್ನ ರಾಜ್ಯವನ್ನು ನೀನೇ ಇಟ್ಟುಕೋ! ಹೆಸರಿಗೆ ನನ್ನ ಅಧಿ ಪತ್ಯಕ್ಕೆ ಅಂಕಿತ ಹಾಕು." ಎಂದು ನಿರ್ಬಂಧಿಸಿದ್ದ.

ನಿರಪರಾಧಿಜನಗಳ ಹತ್ಯೆಯಿಂದ ನೊಂದಿದ್ದ ಪರ್ವತೇಶ ಅಂಕಿತ ಹಾಕ ಬೇಕಾಯ್ತು. ಪರ್ವತನಾಡು, ವಿರೋಚಕನ ನಾಡು, ಅಭಿಸಾರದೇಶ, ಅಂಭಿಯಬೀಡು,-ಅತ್ತ ಕಶ್ಯಪಪುರದ ವಾಯವ್ಯ ಪ್ರಾಂತದಿಂದ, ಇತ್ತ ಆಗ್ನೇಯದ ಶತದ್ರೂ ದಡದ ಸಿಂಹಪುರದ ವರೆಗೆ ಎಲ್ಲ ಶತ್ರುಪರ ವಶವಾಯ್ತು. ಉತ್ತರಕ್ಕೆ ನ್ಯಾಯಾರ್ಕ (ನಿಯಾರ್ಕಸ್) ಎಂಬುವನನ್ನೂ, ದಕ್ಷಿಣಕ್ಕೆ ಶೈಲೂಷಕ (ಸೆಲ್ಯುಕಸ್) ಎಂಬವನನ್ನೂ ಸತ್ರಪರನ್ನಾಗಿಸಿ, ಆಲೀಕ ಸುಂದರನು ರಾತ್ರೋರಾತ್ರಿ, ವಾಪಸಾಗುವ ನದೀ ಸುರಕ್ಷಿತ ಜಲಮಾರ್ಗ ಬಿಟ್ಟು, ದಣಿದ ಸೈನಿಕರೊಡನೆ ಮರುಭೂಮಿಯ ಮುಖಾಂತರ ಹಾಯ್ದು ಓಡುತ್ತಾ ಬೇಬಿಲೋನಿಯಾದಲ್ಲಿ ಸತ್ತ ಸುದ್ದಿಯೂ ಪರ್ವತನಿಗೆ ತಲುಪಿತ್ತು. ನಂದಸೇನೆಯ, ಚಾಣಕ್ಯನ, ಭಯ ಅವನನ್ನು ಕೊಂಡಿತ್ತು.

ಅಸಿಕ್ನೀ ನದಿಯಲ್ಲಿ ಸ್ನಾನಕ್ಕಿಳಿದ ಚಾಣಕ್ಯ ಶ್ರುತವಿನೀತನೆಂಬ ಪ್ರೌಢ ಶಿಷ್ಯನೊಡನೆ, ಇನ್ನೂ ನಾಲ್ವರು ಶಿಷ್ಯರನ್ನು ಪರ್ವತೇಶನ ಆಸ್ಥಾನಕ್ಕೆ ಕಳುಹಿ, ತನ್ನ ಬರವಿನ ಸಮಾಚಾರವನ್ನು ದೊರೆಗೆ ತಿಳಿಯ ಪಡಿಸಿದ. ದುಃಖ ಸಾಗರದಲ್ಲಿ ಮುಳುಗಿದ್ದ ಅರಸನಿಗೆ ಕೊಂಚ ಚೈತನ್ಯ ಬಂದಂತಾ ಯಿತು. ಹಳೆಯ ಸೊಕ್ಕು ಮುರಿದಿತ್ತು. ರಾಜಮರ್ಯಾದೆಗಳೊಡನೆ ತಾನೇ ನದೀ ತೀರಕ್ಕೆ ಬಂದು ಚಾಣಕ್ಯನಿಗೆ ದೀರ್ಘ ಪ್ರಣಾಮ ಮಾಡಿ, ಆಚಾರ್ಯನನ್ನು ಬಂಗಾರದ ಪಲ್ಲಕ್ಕಿಯಲ್ಲಿ ಕೂಡಿಸಿ, ಮೆರವಣಿಗೆಯೊಡನೆ ನಗರಕ್ಕೆ ಬರಮಾಡಿಕೊಂಡು ಸ್ವಾಗತಿಸಿದ. ನಗರ ಬೀದಿಗಳಲ್ಲಿ ಕಿಕ್ಕಿರಿದು ಸೇರಿದ್ದ ಜನಸ್ತೋಮದ ಕಂಗಳಲ್ಲಿ ಅಡಗಿದ್ದ ಭಯ, ಭೀತಿಯಭಾವ ಚಾಣಕ್ಯನ ಸೂಕ್ಷ್ಮಗಮನಕ್ಕೆ ಬರದಿರಲಿಲ್ಲ. ಊರಿನಲ್ಲಿ ಯಾವ ಉತ್ಸವದ ವಾತಾವರಣವೂ ಇರದೆ, ದಿಢೀರನೆ ಏರ್ಪಟ್ಟ ಸ್ವಾಗತ ಇದೆಂದು ಅರಿತ.

ಚಂದ್ರಗುಪ್ತನನ್ನು "ರಾಜಕುಮಾರ"ನೆಂದೂ, ಮಗಧದ ಮೌರ್ಯನ ಮೊಮ್ಮಗನೆಂದೂ ಆಚಾರ್ಯ ಪರಿಚಯಿಸಿದೊಡನೆಯೇ ಪರ್ವತನಿಗೆ ಕುತೂ ಹಲವಾಗಿತ್ತು! ಇದೇನೋ ಹೊಸ ರಾಜಕೀಯವಿರುವಂತಿದೆ, ಎಂದು ಸೂಕ್ಷ್ಮಮತಿಯ ಅವನಿಗೆ ತಿಳಿಯಿತು. ನದೀ ದಡದಲ್ಲಿ ಏನನ್ನೂ ಅವನು

ತೋರ್ಪಡಿಸಿಕೊಳ್ಳಲಿಲ್ಲ. ಚಂದ್ರಗುಪ್ತನನ್ನು ರಾಜೋಚಿತವಾಗಿಯೇ ಆನೆಯ ಮೇಲೆ ಕೂಡಿಸಿ ವೈಭವದಿಂದ ಊರಿಗೆ ಕರೆತರಲಾಗಿತ್ತು.

ಪರ್ವತನ ಮಂತ್ರಿ ಶಬರವರ್ಮನಿಗೆ ಆಶ್ಚರ್ಯವೋ ಆಶ್ಚರ್ಯ. ಯವನನ ಅವಾಂತರದಿಂದ ಪರ್ವತರಾಜ್ಯದ ಗೂಢಚಾರರ ಜಾಲ ಧ್ವಂಸ ವಾಗಿತ್ತು. ಮಗಧದ ಸಮಾಚಾರ ತಿಳಿದಿರಲಿಲ್ಲ. ಅರಮನೆಯಲ್ಲಿ ಅತಿಥಿ ಗಳಿಗೆ ಮರ್ಯಾದೋಚಿತ ಸತ್ಕಾರ ನಡೆಯಿತು.

ಸಂಜೆಯ ಸಭೆ. ಆರೂವರೆಯಡಿ ಎತ್ತರದ, ಕೆಂಪುಮೈ ಬಣ್ಣದ ದೃಢ ಗಾತ್ರನಾದ ಪರ್ವತೇಶ, ಹಳೆಯ ಪುರೂರವನಂತೆಯೇ ಸ್ಫುರದ್ರೂಪಿ, ತೇಜಸ್ವಿ, ಸತ್ಯವಾಕ್ಯ, ನೇರಸ್ವಭಾವದವನೆಂದು ಪ್ರಸಿದ್ಧನಿದ್ದು, ಓಲಗದಲ್ಲಿ ಕುಳಿತು ಇಂದ್ರನಂತೆಯೇ ಶೋಭಾಯಮಾನನಾಗಿದ್ದ.

ಆಚಾರ್ಯನಿಗೆ ಎಡಬದಿಯಲ್ಲೂ, ಶಬರವರ್ಮನಿಗೆ ಬಲಬದಿಯಲ್ಲೂ ಭದ್ರಾಸನಗಳು ಏರ್ಪಟ್ಟವು. ಆಚಾರ್ಯನ ಬಲಕ್ಕೆ ಚಂದ್ರಗುಪ್ತನಿಗೂ ರಾಜಾಸನವಿತ್ತು. ಓಲಗದವರೆಲ್ಲ ಚಂದ್ರಗುಪ್ತನತ್ತ ನೋಡುವವರೇ! ಚಾಣಕ್ಯ ಎದ್ದು ನಸುಬಾಗಿ, ಅರಸನನ್ನಾಶೀರ್ವದಿಸಿ, "ದೊರೆಯೇ ! ನಿನ್ನ ನಾಡಿಗೆ ಅಕಾಲದಲ್ಲಿ ದಿಢೀರನೆ ಬಂದೊದಗಿದ ಆಪತ್ತನ್ನು ಕೇಳಿ ವ್ಯಥಿಸು ತ್ತೇನೆ. ನಿನ್ನ ತಮ್ಮನ, ಸಾಮಂತನ ಅವಿವೇಕ ಫಲ ಇದು. ಶತ್ರುಗಳನ್ನು ರಾಷ್ಟ್ರದ ದ್ವಾರದಲ್ಲಿ ನಿಗ್ರಹಿಸದೇ ಒಳಬಿಟ್ಟ ಇಬ್ಬರೂ ದಂಡ್ಯರು. ಒಬ್ಬ ನಂತೂ ಶಿಕ್ಷೆ ಅನುಭವಿಸಿದ. ಇನ್ನೊಬ್ಬ ಪತ್ತೆಯಿಲ್ಲ ! ನಿನ್ನ ಜನದ ದುಗುಡವನ್ನೂ, ನಿನ್ನ ಅಭಿಮಾನನಷ್ಟವನ್ನೂ, ಆತ್ಮ ಗೌರವದ ಪೆಟ್ಟನ್ನೂ ನಾನು ಕೇಳಬಲ್ಲೆ. ಅರಿಯಬಲ್ಲೆ. ಇಕೋ, ಈ ಮಗಧದ ರಾಜಪುತ್ರನ ಸ್ಥಿತಿಯೂ ಬೇರೆ ಆಗಿಲ್ಲ. ಸಮಾನ ದುಃಖದಲ್ಲಿರುವವರು ಶ್ರೀರಾಮ ಸುಗ್ರೀವರಂತೆ ಒಂದಾದರೆ, ನಂದರಾವಣರನ್ನೂ; ಸತ್ರಪ-ಕುಂಭಕರ್ಣರನ್ನೂ ನಿಗ್ರಹಿಸುವ ಸಾಧ್ಯತೆ ಇದೆ. ನನ್ನ ತಪಸ್ಸು, ತಂತ್ರಕೌಶಲ ನಿನ್ನ ಸೇವೆಗಿದೆ. ನಾಡು ಪರಾಕ್ರಾಂತವಾದಾಗ ಮುನಿಯೂ ಕಾಷಾಯ ಬಿಟ್ಟು ಕತ್ತಿ ಸೆಳೆಯ

ಬೇಕಾಗುತ್ತದೆ. ನೀನು ಅಗ್ನಿಯಾಗಿ, ನಾನು ವಾಯುವಾದರೆ ಭಾರತ ಸಂಸ್ಕೃತಿಯ ಶತ್ರುಗಳು ನಿರ್ನಾಮವಾದಾರು. ನೀನು ಚಂದ್ರವಂಶ್ಯ; ಚಂದ್ರಗುಪ್ತ ಸೂರ್ಯವಂಶ್ಯ. ಚಂದ್ರಸೂರ್ಯರು ಸೇರಿ, ರಾತ್ರಿಹಗಲೂ ಬೆಳಗಿ ಕತ್ತಲೆಯೋಡಿಸುವಂತೆ ರಾಷ್ಟ್ರರಕ್ಷಿಸುವ ಕಾಲ ಇದು," ಎಂದು ಸಮ ಯೋಚಿತವಾಗಿ ಆಲಂಕಾರಿಕ ಭಾಷೆಯಲ್ಲಿ ಪ್ರಭಾವಶಾಲಿಯಾಗಿ ಮಾತಾಡಿದ.

ಶಬರ ವರ್ಮನೆದ್ದು ಆಚಾರ್ಯನ ಭಾವನೆಗಳನ್ನು ಗೌರವಿಸಿ; ಅತಿಥಿ ಗಳಿಗೆ ಸ್ವಾಗತಿಸಿ, ದೊರೆಯ ಪರವಾಗಿ ಮಾತಾಡಿ ಸಂಜೆಯ ಸಭೆಯನ್ನು ಮುಗಿಸಿದರು. ರಾತ್ರಿ ಏಕಾಂತದಲ್ಲಿ ದೊರೆಯೂ, ಚಾಣಕ್ಯ ಚಂದ್ರ ಗುಪ್ತರೂ, ಶಬರ ವರ್ಮನೂ ರಹಸ್ಯವಾಗಿ ಕುಳಿತು ಚರ್ಚಿಸಬೇಕೆಂದು ಗುಪ್ತವಾಗಿ ನಿಶ್ಚಯಿಸಲಾಯಿತು.

"ಆಚಾರ್ಯರೇ ! ನಾನು ಮೊದಲೇ ಅಪಮಾನದ ಕಾವೆಣ್ಣೆಯಲ್ಲಿ ಕುದಿಯುತ್ತಿರುವವನು! ನನ್ನ ಸೈನ್ಯ ಧ್ವಂಸವಾಗಿದೆ. ರಾಜ್ಯದ ಬೊಕ್ಕಸ ಬರಿದಾಗಿದೆ. ಯಾರಿಗೂ ನಾನು ಸಹಾಯ ಮಾಡುವ ಸ್ಥಿತಿಯಲ್ಲಿಲ್ಲ. ಈಗ ನಾನು ಪರಾಧೀನ ಬೇರೆ! ಆ ಹಾಳು ಶನಿ ನ್ಯಾಯಾರ್ಕ (ಸಿಯಾರ್ಕಸ್) ಸತ್ರಪ ಬೇರೆ! ಬಂಗಾರದ ದಾಹ ಅವನಿಗೆ. ದಿನಕ್ಕೊಬ್ಬ ಭಾರತೀಯ ಸ್ತ್ರೀ ಅವನ ಸಂಭೋಗಕ್ಕೆ ಬೇಕಂತೆ ! ಅವನ ಯವನ ಬಲ ಗಟ್ಟಿಯಾಗಿಯೇ ಇದೆ. ಇತ್ತ ಈ ಹಾಳು ಶೈಲೂಷಕ ಬೇರೆ! ಅವನ ಆಸೆಗೆ ಮಿತಿಯೇ ಇಲ್ಲ. ತಾನೇ ನನ್ನ ರಾಜ್ಯಕ್ಕೆ ಒಡೆಯನಾಗುವ ಅಲೀಕಸುಂದರನ ಕನಸನ್ನು ನೆನಸಾಗಿಸುವ ತವಕದಲ್ಲಿದ್ದಾನೆ. ನಾನು ಈ ಬಾಲಕ ಚಂದ್ರಗುಪ್ತನಿಗೆ ಸಹಾಯ ಮಾಡಬೇಕೆಂಬುದು ನಿಮ್ಮ ಅಣತಿಯಲ್ಲ ತಾನೇ? ನಂದರ ಸೈನ್ಯ ಸಾಮಾನ್ಯವೆ? ಅಮಾತ್ಯ ರಾಕ್ಷಸನ ಪ್ರಬಲ ತಂತ್ರವನ್ನು ಎದುರಿಸಬಲ್ಲ ಮಂತ್ರಿಗಳು ನನಗುಂಟೆ? ಎಂದು ಸಂದೇಹಿಸುತ್ತೇನೆ. ಶಬರವರ್ಮರು ವೃದ್ಧರು. ಹಳೆಯ ತಂತ್ರಗಾರಿಕೆ ಈಗ ನಡೆಯಲಾರದೆಂದು ಯವನ ಸಿದ್ಧ

ಮಾಡಿದ್ದಾನೆ. ನನ್ನನ್ನು ತಾವು ಕ್ಷಮಿಸಬೇಕು. ಬೇರತ್ತ ನಿಮಗೆ ಸಹಾಯ ದೊರಕಲಿ" ಎಂದು ಪರ್ವತ ನೊಂದು ನುಡಿದ.

ಚಾಣಕ್ಯನೆಂದ : "ಅರಸೇ ! ನಿನಗೆ ಸೋಲಿನ ಬೇಗೆ ತಟ್ಟಿರುವುದು ವಿದಿತ ! ಇದು ಸೋತವನ ಮನೋಭಾವ. ಕ್ಷತ್ರಿಯನಿಗೆ ಇದು ಸಲ್ಲದು. ಬ್ರಾಹ್ಮಣನಿಗೆ ತೃಪ್ತಿ ಇರಬೇಕು. ಅರಸನಿಗಲ್ಲ ! ಬದುಕಿರುವ ತನಕ ನೀನು ಧ್ವಜ ಎತ್ತಿ ಹಿಡಿಯಲು ಶ್ರಮಿಸಬೇಕು. ಈ ಸತ್ರಪರನ್ನು ನನ್ನ ತಂತ್ರಕ್ಕೆ ಬಿಡು! ನಿನ್ನ ಬೊಕ್ಕಸವನ್ನು ನಾನು ಈ ರಾತ್ರಿಯೊಳಗೆ ತುಂಬಿಕೊಡುತ್ತೇನೆ !! ಸತ್ರಪರ ವಶದ ನಿನ್ನ ಹಳೆಯ ಸಾಮಂತರನ್ನು ಒಗ್ಗೂಡಿಸಿ ಸೈನ್ಯವನ್ನು ಮತ್ತೆ ಸಜ್ಜು ಮಾಡುತ ಹೊಣೆ ಮಾತ್ರ ನಿನ್ನ ದಾಗಲಿ. ನಂದರನ್ನು ಕೊಂದಲ್ಲದೆ ನನ್ನ ನನ್ನ ಶಿಖೆಯನ್ನು ಬಂಧಿಸಲಾರೆ." ಎನ್ನುತ್ತಾ ತನಗಾದ ಅಪಮಾನದ ಕಥೆಯನ್ನೂ, ಚಂದ್ರಗುಪ್ತನ ಸ್ಥಿತಿಯನ್ನು ಚಾಣಕ್ಯ ಮನಂಬುಗುವಂತೆ ಚಿತ್ರಿಸಿದ.

"ಪೂಜ್ಯರು ಸಮರ್ಥರು. ಆದರೆ ಅಪ್ರತ್ಯಕ್ಷ ಸಾಮರ್ಥ್ಯದಿಂದ ಪ್ರತ್ಯಕ್ಷ ಯುದ್ಧವನ್ನು ಗೆಲ್ಲಲಾಗದು! ಸತ್ರಪರು ವಂಚಕವಿದ್ಯಾಯುದ್ಧ ವಿಶಾರದರು !" ಎನ್ನುತಾ ಅವರ ರೀತಿ, ನೀತಿ, ಆಡಳಿತಕ್ರಮ, ದೈನಂದಿನ ಚರ್ಯೆಗಳನ್ನು ದೊರೆ ವರ್ಣಿಸಿದ.

ಕೆಲಕಾಲ ಮೌನವಾಗಿದ್ದ ಚಾಣಕ್ಯ ; "ದೊರೆಯೇ, ನ್ಯಾಯಾರ್ಜನ ಅನುಚರರು ಬಂಗಾರದ ಲೋಭಿಗಳೆಂದೆಯಲ್ಲವೆ! ನಮಗೆ ಇದು ಉಪಯುಕ್ತ ಮಾಹಿತಿ'' ಎಂದು ನಗುತ್ತಾ, ಶಬರಮರ್ಜನನ್ನು, ಅರಮನೆಯಲ್ಲಿ ಉಪ ಯೋಗಕ್ಕೆಬಾರದ ಕೆಲವು ಹಲವು ತಾಮ್ರದ ಕೊಡಗಳನ್ನು ರಹಸ್ಯವಾಗಿ ಬಿಡಾರಕ್ಕೆ ತರುವಂತೆ ಹೇಳಿ "ಚಾಣಕ್ಯನ ಸಾಮರ್ಥ್ಯ ಇಂದು ನಿಮಗೆ ಪ್ರತ್ಯಕ್ಷವಾದೀತು" ಎಂದು ನಕ್ಕು, ಚಂದ್ರಗುಪ್ತನೊಡನೆ ಬಿಡಾರಕ್ಕೆ ನಡೆದು ಬಂದ.

ಆಚಾರ್ಯ ಬಿಡಾರಕ್ಕೆ ಬರುವ ವೇಳೆಗೆ ಹತ್ತಿಪ್ಪತ್ತು ನೂರು ತಾಮ್ರದ ಕೊಡಗಳು ಬಿಡಾರದ ಬಾಗಿಲಲ್ಲಿದ್ದವು! ಚಾಣಕ್ಯ ಪರ್ವತನ ಉತ್ಸುಕತೆಗೆ ಮೆಚ್ಚಿದ. ಹಲವಾರು ರಾಸಾಯನ ವಸ್ತುಗಳನ್ನೂ ಚಾಣಕ್ಯ ತರಿಸಿದ.

"ದೊರೆಯೇ, ಬೆಳಗಿನ ಝಾವ, ರಹಸ್ಯದಲ್ಲಿ ನೀನೊಬ್ಬನೇ ಇತ್ತ ಬರ ಬೇಕು" ಎಂದಪ್ಪಣೆ ಮಾಡಿ ವಿಶ್ರಾಂತನಾಗುವ ಲಕ್ಷಣ ತೋರಿದ. ಪರ್ವ ತೇಶ ನಿರ್ಗಮಿಸಿದ.

ಚಾಣಕ್ಯ ಚಂದ್ರಗುಪ್ತನನ್ನೂ ನಿದ್ರೆ ಹೋಗುವಂತೆ ಕಳುಹಿ, ಅವನ ಬಿಡಾರದ ಬಾಗಿಲಲ್ಲಿ ಅವನ ರಕ್ಷಣೆಗೆ ತನ್ನಿಬ್ಬರು ಸುರಿತ ಶಿಷ್ಯರನ್ನಿಟ್ಟು, ಶ್ರುತವಿನಯನನ್ನೂ, ಶಾಂರ್ಗರವನನ್ನೂ ತನ್ನ ಸೇವೆಗೆ ನಿಲ್ಲಿಸಿಕೊಂಡು, ಅಗ್ನಿಯನ್ನು ಪ್ರತಿಷ್ಠಾಪಿಸಿ, ತನ್ನ ರಸವಿದ್ಯೆಯ ಕೌಶಲಕ್ಕಾರಂಭಿಸಿದ. ತನ್ನ ಬಿಡಾರದ ಬಾಗಿಲಲ್ಲಿ ಉಳಿದ ತನ್ನೆಲ್ಲ ಶಿಷ್ಯರನ್ನೂ ಕಾವಲಿರಿಸಿ, ಹುಬ್ಬು ಗಂಟಿನಿಂದಲೇ "ಯಾರನ್ನೂ ಯಾವ ಕಾರಣದಿಂದಲೂ ಒಳಗೆ ಬಿಡತಕ್ಕದ್ದಲ್ಲ" ಎಂದು ಸೂಚಿಸಿ, ನಾಲ್ಕುತಾಸುಗಳಲ್ಲಿ ಆ ತಾಮ್ರವನ್ನೆಲ್ಲ ಬಂಗಾರವಾಗಿಸಿ, ಪರ್ವತನ ರಾಜ್ಯದ ಮೊಹರುಗಳಂತೆ ಅವನ್ನು ನಾಣ್ಯಗಳ ರಾಶಿಮಾಡಿದ! ಉಷಃ ಕಾಲಕ್ಕೆ ಸರಿಯಾಗಿ ಸ್ನಾನಕ್ಕೂ ಇಳಿದು, ಊರ್ಧ್ವ ಪುಂಡ್ರಧರಿಸಿ ಜಪಾಸಕ್ತನಾದ.

ರಾತ್ರಿ ಇಡೀ ಪರ್ವತನಿಗೆ ನಿದ್ರೆ ಬರಲಿಲ್ಲ! ತಾಮ್ರದ ಕೊಡಗಳಿಂದ ಈ ಬ್ರಾಹ್ಮಣನಿಗೇನು ಲಾಭ ಎಂದು ತಿಳಿಯದೆ, ತನ್ನ ಸ್ಥಿತಿಗೂ ಚಂದ್ರ ಗುಪ್ತನ ಸ್ಥಿತಿಗೂ ಮರುಗಿ, ತಾನು ನಿಸ್ಸಹಾಯಕನಾದ ಆ ಸ್ಥಿತಿಗೆ ತನ್ನನ್ನೇ ಹಳಿಯುತ್ತಾ ರಾತ್ರಿ ಕಳೆದು, ಸೂರ್ಯೋದಯ ಪೂರ್ವದಲ್ಲಿ ಚಾಣಕ್ಯನ ಬಿಡಾರಕ್ಕೆ ರಹಸ್ಯವಾಗಿ ಭೇಟಿಯಿತ್ತ! ಬಂಗಾರದ ನಾಣ್ಯಗಳ ಬೆಳಗಿನ ಅರುಣೋದಯದಲ್ಲಿ ಚಾಣಕ್ಯನೇ ಸೂರ್ಯನಂತೆ ಪ್ರಜ್ವಲಿಸಿದ ದೃಶ್ಯವನ್ನು ಕಂಡೂ ನಂಬಲಿಲ್ಲ! ಮೂಕವಿಸ್ಮಿತನಾಗಿ, ಉಸಿರೆಳೆಯಲೂ ಆಗದೆ, ತಬ್ಬಿ

ಬ್ಬಾಗಿ ನಿಂತ ಅರಸನನ್ನು ಕಂಡು, ಚಾಣಕ್ಯ ಆಚಮನ ಮುಗಿಸಿ ಮೇಲೆದ್ದು ಬಂದ. ಪ್ರಣಾಮ ಮಾಡಿದ ದೊರೆಗೆ ಆಶೀರ್ವದಿದ.

''ದೊರೆಯೆ! ಇದು ಚಾಣಕ್ಯ ಸಾಮರ್ಥ್ಯಕ್ಕೆ ಒಂದು ಉದಾಹರಣೆ. ನಿನ್ನ ಕೋಶ, ಇದರಿಂದ ತುಂಬೀತೆಂಬ ನಂಬಿಕೆ ನಿನಗೆ ಬರಲಿ. ಇನ್ನು ನ್ಯಾಯಾರ್ಹ ಸತ್ರಪನ ವಿಷಯ. ನಿನಗೆ ಆಪ್ತರಾದ ಹತ್ತು ಜನ ಶೀಘ್ರ ಕುದುರೆಸವಾರ ಗೂಢಚಾರರನ್ನು ಇನ್ನೊಂದು ಗಂಟೆಯೊಳಗೆ ಇತ್ತ ಕಳುಹು. ಉಳಿದ ನಿನ್ನ ಸೇನೆ ಅವರ ಬೆಂಗಾವಲಿಗೆ ಸಿದ್ಧವಾಗಿ, ಬೇಹಿನಲ್ಲಿ ಅವರನ್ನು ನಿಧಾನವಾಗಿ ಹಿಂಬಾಲಿಸಲಿ. ಕುಶಲಪುರದತ್ತ ಆ ದೂತರು ಮೊದಲು ಈ ಬಂಗಾರದ ನಾಣ್ಯಗಳನ್ನು ಕುದುರೆಗಳ ಮೇಲೆ ಹೇರಿಕೊಂಡು ಹೋಗುವುದಿದೆ. ಮುಂದಿನ ಕೆಲಸವನ್ನು ಅವರಿಗೆ ನಾನೇ ಹೇಳಿ ಕಳುಹುತ್ತೇನೆ. ನಾಲ್ಕು ದಿನ ಬಿಟ್ಟು ನನ್ನತ್ತ ಬರುವೆಯಂತೆ" ಎಂದು ಹೇಳಿ, ವಿಸ್ಮಿತನಾದ ಅರಸನ ಕುತೂಹಲಶಮನಾರ್ಥವಾಗಿ ಇದನ್ನು ಸೇರಿಸಿದ: "ಅರಸೆ! ನಾನು ವಿರಕ್ತ. ನನ್ನ ಪತ್ನಿ ತೀರಿಕೊಂಡು ಹದಿನೈದು ವರ್ಷಗಳಾದವು. ನನಗೆ ಶಿಷ್ಯರೇ ಪುತ್ರರು. ರಾಷ್ಟ್ರವೇ ನನ್ನ ಮನೆ. ನಿನ್ನಂಥ ರಾಷ್ಟ್ರಭಕ್ತರೇ ನನ್ನ ಮಿತ್ರರು. ನನ್ನ ವಿದ್ಯೆ, ರಾಷ್ಟ್ರಸೇವೆಗೆ ಮುಡಿಪು. ಬಂಗಾರದಿಂದ ನನಗೇನೂ ಆಗುವುದಿಲ್ಲ ಆ ಹಳದೀ ಲೋಹ ರೋಗದಿಂದ ಸಾಯುವವರಿಗೆ ಅದೇ ಮದ್ದು! ವಿದ್ಯೆ ಅಪಾತ್ರರಿಗೆ ಸಲ್ಲಬಾರದು. ಹಣವೂ ಅಷ್ಟೆ. ವಿರಕ್ತಸ್ಯ ಧನಂ ಲೋಷ್ಟಂ! ನೀನು ನಂಬಲಾರದುದನ್ನು ಇನ್ನೂ ನೋಡುವುದಿದೆ. ದೂತರನ್ನು ಕಳುಹು" ಎಂದಪ್ಪಣೆಯಿತ್ತು, ಅಗ್ನಿ-ಹೋತ್ರಕ್ಕೆ ಆಚಾರ್ಯ ಕುಳಿತ. ಶಿಷ್ಯರು ಹಿಂಬಾಲಿಸಿದರು.

ಸೂರ್ಯೋದಯವಾಯಿತ. ಪರ್ವತನ ಮುಖದಲ್ಲಿ ಹೊಸ ಆಸೆಯ ಮಿಂಚು ಮಿಂಚಲಾರಭಿಸಿತು. ಹತ್ತು ಸಮರ್ಥ ದೂತ-ಗೂಢಚಾರರನ್ನು ಕಳುಹಿದ. ವಿನಯದಿಂದ ಅವರು ಆಚಾರ್ಯನಿಗೆ ವಂದಿಸಿದರು.

ಚಾಣಕ್ಯ ; "ದೊರೆಯೆ ! ಈ ಗೂಢಚಾರರು ಮೊದಲು ಸತ್ರಪ ನ್ಯಾಯಾರ್ಕನ ರಾಜಧಾನಿಯನ್ನು ಪ್ರವೇಶಿಸಲಿ. ಹಿಂದೆ ಬಂಗಾರದ ನಾಣ್ಯಗಳ ಈ ನಿಧಿ ಗುಪ್ತವಾಗಿ ಬೆಂಗಾವಲಿನೊಡನೆ ಹಿಂಬಾಲಿಸಲಿ. ಅದರ ರಕ್ಷೆಗೆ ಒಂದು ಪ್ರಚ್ಛನ್ನ ಸೈನ್ಯ ನಿನ್ನ ಪ್ರಭಾವಶಾಲಿ, ತರುಣಸೇನಾನಾಯಕ ನೊಬ್ಬನೊಡನೆ ಹೊರಡಲಿ. ಇದೆಲ್ಲದರ ಉಸ್ತುವಾರಿಯನ್ನು ನಿನ್ನ ಪುತ್ರ, ರಾಜಕುಮಾರ ಮಲಯಕೇತು ನೋಡಲಿ. ಇವರೆಲ್ಲ ಕುಶಲಪುರಿಯತ್ತ ಹೊರಟ ಎರಡು ದಿನಗಳ ನಂತರ ನಿನ್ನ ಇನ್ನೊಬ್ಬ ಪುತ್ರ ಚಂದ್ರಕೇತು ತಕ್ಷ ಶಿಲೆಯತ್ತ ಮತ್ತೊಂದು ಸೈನ್ಯದ ತುಕಡಿಯೊಡನೆ ಹೊರಡಲಿ. ಪುತ್ರರಿಬ್ಬ ರಿಗೆ ಸಂಪರ್ಕಸಾಧನವಾಗಿ ಗೂಢಚಾರರ ಜಾಲವೊಂದನ್ನು ನಿನ್ನ ಮಂತ್ರಿ ಶಬರವರ್ಮ ನಿರ್ವಹಿಸಲಿ.'' ಎಂದು ಹೇಳಿ, ಗೂಢಚಾರರಿಗೆ, ಸೇನಾ ನಾಯಕನಿಗೆ, ಮಲಯಕೇತುವಿಗೆ, ಚಂದ್ರಕೇತುವಿಗೆ, ಅನೇಕ ರಹಸ್ಯ ವಿಷಯಗಳನ್ನೂ, ಅವುಗಳ ಅನುಷ್ಠಾನ ಕಾಲವನ್ನೂ ತಿಳಿಸಿ, ಎಚ್ಚರವಹಿ ಸುವಂತೆ ವಿಧಿಸಿ, ಮಂತ್ರಾಕ್ಷತೆಯ ಆಶೀರ್ವಾದವನ್ನಿತ್ತು ಕಳುಹಿದನು. ಅವರು ಹೊರಟೊಡನೆಯೇ ಚಾಣಕ್ಯ ತನ್ನ ಶಿಷ್ಯರಿಬ್ಬರನ್ನು ಕುದುರೆಗಳ ಮೇಲೇರಿ ಹೋಗುವಂತೆ ಸೂಚಿಸಿ, ಆ ಅಪ್ರಾಂತದಲ್ಲಿ ತನ್ನ ಶಿಷ್ಯಗೂಢಚಾರ ರೊಡನೆ ಸಂಪರ್ಕ, ಕಲ್ಪಿಸಿಕೊಂಡು, ತಾನು ಹೇಳಿದುದನ್ನು ಈ ಸೈನ್ಯ ನಡೆ ಸುವುದೋ ಇಲ್ಲವೋ ಎಂದು ನೋಡಿ ಬರಲು, ಬಂಗಾರದ ದುರುಪಯೋಗ ವಾಗದಂತೆ, ಹಾಗಾಗುವಂತಾದರೆ ಇವರು ಮಾಡಬೇಕೆನನ್ನು ಎಂಬುದನ್ನು ಸೂಚಿಸಿ ಕಳುಹಿದನು. ತದನಂತರ ತಾನು ಮತ್ತೆ ಸ್ನಾನಮಾಡಿ, ಶತ್ರು ಕ್ಷಯಯಜ್ಞವೊಂದನ್ನು ಮಾಡಲುದ್ದೇಶಿಸಿ ಅಗ್ನಿಯ ಎದುರು ಕುಳಿತನು.

ಚಾಣಕ್ಯನ ಅವಿರತ ಕರ್ಮಶ್ರದ್ಧೆಗೆ ಪರ್ವತ ಬೆರಗಾದ ! ಶಬರ ವರ್ಮನಿಗೆ ಚಾಣಕ್ಯನ ರಸವಿದ್ಯೆಯ ಕೈಚಳಕ ತಿಳಿದು, ಇಂಥ ಬಂಗಾರ ನಿರ್ಮಾಪಕ ಪರ್ವತನ ಸೆರೆಯಲ್ಲಿದ್ದರೆ, ಎಷ್ಟು ಚೆನ್ನ ! ಎಂದೆನಿಸಿ, ದುರ್ಬುದ್ಧಿಯಿಂದ ಚಾಣಕ್ಯನ ಬಿಡಾರಕ್ಕೆ ಹೊರಗಿಂದ ಬೀಗಮುದ್ರೆ ಬಿಗಿ ಸಿದ!! ಶಿಷ್ಯರು ಮಾಧ್ಯಾಹ್ನಿಕಕ್ಕೆ ಹೋಗಿದ್ದರು.

ಯುಜ್ಞ ಮುಗಿಸಿದ ಚಾಣಕ್ಯ ಹೊರಬರಲು ನೋಡಿದಾಗ, ಮಂತ್ರಿಯ ಕಪಟವರಿತು, ಅವರ ಅಲ್ಪಬುದ್ಧಿಗೆ ಶೋಕಿಸಿ, ಅದೃಶ್ಯಾಂಜನವನ್ನುಪ ಯೋಗಿಸಿ, ಅದೃಶ್ಯನಾಗಿ, ಪರ್ವತರಾಜ ಉಂಡು ಮಲಗಿದ್ದ ಶಯ್ಯಾಗೃಹ ದಲ್ಲಿ ಪ್ರತ್ಯಕ್ಷನಾಗಿ ''ಅಯ್ಯಾ ಅರಸೇ ! ಇದು ನಿನಗೆ ಶೋಭೆಯಲ್ಲ. ನಾವು ತಪಸ್ವಿಗಳು. ಇಷ್ಟಪಟ್ಟರೆ ನಿನ್ನಂಥವರನ್ನು ತಪಶ್ಶಕ್ತಿಯಿಂದಲೇ ಸುಟ್ಟು ಬೂದಿ ಮಾಡಿಯೇವು ! ಶಬರವರ್ಮ ನನ್ನ ಬುದ್ಧಿಯ ಕಿಡಿಯಲ್ಲಿ ಕೀಟ ದಂತೆ ಸುಟ್ಟಾನು ! ನಂದನಿಗ್ರಹಕ್ಕೆ ನನಗೆ ನಿನ್ನ ಸೈನ್ಯ ಅವಶ್ಯವೇ ಇಲ್ಲ. ರಾವಣನ ನಿಗ್ರಹಕ್ಕೆ ರಾಮನಿಗೆ ಕಪಿ ಸೈನ್ಯ ನಿಜವಾಗಿ ಬೇಕಿತ್ತೆ? ನಿನ್ನಂಥ ಅರಸರಿಗೆ ಕೀರ್ತಿ ತರಲು ಈ ನಾಟಕ. ಬ್ರಾಹ್ಮಣನಾದ ನಾನು ಕತ್ತಿ ಹಿಡಿಯಬಾರದು ಹಿಡಿಯಬೇಕಾದವರ ಕೈಲಿ ಅದನ್ನು ಹಿಡಿಸುವುದು ನನ್ನ ಧರ್ಮ. ನಿನ್ನಗಿನ್ನೂ ಚಾಣಕ್ಯನ ಪರಿಚಯವಾಗಲಿಲ್ಲ!" ಎಂದು ಆಕ್ರೋಶಿಸಿ ಹುಬ್ಬುಗಂಟಿಕ್ಕಿದನು. ಪರ್ವತ, ಶಬರ ವರ್ಮನನ್ನು ಕರೆಸಿ, ಕ್ಷಮೆಯಾಚಿಸಿ, ಅದು ಆಚಾರ್ಯರ ರಕ್ಷೆಗಾಗಿ ಬಿಗಿದ ಮುದ್ರೆಯೆಂದು ಇಬ್ಬರೂ ನಾಟಕವಾಡಿದರು. ಪರ್ವತನ ನಿಜಸ್ವರೂಪ ಬಯಲಾಯಿತು. ಚಾಣಕ್ಯ ಮರೆಯಲಿಲ್ಲ.

ನಾಲ್ಕು ದಿನ ಕಳೆಯಿತು, ಪರ್ವತನಿಗೆ ಕುತೂಹಲ; ಚಿಂತೆ ಬೇರೆ; ಇಬ್ಬರು ಪುತ್ರರನ್ನೂ ಈ ಬ್ರಾಹ್ಮಣನ ಮಾತಿನಂತೆ ಹೊರ ಕಳುಹಿದ್ದ. ಯಾವ ಸಮಾಚಾರವೂ ಬರಲಿಲ್ಲ. ಆರು ದಿನ ಆಯಿತು. ಆಚಾರ್ಯ ರನ್ನು ದಿನಾ ವಂದಿಸಿ, ಅವರ ಮುಖನೋಡಿ, ಹಾಗೇ ಹೊರಡುತ್ತಿದ್ದ, ಕೇಳಲು ಧೈರ್ಯವಿಲ್ಲದೆ!

ಎಂಟನೆಯ ದಿನ ಸಮಾಚಾರ ಬಂದಿತು : ನ್ಯಾಯರ್ಕ, ಕುಶಲಾ ವತಿಯಲ್ಲಿ ನದೀ ದಡದಲ್ಲಿ ತನ್ನ ದಳಕ್ಕೆ ಕವಾಯಿತು ಮಾಡಿಸುತ್ತಿದ್ದ. ಕೊನೆಯಲ್ಲಿ ತಾನು ಆ ಯೋಧರ ಗೌರವ ರಕ್ಷೆ ಸ್ವೀಕರಿಸುತ್ತಿದ್ದಾಗ ಅವನ ದೇಶದ ಯವನನೇ ಒಬ್ಬ ತನ್ನ ಕತ್ತಿಯಿಂದ ಆ ಯವನ ಸತ್ರಪನನ್ನು ಸಂಹರಿಸಿದ. ಅವನನ್ನು ಮತ್ತೊಬ್ಬ. ಆ ಮತ್ತೊಬ್ಬನನ್ನು ಇನ್ನೊಬ್ಬ

ಹೀಗೆ ಮೂರು ನಾಲ್ಕು ಕೊಲೆಗಳು ಏಕಕಾಲಕ್ಕೆ ಮಿಂಚಿನ ವೇಗದಲ್ಲಿ ನಡೆದು ಯವನರು ತಾವು ತಾವೇ ಸಂಹರಿಸಿಕೊಂಡರು. ನದಿಯ ದಡದ ಕಾಡಿನ ಅಂಚಿನಿಂದ ಮಲಯಕೇತುವಿನ ಚಾರರಿಬ್ಬರು ವೇಷಾಂತರದಲ್ಲಿ ಕುದುರೆಯ ಮೇಲೆ ಹೊನ್ನಿನ ಮೂಟೆಗಳನ್ನು ತಂದು, ಪೂರ್ವಸಂಕೇತದಿಂದ ಉಳಿದ ಯವನ ಯೋಧರ ನಡುವೆ ಇಟ್ಟು ಚೀಲದ ಬಾಯಿ ತೆರೆದು, ಕತ್ತಿ ಹಿಡಿದು ರಕ್ಷೆಗೆಂದು ನಿಂತರು. ದುರಾಸೆಯ ಯೋಧರು "ನನಗೆ, ತನಗೆ"ನ್ನುತ್ತಾ ಒಬ್ಬರ ಮೇಲೊಬ್ಬರು ಬಿದ್ದು ಕೊಲ್ಲುತ್ತಾ ಶತ್ರುಪಕ್ಷ ಸೈನ್ಯ ತುಕಡಿ ನಿರ್ನಾಮವಾಯಿತು. ಮಲಯ ಕೇತುವಿನ ಸೈನ್ಯ ಅಡವಿಯಿಂದ ಹೊರ ಬಂದು, ಯವನರ ತಲೆ ಬುರುಡೆಗಳನ್ನು ಈಟಿಯಿಂದ ಎತ್ತಿ ಹಿಡಿಯುತ್ತಾ, ಕುದುರೆಯ ಮೇಲೆ ಕುಳಿತು, ನಗರದೊಳಗೆ ಪ್ರವೇಶಿಸಿ, ಕೋಟೆ, ಕೊತ್ತಲ, ಅರಮನೆ, ಕೋಶ, ಸೈನ್ಯ, ಆಯಕಟ್ಟಿನ ಜಾಗೆಗಳನ್ನು ಹಿಡಿದು ಜಯ ಘೋಷಿಸಿದರು. "ನ್ಯಾಯಾರ್ಕ" ಅಸ್ತಂಗತನಾದ! ಆರ್ಯಧರ್ಮದ ಸೂರ್ಯೋದಯವಾಯಿತು.

ಚಂದ್ರಕೇತುವಿನ ಸೈನ್ಯವೂ ಕೂಡಿತು. ಅತ್ತ ಅಂಭಿಯ ಸೈನ್ಯ, ಅಂಭಿ ಸತ್ತನಂತರ ಯವನರಿಗೆ ಶರಣಾದದ್ದು–ಈಗ ಮಲಯ ಕೇತುವಿಗೆ ಶರಣಾಯಿತು. ಅಭಿಸಾರದ ಸೈನ್ಯವೂ ಸಹ ಈ ವಾರ್ತೆಯನ್ನು ಕೇಳಿಯೇ ಒಗ್ಗೂಡಿ, ಆರ್ಯಧರ್ಮ ರಕ್ಷಕರಿಗೆ ಶರಣಾಗಿ, ಎಲ್ಲ ಸೈನ್ಯವೂ ಮಲಯ ಕೇತುವಿನ ವಶವಾಯಿತು ! ಕ್ಷುದ್ರಕ, ಆರಟ್ಟ, ದರದ, ಕಾಶ್ಮೀರ, ಮೊದ ಲಾದ ಅರಸೊತ್ತಿಗೆಗಳ ಪ್ರತಿನಿಧಿಗಳು ಮಲಯಕೇತುವಿಗೆ ಇನ್ನು ತಾವು ಅಧೀನರೆಂದು ಘೋಷಿಸಿದರು !

ಆರು ದಿನದಲ್ಲಿ ಚಾಣಕ್ಯನ ಭೇದೋಪಾಯ ಫಲಕೊಟ್ಟಿತು. ಅದಕ್ಕೆ ಆಚಾರ್ಯನ ತಪಸ್ಸಿನ ಫಲದ ಬೆನ್ನೆಲುಬು ಭದ್ರವಾಗಿತ್ತು. ಮಲಯ ಕೇತುವೋ, ಸೇನಾನಾಯಕರೋ, ಗೂಢಚಾರರೋ ತಾವೇ ಹಣದ, ಬಂಗಾರದ ಆಸೆಗೆ ಬಾಯಿ ಬಿಟ್ಟಿದ್ದರೆ ಚಾಣಕ್ಯಶಿಷ್ಯರು ಅವರ ಸಂಹಾರಕ್ಕೆ, ವಿಷ, ತಂತ್ರ, ಮಂತ್ರಗಳ ಬಲದಿಂದ ಸಜ್ಜಾಗಿದ್ದರು. ಸದ್ಯಕ್ಕೆ ಪ್ರಾಮಾ

ಣಿಕವಾಗಿ ಎಲ್ಲ ನಡೆದು, ಮಲಯಕೇತುವು ನ್ಯಾಯಾರ್ಹ ಸತ್ರಪನ ಸ್ಥಾನಕ್ಕೆ ಬಂದು, ಪಂಚನದ ಪ್ರದೇಶದ ಉತ್ತರ ಭಾಗಕ್ಕೆ ಆಳರಸನಾಗಿ, ಪರ್ವತನ ಕೀರ್ತಿ ಹೆಚ್ಚಿಸಿದನು !

ಸಮಾಚಾರ ತಿಳಿದ ಚಾಣಕ್ಯ ಮುಸಿನಕ್ಕು ಶಿಷ್ಯರನ್ನಾಶೀರ್ವದಿಸಿದನು. ದೊರೆಗೆ ತಾನೇ ಕಾಣಿಸಿಕೊಂಡು ಈ ಶುಭವಾರ್ತೆಯನ್ನು ತಿಳಿಸಿದನು. ಪರ್ವತ ನಂಬಲಿಲ್ಲ ! ಅದು ಅಷ್ಟು ಸುಲಭವೆಂದು ಭಾವಿಸಲಿಲ್ಲ! ತನ್ನ ಸೈನ್ಯದ ಭಟರು ಬಂದು ಹೇಳಿದರೂ "ಅದು ಹೇಗೆ ಸಾಧ್ಯ!" ಎನ್ನುತ್ತಲೇ ನಾಲ್ಕಾರು ದಿನ ಕಳೆದು, ವೃಥಾ ತಾನು ಯವನರಿಗೆ ಸೋತ ಕೇವಲ ಕ್ಷಾತ್ರಕ್ಕೆ ಹಳಿದುಕೊಂಡು, ಬ್ರಾಹ್ಮಣಬುದ್ಧಿಗೆ ಮನದಲ್ಲೇ ಮೆಚ್ಚಿ "ಆಚಾರ್ಯನ ಹೃದಯ ನಮಗೆ ಅಳೆಯಲು ಶರವಲ್ಲ" ಎಂದು ನಿರ್ಧರಿಸಿದ.

ಮರುದಿನ ಚಾಣಕ್ಯ ; "ದೊರೆಯೆ ! ನಿನ್ನ ಸೆರೆಮನೆಯಲ್ಲಿ ಮರಣ ದಂಡನೆಯನ್ನು ನಿರೀಕ್ಷಿಸುತ್ತಿರುವ ಅಪರಾಧಿಯನ್ನು ಕರೆಸು; ಯಾರಾದರೂ ಸರಿ;'' ಎಂದ. "ಏಕೆಂದರೆ" ಅರಸನಿಗೆ "ಅದು ನನ್ನ ತಂತ್ರದ ದ್ವಿತೀಯ ಫಲಕ್ಕೆ ನಿನಗೆ ಪ್ರಮಾಣವಾಗಲು ಸಾಕ್ಷಿಯಂತೆ" ಎಂದ.



## ಎಂಟನೆಯ ಅಧ್ಯಾಯ

# ಶೈಲೂಷಕನ 'ಅಕಾಲ' ಮರಣ !

ಅರಸನ ಸೆರೆಯ ಬಂದಿಯಾಳೊಬ್ಬನನ್ನು ಚಾರರು ಚಾಣಕ್ಯನೆದುರು ತಂದು ನಿಲ್ಲಿಸಿದರು. ಅವನ ಕೈ ಮೈಗಳನ್ನೆಲ್ಲ ಹಗ್ಗದಿಂದ ಕಟ್ಟಿ ಹಾಕಿ, ಬಾಯಿಗೂ ಬಟ್ಟೆ ತುರುಕಿ, ಚಾಣಕ್ಯನೆದುರು ಅವನನ್ನು ಹೆಣದಂತೆ ತಳ್ಳಿ ಹೋಗುವಂತೆ ಚಾರರಿಗೆ ಆಚಾರ್ಯ ಆಜ್ಞಾಪಿಸಿದ. "ದೊರೆಯೇ ! ಈಗ ಚಾಣಕ್ಯನ ಸಾಮರ್ಥ್ಯದ ಎರಡನೆಯ ಪರಿಚಯ ನಿನಗಾಗುವುದು. ಇಲ್ಲಿ ನೀನೂ ನಾನೂ ಇಬ್ಬರೇ ಇರಬೇಕು. ಮೊದಲು ಇವನಾರು, ಇವನ ಅಪರಾಧವೇನು? ಇವನಿಗೆ ಮರಣ ದಂಡನೆ ಹೇಗೆ ಉಚಿತ ಎಂದು ನಾನು ತಿಳಿಯಬಹುದೇ ?"

ಯಾವುದೋ ಸೆರೆಯಾಳಿಗೂ ಚಾಣಕ್ಯನಿಗೂ ಏನು ಸಂಬಂಧವೆಂಬು ದನ್ನು ಅರಿಯದ ದೊರೆ ಪರ್ವತ ಹೇಳಿದ ; ''ಗುರುವೇ, ಇವನು ನನ್ನನ್ನು

ಯವನರಿಗೆ ಸೆರೆ ಸಿಕ್ಕಲು ಅವರಿಗೆ ಒಳಗಿಂದ ಸಹಾಯ ಮಾಡಿದ ರಾಷ್ಟ್ರ ದ್ರೋಹಿ. ನನ್ನ ಮರ್ಯಾದೆಯನ್ನು ಮಣ್ಣುಪಾಲು ಮಾಡಿದವನು ಇವನೇ !" ಎನ್ನುತ್ತಾ ಅವನನ್ನು ಸಂಹರಿಸಲು ಕತ್ತಿಯನ್ನೆಳೆದ. ಚಾಣಕ್ಯ ತಡೆದು;

"ಅರಸೇ! ನೀನು ಶಸ್ತ್ರದಿಂದ ಮಾಡುವುದನ್ನು ನಾನು ಶಾಸ್ತ್ರದಿಂದಲೇ ಮುಗಿಸುತ್ತೇನೆ. ಮಹಾಭಾರತದ ದ್ರೋಣನ ಬಗೆಗೆ ಕೇಳಿರುವುದುಂಟಲ್ಲ! 'ಶಾಪಾದಪಿ ಶರಾದಪಿ' ಎಂಬ ಅವನ ಸಾಮರ್ಥ್ಯ ನನಗೂ ಉಂಟೆಂದು ತೋರಲು ಈ ಪ್ರದರ್ಶನ. ಈ ಕೌತುಕ ನಿನ್ನನ್ನಂಜಿಸದಿರಲಿ," ಎನ್ನುತ್ತಾ, ಪರ್ವತನನ್ನು ಕುಳ್ಳಿರುವಂತೆ ಹೇಳಿ, ತಾನು ದರ್ಭಾಸೀನನಾಗಿ, ಅಗ್ನಿಯನ್ನು ಪ್ರತಿಷ್ಠಿಸಿ, ಸೆರೆಯೊಳಿನ ಮಾರಣ ಹೋಮಕ್ಕೆ ಅಣಿ ಮಾಡಿಕೊಂಡ. ಅವನ ಹೆಸರನ್ನು ಕೇಳಿಕೊಂಡು ನಾಮನಕ್ಷತ್ರವನ್ನು ಗುರುತಿಸಿ, ಅವನ ತಲೆ ಯಿಂದ ಕೆಲವು ತಲೆಗೂದಲನ್ನು ಕಿತ್ತು, ಕಾಲುಕೈಗಳಿಂದ ಉಗುರಿನ ಚೂರು ಗಳನ್ನು ಕಿತ್ತು, ಗೋಧಿಯ ಹಿಟ್ಟಿನಿಂದ ಒಂದು ಮನುಷ್ಯಾಕೃತಿಯನ್ನು ಮಾಡಿ, ಅದರ ತಲೆಗೆ ಇವನ ಕಿತ್ತ ತಲೆಗೂದಲನ್ನು ಸಿಕ್ಕಿಸಿ, ಉಗುರು ಚೂರುಗಳನ್ನು ಗೊಂಬೆಯ ಕಾಲು, ಕೈ ಬೆರಳುಗಳಿಗೆ ಅಂಟಿಸಿ, ಅದಕ್ಕೆ ಅರಿಶಿನ, ಕುಂಕುಮಗಳಿಂದ ಪೈಪೂಸಿ ಎದುರಿಗಿಟ್ಟು, ಅಗ್ನಿಯಲ್ಲಿ ಅಭಿಚಾರಿಕ ಹೋಮವೊಂದನ್ನು ಅಥರ್ವವೇದೋಕ್ತವಾಗಿ ಆಚರಿಸಿದ. ಇನ್ನೇನು ಪೂರ್ಣಾಹುತಿ ! ಅದರೊಳಗೆ:

"ದೊರೆಯೆ ! ನಾನು ಮಾಡುತ್ತಿರುವುದು ಸಾಮಾನ್ಯವಾಗಿ ಬ್ರಾಹ್ಮಣನ ಕೆಲಸವಲ್ಲ. ಯಾವ ಜೀವಕ್ಕೂ ಹಿಂಸೆ ಆಗಬಾರದು; ಆದರೆ ರಾಷ್ಟ್ರದ್ರೋಹಿಗಳು ಕ್ರೂರವಾಗಿ ಹಿಂಸಿತರಾಗಿಯೇ ಸಾಯಬೇಕು. ನನ್ನ ಈ ವಿದ್ಯೆಯನ್ನು ನಿನ್ನಂಥ ಅಳರಸರಿಗೆ ಕೊಟ್ಟರೆ ದುರುಪಯೋಗವಾಗು ವುದು ಖಂಡಿತ! ಹಾಗಾಗದಿರಲೆಂದೇ ಇದನ್ನು ಬ್ರಾಹ್ಮಣ ಆಪತ್ಕಾಲ ಕ್ಕೆಂದು ಇಟ್ಟು ರಕ್ಷಿಸುವ ಹೊಣೆ ಹೊತ್ತಿರುವುದು. ನಿನ್ನ ಈ ಶತ್ರುವನ್ನು ಮಾತ್ರವಲ್ಲ; ರಾಷ್ಟ್ರದೋಹಿಗಳನ್ನೆಲ್ಲ ಹೀಗೆ ಮುಗಿಸಬಲ್ಲೆ. ಆದರೆ ಅದು

ನನ್ನ ಅತಿಕ್ರಮಣ ಆಗಬಾರದು" ಎನ್ನುತ್ತಾ, ಕ್ರೂರ ಮಂತ್ರಗಳನ್ನುಚ್ಚರಿಸುತ್ತಾ, ದರ್ಭೆಯಿಂದ ಆ ಗೊಂಬೆಯ ಮೈಯ್ಯನ್ನು ಆಗಾಗ ಹೊಡೆಯುತ್ತ ಚಾಣಕ್ಯ ಕಂಗಳಲ್ಲಿ ಬಹು ಕ್ರೂರ ಭಾವವನ್ನು ತೋರುತ್ತ ಪರ್ವತನಿಗೂ ಭಯಂಕರನಾದ ! ಬಂದಿಯ ಮೈಯ್ಯಲ್ಲಿ ವಿಚಿತ್ರ ಸಂಕಟಾನುಭವ ಬೆಳೆಯಲಾರಂಭಿಸಿರಬೇಕು! ಹಗ್ಗ ಕಟ್ಟಿದ್ದರೂ, ಬಾಯಿ ಮುಚ್ಚಿಸಿದ್ದರೂ, ಭಯಂಕರವಾಗಿ ಅರಚಲು ಯತ್ನಿಸುತ್ತಾ, ಹೋಮ ಮುಗಿಯುತ್ತ ಬಂದಂತೆಲ್ಲ ಕಟ್ಟಿ ಹಾಕಿದ ಮೈಯ್ಯಲ್ಲೂ ಉರುಳಿ ಹೊರಳಾಡಿ ಯಮಯಾತನೆಯನ್ನನುಭವಿಸಿದಂತೆ ಕಂಡ. ಪರ್ವತೇಶನಿಗೂ ಅನಿರ್ವಚನೀಯವಾದ ಭಯವೊಂದಾವರಿಸಿತು ! ಈ ದ್ರಾವಿಡ ಬ್ರಾಹ್ಮಣ ಇಷ್ಟು ನಿರ್ದಯನಾಗಿ ಕೊಲೆಗಡುಕನ ಗಲಸವನ್ನು ಸಲೀಸಾಗಿ ಮಾಡಿ ತೋರಿಸಿಯಾನೆಂಬ ಕಲ್ಪನೆ ಇರದೆ, ಮೈಬೆವರಲಾರಂಭಿಸಿತು. ತಾನೇನಾದರೂ ವಚನ ಭ್ರಷ್ಟನಾದರೆ ಚಾಣಕ್ಯನೊಡನೆ ವೈಮನಸ್ಯ ಬಂದರೆ, ತನಗೂ ಈ ಗತಿ ಆದೀತೆಂಬುದರಲ್ಲಿ ಸಂಶಯ ಉಳಿಯಲಿಲ್ಲ. ನಾಟಕನಂತೆ, ತನ್ನ ಅಂತರಂಗ ತೋರಿಸಿಕೊಳ್ಳದೆ ಹಾಗೇ ಕುಳಿತ. ಚಾಣಕ್ಯ ದೊರೆಯ ಮನದ ಆಳದ ಈ ಭಾವಕ್ಕೆ ಮೆಚ್ಚಿ ತನ್ನಲ್ಲೇ ನಕ್ಕು "ಭೇಷ್" ಎಂದು ಕೊಂಡ !

"ದೊರೆಯೇ! ಈಗ ನಿನಗೆ ವಿಸ್ಮಯ ಕಾದಿದೆ!! ನೋಡು" ಎನ್ನುತ್ತಾ, ಕೊನೆಯ ಮಂತ್ರೋಚ್ಚಾರಣೆ ಮಾಡಿ, ಆ ಗೋಧಿಯ ಆಕೃತಿಯನ್ನು ಕುಂಕುಮದಲ್ಲಿ ತೋಯಿಸಿ, ದರ್ಭೆಯಿಂದ ಬಡಿದು, ಅಗ್ನಿಯೊಳಗೇ ಎಸೆದು ಬಿಟ್ಟ!! ಸೆರೆಯೊಳಿನ ಮೈ ಹತ್ತಿಕೊಂಡು ಧಗಧಗನೆ ಉರಿಯಲಾರಂಭಿಸಿತು! ಚಾಣಕ್ಯ ಆಸನದಿಂದ ಮೇಲೇಳಲಿಲ್ಲ ! ಪರ್ವತೇಶ ಧಿಗ್ಗನೆದ್ದು 'ಹೋ' ಎಂದು ಆರ್ಭಕ್ಕೆ ಕಿರುಚುತ್ತಾ ನಿಲ್ಲಿಸಿ, ಬಾಯಿ ತೆರೆದು ನೋಡುತ್ತ ನಿಂತು, ಬಂದಿಯ ದೇಹ ಪೂರ್ಣ ಉರಿದು ಬೂದಿಯಾಗುವಷ್ಟರಲ್ಲಿ, ತಾನೂ ಮೂರ್ಛಿತನಾದ !

ಚಾಣಕ್ಯ ಅವನಿಗೆ ಶೈತ್ಯೋಪಚಾರ ಮಾಡಿ, "ಅರಸೇ ! ಇದು ಚಾಣಕ್ಯ ಶಕ್ತಿ! ನನ್ನ ಜನ್ಮ ಭೂಮಿಯ ನೆರೆಯ ಮಲೆಯಾಳದಲ್ಲಿ ಈ

ವಿದ್ಯೆ ಸರ್ವಸಾಧಾರಣ. ನಿನ್ನ ನಾಡಿನವರು ಅರಿಯರು. ತಕ್ಷಶಿಲೆಯಲ್ಲಿ ನಾನಿದನ್ನು ಯಾರಿಗೂ ಉಪದೇಶಿಸಿಯೂ ಇಲ್ಲ. ಈ ವಿದ್ಯೆಯುಂಟೆಂಬು ದನ್ನು ಗ್ರಂಥದಲ್ಲಿ ನಮೂದಿಸಿದ್ದೇನೆ. ವಿಧಾನ ಬರೆದಿಲ್ಲ. ದುರುಪಯೋಗ ಆಗಬಾರದೆಂದು. ಈಗ ಪಂಚನದ ಪ್ರದೇಶದ ಶೈಲೂಷಕನನ್ನು ಈ ವಿಧಾನ ದಿಂದಲೇ ಯಮಪುರಿಗೆ ಕಳುಹುತ್ತೇನೆ. ನೀನು ಸೈನ್ಯದೊಡನೆ, ಯವನ ನಿಗೆ ಕಪ್ಪ ಕಾಣಿಕೆ ಕೊಡುವವನಂತೆ ಸಿಂಧುವಿನದತ್ತ ಪ್ರಯಾಣ ಹೊರಡ ಬೇಕು. ನಿನ್ನ ಪರಿವಾರದಲ್ಲಿ ನಾನೂ ಚಂದ್ರಗುಪ್ತನೂ ನನ್ನ ಶಿಷ್ಯರೂ ಇರುತ್ತೇವೆ. ಯವನನ ಸೈನ್ಯ ತುಕಡಿಗಳು ಎಲ್ಲೆಲ್ಲಿವೆ, ಎಷ್ಟಿವೆ ವಿಚಾರದ ಪೂರ್ಣ ಮಾಹಿತಿ ನನಗೆ ಈಗಬೇಕು. ಹರಿಸು'' ಎಂದವನೇ, ಮಾರಣ ಹೋಮದ ಪ್ರಾಯಶ್ಚಿತ್ತಕ್ಕಾಗಿ ತಾನು ನಾಲ್ಕಾರು ದಿನ ಕಂಠ ಪರ್ಯಂತ ನೀರಲ್ಲಿರುತ್ತಾ, ಅನ್ನಾಹಾರವಿಲ್ಲದೆ, ಮಲಮೂತ್ರ ವಿಸರ್ಜನೆಯಿಲ್ಲದೆ ಇರಬೇಕಾದ ನಿರ್ಬಂಧವನ್ನು ತಿಳಿಸಿ, ಆ ಪರ್ಯಂತ ಎಲ್ಲೂ ಅಜಾಗರೂಕ ನಾಗಿರದಂತೆ ದೊರೆಗೆ ಆಣತಿಯಿತ್ತನು.

"ಆಚಾರ್ಯ, ಕೋಪಿಸದಿದ್ದರೆ ಒಂದು ಮಾತು ಕೇಳಲೇ! ''ಎಂದ ವನೇ, ಪರ್ವತೇಶ, ಚಾಣಕ್ಯನ ಇಂಗಿತ ತಿಳಿದು ಮುಂದುವರಿದ. "ತಾವು ನಂದರನ್ನು ಈ ವಿಧಾನದಿಂದಲೇ ಏಕೆ ಮುಗಿಸಿ, ತಮ್ಮ ಪ್ರತಿಜ್ಞೆಯನ್ನು ಪೂರೈಸಬಾರದು? ನನ್ನ ಸಹಾಯ ತಮಗೆ ಅವಶ್ಯವೆ?" ಎಂದು ಕೇಳಿದ. ಚಾಣಕ್ಯ ಕಪಟ ನಗೆಯ ಪ್ರಕಟ ಕೋಪದ ವಿಕಟ ಭಾವದಲ್ಲಿ ಕಿಡಿಗಾರುತ್ತ ದೊರೆಗೆಂದ : ''ಅಯ್ಯಾ! ದೊರೆಯನ್ನು ಹಾಗೆ ನಿಗ್ರಹಿಸಿ ಪಡೆದ ರಾಜ್ಯ ಚಂದ್ರಗುಪ್ತನಿಗೆ ಬೇಡವಾಗಿದೆ. ಭಾರತೀಯ ಅರಸು ಎಷ್ಟೇ ಕೆಟ್ಟವ ನಾದರೂ, ಅಪವಾದ ಪ್ರಸಂಗದಲ್ಲಿ ಹೊರತು ಈ ವಿಧಾನದಿಂದ ನಾನು ನಿಗ್ರಹಿಸಲಾರೆ. ಶೌಚ, ಆಚಾರ, ಸತ್ಯ, ಕಾರುಣ್ಯಾದಿ ಯಾವ ಆರ್ಯ ಗುಣವೂ ಇರದ ಯವನ ನೀಚರನ್ನು ಹಂದಿಗಳನ್ನು ಸುಡುವಂತೆ ಸುಟ್ಟರೆ ಪಾಪ ಬರಲಾರದು. ಇದು ನನ್ನ ಶಕ್ತಿ ಪ್ರದರ್ಶನಕ್ಕಾಗಿ, ನಿನ್ನ ತೇಜೋ ಉದ್ದೀಪನಕ್ಕಾಗಿ ಮಾತ್ರ. ಮೊದಲೇ ನೀನು ನನ್ನ ಮಾತಿಗೆ ಬೆಲೆಕೊಟ್ಟು ನನ್ನ ಹಿಂದೆ ಬರಲು ಒಪ್ಪಿದ್ದರೆ ಬೇರೆ ಮಾತಿರುತ್ತಿತ್ತು.'' ಎನ್ನುವಷ್ಟ

ರಲ್ಲಿ ಮಲಯ ಕೇತುವಿನ ದೂತರು, ಸಣ್ಣ ಸೈನ್ಯದ ರಕ್ಷಣೆಯಲ್ಲಿ, ಚಾಣಕ್ಯ ಶಿಷ್ಯರೊಡನೆ, ಮೊದಲು ತಾವು ಒಯ್ದಿದ್ದ ಬಂಗಾರದ ನಾಣ್ಯಗಳ ಚೀಲಗಳನ್ನು ಅಲ್ಲಿ ಉಪಯೋಗಿಸಿ ಮಿಕ್ಕದ್ದನ್ನು ತಂದು ಚಾಣಕ್ಯನಿಗೆ ಒಪ್ಪಿಸಿದರು.

ಚಾಣಕ್ಯ ಅರಸನ ಮುಖ ನೋಡಿದ ! "ಈ ರಸವಿದ್ಯೆಯೂ ಅಷ್ಟೆ. ದೊರೆ ಈ ಬಗೆಯ ಮಂತ್ರಾರ್ಜಿತ, ಅಲೌಕಿಕ ವಿಧಾನ ಸಂಪಾದಿತ ಹಣದಿಂದ ರಾಜ್ಯ ನಿರ್ವಹಿಸಬಾರದು. ದಂಡನೀತಿಯ ಸಹಾಯದಿಂದ, ದಂಡ್ಯರ ದಂಡನೆಯ ಭಾರದ ಕರದಿಂದ ಸಜ್ಜನರನ್ನು ಅವನು ರಕ್ಷಿಸಬೇಕು. ಮಲಯಕೇತುವಿಗೆ ಯವನ ನ್ಯಾಯಾರ್ಜನ ಅಪಾರವಾದ ಧನ ಸಂಪತ್ತು ದೊರೆತಿದೆ. ಇಕೋ, ಈ ಹಣವೆಲ್ಲ ನಿನ್ನ ಬೊಕ್ಕಸಕ್ಕೆ. ನಿನ್ನ ಮತ್ತು ಆರ್ಯಾವರ್ತದ ಒಬ್ಬ ಕಂಟಕನನ್ನು ನಿಗ್ರಹಿಸಿ ಆಯ್ತು. ನಿನ್ನ ಬೊಕ್ಕಸ ತುಂಬಿದ್ದೇನೆ. ಆ ಇನ್ನೊಬ್ಬನನ್ನೂ ಮುಗಿಸಿಕೊಡುತ್ತೇನೆ. ಚಂದ್ರಗುಪ್ತನ ಪ್ರತಿಷ್ಠಾಪನೆಗೆ ಕಟಿಬದ್ಧನಾಗು. ಶಂಕೆ ಬೇಡ" ಎಂದವನೇ ಅಸಿಕ್ನೀ ನದಿಯ ದಡಕ್ಕೆ ತೆರಳಿ, ಸಂಕಲ್ಪ ಪೂರ್ವಕವಾಗಿ, ಕಂಠಪರ್ಯಂತ ಅದರಲ್ಲಿ ಮುಳಗಿ ನಾಲ್ಕಾರು ದಿನ ಗುರು ದೊರೆಗೆ ಕಾಣಿಸಲಿಲ್ಲ. ಚಾಣಕ್ಯ ಶಿಷ್ಯರು ನದೀ ದಡದಲ್ಲಿರುತ್ತಾ ಜಪ ತಪಾನುಷ್ಠಾನಗಳಲ್ಲಿ ತೊಡಗಿದರು. ಚಂದ್ರಗುಪ್ತನಿಗೆ ರಮ್ಯವಾದ ರಾಜೋಪಚಾರ ನಡೆಯಿತು.

ಶೈಲೂಷಕನ ಸೈನ್ಯದ ತುಕುಡಿಗಳ ನಿವಾಸಗಳ ಬಗೆಗೆ ಪರ್ವತರಾಜ ಚಾಣಕ್ಯನಿಗೆ ಗುಪ್ತ ಮಾಹಿತಿ ನೀಡಿದ, ವಿವರವಾಗಿ. ಅವನ ವಿಲಾಸಿ ಜೀವನ, ಲುಬ್ಧತೆ, ಕಾಮುಕತೆಗಳ ಬಗೆಗೆ ಚಾಣಕ್ಯ ಅರಿತುಕೊಂಡ. ಶೈಲೂಷಕನಿಗೊಬ್ಬಳು ಮಗಳಿರುವುದಾಗಿಯೂ, ಅವಳು ಸುಂದರಿ ಮಾತ್ರವಲ್ಲದೆ, ಗುಣವಂತೆಯಾಗಿರುವುದಾಗಿಯೂ ತಿಳಿಯಿತು. ಪರ್ವತನ ಸೈನ್ಯ ಸಿಂಧುವನದತ್ತ ಹೊರಟಿತು. ಪ್ರಾಯಶ್ಚಿತ್ತಾನಂತರ ಆಚಾರ್ಯನ ಮೈಯ್ಯಲ್ಲಿ ಹೊಸ ಅಗ್ನಿಕಾಂತಿ ಮಿಂಚುತ್ತಿತ್ತು.

ಐದು ದಿನಗಳ ಪ್ರಯಾಣ ಅದು. ದಾರಿಯಲ್ಲಿ ಚಂದ್ರಗುಪ್ತನಿಗೆ ಆಚಾರ್ಯನೆಂದ! "ವತ್ಸ! ನನ್ನ ಕೃತ್ಯಗಳಿಂದ ನಿನಗೆ ಭಯವಾಗದಿರಲಿ. ಹೋಮಾಗ್ನಿಯು ಈಗ ಸ್ಮಶಾನಾಗ್ನಿಯೂ ಆಗ ಬೇಕಾದ ಕಾಲವಷ್ಟೆ! ಸಿಂಧು-ಎಂದೊಡನೆ, ಸಿಂಧುದ್ವೀಪ ಋಷಿಯ ನೆನಪು ಯಾವ ಬ್ರಾಹ್ಮಣ ನಿಗಾಗುವುದಿಲ್ಲ ! "ಆಪೋ ಹಿ ಷ್ಠಾ ಮಯೋ ಭುವಃ" ಮಂತ್ರದ ಉಚ್ಚಾರಣೆ ಆಗುವಾಗೆಲ್ಲ, ನೆನಸಬೇಕಾದ ಪ್ರಾಚೀನ ಪುಣ್ಯ ಪುರುಷ ಆ ಮಹರ್ಷಿ. ಸಿಂಧುವು ಸಮುದ್ರ ಸೇರುವೆಡೆ ಇರುವ ಆ ದ್ವೀಪ ಈ ದುರಾಚಾರೀ ಅತ್ಯಾಚಾರೀ ಯವನನ ಬೀಡಾಗಿದೆ. ಕ್ಷತ್ರಿಯರು ಮಾಡ ಬೇಕಾದ ಕೆಲಸ ಇದು, ರಾಷ್ಟ್ರ ವಿಮೋಚನೆ ! ಇವತ್ತು ಯವನರು, ನಾಳೆ ತುರುಷ್ಕರು. ಆ ಮೇಲೆ ಬರ್ಬರರು, ಎಲ್ಲ ಪರದೇಶೀ ದ್ರೋಹಿಗಳಿಗೂ ಇದು ನಮ್ಮಲ್ಲಿ ಬರುವ ಮಾರ್ಗ. ಈ ನಾಯಿಗಳಿಗೆ ಸರಿಯಾದ ಪಾಠ ಕಲ್ಪಿಸ ಬೇಕಾಗಿದೆ. ಶ್ರೀ ಕೃಷ್ಣನ ಕಾಲದಲ್ಲೂ ಇಲ್ಲೆಲ್ಲ ಒಂದು ಬಗೆಯ ಯವನರಿ ದ್ದರು. ಕಾಲಯವನನ ಬಗೆಗೆ ಕೇಳಿಲ್ಲವೆ? ಯಾದವರು ಗರ್ಗಾಚಾರ್ಯ ನನ್ನು ಬ್ರಹ್ಮಚಾರಿ ಎಂದು ಅರಿಯದೆ ಷಂಢನೆಂದು ಅಪಮಾನಿಸಿ, ಉರಿ ದೆದ್ದ ಗರ್ಗ, ಸಿಟ್ಟಿನಿಂದ ಅಂದಿನ ಯವನಪತ್ನಿಯೊಬ್ಬಳಲ್ಲಿ ವ್ಯಭಿಚರಿಸಿ ಹಡೆದ ಆ ಯವನ ವೀರ ದಿನಾ ಅಷ್ಟಷ್ಟು ಕಬ್ಬಿಣದ ಪುಡಿ ತಿನ್ನುತ್ತಾ, ಕಪ್ಪು ಮೈಬಣ್ಣದವನಾಗಿ ಬೆಳೆದು ಯಾದವರಿಗೂ, ಕುರುವೀರರಿಗೂ ಯಮನಾಗಿ ಜರಾಸಂಧನ ಸ್ನೇಹಿತನಾಗಿದ್ದ! ಈಗ ನಂದರೂ ಈ ಯವನರೂ ಕೂಡಿದರೆ ಆರ್ಯಸಂಸ್ಕೃತಿ ನಿರ್ನಾಮವಾಗುವುದರಲ್ಲಿ ಸಂಶಯವಿಲ್ಲ. ಅಂದು ಭಗವಾನ್ ಶ್ರೀ ಕೃಷ್ಣ ಮಾಡಿದ್ದನ್ನು ಇಂದು ನಾನು ಮಾಡುತ್ತಿರುವೆ. ಈ ವಾಮ ಮಾರ್ಗಕ್ಕೆ ಜುಗುಪ್ಸೆ ಪಡಬೇಡ. ಇದು ಶುಕ್ರ ನೀತಿಯ ಮೊದಲು ಪಾಠ. ವಕ್ರನನ್ನು ವಕ್ರಮಾರ್ಗದಲ್ಲೇ ಮುಗಿಸಬೇಕು" ಎಂದು ಹೇಳಿದ.

ಹಲವಾರು ನೂರು ಯವನ ಕುಟುಂಬಗಳು ಅಂದು ಸಿಂಧುವಿನಲ್ಲಿ ನಾಲ್ಕಾರು ತಲೆ ಮಾರುಗಳಿಂದ ನೆಲೆಸಿದ್ದವು. ಅವರಲ್ಲಿ ಹಲವರು ಪಾಂಚ ರಾತ್ರ ಭಾಗವತ ಮತವನ್ನು ಸ್ವೀಕರಿಸಿ, ಹೆಸರನ್ನೂ ಬದಲಿಸಿ ಕೊಂಡು

ಶ್ರೀಕೃಷ್ಣ ಭಕ್ತರಾಗಿದ್ದರು. ಬೌದ್ಧರು ಇನ್ನು ಹಲವರನ್ನು ಪುಸಲಾಯಿಸಿ ತಮ್ಮ ಮತ ಪ್ರಚಾರಕ್ಕೆ ತೊಡಗಿದ್ದರು. ಕಶ್ಯಪಪುರದ ಆಚೆಗಂತೂ ನ್ಯಾಯಾರ್ಜನ ಬೀಡಿನ ದೊಡ್ಡ ಯವನರ ಪಾಳೆಯವೊಂದು ಬೌದ್ಧಕ್ಕೆ ಪರಿವರ್ತಿತವಾಗಿ, ಬರೀ ಸಂನ್ಯಾಸಿಗಳೇ ಎಲ್ಲೆಲ್ಲೂ ಕಾಣುತ್ತಿದ್ದರು. ಕ್ರಮವಾಗಿ ಗಾಂಧಾರದತ್ತ ಬೌದ್ಧ ಮತ ಹಬ್ಬುತ್ತಿತ್ತು. ಚಾಣಕ್ಯ ಅದು ಮತ್ತೆ ಭಾರತದತ್ತ ಬರದಿರಲೆಂದು ಬಗೆ ಬಗೆಯಾಗಿ ಚಿಂತಿಸುತ್ತಿದ್ದ. ಪ್ರಾಣಿ! ಯಾವಾಗ ವಿಶ್ರಾಂತಿಯೋ! ದುಡಿಮೆಗೆ ವಿರಾಮವಿಲ್ಲದ ಅವನ ಮೈಯ್ಯಲ್ಲಿ ಮನುಷ್ಯ ಮಾತ್ರನಂತೆ ರಕ್ತವಿತ್ತೇ? ಅತಿಮಾನುಷವಾದ ಬೇರೊಂದು ದ್ರವ್ಯವಿತ್ತೆ ?? ಇಷ್ಟು ಚೈತನ್ಯ ಎಲ್ಲಿಯದು? ಇವನು ಅವತಾರಿಯೆ? ಮನುಷ್ಯನೇ ಎಂಬ ಚಿಂತೆ ಚಂದ್ರಗುಪ್ತನಿಗಿಂತ ಪರ್ವತೇಶನನ್ನು ಹೆಚ್ಚು ಕಾಡುತ್ತಿತ್ತು.

ಸಿಂಧುವನ ಸಮೀಪಿಸಿತು. ದಾರಿಯಲ್ಲಿ ಉದ್ದಕ್ಕೂ ಯವನರ ಸೇನಾನಿಗಳು ಅಲ್ಲಲ್ಲಿ ಪರ್ವತನ ಸೈನ್ಯವನ್ನು ಪರೀಕ್ಷಿಸಿದರು. ಅಪಾರ ಬಂಗಾರದ ಕಾಣಿಕೆಗಳನ್ನು ಕಂಡು ಈ ಸೈನ್ಯ ಸಂಖ್ಯೆಯ ಬಗೆಗೆ ಸಂಶಯ ಹೋಯಿತು. "ಹೋಗಿ" ಎಂದರು.

ಶತದ್ರೂ, ವಿಪಾಶಾ, ವಿತಸ್ತಾ ನದಿಗಳು ಮಹಾಸಿಂಧುವನ್ನು ಕೂಡುವ ಪ್ರದೇಶದಲ್ಲಿ ಸಿಂಧುವನ ಪ್ರಾಂತವಿತ್ತು. ಅದರ ಮಧ್ಯೆ ಯವನ ಸತ್ರಪನ ರಾಜಧಾನಿ. ನಗರದ ಆಯಕಟ್ಟಿನ ಕಡೆಗಳಲ್ಲೆಲ್ಲ ಯವನರ ಸಣ್ಣ ಸೈನ್ಯ ತುಕಡಿಗಳು. ಪರ್ವತನ ಸೈನ್ಯ ತಾನು ತಂದಿದ್ದ ಬಂಗಾರದ ಮೊಹರುಗಳ ಕಾಣಿಕೆಯನ್ನು ತೋರಿಸುತ್ತ ಯವನನ ಬೀಡಾರದ ಬಾಗಿಲಿಗೆ ಯಾವ ಅಡೆತಡೆಯೂ ಇಲ್ಲದೆ ಬಂದಿತ್ತು. ಅಲೆಕ್ಸಾಂಡರನೊಡನೆ ಪರ್ವತನಿಗಾದ ಮೈತ್ರೀ ಒಪ್ಪಂದದಿಂದ, ಈ ವರೆಗೆ ಅವನು ಯವನ ಸತ್ರಪನೊಡನೆ ನಿಷ್ಠೆಯಿಂದ ಇದ್ದುದರಿಂದ ಯಾರೂ ಈ ಸೈನ್ಯ ಜಮಾವಣೆ, ಚಾಲನೆಗಳನ್ನು ಶಂಕಿಸಲಿಲ್ಲ. ಯವನ, ಭೋಗಾಸಕ್ತನಾಗಿ ಭಾರತೀಯ ನೆಲ ಜಲದ ಸೌಖ್ಯವನ್ನು ಅನುಭವಿಸುತ್ತಾ, ಬಂಗಾರ, ವೈಭವ, ಸ್ತ್ರೀಯರು, ಮದ್ಯಗಳ

ಪೋಕಿನಲ್ಲಿ ಕಾಲಕಳೆದಿದ್ದ. ಪರ್ವತ-ಶೈಲೂಷಕರ ಭೇಟಿಗೆ ಸಂಜೆ ಬೀಡಾರ ಏರ್ಪಾಡಾಯಿತು ಪರ್ವತನೊಡನೆ ಚಾಣಕ್ಯನೂ, ಚಂದ್ರಗುಪ್ತನೂ ಮಿತವಾಗಿ ಅಂಗರಕ್ಷಕರ ಪರಿವಾರವೂ ಇದ್ದಿತು. ಯವನನೊಡನೆ ಅವನ ಕಡೆಯ ದ್ವಿಭಾಷಿಯೊಬ್ಬ, ನಾಲ್ಕಾರು ಸೇವಕರು, ಸೈನಿಕರೂ ಅವನ ಮಗಳೂ-(ಚಾಣಕ್ಯ ಆವಳಿಗೆ ವಿದ್ಯುಲ್ಲೇಖೆಯೆಂಬ ಹೆಸರಿಟ್ಟಿದ್ದ! ಉಚ್ಚರಿಸ ಲಾಗದ ಉದ್ದನೆಯ ಯವನ ಭಾಷೆಯ ಹೆಸರೊಂದು ಅವಳಿಗಿತ್ತು)-ಅಲ್ಲಿ ದ್ದರು. ಬೇಕೆಂದೇ ಚಾಣಕ್ಯ ತನಗೆ ಯವನ ಭಾಷೆಯ ಪರಿಚಯವಿಲ್ಲದವ ನಂತೆ ನಟಿಸಿದ! ಪರ್ವತನಿಗೂ ಚಾಣಕ್ಯನ ನಟನೆ ತಿಳಿಯಲಿಲ್ಲ.

ಯವನ ತನ್ನ ಭಾಷೆಯಲ್ಲಿ ತನ್ನವರೊಡನೆ "ಈ ನಾಯಿಗಳು ಏನು ಕಾಣಿಕೆ ತಂದಿರುವರು! ನೋಡಿ ಹೇಳು" ಎಂದ. ದ್ವಿಭಾಷಿ ವಿಷಯ ತಿಳಿದು "ಬಂಗಾರದ ನಾಣ್ಯಗಳ ನಾಲ್ಕು ದೊಡ್ಡ ಮೂಟೆಗಳೇ ಬಂದಿವೆ" ಎಂದ. "ಜ್ಾಗರೆಯಾಗಿ ಎಣಿಸಿ, ಬೊಕ್ಕಸಕ್ಕೆ ಹಾಕಿ, ಮೊಹರು ಮಾಡು. ನನಗೆ ಲೆಕ್ಕ ಹೇಳು" ಎಂದಪ್ಪಣೆಯಾಯಿತು. ಚಾಣಕ್ಯ ''ನಾಯಿ'' ಶಬ್ದಕ್ಕೆ ಭಯಂಕರ ಸಿಟ್ಟು ಮಾಡಿಕೊಂಡರೂ ಮೇಲೆ ತೋರಿಸಿಕೊಳ್ಳಲಿಲ್ಲ. ಪೂರ್ವ ಯೋಜನೆಯಂತೆ, ಚಾಣಕ್ಯನ ಸೂಚನೆಯಂತೆ, ಪರ್ವತ ಮಾತಾರಂಭಿಸಲು ಯವನನ ಮಾತಿನ ಅವಕಾಶಕ್ಕೆ ಕಾಯುತ್ತಿದ್ದ. ಅದು ಬಂದಿತು; "ನಿಮ್ಮ ದೇಶದ ಸುಂದರ ಯುವತಿಯರನ್ನು ಎಷ್ಟು ಜನರನ್ನು ಕಾಣಿಕೆಯಾಗಿ ಕರೆ ತಂದಿರುವಿರಿ?" ಎಂದು ಯವನ ನಾಚಿಕೆಗೆಟ್ಟೇ ಕೇಳಿದ ! ವಿದ್ಯುಲ್ಲೇಖೆಗೇ ನಾಚಿಕೆಯಾಯಿತು! ಚಂದ್ರಗುಪ್ತನನ್ನೇ ದಿಟ್ಟಿಸಿ ನೋಡುತ್ತಿದ್ದಳು. ಚಾಣಕ್ಯ ಇದನ್ನು ಗಮನಿಸಿದ್ದ. ವಯಸ್ಸಾದ ಮಗಳಿರುವ ಯವನನ ಕಾಮಪಿಪಾಸೆಗೆ ಅವನ ಮಗಳಿಗೇ ಹೇಸಿಗೆಯಿದ್ದ ಭಾವ ಚಾಣಕ್ಯನ ಮನ ಸ್ಸಿಗೆ ಅನುಕೂಲ ಶಕುನವಾಗಿ ಕಂಡಿತು. ಮೆಲ್ಲನೆ ಚಂದ್ರಗುಪ್ತನ ಕಿವಿ ಯಲ್ಲಿ ''ಇವಳ ಒಲವನ್ನು ತಿರಸ್ಕರಿಸಬೇಡ; ಇದು ದೇವರ ವರ" ಎಂದು ಸುರಿದ.

ಪರ್ವತನೆಂದ ''ಸತ್ರಪರೇ! ನಿಮಗೆಷ್ಟು ತರುಣಿಯರು ಬೇಕೋ ಅಷ್ಟು ತಂದೇ ಇರುವೆ. ಆದರೆ ಅವರನ್ನೆಲ್ಲ ಅನುಭವಿಸುವ ಮೊದಲು ನೀವು

ದೃಢಗಾತ್ರರಾಗಿ, ದೀರ್ಘಾಯುಷಿಯಾಗಿ ಬಾಳಲು ಸಮರ್ಥರಾಗಬೇಡವೇ? ನಿಮಗೆ ಆಯುಷ್ಯದ ಗುಟ್ಟು ತಿಳಿದವರೊಬ್ಬರನ್ನು ಕರೆತಂದಿರುವೆ. ಇಗೋ ಈ ಮಹಾಪುರುಷರು ನಮ್ಮ ಆಸ್ಥಾನ ಪಂಡಿತರು. ಅಸಾಧ್ಯವನ್ನೂ ಸಾಧ್ಯ ಮಾಡುವ ತಂತ್ರ, ಮಂತ್ರ, ಯಂತ್ರ ಶಕ್ತಿಯುಳ್ಳವರು" ಎನ್ನುತ್ತಾ ಚಾಣಕ್ಯನನ್ನು ತೋರಿಸಿದ. ಚಾಣಕ್ಯ ಕೈಯೆತ್ತಿ, ಪರ್ವತನ ಭಾಷೆಯಲ್ಲಿ ಏನೇನೋ ಹೇಳಿ, ಆಶೀರ್ವದಿಸುವಂತೆ ನಾಟಕ ಮಾಡಿದ.

ಭಾರತೀಯ ಪಂಡಿತರ ಇಂಥ ಯೋಗ್ಯತೆಯ ಬಗೆಗೆ ಯವನನೂ ಕೇಳಿದ್ದ. ಅಲೆಕ್ಸಾಂಡರನಿಗೆ ಜ್ಯೋತಿಷ, ಆಯುರ್ವೇದಾದಿಗಳಲ್ಲಿ ಆಸಕ್ತಿಯಿದ್ದು ತನ್ನೊಡನೆ ನಾಲ್ಕಾರು ಪಂಡಿತರನ್ನು ಬಲಾತ್ಕಾರವಾಗಿ ಕೊಂಡೊಯ್ಯಲು ಯತ್ನಿಸಿ, ಅವರು ಮಾರ್ಗಮಧ್ಯೆ ಪ್ರಾಯೋಪವೇಶ ಮಾಡಿ ಸತ್ತ ವಿಷಯ ಅವನಿಗೆ ತಿಳಿದಿತ್ತು. ತಾನು ಹಾಗೆ ಬಲಾತ್ಕರಿಸದೆ ಈ ಭಾರತೀಯ ವಿದ್ಯೆಗಳಿಂದ ಪ್ರಯೋಜನ ಪಡೆದು ಇಲ್ಲೇ ಶರೀರದಲ್ಲಿ ಅಮರನಾಗಲು, ನಿರಂತರ ಭೋಗ ಸಮರ್ಥನಾಗಲು ಹಾತೊರೆಯುತ್ತಿದ್ದ. ಅವನ ದೇಶದ ಪುರಾಣ ಕಥೆಗಳಲ್ಲಿ ಇಂಥ ಪವಾಡಗಳ ಪ್ರಸ್ತಾಪವೂ ಇತ್ತು. ಟಿಥೋನಸ್ ಎಂಬುವನು ಶರೀರದಲ್ಲೇ ಅಮರನಾಗಿ, ಆಮೇಲೆ ಬೇಡವೆನಿಸಿ, ಸತ್ತು ಪುಣ್ಯಶಾಲಿಯಾದ ಕಥೆ ಸತ್ರಪನಿಗೆ ನೆನಪಿಗೆ ಬಂತು. ಆದರ ಪಾಠ ಅವನಿಗೆ ರುಚಿಸಲಿಲ್ಲ.

''ಈ ಪಂಡಿತರು ನನ್ನನ್ನು ಅಮರನನ್ನಾಗಿಸಬಲ್ಲರೇ ! ನನ್ನ ಭೋಗ ಸಾಮರ್ಥ್ಯವನ್ನು ಬೆಳೆಸಬಲ್ಲರೆ? ನನ್ನ ಇಂದ್ರಿಯ ಶಕ್ತಿಯನ್ನು ವರ್ಧಿಸ ಬಲ್ಲರೆ ?" ಎಂದು ಕೇಳಿದ. ಪರ್ವತನ ಕಣ್ಣುಸನ್ನೆಯಿಂದ ಚಾಣಕ್ಯ ಉತ್ತೇಜಿತನಾಗಿ ತನ್ನ ಜೋಳಿಗೆಯಿಂದ ಒಂದು ಭಸ್ಮವನ್ನು ಹೊರತೆಗೆದು "ಯವನನಿಗೆ ಮದ್ಯದಲ್ಲಿ ಇದನ್ನು ಬೆರೆಸಿಕೊಂಡು ಕುಡಿಯುವಂತೆ ಹೇಳಿ" ಎಂದು ಆಜ್ಞಾಪಿಸಿದ. ಯವನ, ವಿದೇಶೀ ಸಾದರಿಯ ಪಾತ್ರೆಯಲ್ಲಿದ್ದ ತನ್ನ ದೇಶದ ಮದ್ಯವನ್ನು ಬಟ್ಟಲಿಗೆ ಸುರಿದು ಆ ಪುಡಿಯನ್ನು ಬೆರೆಸಿ ಕುಡಿದ.

ಶರೀರಕ್ಕೆ ನವ ಚೈತನ್ಯ ಬಂದಂತಾಗಿ, ಹರೆಯದ ಲವಲವಿಕೆ ಬಂದ ಅನುಭವ ವಾಗಿ, ಚಾಣಕ್ಯನ ಶಕ್ತಿಯಲ್ಲಿ ಬಹುನಂಬಿಕೆಯುಂಟಾಯಿತು. ಎದ್ದು ಶತಪಥ ಹಾಕಿ, ಕೆಲಕಾಲ ಚಿಂತಿಸಿ : ''ಇವರು ನನ್ನನ್ನು ಅವುರರನ್ನಾಗಿ ಸಲು ಎಷ್ಟು ದಿನ ಹಿಡಿಯುವುದು ?'' ಎಂದು ಕೇಳಿದ ಚಾಣಕ್ಯ, ಪರ್ವತನಿಗೆ ''ಬರೀ ಔಷಧ ಸೇವನೆಯಿಂದಾದರೆ ಕನಿಷ್ಠನಾಗಿ ಆರು ವರ್ಷ ಎಂಟು ವರ್ಷಬೇಕು. ಯಜ್ಞ ಕರ್ಮದಿಂದಾದರೆ ಒಂದೇ ರಾತ್ರಿ ಯಲ್ಲಿ ಆಗಬಹುದು'' ಎಂದ. ಅದನ್ನು ತನ್ನ ಭಾಷೆಯಲ್ಲಿ ಕೇಳದ ಯವನ ನಿಗೆ ಅಮಿತಾನಂದವಾಯಿತು. ಯಜ್ಞಗಳ ಬಗೆಗೆ ಕೇಳಿದ್ದ. ಅಲೆಕ್ಸಾಂಡರ ನೊಡನೆ ಬರುತ್ತಾ ಅವನ್ನು ಅಲ್ಲಿ ಇಲ್ಲಿ ನೋಡಿಯೂ ಇದ್ದ. ಆ ಯಜ್ಞಕ್ಕೆ ಸಿದ್ಧತೆ ಏನುಬೇಕು. ಯಾವಾಗ ಆಗಬಹುದು ಎಂಬೆಲ್ಲ ಚಡಪಡಿಸಿ, ಚಾಣಕ್ಯನಿಂದ ಮರುರಾತ್ರಿಗೆ–ಅರ್ಧರಾತ್ರಿಗೆ– ವೇಳೆಯನ್ನು ನಿಗದಿ ಪಡಿಸಿ ಕೊಂಡ. ಚಾಣಕ್ಯ ನಿಬಂಧನೆ ಹಾಕಿದ್ದ. ಅರಮನೆಯ ಏಕಾಂತ ಭವನ ದಲ್ಲಿ ಅದು ನಡೆಯಬೇಕು. ಯವನ ಬರೀ ಮೈಯ್ಯಲ್ಲಿ ಎರಡು ಗಂಟೆ ಕಾಲ ಕೂಡುವ ವಿರಾಮ ಮಾಡಿಕೊಳ್ಳಬೇಕು. ಅರಮನೆಯ ಕಾವಲು ಗಾರರಾಗಲಿ ಶಸ್ತ್ರಧಾರಿಗಳಾಗಲೀ ಯಾರೂ ಅಲ್ಲಿರಬಾರದು; ಚಾಣಕ್ಯ, ಅವನ ಶಿಷ್ಯರು ನಾಲ್ವರು, ಪರ್ವತೇಶನೊಬ್ಬ ಇಷ್ಟು ಜನ ಹೊರತು ಬೇರಾರೂ ಅಲ್ಲಿರಬಾರದು. ಯಜ್ಞಸಾಮಗ್ರಿಯೆಲ್ಲ ಚಾಣಕ್ಯನಲ್ಲಿಯೇ ಇದೆ. ಯವನನಿಂದ ಅವನಿಗೆ ಏನೂ ಪ್ರತಿಫಲ ಬೇಡ. ಬೇರಾರಿಗೂ ಅವನು—ತನ್ನ ಮಗಳಿಗೂ ಸಹ-ಇದನ್ನು ಅವನು ತಿಳಿಸಬಾರದು; ಕೊಂಚ ಸೂಚನೆ ಹೊರಹೋದರೂ ಯಜ್ಞ ಫಲ ಕಮ್ಮಿಯಾಗುವುದು! ಯವನ ಅಂದು ಮಧ್ಯಾಹ್ನಾನಂತರ ಏನೂ ತಿನ್ನಬಾರದು; ಕುಡಿಯಬಹುದು ಮಾತ್ರ. ಅಷ್ಟು ಮಡಿ ಈ ಕೃತ್ಯಕ್ಕೆ ಬೇಕು. ಅರಮನೆಯ ಚಾರರೆಲ್ಲ ವಿಶ್ರಾಂತರಾಗಿರಲಿ. ಅವರಾರಿಗೂ ಈ ಸುಳಿವು ತಿಳಿದಿರಬಾರದು; ಎಂದು. ಯವನ ಒಪ್ಪಿದ. ಆ ರಾತ್ರಿ ಎಷ್ಟು ಬೇಗ ಬಂದೀತೋ ಎಂದು ಹಾತೊರೆ ಯುತ್ತಿದ್ದ.

ವಿದ್ಯುಲ್ಲೇಖೆ ಚಂದ್ರಗುಪ್ತನಿಗೆ ಆ ರಾತ್ರಿ ತನ್ನ ದ್ವಿಭಾಷಿಯೊಡನೆ ಹೇಳಿ ಕಳುಹಿದಳು. ಮುದ್ದಿನ ಮಗಳಿಗೆ ಜೊತೆಯ ಸಂಗಾತಿಗಳಿಲ್ಲದೆ,

ಬೇಸರವಾಗಿತ್ತು. ಮಗಳ ಯಾವ ಕೋರಿಕೆಯೂ ನಡೆಯಬೇಕೆಂದು ಸತ್ರಪ ತನ್ನವರಿಗೆ ಆಣತಿ ಮಾಡಿದ್ದ. ದ್ವಿಭಾಷಿ ಚಂದ್ರಗುಪ್ತನನ್ನು ಕರೆತಂದು ವಿದ್ಯುಲ್ಲೇಖೆಯ ಬಳಿ ಬಿಟ್ಟು ಹೊರಗೆ ನಡೆದ.

ಕಣ್ಣಾರಳಿಸಿ ನೋಡುತ್ತ, ಚಂದ್ರಗುಪ್ತನ ಸೌಂದರ್ಯಕ್ಕೆ ಮರುಳಾಗಿ, ಅವಳು ನಕ್ಕಳು. ಎರಡೂ ಕೆನ್ನೆಗಳಲ್ಲಿ ಗುಳಿ ಬಿದ್ದು, ಚಂದ್ರಗುಪ್ತನಿಗೂ ಚಿತ್ತ ಚಂಚಲವಾಯಿತು "ಮಹತ್ವಾಕಾಂಕ್ಷೆ ಇರುವವನು ಇಂದ್ರಿಯ ಚಾಪಲ್ಯದಿಂದ ದೂರವಿರಲು ಮೊದಲು ಕಲಿಯಬೇಕು." ಎಂಬ ಚಾಣಕ್ಯನ ನೀತಿವಾಕ್ಯ ತಟ್ಟನೆ ನೆನಪಾಗಿ, ತಲೆ ತಗ್ಗಿಸಿ, ಲಜ್ಜೆಯಿಂದ ಕೆಳ ನೋಡಿದ. ವಿದ್ಯುಲ್ಲೇಖೆ ಇವನು ಪರ್ವತನ "ಸಾಕು ಮಗ"ನೆಂದು ಭಾವಿಸಿದ್ದಳು. ಪರ್ವತ ತನ್ನ ತಂದೆಗೆ ಚಂದ್ರಗುಪ್ತನನ್ನು ಪರಿಚಯಿಸಿದ ಮಾತಿಗೆ ಹಾಗೆ ಅವಳಿಗೆ ಅರ್ಥವಾಗಿತ್ತು. ಚಂದ್ರಗುಪ್ತನಿಗೆ ಅವಳ ಭಾಷೆಯ ಪರಿಚಯ ವಿರಲಿಲ್ಲ. ಅವಳಿಗೆ ಇವನ ಭಾಷೆಯ ಪರಿಚಯವಿರಲಿಲ್ಲ. ಪ್ರೇಮಕ್ಕೆ ಆ ಇಬ್ಬರ ಭಾಷೆಯೂ ಬೇಕಿರಲಿಲ್ಲ! ಅದರ ಭಾಷೆ ಅದಕ್ಕಿದ್ದೇ ಇತ್ತು. ಸಂಜ್ಞೆಯಲ್ಲ ಅವಳು ತಿಳಿಸಿದ್ದನ್ನು ಚಂದ್ರಗುಪ್ತ ಹೀಗೆ ಗ್ರಹಿಸಿದ: ಅವಳಿಗೆ ಬಲು ಬೇಸರವಾಗಿದೆ. ತನ್ನವರು ಯಾರೂ ಇಲ್ಲ. ತಂದೆ ಕಾಮುಕ. ಕುಡುಕ, ಅವನು ಅದರಲ್ಲೇ ಸಾಯುವುದು ಖಂಡಿತ. ಅವಳಿಗೆ ಭಾರತ ದೇಶ ಹಿಡಿಸಿದೆ. ಚಂದ್ರಗುಪ್ತನನ್ನು ನೋಡಿದೊಡನೆಯೇ ಅವನನ್ನು ನಂಬಿಕೆಗೆ ಅರ್ಹನೆಂದು ಭಾವಿಸಿದ್ದಾಳೆ. ಅವನು ಅವಳ ಉದ್ಧಾರ ಮಾಡಿ ಯಾನೇ ? ಅವಳಿಗೆ ದೇವರಲ್ಲಿ ನಂಬಿಕೆಯುಂಟು. ಪಾಂಚರಾತ್ರಿಗಳನ್ನು ಕೇಳಿ ಬಲ್ಲಳು. ಅದೇನೋ ತೋಳುಗಳಿಗೆ ಶಂಖ ಚಕ್ರಗಳ ಮುದ್ರೆಯನ್ನು ಅಲಂಕರಿಸಿ, ಯವನರನ್ನೂ ಭಾರತೀಯರನ್ನಾಗಿಸುವ, ವೈಷ್ಣವರನ್ನಾಗಿ ಮಾಡುವ ಪದ್ಧತಿ ಉಂಟಂತೆ, ತನಗೂ ತೋಳುಗಳಿಗೆ ಆ ಚಿಹ್ನೆ ಹಾಕಿದರೆ ಎಷ್ಟು ಚೆನ್ನ! – ಎನ್ನುತ್ತಾ ತನ್ನ ನೀಳ ಉಡುಪಿನ ತೋಳು ಭಾಗಗಳನ್ನು ಮೇಲೆ ಸರಿಸಿ, ತನ್ನ ತುಂಬುದೋಳುಗಳನ್ನು ತೋರಿಸಿ, ಕೈ ಬೆರಳುಗಳ ಸನ್ನೆ ಯಿಂದ ಮುದ್ರಾಂಕನವನ್ನು ಅಭಿನಯಿಸಿದಳು. ಹಾಗೆ ಮಾಡುವಾಗ ಅವಳ ಸ್ತನಗಳೂ ಅಷ್ಟಿಷ್ಟು ಚಂದ್ರಗುಪ್ತನಿಗೆ ಕಂಡವು! ಮನಸ್ಸು ವಿಚಲಿತ

ವಾಗಿತ್ತು. "ಇವಳನ್ನು ತಿರಸ್ಕರಿಸಬೇಡ'' ಎಂಬ ಆಚಾರ್ಯನ ಮುನ್ಸೂಚನೆಯೂ ನೆನಪಾಯಿತು. ಮುಖದಲ್ಲಿ ಮಂದಹಾಸ ಸೂಸಿ, ಅವಳ ಸೂಚನೆ ತನಗೊಪ್ಪಿಗೆ ಎಂಬಂತೆ ಚಂದ್ರಗುಪ್ತ ತಲೆ ಆಡಿಸಿದ. ತಾನು ರಾಜಕುಮಾರನೆಂದೂ, ಆಚಾರ್ಯನ ಶಿಷ್ಯನೆಂದೂ ಸನ್ನೆಯಿಂದ ಹೇಳಿದ. ಅವಳು ಕಣ್ಣರಳಿಸಿದಳು. ಆಮೇಲೆ ಕಣ್ಣೀರು ಹಾಕಿ, ತಲೆ ತಗ್ಗಿಸಿದಳು. ಚಂದ್ರಗುಪ್ತನ ಪಾದದ ಬಳಿ ಮಂಡಿಯೂರಿ, ಅವನ ತೊಡೆಗಳನ್ನು ಬಿಗಿಯಪ್ಪಿದಳು. ಈ ಶರಣಾಗತಿಗೆ, ಅವಳ ಸನಿಹಕ್ಕೆ, ಪ್ರೇಮಕ್ಕೆ ಕುಮಾರನ ಹೃದಯ ಕರಗಿ, ಅವಳನ್ನು ಮೇಲೆತ್ತಿ, ಬಿಗಿಯಪ್ಪಿ ಮುದ್ದಿಸತೊಡಗಿದ. ಅವಳ ಆಲಿಂಗನದ ಬಿಗಿ ಬಹುಕಾಲ ಸಡಿಲಲಿಲ್ಲ. ಎರಡು ರಾಷ್ಟ್ರಗಳ ಸಂಸ್ಕೃತಿಗಳು ಬಹುಕಾಲ ಗಾಢಾಲಿಂಗನದಲ್ಲಿದ್ದು ಆಚಾರ್ಯನ ಮಾನಸಿಕ ಆಶೀರ್ವಾದದಿಂದ ಅವರು ಗಾಂಧರ್ವ ರೀತಿಯಲ್ಲಿ ಸತಿಪತಿಯರಾಗಿ ಹೋಗಿದ್ದರು !!

ಆಚಾರ್ಯನು ನಡೆಸುತ್ತಿದ್ದ ಮಾರಣಹೋಮ ಇತ್ತ ನಡೆದಿತ್ತು! ಏಕಾಂತ ಗೃಹ. ಯವನನ ದೀರ್ಘ, ಪುಷ್ಟದೇಹ ಕಾಲು ಮಡಚಿ, ಯಜ್ಞ ವೇದಿಕೆಗೆ ಸಮೀಪದಲ್ಲಿ, ಬೆತ್ತಲೆ ಕುಳಿತ್ತಿತ್ತು! ಈಗಾಗಲೇ ಯಜ್ಞಾಂಗ ಪ್ರಸಾದಗಳನ್ನಾಗಿ ಆಗಾಗ ಆಚಾರ್ಯ, ಅವನಿಗೆ ಮತ್ತುಬರಿಸುವ ಪುಡಿಗಳನ್ನು ಮದ್ಯದಲ್ಲಿ ಕಲೆಸಿ ಅವನಿಗೆ ಕುಡಿಸಿದ್ದ. ಪರ್ವತನೂ ಪಕ್ಕದಲ್ಲಿರುತ್ತಾ ತನ್ನ ಸಮಯವನ್ನು ಆಚಾರ್ಯನ ಸೂಚನೆಯಂತೆ ಕಾಯುತ್ತಿದ್ದ. ಚಾಣಕ್ಯಶಿಷ್ಯರು ಗುರುವಿಗೆ ಸಹಾಯ ಮಾಡುತ್ತಿದ್ದರು. ಗೋಧಿಯ ಹಿಟ್ಟಿನ ಒಂದು ಬೊಂಬೆ, ಯವನನ ನಗ್ನಾಕೃತಿಯಲ್ಲಿ ಅರಿಶಿನ, ಕುಂಕುಮ ಬಳಿಸಿಕೊಂಡು, ತನ್ನ ದುರ್ವಿಧಿಗೆ ಕಾಲಕಾಯುತ್ತಾ ಆಚಾರ್ಯನ ಎದುರು ಯಜ್ಞವೇದಿಯ ಮುಂದೆ ಕುಳಿತಿತ್ತು. ಅದೇನೆಂದು ಯವನ ಕೊಂಚ ಭಯದೊಡನೆ ಪರ್ವತನತ್ತ ಮುಖಮಾಡಿ, ಕೇಳುವಂತೆ ಮುಖ ಭಾವ ಮಾಡಿದ. ''ನಿನ್ನ ಅಮರತ್ವ ಅದರಲ್ಲಿ ಮೊದಲು ಆರೋಪಿತವಾಗಿ, ಆಮೇಲೆ ನಿನ್ನಲ್ಲಿ ಬರುವುದು" ಎಂಬಂತೆ ಚಾಣಕ್ಯ ಸನ್ನೆಯಿಂದ ಸೂಚಿಸಿದ. ತೃಪ್ತನಾಗಿ ಯವನ

ಕುಳಿತ. ನಿದ್ದೆಯೊಂದು ಕಡೆ. ಉಪವಾಸದ ಆಯಾಸವೊಂದು ಕಡೆ. ಆಗಾಗ ನಿದ್ದೆಯ ಭಾರಕ್ಕೆ ತೂಕಡಿಸುತ್ತಾ ಬೆಚ್ಚಲಾರಂಭಿಸಿದ. "ನಿದ್ರೆ, ಸ್ತ್ರೀವ್ಯಸನ, ಹಸಿವು" ಈ ಮೂರೂ ಇಲ್ಲದಿದ್ದರೆ ತಾನೆಂದೋ ದೇವತೆಯಾಗು ತ್ತಿದ್ದೆನೆಂದು ಅಲೆಕ್ಸಾಂಡರನು ಪದೇ ಪದೇ ಹೇಳುತ್ತಿದ್ದುದು ನೆನಪಾಯಿತು! ಆ ವೀರ ಮಾಡಲಾಗದ್ದನ್ನು ತಾನು ಮಾಡುತ್ತಿರುವ ಹೆಮ್ಮೆ! ತನ್ನ ಜಗತ್ತು ತನ್ನನ್ನೇ ಮರೆಯುವಂತೆ ಆಗುವ ಹಿಗ್ಗು! ಯವನ ಪುರೋಹಿತರು ಮಾಡದ್ದನ್ನು ಈ ಭಾರತೀಯ ಪಂಡಿತ ಮಾಡಿಯಾನೆಂಬ ವಿಶ್ವಾಸ......... ತೂಕಡಿಕೆಯ ಜೋಂಪಿನ ಮಧ್ಯೆ ಇದ್ದಕ್ಕಿದಂತೆ ಕರುಳು ಚುಚ್ಚಿ ಕತ್ತಿಯಿಂದ ಇರಿದ ಯಾತನೆಯಾಗಿ ಕಣ್ಣರಳಿಸಿದ! ಆಚಾರ್ಯ ದರ್ಭೆಯ ತುದಿಯಿಂದ ಆ ಗೋಧಿ ಹಿಟ್ಟಿನ ಗೊಂಬೆಯ ಉದರವನ್ನು ಚುಚ್ಚಿದ!! ಯವನನ ತಲೆ ಗೂದಲೆರಡು, ಉಗುರು ಚೂರುಗಳು ಅದರ ಅಂಗಗಳಲ್ಲಿ ನೆಟ್ಟಿದ್ದವು... ಕ್ರಮೇಣ ಬೊಂಬೆ ಕುಣಿಯಲಾರಂಭಿಸಿತು! ಯವನನೂ ಹಾಗೆ ಮಾಡ ಲಾರಂಭಿಸಿದ!! ಆಚಾರ್ಯನ ಮಂತ್ರೋಚ್ಚಾರ, ಬೀಜಮಂತ್ರಗಳ ಭಯಂಕರ ಅಬ್ಬರದೊಡನೆ ಯಾರನ್ನೂ ಭಯಪಡಿಸುವ ಅವನ ಗೊಗ್ಗರು ಧ್ವನಿಯಲ್ಲಿ ಅಲೆಯದ ಛಾವಣಿಯನ್ನು ಅದುರಿಸುತ್ತಿತ್ತು! ಯವನನಿಗೆ ಏನು ನಡೆಯು ತ್ತಿದೆಯೆಂದೇ ತಿಳಿಯಲಿಲ್ಲ. ಕುಡಿತದ ಅಮಲು ನೆತ್ತಿಗೇರಿತು! ಆ ಬೊಂಬೆ ತನ್ನನ್ನು ಅಣಕವಾಡುತ್ತಿದೆಯೆಂದೆನಿಸಿತ್ತು! ಪರ್ವತನತ್ತ ನೋಡಿದ! ಪರ್ವತ ಅದನ್ನನುಸರಿಸುವಂತೆ ಕೈಯ್ಯಾಡಿಸಿದ. ಸತ್ರಪ ಆ ಬೊಂಬೆಯ ಹಿಂದೆ ಏಳುತ್ತ ಬೀಳುತ್ತ ಕುಣಿಯುತ್ತ ಅನುಸರಿಸಿ, ಅದನ್ನು ಹಿಡಿದ. ಅದರ ಕೊರಳಿನ ಬಳಿ ಬಲವಾಗಿ ಕೈ ಹಾಕಿ ಹಿಸುಕಿದ!! ಮರು ಗಳಿಗೆಯಲ್ಲೇ ತಾನು ಸತ್ತು ಬಿದ್ದ!! ಮಲೆಯಾಳ ಭಗವತಿ ಹೀಗೆ ಪಂಚ ನದದ ಬ್ರಾಹ್ಮಣರ, ಸ್ತ್ರೀಯರ ಅತ್ಯಾಚಾರ ಮಾಡಿದ್ದ ಯವನನ ಹಗೆ ತೀರಿಸಿಕೊಂಡು ತೃಪ್ತಳಾಗಿದ್ದಳು. ಆಚಾರ್ಯ ಮುಂದಿನ ಕಾರ್ಯವನ್ನು ಆಗಲೇ ಪರ್ವತನಿಗೆ ಸೂಚಿಸಿದ್ದಂತೆ ಮೊದಲು ಪರ್ವತ ಅರಮನೆಯ ಬೆಂಗಾ ವಲಿನವರನ್ನು, ಅವರನ್ನು ಸುತ್ತುವರಿದಿದ್ದ ತನ್ನ ಸೈನಿಕರಿಂದ ಮುಗಿಸಿದ. ನಿದ್ರಾಭರದಲ್ಲಿದ್ದು ಈ ಧಾಳಿಯ ನಿರೀಕ್ಷೆಯಿಲ್ಲದ ಅವರು ಸುಲಭವಾಗಿ

ಶಬ್ದವಿಲ್ಲದೆ ಹತರಾದರು. ಯವನನ ಸೈನ್ಯ ತುಕಡಿಗಳನ್ನು ಪರ್ವತನ ಸೇನಾ ತುಕಡಿಗಳು ಹಂಚಿಕೊಂಡು ಮುಗಿಸಿದವು. ಯಾರೊಬ್ಬ ಯವನನನ್ನೂ ಊರಲ್ಲಿ ಉಳಿಸಲಿಲ್ಲ. ಚಂದ್ರಗುಪ್ತ ವಿದ್ಯುಲ್ಲೇಖೆಯನ್ನು ಹಾಸಿಗೆಯಿಂದ ಮೆಲ್ಲನೆಬ್ಬಿಸಿದ. ಹೊತ್ತು ಮೂಡುವುದರಲ್ಲಿತ್ತು. ಯವನನ ಶವವನ್ನು ಬೇರೊಂದು ಕೊಠಡಿಗೆ ವರ್ಗಾಯಿಸಿ, ಅದರ ಮೇಲೆ ಬಟ್ಟೆ ಮುಚ್ಚಿದ್ದರು. ದ್ವಿಭಾಷಿ ಸೆರೆಸಿಕ್ಕಿದ್ದ. ಚಾಣಕ್ಯನ ಸೂಚನೆಯಂತೆ "ಶತ್ರುಹ, ಸ್ತ್ರೀಯೊಬ್ಬಳ ಆಲಿಂಗನದಲ್ಲಿ ಸತ್ತ''ನೆಂದು ಅವನು ವಿದ್ಯುಲ್ಲೇಖೆಗೆ ತಿಳಿಸಿದ. ಅವಳಿಗೆ ಆಶ್ಚರ್ಯವಾಗಲಿಲ್ಲ. ತನ್ನ ತಂದೆ ಹೀಗೆ ಅಮರನಾಗುವನೆಂದು ಮಾತ್ರ ಅವಳು ಅಂದೇ ನಿರೀಕ್ಷಿಸಿರಲಿಲ್ಲ! ಅಳುತ್ತಿದ್ದಳು. ಚಂದ್ರಗುಪ್ತ ಸಂತೈಸುತ್ತಿದ್ದ. ಚಾಣಕ್ಯ ಪರ್ವತನಿಗೆ ಆ ದ್ವಿಭಾಷಿಯೊಡನೆ ಆ ಹೆಣವನ್ನೇನು ಮಾಡಬೇಕೆಂದು ಕೇಳುವಂತೆ ಹೇಳಿದ. ಅವನು ವಿದ್ಯುಲ್ಲೇಖೆಯ ಮುಖ ನೋಡಿದ. ಅವರವರು ಯವನ ಭಾಷೆಯಲ್ಲಿ ಮಾತಾಡಿಕೊಂಡದ್ದು ಚಾಣಕ್ಯನಿಗೆ ಹೀಗೆ ತಿಳಿಯಿತು "ಯವನನ ಆಸೆ ತನ್ನ ದೇಶದಲ್ಲೇ ಸಾಯಬೇಕೆಂಬುದಿತ್ತು. ಅವಳು ಮಾತ್ರ ಈ ದೇಶಬಿಟ್ಟು ಹೋಗಲಾರಳು. ತಾನು ಚಂದ್ರಗುಪ್ತನನ್ನು ಪ್ರೇಮಿಸಿ ವಿವಾಹ ಆಗಿದ್ದವಳು. ಭಾರತೀಯಳಾಗಿ ತಾನಿಲ್ಲೇ ಉಳಿಯುವವಳು. ಆದ್ದರಿಂದ ತಂದೆಯ ಶವವನ್ನು ಮರ್ಯಾದೆಯೊಂದಿಗೆ ತನ್ನ ದೇಶಕ್ಕೆ ಕಳುಹಿಸಬೇಕು" ಎಂದು.

ಚಾಣಕ್ಯ ಪರ್ವತನ ಸೇನೆಯೊಂದಿಗೆ ಆ ಶವವನ್ನು ಯವನ ದೇಶಕ್ಕೆ ಕಳುಹುವ ಮಾರ್ಗದಲ್ಲಿ "ಯವನ ಸೇನಾ ಧ್ವಂಸಕ ಪುರೂರವನಿಗೆ ಜಯವಾಗಲಿ," ''ಆರ್ಯಸಂಸ್ಕೃತಿಯ ಪುನರುತ್ಥಾಪಕನಿಗೆ ಜಯವಾಗಲಿ," "ಆರ್ಯ ಚಾಣಕ್ಯ ಪಾದಪದ್ಮ ಭ್ರಮರನಿಗೆ ಜಯವಾಗಲಿ'' ಎಂಬೀ ಬಗೆಯ ಘೋಷಣೆಗಳೊಂದಿಗೆ, ಅಲ್ಲಲ್ಲಿ ಉಳಿದಿದ್ದ ಯವನ ಬಿಡಾರಗಳ ಮೇಲೆ ಸಾಗುತ್ತಾ, ಎರಗುತ್ತಾ, ಅವರನ್ನು ಸಂಹರಿಸುತ್ತಾ, ಹೊಸ ಸಾಮಂತ ಸೇನೆಗಳು ಪರ್ವತನ ಸೇನೆಯನ್ನು ಕೂಡಿಕೊಳ್ಳುತ್ತಾ ಮಾಳವಕೋಟೆ, ಕ್ಷುದ್ರಕ ನಾಡುಗಳಲ್ಲಿ ಬ್ರಾಹ್ಮಣರಿಗಾದ ಅಪಮಾನಗಳನ್ನು ಸೇಡು ತೀರಿಸಿ

ಕೊಳ್ಳುತ್ತಾ ಸೈನ್ಯ ಪ್ರಳಯ ರುದ್ರನ ಪ್ರಮಥಗಣಗಳಂತೆ ಭೀಕರ ರಣ ತಾಂಡವವಾಡಿತು. ಯವನರ ಹೆಣಗಳನ್ನು ಅರಣ್ಯಾ ಮಧ್ಯಮಾರ್ಗದ ಕಾಡುಮರಗಳಿಗೆ ನೇಣುಹಾಕಲಾಯಿತು. ಸಿಂಧೂ ನದಿಯ ಪಶ್ಚಿಮದ ಆಚೆಗೂ ಆ ಸೈನ್ಯ ನಡೆಯಿತು. ನದಿಯ ಹಾಯ್ಗಡದ ಯವನ ರಕ್ಷಕ ಸೈನ್ಯ, ಪರ್ವತನ ಭಯಂಕರ ಸೈನ್ಯವನ್ನು ನೋಡಿ ಭಯಭ್ರಾಂತಿಯಿಂದ ಪಲಾಯನ ಮಾಡಿತು. ದೊಡ್ಡ ದೊಡ್ಡ ದೋಣಿ ಹಡಗುಗಳಲ್ಲಿ ಪರ್ವತನ ಸೈನಿಕರು ಅವರನ್ನು ಬೆನ್ನಟ್ಟಿ ಸಿಗ್ರಹಿಸಿದರು. ಪಂಚನದ ಪ್ರದೇಶದಲ್ಲಿ ಯವನ ವೈರಿಭಟರು ಯಾರೂ ಉಳಿಯಲಿಲ್ಲ.

  

"ಎಲಾ, ವೃಷಲ! ಹೀಗೆ ಎಷ್ಟು ಮಡದಿಯರನ್ನು ಮಾಡಿಕೊಳುವೆ!" ಎಂದು ಆಚಾರ್ಯ ಚಂದ್ರಗುಪ್ತನನ್ನು ಛೇಡಿಸಿದ!

"ಆರ್ಯರೆ, ನೀವಾಗಿ ಇವಳನ್ನು ನನಗೆ ಕಟ್ಟಿ, ಹೀಗೆ ಕೇಳುವ ಭಾವ ವೇನು ? ಆಚಾರ್ಯರಿಗೆ ಎಷ್ಟು ಸಂಮ್ಮತವೋ ಅಷ್ಟು ಜನ ಮಡದಿಯರು ನನಗಿರಲಿ; ಆರ್ಯರ ಹೃದಯವನ್ನೆಂತರಿಯುವೆ ?"

ಈ ಸಂಲ್ಲಾಪ ಅರಮನೆಯಲ್ಲಿ ಮುಂದುವರೆಯಿತು. ವಿದ್ಯುಲ್ಲೇಖೆ ಚಾಣಕ್ಯನ ಪಾದಗಳಲ್ಲಿ ನಮಸ್ಕರಿಸಿದಳು! ಅವಳ ವಿಷಯಕ್ಕೆ ಆಚಾರ್ಯ ಮೆಚ್ಚಿದ! "ಇವಳನ್ನು ಚೆನ್ನಾಗಿ ಪರೀಕ್ಷಿಸಬೇಕು. ನನಗೆ ತಿಳಿಸದೆ ಇವಳನ್ನು ಸೇರಬಾರದು!!" ಎಂದ ಆಚಾರ್ಯನ ಮಾತು ಕೇಳಿ ಚಂದ್ರಗುಪ್ತ "ಶಿವ, ಶಿವ!!" ಎನ್ನುತ್ತಾ ನಕ್ಕ! ಆಚಾರ್ಯನೂ ನಕ್ಕ! "ಎಂಥೆಂಥ ರಾಣಿಯ ರಿಂದ ಎಂಥೆಂಥ ದೊರೆಗಳು ಕೊಲೆಯಾಗಿರುವರೆಂದು ನಾನು ಅರ್ಥಶಾಸ್ತ್ರ ದಲ್ಲಿ ಬರೆದಿರುವುದಾಗಿ ನನ್ನ ಶಿಷ್ಯನನ್ನು ಕೇಳಿ ತಿಳಿದುಕೋ !" ಎನ್ನುತ್ತಾ ಶ್ರುತವಿನೀತನ ಕಡೆ ನೋಡಿದ.

ಪರ್ವತೇಶ ವಿಜಯಿಯಾಗಿ ಬಂದು, ಆಚಾರ್ಯ ಪಾದಗಳಲ್ಲಿ ತನ್ನ ಕಿರೀಟವನ್ನಿಟ್ಟು ದೀರ್ಘ ಪ್ರಣಾಮ ಮಾಡಿದ. ''ಆಚಾರ್ಯರೇ ! ಭರತ ವಂಶದ ಕೀರ್ತಿಯನ್ನು ಕಾಪಾಡಿ, ನನ್ನನ್ನು ಪುನಃ ಪ್ರತಿಷ್ಠಿಸಿದಿರಿ ! ತಾವು ಶ್ರೀ ಕೃಷ್ಣನ ಅವತಾರವೆಂಬುದರಲ್ಲಿ ನನಗೆ ಸಂದೇಹವಿಲ್ಲ'' ಎಂದು ಬಿನ್ನವಿಸಿದ. "ಯಾರ ಅವತಾರವಾದರೇನಾಯಿತು ? ನನಗೆ ಪ್ರಾಯಶ್ಚಿತ್ತ ತಪ್ಪಲಿಲ್ಲ'' ಎನ್ನುತ್ತಾ ಶಿಷ್ಯರೊಡನೆ ಆಚಾರ್ಯ ಸಿಂಧೂನದಿಯ ಎಡೆಗೆ ಸಮೀಪಿಸಿದ.



## ಒಂಭತ್ತನೆಯ ಅಧ್ಯಾಯ

# ನಂದನಿಗ್ರಹತಂತ್ರನಿರೂಪಣೆ

''ಆಚಾರ್ಯ! ನನಗೆ ಅಪೇಕ್ಷೆಯಿಲ್ಲದೆ ಹೆಣ್ಣೊಬ್ಬಳನ್ನು ನನ್ನ ತಲೆಗೆ ಕಟ್ಟಿ ಅವಳನ್ನು ಸುಖಪಡಿಸದೆಯೂ ನಾನೂ ಸುಖದಂದಿರದಂತೆಯೂ ಮಾಡಿದ ತಮ್ಮ ತಂತ್ರ ನನಗೆ ಅರ್ಥವಾಗಲಿಲ್ಲ'' ಎಂದು ಚಂದ್ರಗುಪ್ತ ನೊಮ್ಮೆ ಬಿನ್ನೈಸಿದ. ಆಚಾರ್ಯ "ರಾತ್ರಿ ಉತ್ತರಿಸುವೆ" ಎಂದ!

ಪರ್ವತೇಶನೊಡನೆ ಆಚಾರ್ಯ, ಚಂದ್ರಗುಪ್ತ, ವಿದ್ಯುಲ್ಲೇಖೆ, ಪರಿ ವಾರವೆಲ್ಲ ಸೈನ್ಯ ಸಮೂಹದೊಡನೆ ವಿಜೃಂಭಣೆಯಿಂದ ಪರ್ವತರಾಜಧಾನಿಗೆ ಬಂದು ಸೇರಿಯಾಗಿತ್ತು. ಚಂದ್ರಗುಪ್ತನಿಗೆ ಮಾತು ಕೊಟ್ಟಂತೆ, ಮಧುರೆಯ ಸಂಕರ್ಷಣಾಲಯದಿಂದ ಹೊರಟ ತಿಂಗಳೊಳಗೆ-೨೫ ದಿನಗಳಲ್ಲಿಯೇ-ಚಾಣಕ್ಯತಂತ್ರದ ಮೊದಲ ಹೆಜ್ಜೆ ಸಫಲವಾಗಿದ್ದು, ಮುಂದೇನೆಂದು ಚಂದ್ರ ಗುಪ್ತ ಚಿಂತಿಸುತ್ತಿದ್ದ. ವಿದ್ಯುಲ್ಲೇಖೆಗೆ ಪಾಂಚರಾತ್ರಿಪ್ರಮುಖಂಡ ವಾಸು

ದೇವ ಭಟ್ಟಾರಕನ ಕೈಲಿ ಚಾಣಕ್ಯ ಶಂಖಚಕ್ರಗಳ ಮುದ್ರೆ ಹಾಕಿಸಿ,ಅವಳಿಗೆ ವೈಷ್ಣವ ದೀಕ್ಷೆ ಕೊಡಿಸಿದ್ದ. ಸುಂದರ ಲಾಂಛನಗಳನ್ನು ತೋಳಿನಲ್ಲಿ ಸದಾ ನೋಡಿಕೊಳ್ಳುತ್ತಾ ಅವಳು ಹಿಗ್ಗಿದ್ದಳು. ಪುಟ್ಟ ಶ್ರೀಕೃಷ್ಣನ ಕಾಳಿಂಗ ಮರ್ದನ ಮೂರ್ತಿಯೊಂದನ್ನು ಆಚಾರ್ಯ ಅವಳಿಗೆ ಅನುಗ್ರಹಿಸಿ, "ಇದು ನಿನ್ನ ಇಷ್ಟಾರ್ಥಸಿದ್ಧಿ ಪಡಿಸುವ ದೈವವಾಗಲಿ ಎಂದು ಹರಸಿದ್ದ. ಭಾರತೀಯ ಸ್ತ್ರೀಯಂತೆ ಅವಳು ಉಡುಗೆ ತೊಡುಗೆ ಧರಿಸಲಾರಂಭಿಸಿ, ಮುಂಚಿಗಿಂತ ಸುಂದರಿಯಾಗಿ ಕಾಣಹತ್ತಿದಳು.

ಪರ್ವತನ ದೃಷ್ಟಿಯೊಮ್ಮೆ ಅವಳತ್ತ ಹಾಯ್ದು ಚಿತ್ತ ಚಂಚಲವಾದು ದನ್ನು ರಹಸ್ಯದಲ್ಲಿ ಶಾರ್ಂಗರವ ಆಚಾರ್ಯನಿಗರುಹಿದ! "ಎಲ್ಲ ಬಿಟ್ಟು ಈ ವಯಸ್ಸಾದ ದೊರೆಗೆ ಈ ಅಕಾಲದಲ್ಲಿ ಈ ಚಾಪಲ್ಯವೇ !'' ಎಂದು ಚಾಣಕ್ಯ ಚಕಿತನಾಗಿ, ಹುಬ್ಬು ಗಂಟಿಕ್ಕಿದ. ಏನೋ ಚಿಂತಿಸಿ, ತಾನೇ ಪ್ರಸನ್ನನಾದ. ರಹಸ್ಯದಲ್ಲಿ ವಿದ್ಯುಲ್ಲೇಖೆಯನ್ನು ಕರೆಸಿ "ಮಗಳೇ! ತಂದೆ ಸತ್ತ ತಬ್ಬಲಿಯಾದ ನಿನಗೆ ಇಲ್ಲಿಬ್ಬರೇ ಹಿತೈಷಿಗಳುಂಟು; ನಿನ್ನ ಗಂಡ ಚಂದ್ರಗುಪ್ತನೊಬ್ಬ; ನಿನ್ನ ತಂದೆಯೋ ತಾತನೋ ಆಗಿರಬಹುದಿದ್ದ ನಾನೊಬ್ಬ" ಎಂದು ಅವಳ ಯವನ ಭಾಷೆಯಲ್ಲೇ ಅವಳಿಗೆ ಮಾತಾ ಡಿದ.

ಅವಳು ಚಕಿತಳಾದಳು ! ವಿಶ್ವಾಸವೂ ಕುದುರಿತು, ''ಆಚಾರ್ಯ! ನಿಮಗೀ ಭಾಷೆ ಗೊತ್ತೆಂದು ನನಗೆ ಮೊದಲೇ ತಿಳಿಯಲಿಲ್ಲವಲ್ಲ!'' ಎಂದ ವಳೇ, ಚಂದ್ರಗುಪ್ತನ ಅರಸು ಮನೆತನದ ಇತಿಹಾಸವನ್ನು ಸಂಕ್ಷೇಪವಾಗಿ ಅರಿತು ಸಂತಸಪಟ್ಟಳು. ಚಾಣಕ್ಯನೆಂದ: "ಈ ಅರಮನೆಯಲ್ಲಿ ನಿನ್ನ ಭಾಷೆ ತಿಳಿದವರು ನಾವಿಬ್ಬರೇ ! ಇಲ್ಲಿ ನಿನಗೆ ಹೊಸ ವೈರಿಗಳು ಹುಟ್ಟಿ ಕೊಳ್ಳುವಂತೆ ಕಾಣುತ್ತಿದೆ. ಜಾಗರೂಕಳಾಗಿದ್ದು, ನಡೆಯುವುದನ್ನು ಗಮನಿಸಿ ನನಗರುಹು. ನೀನು ಮಗಧೇಶ್ವರನ ರಾಣಿಯಾಗುವ ಹೊಣೆ ನನ್ನದು; ನನ್ನನ್ನು ನಂಬು. ನಿನ್ನ ಗಂಡನಿಗೆ ದ್ರೋಹ ನಡೆಯದಂತೆ ಎಚ್ಚರವಹಿಸು. ಅವನನ್ನು ಕೂಡಿಕೊಳ್ಳಲು ತವಕಿಸಬೇಡ. ಏಕೆಂದು

ಕೇಳಬೇಡ. ಕ್ರಮೇಣ ಎಲ್ಲ ಹೇಳುತ್ತೇನೆ. ವೇಳೆಯಿಲ್ಲ. ವಿಶೇಷವಾಗಿ ಪರ್ವತೇಶನ ಚರ್ಯೆಗಳನ್ನು ಜಾಗ್ರತೆಯಿಂದ ಗಮನಿಸು. ನಿನ್ನತ್ತ ಅವನ ದೃಷ್ಟಿ ಬೀಳಬಹುದು. ಅವನಿಗೆ ನಿನ್ನ ಸಂಶಯ ಬೀಳದಂತೆ ನೋಡಿಕೋ" ಎಂದು ಅವಳನ್ನಾಶೀರ್ವದಿಸಿ ಕಳುಹಿದ. ಈ ಘಟನೆಯಿಂದ ವಿದ್ಯುಲ್ಲೇಖೆಗೆ ಚಾಣಕ್ಯನಲ್ಲಿ ಪೂಜ್ಯ ಭಾವನೆ ಹೆಚ್ಚಾಯಿತು. ಅವಳ ಹೃದಯವನ್ನು ಆಚಾರ್ಯ ಹೀಗೆ ವಿಶ್ವಾಸದಿಂದ ವಶಪಡಿಸಿಕೊಂಡಿದ್ದ. ಹೊರಡುವ ಮುಂಚೆ ಅವಳು "ಆರ್ಯರೇ! ತಮ್ಮನ್ನೊಂದು ಪ್ರಶ್ನಿಸಲೇ?'' ಎಂದಳು. ಚಾಣಕ್ಯ ಏನೆಂದು ಮುಖ ಭಾವದಲ್ಲೇ ಕೇಳಿದ. "ತಮಗೂ ಶಂಖ ಚಕ್ರಾಂಕನವಾಗಿದೆಯೇ ?"

ಚಾಣಕ್ಯ ನಕ್ಕು ಉತ್ತರೀಯವನ್ನು ಕಳಚಿ ತನ್ನ ಕೃಶ ತೋಳುಗಳನ್ನು ಪ್ರದರ್ಶಿಸಿದ! ಕಪ್ಪಾದ ಆ ತೋಳುಗಳ ಮೇಲೂ ಸುಂದರ ಶಂಖ-ಚಕ್ರಗಳ ದೊಡ್ಡ ಮುದ್ರೆಗಳನ್ನು ಕಂಡು, ಆಚಾರ್ಯನ ಪಾದಕ್ಕೆರಗಿದಳು. "ಚಂದ್ರಗುಪ್ತನಿಗೇಕೆ ಶಂಖ-ಚಕ್ರಧಾರಣವಾಗಿಲ್ಲ?" ಎಂದು ಕುತೂಹಲದಿಂದ ಕೇಳಿದಳು. "ಅವನಾಗಿ ಇಚ್ಛಿಸಲಿಲ್ಲ ಎಂದು ಕಾಣುತ್ತದೆ. ನೀನೇ ಪ್ರೇರಿಸಿ ನೋಡು'' ಎಂದು ಆಚಾರ್ಯ ಮುಸಿ ನಗುತ್ತ ಹೇಳಿ ಕಳುಹಿದ್ದ. ತತ್ಪ್ರೋಪದೇಶಕ್ಕೆ ಆಗಾಗ ತನ್ನಲ್ಲಿಗೆ ಬರುತ್ತಿರಬೇಕೆಂದೂ, ಹಾಗೆ ಬರುವಾಗ ಅರಮನೆಯ ಚಲನ ವಲನಗಳಲ್ಲಿ ತನಗೆ ಕಂಡವನ್ನು ಹೇಳಬೇಕೆಂದೂ ಆಣತಿಯಿತ್ತು ಹೊಸ ಗೂಢಚಾರಿಣಿಯನ್ನು ಆಚಾರ್ಯ ನೇಮಿಸಿದ್ದು ಹೀಗೆ.

ಮರು ರಾತ್ರಿ ಏಕಾಂತದಲ್ಲಿ ಚಂದ್ರಗುಪ್ತ ಚಾಣಕ್ಯನನ್ನು ಸಂಧಿಸಿದ. ''ಗುರುಗಳೇ! ನಿಮ್ಮ ಕೃಪೆ ನನ್ನ ಮೇಲಾಗಿದ್ದರೆ ನನಗೇಕೆ ಚಕ್ರಾಂಕನ ಮಾಡಿಸಲಿಲ್ಲ? ಗಂಡಸಿಗಿಂತ ಹೆಂಡತಿಗೆ ಮೊದಲೇಕೆ ?'' ಎಂದು ಪ್ರಶ್ನಿಸಿದ.

"ವೃಷಲ! ಹೆಂಡತಿಯು ಮಾತು ಕೇಳಿ ಸಂಪಾದಿಸುವ ಪದವಿಯಲ್ಲ ವೈಷ್ಣವತ್ವ. ನಿನ್ನ ತಂದೆ ತಾತಂದಿರು ಶೈವದತ್ತ ಒಲವಿದ್ದವರು. ನೀನಾಗಿ

ಇತ್ತ ಅಭಿಲಾಷೆಯನ್ನೂ ವ್ಯಕ್ತ ಪಡಿಸಲಿಲ್ಲ. ಹೆಂಡತಿಯ ಬೋಧೆ ಬಲವಂತ ವಾಗಿರುವಂತಿದೆ !" ಎಂದು ಕಪಟಸಿಟ್ಟಿನಿಂದ ಹೇಳಿದ.

ಚಂದ್ರಗುಪ್ತನಿಗೆ ಕೊಂಚ ನಾಚಿಕೆಯಾಯಿತು. "ಹೆಂಡತಿಯೋ ಬೇರಾರೋ ಆಗಲಿ, ಒಳ್ಳೆಯ ಮಾತನ್ನು ಕೇಳಬಾರದೇಕೆ?'' ಎಂದ.

ಚಾಣಕ್ಯ : ''ಅಯ್ಯಾ! ಆ ಹೆಂಡತಿಯಲ್ಲಿ ಇಷ್ಟು ಬೇಗ ಇಷ್ಟು ಆಳದ ನಂಬಿಕೆ ನಿನಗೆ ಬಂದುದು ಹೇಗೆ? ಹಿಂದೆ ಕಾಶೀರಾಜನನ್ನು ಅವನ ಹೆಂಡತಿಯೇ ಕೊಂದಳು–ತನ್ನ ಬಂಧುಬಾಂಧವರನ್ನು ಗಂಡ, ಹಿಡಿದು ಹಿಡಿದು ಕೊಲ್ಲಿಸಿದನೆಂಬ ಕಾರಣಕ್ಕೆ. ಹೆಂಡತಿಯೇ ಗಂಡನ ಕೊಲೆ ಮಾಡಿ ದ್ದುಂಟು. ವಿದ್ಯುಲ್ಲೇಖೆಯ ತಂದೆಯು ಕೊಲ್ಲಲ್ಪಟ್ಟವನೆಂಬುದು ಇನ್ನೂ ನಿನ್ನವಳಿಗೆ ತಿಳಿದಿಲ್ಲ ಎಂದು ನಿನಗೆ ಖಾತ್ರಿಯೆ ? ನಮ್ಮ ದೇಶ, ಸಂಸ್ಕೃತಿ, ಭಾಷೆಯವಳಲ್ಲದವಳನ್ನು ಇಷ್ಟು ಬೇಗ ನೀನು ನಂಬಿದ್ದು ಯಾವ ನೀತಿ ಶಾಸ್ತ್ರಾನುಸಾರವಾಗಿ? ವೈಹತ್ಯನೆಂಬ ದೊರೆಯನ್ನು ಅವನ ರಾಣಿಯು ತನ್ನ ಕಾಲದಲ್ಲಿ ಧರಿಸಿದ್ದ ಕಾಲಂದುಗೆಯಲ್ಲಿ ಲೇಪಿಸಿದ್ದ ವಿಷದಿಂದಲೇ ಕೊಂದಳು ! ಗೊತ್ತೆ! ಸೌವೀರ ದೇಶದ ಪರಂತಪನನ್ನು ಅವನ ಮಣಿಹಾರಿ ಎಂಬ ಹೆಂಡತಿ, ಸೊಂಟದಲ್ಲಿ ಬಚ್ಚಿಟ್ಟುಕೊಂಡ ಮಣಿಯ ವಿಷದಿಂದ ಸಂಹರಿ ಸಿದಳು. ವಿಡೂರಥನೆಂಬ ದೊರೆಯ ಹೆಂಡತಿ ತನ್ನ ತಲೆಗೂದಲಲ್ಲೇ ಶಸ್ತ್ರ ವನ್ನು ಬಚ್ಚಿಟ್ಟುಕೊಂಡು ಗಂಡನನ್ನು ಕೊಂದಳು. ಇಂಥ ಉದಾಹರಣೆ ಗಳನ್ನು ನಾನು ಅರ್ಥಶಾಸ್ತ್ರದಲ್ಲಿ ಉಲ್ಲೇಖಿಸಿದ್ದೇನೆ. ಇವಳು ಯವನಳು. ಆ ದೇಶದ ಕಥೆಗಳಲ್ಲೂ ಇತಿಹಾಸಗಳಲ್ಲೂ ಇಂಥ ಪ್ರಸಂಗಗಳಿವೆ. ಅಗಮೆ ಮ್ನನ್ ಎಂಬ ವೀರನ ಹೆಂಡತಿ ಹನ್ನೆರಡು ವರ್ಷ ಗಂಡನನ್ನಗಲಿದ್ದು, ಟ್ರಾಯ್‌ನಗರದ ಮುತ್ತಿಗೆಯಲ್ಲಿ ಯಶಸ್ವಿಯಾಗಿ ಬಂದ ಗಂಡನನ್ನೇ, ಮೊದಲು ಸ್ವಾಗತಿಸಿ, ಆಮೇಲೆ ಕೊಂದಳು. ಅವಳ ಮಿಂಡ ಇದಕ್ಕೆ ಸಹಾಯ ಮಾಡಿದ. ವಿದ್ಯುಲ್ಲೇಖೆಯ ಪೂರ್ವೋತ್ತರಗಳನ್ನು ಪರೀಕ್ಷಿ ಸಿರುವೆಯಾ? ಇವಳು ಕ್ಷತಯೋನಿಯೋ ? ಅಕ್ಷತಯೋನಿಯೋ ?

ಪರೀಕ್ಷಿಸಿರುವೆಯಾ? ಪುಣ್ಯಕ್ಕೆ ಅವಳ ಮೈಯಲ್ಲಿ ವಿಷಲಿಪ್ತ ಒಡವೆಗಳ ಸಂಭವವಿಲ್ಲ. ಆದರೂ ಚೆನ್ನಾಗಿ ಪರೀಕ್ಷಿಸಬೇಕು. ಇದು ಅವಳ ಊರೂ ಅಲ್ಲ. ಸ್ವಂತ ಊರಾಗಿ, ಅವಳರವುನೆಯಲ್ಲೇ ನೀನಿರುವಂತಿದ್ದರೆ ಏನೇನು ನಡೆಯುತ್ತಿತ್ತೋ ?" ಎಂದು ನಿಟ್ಟುಸಿರಿಟ್ಟು, ಶಂಖಿನಿ, ಪದ್ಮಿನಿ, ಚಿತ್ರಿನಿ ಮೊದಲಾದ ಉತ್ತಮ ಜಾತಿಯ ಸ್ತ್ರೀ ಲಕ್ಷಣಗಳನ್ನೆಲ್ಲ ಅವನಿಗೆ ತಿಳಿಸಿ, ''ರಾಜನು ಉತ್ತಮ ಲಕ್ಷಣದ ಸ್ತ್ರೀಯರೊಡನೆ ಕಲೆತಾಗ ಮಾತ್ರ ಸಲಕ್ಷಣ ರಾಜಕುಮಾರ ಹುಟ್ಟುವನು. ಇವಳು ಎಂಥ ಸ್ತ್ರೀಯೆಂಬುದನ್ನು ಅವಳ ಅಂಗೋಪಾಂಗಗಳ ಈ ಲಕ್ಷಣಗಳಿಂದ ಪರೀಕ್ಷಿಸಿ, ನನಗೆ ತಿಳಿಸು; ಸಂಗಮ ಯೋಗ್ಯಳೋ ಅಲ್ಲವೆಂಬುದನ್ನು ನಾನೇ ನಿರ್ಧರಿಸುತ್ತೇನೆ," ಎಂದು ಅಪ್ಪಣೆ ಮಾಡಿದ.

ಚಾಣಕ್ಯನ ಈ ಕಾಮಶಾಸ್ತ್ರಪ್ರಜ್ಞೆ ಪರಿಣತಿಗೆ ಚಂದ್ರಗುಪ್ತನಿಗೆ ಆಶ್ಚರ್ಯವಾಯಿತು ! ಎಚ್ಚರಿಕೆಯಿಂದ ಬುದ್ಧಿಯೂ ತಿಳಿಯಾಯಿತು. ತನ್ನ ಅವಿವೇಕಕ್ಕೆ ಲಜ್ಜೆಯೂ ಆಯ್ತು. ತಾನು ಮೊದಲ ದಿನ ಬೆಳಗ್ಗೆ ಕೇಳಿದ ಪ್ರಶ್ನೆಗೆ ಉತ್ತರವೂ ದೊರೆಯಿತು.

" ಇವಳು ಉತ್ತಮ ಸ್ತ್ರೀ ಅಲ್ಲವಾದರೆ ಏನು ಮಾಡುವುದು ? ಕೈ ಹಿಡಿದು ಹೀಗೆ ವಂಚಿಸಬಹುದೇ ? ರಾಜಲಕ್ಷಣ ಪುತ್ರನಾಗಲಾರ ಎಂದು ಅವಳ ನಿರೀಕ್ಷೆ ಹುಸಿಮಾಡುವುದು ನ್ಯಾಯವೇ ? " ಎಂಬ ಪ್ರಶ್ನೆ ಚಂದ್ರ ಗುಪ್ತನ ಬಾಯಿಂದ ಬಂದಿತು.

" ಇದು ಸ್ತ್ರೀಯೊಬ್ಬಳ ನ್ಯಾಯಾನ್ಯಾಯದ ಪ್ರಶ್ನೆ ಅಲ್ಲ; ನಿನ್ನಿಂದ ರಾಷ್ಟ್ರಕ್ಕೆ ದೊರಕಬೇಕಾದ ನ್ಯಾಯಾನ್ಯಾಯದ ಪ್ರಶ್ನೆ. ಅವಳು ಉತ್ತಮ ಲಕ್ಷಣ ಸ್ತ್ರೀ ಅಲ್ಲವಾದರೆ ನಿನ್ನ ಯೋಗಕ್ಷೇಮಕ್ಕೆ ಅವಳನ್ನು ಗೂಢಚಾರಿಣಿ ಯನ್ನಾಗಿ ಉಪಯೋಗಿಸೋಣ. ಅವಳಲ್ಲಿ ಗರ್ಭ ಆಗದಂತೆ ನೀನು ಅವ ಳನ್ನು ತೃಪ್ತಿಪಡಿಸುವ ವಿಧಾನವನ್ನೂ ಹೇಳುತ್ತೇನೆ. ಆದರದಕ್ಕೆ ಕಾಲ ಬರಬೇಕು. ದುಡುಕಬಾರದು. ನೀನು ಮಾತ್ರ ಇಂದ್ರಿಯ ಜಯವುಳ್ಳವ

ನಾಗಬೇಕು. ರಾತ್ರಿ ಮೂರು ತಾಸು ಮಾತ್ರ ನಿನಗೆ ವಿಶ್ರಾಂತಿ. ಇಂದಿನಿಂದಲೇ ನಿನ್ನ ಪರೀಕ್ಷೆ, ನಿನ್ನ ಶಿಕ್ಷಣ ಆರಂಭ. ನನ್ನ ಶಿಷ್ಯರು ನೀನು ಮಲಗುವ ಕೊಠಡಿಯ ಪಕ್ಕದಲ್ಲೇ ಮಲಗುವರು. ರಾತ್ರಿ ಎಂಟು ಪ್ರಹರದ ನಂತರ ನಿರ್ದಾಕ್ಷಿಣ್ಯವಾಗಿ ನಿನ್ನನ್ನೆಬ್ಬಿಸುವರು. ನೀನು ಬೇಸರಿಸದೆ ರಾಜನ ದೈನಂದಿನ ಜೀವನಕ್ಕೆ ಅಂಟಿಕೊಳ್ಳಬೇಕು '' ಎಂದು ಹೇಳಿ ಅವನನ್ನು ಕಳುಹಿದ, ಆಚಾರ್ಯ.

ಹೆಚ್ಚು ವಯಸ್ಸಾದ ತನ್ನ ಶಿಷ್ಯ ಶ್ರುತವಿನೀತನಿಗೆ ಕರೆಸಿ ಆಚಾರ್ಯನೆಂದ : '' ಅಯ್ಯಾ, ನೀನೂ ಇನ್ನೂ ಆರು ಶಿಷ್ಯರೂ ಇಂದಿನಿಂದ ಚಂದ್ರಗುಪ್ತನ ಶಯ್ಯಾಗೃಹದ ಪಕ್ಕದಲ್ಲಿ ವಿಶ್ರಾಂತ ರಾಗಬೇಕು. ನೀನು ಮಾತ್ರ ಈ ಹೆಚ್ಚಿನ ಹೊಣೆ ಹೊತ್ತಿರುವೆ. ಇಗೋ ಈ ವಿಚಿತ್ರ ರಾಸಾಯನಿಕಗಳನ್ನು ಪರಿಗ್ರಹಿಸು. ಇದು ರಾತ್ರಿ ಸಂಚಾರಿ ಪಕ್ಷಿಪ್ರಾಣಿಗಳ ಕಣ್ಣುಗಳು ಕಿತ್ತು ಮಾಡಿದ ಚೂರ್ಣ. ಇದು ಎಡಗಣ್ಣಿನದು; ಇದು ಬಲಗಣ್ಣಿನದು. ಹಾಗೇ ಗುರುತು ಮಾಡಿದೆಯಲ್ಲ! ನೋಡಿಕೋ! ಇದನ್ನು ಎಡ-ಬಲ ವ್ಯತ್ಯಾಸ ಮಾಡಿ ನಿನ್ನ ಕಣ್ಣಿಗೆ ಹಚ್ಚಿಕೊಂಡರೆ, ಕತ್ತಲೆಯಲ್ಲೂ ಕಣ್ಣು ಕಾಣುವುದು. ಈ ಎರಡನೆಯದು ವಿಚಿತ್ರ ಅಂಜನ; ಮೂರು ದಿನ ಉಪವಾಸ ಮಾಡಿ. ಪುಷ್ಯ ನಕ್ಷತ್ರದಲ್ಲಿ ' ಪುರುಷಘಾತಿ ' ಮರದ ಗಿಣ್ಣಿನ ಕಡ್ಡಿಯಿಂದ ಮಾಡಿಸಿ ತಯಾರಾದದ್ದು. ಮೊದಲು ಕೊಟ್ಟ ರಾಸಾಯನಿಕದೊಡನೆ ಇದನ್ನು ಕಲೆಸಿ ಕಣ್ಣಿಗೆ ಹಚ್ಚಿಕೊಂಡರೆ ನಿನ್ನ ರೂಪ, ನೆರಳೂ ಸಹ ಅದೃಶ್ಯವಾಗಿ ನೀನು ಯಾರಿಗೂ ಕಾಣದಂತೆ ಸಂಚರಿಸಬಹುದು. ಈ ಅದೃಶ್ಯಾಂಜನವನ್ನೂ ಇಟ್ಟುಕೊ, ರಾತ್ರಿ ನಿನ್ನ ಮಿತ್ರನಿಗೆ ತಿಳಿಯದಂತೆ, ಅದೃಶ್ಯನಾಗಿ ಚಂದ್ರಗುಪ್ತನ ಶಯ್ಯಾಗೃಹವನ್ನು ಒಳಹೊಕ್ಕು ಅವರು ನಿದ್ರೆಯ ಭರದಲ್ಲೂ, ಕಾಮಾಸಕ್ತರಾಗದಂತೆ ಅವರನ್ನು ತಡೆ. ಕುಮಾರ ನಿಗೇನಾದರೂ ಆ ಯವನ ಯುವತಿಯಿಂದ ಆಪತ್ತು ಬಾರದಂತೆ ರಕ್ಷಿಸುವುದು ನಿನ್ನ ಕರ್ತವ್ಯ. ಅವರು ಸಂಗಮಿಸುವಂತೆ ಕಂಡುಬಂದರೆ ನಾಯಿಯಂತೆ ಬೊಗಳಿ, ಕ್ರೂರ ಪ್ರಾಣಿಗಳಂತೆ ಸದ್ದು ಮಾಡಿ ಅವರು ಎದ್ದೇಳುವಂತೆ ಮಾಡು: ಯಾವ ಕಾರಣದಿಂದಲೂ ನೀನು ಹೀಗೆ ಪರೀಕ್ಷಿಸುವುದು

ಅವರಿಬ್ಬರಿಗೂ, ನಿನ್ನ ಮಿತ್ರರಿಗೂ ತಿಳಿಯಬಾರದು" ಎಂದು ಶಿಷ್ಯನಿಗೆ ಅವಶ್ಯವಾದ ಇನ್ನೂ ಹೆಚ್ಚಿನ ವಿವರಗಳನ್ನು ನೀಡಿದ, ಚಾಣಕ್ಯ.

"ಆಚಾರ್ಯರೇ! ನನ್ನನ್ನು ತಮ್ಮ ಉಪಕಾರದ ಪ್ರವಾಹದಲ್ಲಿ ಕೊಚ್ಚಿಸಿರುವಿರಿ. ತಮ್ಮ ಆಜ್ಞೆಯನ್ನು ಶಿರಸಾವಹಿಸಿ, ಚಂದ್ರಗುಪ್ತನನ್ನು ನಂದರಾಜ್ಯದಲ್ಲಿ ಪ್ರತಿಷ್ಠಿಸುವ ಹೊಣೆ ನನ್ನದು. ಆದರೆ ಮಗಧದಲ್ಲಿ ಒಳಗಿಂದ ನಮಗೆ ಸಹಾಯ ದೊರೆತ ಹೊರತು ಇದು ಕಠಿಣ. ಅಲ್ಲಿನ ಸ್ಥಿತಿ ಏನು?" ಎಂದು ಪರ್ವತರಾಜ ಆಚಾರ್ಯನನ್ನು ಕೇಳಿದ. ಆಚಾರ್ಯನು ಮೊದಲೇ ಬಾಗುರಾಯಣಾದಿಗಳ ಹಸ್ತಾಕ್ಷರ ಪಡೆದಿದ್ದ ಪತ್ರದ ಮೊದಲೆರಡು ಸಾಲುಗಳ ಭಾಗಗಳನ್ನು ಕತ್ತರಿಸಿ ಹಾಕಿ ಉಳಿದ ಪತ್ರವನ್ನು ಅವನ ಕೈಗಿತ್ತ! ಶಬರವರ್ಮ ಅದನ್ನು ಪರೀಕ್ಷಿಸಿ ಹಸ್ತಾಕ್ಷರಗಳನ್ನು ಗುರುತು ಹಿಡಿದು "ಖಂಡಿತ ಇವು ಮಗಧದ ಸೇನಾಪತಿ, ಗಜಾಧ್ಯಕ್ಷ, ಅಶ್ವಾಧ್ಯಕ್ಷರುಗಳವೇ!" ಎಂದೊಪ್ಪಿ, "ಚಂದ್ರಗುಪ್ತನಿಗೆ ಸಮ್ಮತವಾದ ಜೀರ್ಣೋದ್ಧಾರ ಕಾರ್ಯ ನಮಗೂ ಸಮ್ಮತವೇ. ತಾವು ತನು ಮನ ಧನಗಳಿಂದ ಅವನಿಗೆ ಸಹಾಯ ಮಾಡಬೇಕು. ನಾವೂ ಮಾಡುತ್ತೇವೆ" ಎಂಬ ವಾಕ್ಯ ಸರಣಿಯನ್ನು ನೋಡಿ, "ಆಚಾರ್ಯರು ಅಲ್ಲಿನ ವ್ಯವಸ್ಥೆಯನ್ನೆಲ್ಲ ಮೊದಲೇ ಮಾಡಿ ಬಂದಿರುವಂತಿದೆ!!" ಎಂದು ವಿಸ್ಮಯ ಪಟ್ಟ! ಸೈನ್ಯ ಜಮಾವಣೆ, ಪ್ರಯಾಣದ ಏರ್ಪಾಡು, ಇವುಗಳಿಗೆ ಆಜ್ಞಾಪಿಸಿ, ಹೊರಡುವ ದಿನ ಮಾತ್ರ ನಿಷ್ಕರ್ಷಿಸದೆ ಫಾಲ್ಗುಣ ಮಾಸ ಮುಗಿಯಲೆಂದು ಕಾಲಕಾಯುತ್ತಿದ್ದ, ಪರ್ವತೇಶ.

ಚಾಣಕ್ಯನೆಂದ : "ದೊರೆಯೆ! ಏನಿದ್ದರೂ ಚೈತ್ರಮಾಸ ಮುಗಿಯುವುದರಲ್ಲಿ ನಂದ ನಿಗ್ರಹ ಆಗಿಬಿಡಬೇಕು. ಚಂದ್ರಗುಪ್ತನ ಪಟ್ಟಾಭಿಷೇಕ ಸಹ. ವೈಶಾಖದಲ್ಲಿ ಮಗಧದ ಬಿಸಿಲು ಅಧಿಕ. ನೀವಾರೂ ಅದನ್ನು ತಾಳಲಾರಿರಿ. ಆ ತಿಂಗಳಲ್ಲಿ ನಿಮ್ಮ ಸೈನ್ಯ ಅಲ್ಲಿ ಸಿಕ್ಕರೆ ಸತ್ತಂತೆಯೇ! ಕಾರ್ಯ ವಿಘಾತ ಖಂಡಿತವಾಗಿ ಆಗಿ ಬಿಡುವುದು. ಆದ್ದರಿಂದ ಸೇನೆ ಇನ್ನು ನಾಲ್ಕು ದಿನದ ದಶಮಿಯಂದೇ ಸೇನಾಪ್ರಯಾಣಕ್ಕೆ

ಮುಹೂರ್ತ ಚೆನ್ನಾಗಿದೆ. ಶತ್ರುಜಯ ಹೋಮವನ್ನು ನಾನು ಅಷ್ಟಮಿ ದಿನದಂದೇ ಮುಗಿಸುವೆ'' ಎಂದು.

ಪರ್ವತರಾಜ "ಮಂತ್ರಿಗಳೊಡನೆ, ಸೇನಾಪ್ರಮುಖರೊಡನೆ ಆಲೋಚಿಸುವೆ'' ಎಂದು ಹೇಳಿ ಜಾರಿಕೊಂಡ !

  

ವೇಗಶರ್ಮ ಹುಚ್ಚನ ವೇಷದಲ್ಲಿ ಅಲೆದಾಡುತ್ತಾ ಪುರುಷಪುರದ ಚಾವಡಿ ಬಳಿ '' ಕಡಲೇಗಿಡದಲ್ಲಿ ಮೋಳೆತ ಋಷಿಯೊಬ್ಬನನ್ನು ಕಂಡಿರಾ ?'' ಎಂದು ಕೇಳುತ್ತಾ (ಮಗಧದ ಭಾಷೆಯಲ್ಲಿ) ಬಂದವನನ್ನು ಚಾರರು ಬಂಧಿಸಿ ಅರಮನೆಗೆ ಕರೆದೊಯ್ದರು. ಶಿಷ್ಯರಿಂದ ಈ ಸಮಾಚಾರ ತಿಳಿದ ಚಾಣಕ್ಯ " ಇವನ ಹುಚ್ಚನ್ನು ನಾನು ಬಿಡಿಸುತ್ತೇನೆ '' ಎಂದು ಹೇಳಿ, ಅವನನ್ನು ಪರ್ವತನ ದೂತರಿಂದ ಬಿಡಿಸಿಕೊಂಡು ತನ್ನ ಬಿಡಾರಕ್ಕೆ ಕರೆದೊಯ್ದು, " ಏನು ಸಮಾಚಾರ ? '' ಎಂದ.

ವೇಗಶರ್ಮ ಹೇಳಿದ : "ಜೀಯಾ ! ಅತ್ತ ಜೀವಸಿದ್ಧಿಯು ಸೌಖ್ಯ. ನಿಮ್ಮ ಆದೇಶಕ್ಕೆ ಕಾಯುತ್ತಿರುವರು. ಸಿದ್ಧಾರ್ಥಕ ಹೇಳಿದಂತೆ ಬಾಗುರಾಯಣ ಕೇಳಲು ಸಿದ್ಧ. ಉಳಿದವರೂ. ರಾಕ್ಷಸನಿಗೆ ಇತ್ತ ನೀವು ನಡೆಸಿದ ಲೋಕೋತ್ತರ ವಿಚಾರ, ವಿಷಯಗಳು ತಿಳಿದಿವೆ; ಗೂಢಚಾರರ ಮೂಲಕ. ನ್ಯಾಯಾರ್ಕನನ್ನು ಭೇದೋಪಾಯದಿಂದಲೂ, ಶೈಲೂಷಕನನ್ನು ಮಾರಣ ಹೋಮದಿಂದಲೂ ತಾವು ನಿಗ್ರಹಿಸಿ, ಪರ್ವತನ ಸಾಮಂತರನ್ನೆಲ್ಲ ಒಗ್ಗೂಡಿಸಿ, ಅವನನ್ನು ಪುನಃ ಪ್ರತಿಷ್ಠಿಸಿ, ಅವನ ಬೊಕ್ಕಸವನ್ನೂ ತುಂಬಿ, ಆ ಸೈನ್ಯವನ್ನು ಮಗಧದತ್ತ ತರುವ ಏರ್ಪಾಡನ್ನು ರಾಕ್ಷಸ ಬಲ್ಲ. ಪಾಟಲೀಪುತ್ರದ ಕೋಟೆಗೋಡೆ, ಅಗಳು, ಕೊತ್ತಲ, ಬಾಗಿಲುಗಳು ಶತಘ್ನೀಪಾನೆಗಳು ಎಲ್ಲ ನವೀಕರಣ ಕಾರ್ಯದಲ್ಲಿವೆ. ನಂದರ ಸೈನ್ಯ ಜಮಾಯಿಸುತ್ತಿದೆ. ಊರಲ್ಲಿ ಎಲ್ಲೂ ಯುದ್ಧದ ವಾತಾವರಣ ಮೂಡಿದೆ. ಪರ್ವತ ರಾಜ್ಯಕ್ಕೂ ಮಗಧಕ್ಕೂ ನಡುವಣ ಇಂದ್ರಪ್ರಸ್ಥದ ಅರಸು ಮಹಾಪದ್ಮನಿಂದ ಸೋಲಿಸಲ್ಪಟ್ಟು ಅವನ ಅಧೀನನಾಗಿರಲು ಒಪ್ಪಿದ್ದು ಹಿಂದಿನ ಮಾತು. ಈಗ

ಅವನ ಒಲವು ಹಾಗಿರುವಂತಿಲ್ಲ. ಮಧುರೆಯ ಸಂಕರ್ಷಣಾಲಯವನ್ನು ಈಗ ಹತ್ತು ದಿನಗಳಲ್ಲಿ ಪುಂಡ ಪೋಕರಿಗಳು ಕೊಳ್ಳೆ ಹೊಡೆದು ಲೂಟಿ ಮಾಡಿದ ವಾರ್ತೆಯುಂಟು! ಅಲ್ಲಿನ ಐಶ್ವರ್ಯವೆಲ್ಲ ನಾಶವಾಯಿತು. ನೀವು ಉಳಿದುಕೊಂಡಿದ್ದ ಕಾಣ್ವಾಯನರನ್ನು ಯಾರೋ ಅಜ್ಞಾತ ವ್ಯಕ್ತಿಗಳು ಕೊಲೆ ಮಾಡಿದರಂತೆ. ಅವರ ಮನೆಗೂ ಬೆಂಕಿಯಿಟ್ಟರು. ಅವರ ಪತ್ನಿ, ಶಿಷ್ಯರು ಎಲ್ಲ ಗೋಳಿಡುತ್ತಿರುವರು. ತಾವು ಅಲ್ಲಿಂದ ಹೊರಟ ಎಂಟು ಹತ್ತು ದಿನಗಳಲ್ಲಿ ಅಲ್ಲಿ ಮಗಧದ ಗೂಢಚಾರರು ಕಾಣಿಸಿಕೊಂಡರೆಂದೂ, ತಮ್ಮ ಮತ್ತು ಚಂದ್ರಗುಪ್ತನ ಬಗೆಗೆ ಮಾಹಿತಿ ನೀಡಬೇಕೆಂದು ಅವರನ್ನು ನಿರ್ಬಂಧಿಸಿ, ಅವರು ಬಾಯಿ ಬಿಡದಾಗ ಅವರನ್ನು ಕ್ರೂರವಾಗಿ ಕೊಂದು ಹಾಕಿದರೆಂದೂ ನನಗೆ ನಮ್ಮ ಗೂಢಚಾರರ ಪಡೆಯ ಮುಖಂಡ ತಿಳಿಸಿದ. ಇಂದ್ರಪ್ರಸ್ಥದ ದೊರೆ ಇಂದ್ರವರ್ಮನಿಗೆ ನಂದರ ಈ ಅತಿಕ್ರಮ, ಅತ್ಯಾಚಾರಗಳಿಂದ ಕೋಪವುಂಟಾದೆ. ಪರ್ವತನ ಪುನಃ ಪ್ರತಿಷ್ಠೆ ಅವನಿಗೂ ತಿಳಿದ ವಿಷಯ. ನಾನು ಬೇಗನೇ ಮತ್ತೆ ಪಾಟಲೀಪುತ್ರಕ್ಕೆ ಹೋಗಬೇಕು. ಜೀವಸಿದ್ಧಿಗೆ ಏನು ತಿಳಿಸಲಿ? ಅಲ್ಲಿ ಇನ್ನೇನು ವಿಶೇಷ ಏರ್ಪಾಡಾಗಬೇಕು ? ಬಾಗುರಾಯಣಾದಿಗಳಿಗೆ ಏನಾದರೂ ವಿಶೇಷ ಹೇಳುವುದಿದೆಯೆ? ಇತ್ತ ಹೆಚ್ಚಿನ ವಿವರಗಳೇನು?" ಎಂದು ಒಂದೇ ಉಸಿರಿಗೆ ಕೇಳಿದ. ಚಾಣಕ್ಯ ಅವನಿಗೆ ಸ್ನಾನ ಮಾಡಿಬರುವಂತೆ ಹೇಳಿ, ಉಪಚಾರ ಊಟ ಮಾಡಿಸಿ ಈ ವರೆಗೆ ಪಂಚನದ ಪ್ರಾಂತದಲ್ಲಿ ತಾನು ನಡೆಸಿದ ಅತಿ ಮಾನುಷ ವೃತ್ತಾಂತಗಳನ್ನೆಲ್ಲ ಸಂಕ್ಷೇಪಿಸಿದ. ಕಾಣ್ವಾಯನನ ಮಡದಿಗೆ ಸಾಂತ್ವನ ಹೇಳಿ, ಆಶ್ರಮದ ಶಿಷ್ಯರಿಗೆ ತನ್ನ ಶಿಷ್ಯರನ್ನು ಕೂಡಿಕೊಳ್ಳುವಂತೆ, ಹೇಳಿ, ಹೊಸದೊಂದು ಆಶ್ರಮದ ಸ್ಥಾಪನೆಯ ಖರ್ಚಿಗೆ, ಶಿಷ್ಯರ, ಕಾಣ್ವಾಯನ ಪತ್ನಿಯ ವೆಚ್ಚಕ್ಕೆ ಹೊನ್ನುಕೊಟ್ಟು, ಕಾಣ್ವಾಯನನ ಜ್ಯೇಷ್ಠ ಶಿಷ್ಯ ಬೋಧಸಮುದ್ರನಿಗೆ ಆಶ್ರಮದ ಕುಲಪತಿತ್ವವನ್ನು ವಹಿಸುವಂತೆ ತಾನು ಹೇಳಿದ್ದಾಗಿ ತಿಳಿಸಬೇಕೆಂದು ಹೇಳಿದನು. ಇಂದುಶರ್ಮನಿಗೆ (ಜೀವಸಿದ್ಧಿಗೆ) – ಪಾಟಲೀಪುತ್ರದ ಉತ್ತರಕ್ಕೆ ಗಂಗಾತಟದಲ್ಲಿ ಒಂದು ಜಪಶಾಲೆಯನ್ನು ನಿರ್ಮಿಸುವಂತೆಯೂ, ಸಮರ್ಥಬ್ರಾಹ್ಮಣರ ವೇಷದಲ್ಲಿ ಅವನ ಶಿಷ್ಯರನ್ನು ನೇಮಿಸಿಕೊಳ್ಳಬೇಕೆಂದೂ ಸೂಚಿಸಿ, ನಂದರನ್ನು

ಅಮಾತ್ಯ ರಾಕ್ಷಸನನ್ನೂ ಶತ್ರುಪಲಾಯನ ಯಜ್ಞಕ್ಕೆ ಒಡಂಬಡಿಸಿ, ಅವರು ಆಗಾಗ ಜಪಶಾಲೆಗೆ ನಿಯತ ವೇಳೆಯಲ್ಲಿ ಬರುವ ಪರಿಪಾಠವನ್ನು ಏರ್ಪಡಿಸಲೂ ಹೇಳಿದನು. ಸೂಕ್ಷ್ಮದಲ್ಲಿ ರಾಕ್ಷಸನ ಮುಂದಿನ ಏರ್ಪಾಟುಗಳನ್ನು ರಹಸ್ಯದಲ್ಲಿ ತಿಳಿದು, ಚಾಣಕ್ಯ ಅಲ್ಲಲ್ಲಿ ನಿರ್ಮಿಸಿದ್ದ ಆಶ್ರಮವಾಸಿಗಳ ಮೂಲಕ, ಪಾಂಚರಾತ್ರಿಗಳ ಮೂಲಕ, ತನಗೆ ಇನ್ನು ಮೇಲೆ ಎರಡು ದಿನ ಕ್ಕೊಮ್ಮೆ ತಿಳಿಸಬೇಕೆಂದೂ, ಶೀಘ್ರಸಮಾಚಾರವಿದ್ದರೆ ಆ ನಿಯಮವಿಲ್ಲ ವೆಂದೂ, ಜಾಗ್ರತೆಯಿಂದಿರಬೇಕೆಂದೂ ಹೇಳಿಕಳುಹಿದ. ತನ್ನ ಕಡೆಯಿಂದ ತಾನೂ ತನ್ನ ಪ್ರಗತಿಯ ಮತ್ತು ಮುಂದಿನ ಏರ್ಪಾಡುಗಳ ವಿಚಾರವನ್ನು ತಿಳಿಸಲು ಏರ್ಪಡಿಸಿರುವುದಾಗಿಯೂ ಹೇಳಿದ. ಪ್ರತಿ ಸಲವೂ ಚಿಹ್ನಿತ ಶಬ್ದಗಳನ್ನು ಬದಲಿಸುತ್ತಿರಬೇಕೆಂದೂ ಹೇಳಿಯೂ ಆಯ್ತು. ವೇಗಸರ್ಮ ಮರುದಿನ ಕುದುರೆಯ ಮೇಲೆ ಪರ್ವತ ರಾಜ್ಯದ ಸೈನಿಕನ ವೇಷದಲ್ಲಿ ಇಂದ್ರಪ್ರಸ್ಥಕ್ಕೆ ಹೊರಟ.

"ಪರ್ವತೇಶ! ಕಾಲ ನಮಗನುಕೂಲವಾಗಿದೆ. ಇಂದ್ರಪ್ರಸ್ಥದ ಅರಸನನ್ನು ನಂದರು ಕೆರಳಿಸಿದ್ದಾರೆ. ಆ ರಾಜ್ಯದಲ್ಲಿ ಅತಿಕ್ರಮಿಸಿ ಬ್ರಾಹ್ಮಣರ ಕೊಲೆ ಮಾಡಿಸುತ್ತಿದ್ದಾರೆ. ದೇವಾಲಯಗಳ ಐಶ್ವರ್ಯ ದೋಚುತ್ತಿದ್ದಾರೆ. ಈಗ ಹೆಸರಿಗೆ ಮಾತ್ರ ನಂದರ ಅಧೀನದಲ್ಲಿರುವ ಅವರನ್ನು ನಾವು ಭೇದೋಪಾಯದಿಂದ ನಮ್ಮತ್ತ ಸೆಳೆದುಕೊಳ್ಳಬೇಕು. ಅದಕ್ಕೆ ಹೀಗೆ ಮಾಡೋಣ. ನಿಮ್ಮಲ್ಲಿ ಸಮರ್ಥನಾದ ಒಬ್ಬ ನಿಯೋಗಿಯನ್ನು ನಮ್ಮಲ್ಲಿಗೆ ನಾಳೆ ಬೆಳಗಾಗುವುದರೊಳಗೆ ಪ್ರಯಾಣ ಸಂನ್ನದ್ಧನನ್ನಾಗಿ ನನ್ನೆಡೆಗೆ ಕಳುಹಿಸಬೇಕು. ನಿಯೋಗಿ, ಹತ್ತೆಂಟು ಜನ ರಾಜಕಾರ್ಯ ಧುರೀಣರೊಡನೆ, ವೇಗಶಾಲೀ ಕುದುರೆಗಳೊಡನೆ ಸಿದ್ಧರಾಗಬೇಕು'' ಎಂದು ಚಾಣಕ್ಯ ಆ ರಾತ್ರಿ ಪರ್ವತನಿಗೆ ಅಪ್ಪಣೆ ಮಾಡಿದ.

ಪರ್ವತ: ''ಆರ್ಯರೇ! ನಿಮ್ಮ ಕಾರ್ಯ ವೈಖರಿಯನ್ನೆಲ್ಲ ಪ್ರತ್ಯಕ್ಷವಾಗಿ ಕಂಡ ನನಗೆ, ನನ್ನ ಸೈನ್ಯ ನಿಜವಾಗಿಯೂ ನಿಮಗೆ ಅವಶ್ಯವೆನಿಸುವುದಿಲ್ಲ ! ನಿಯೋಗಿಯೇಕೆ ? ತಾವೇ ಅತ್ತ ದಯ ಮಾಡಿಸಿ ಇಂದ್ರವರ್ಮನನ್ನು ಇತ್ತ ಸೆಳೆಯಬಾರದೆ? ನನ್ನ ರಥ ನಿಮ್ಮ ಸೇವೆಗಿರುತ್ತದೆ.''

ಚಾಣಕ್ಯ : (ಪರ್ವತನ ಉದಾಸೀನತೆಯನ್ನೂ, ಕೃತಘ್ನತೆಯನ್ನೂ, ಕಾರ್ಯವಿಳಂಬ ನೀತಿಯನ್ನೂ ಗಮನಿಸಿ) "ಎಲೈ ರಾಜ! ಕೃತಜ್ಞತೆ ಯೆಂಬುದು ಮನುಷ್ಯನಲ್ಲಿ ಸುಲಭವಾಗಿ ಮೂಡುವ ಗುಣವಲ್ಲ! ಸುಗ್ರೀವ ರಾಮನನ್ನು ಮರೆತು ಸುಖಲೋಲುಪತೆಯಲ್ಲಿದ್ದುದೇ ಹೀಗೆ. ವಸಿಷ್ಠರ ಆತಿಥ್ಯವನ್ನು ಮರೆತು ಕಾಮಧೇನುವಿನ ಮೇಲೆಗೆ ಕೈ ಹಚ್ಚಿ ವಿಶ್ವಾಮಿತ್ರ ಹಾಳಾದದ್ದೂ ಹೀಗೆಯೇ! ಕೃತಘ್ನನಿಗೆ ಪ್ರಾಯಶ್ಚಿತ್ತವಿಲ್ಲ. ಚಾಣಕ್ಯನು ನಿಂತಲ್ಲೇ ಸೈನ್ಯ ಸಹಾಯವಿಲ್ಲದೆಯೇ ಸತ್ರಪನನ್ನು ಕೊಂದದ್ದು ನಿನ್ನ ಕಣ್ಣಿಗೇ ಬಿದ್ದೂ ಹೀಗೆ ನುಡಿಯುತ್ತಿರುವೆಯೆಂದರೆ, ಮೃತ್ಯುವಿನ ಆಸೆ ಮನುಷ್ಯನಿಗೆ ಉಳಿದೆಲ್ಲ ಆಸೆಗಳಿಗಿಂತ ಪ್ರಬಲವೆಂದೆನ್ನಬೇಕು! ನಾನೇ ಮಾಡಿದ ಸುಕೃತವನ್ನು ಹಾಳು ಮಾಡಬಾರದೆಂಬುದು ನಿಯಮ. ಆದರೆ ಈ ಯವನ ನಾಶವನ್ನು ನಾನು ಮಾಡಿದ್ದು ನಿನಗಾಗಿ ಅಲ್ಲ. ತಪಸ್ವಿಯಾದ ನನಗೆ ಆರ್ಯಧರ್ಮ ರಕ್ಷಣೆಯ ವ್ರತದಲ್ಲಿ ಅದು ಕರ್ತವ್ಯವೆನಿಸಿತು. ನೀನು ದೊರೆಯಾಗಿ ಉಪಕರಣವಾದೆ. ಇನ್ನೊಬ್ಬ ಅಲ್ಲಿದ್ದರೂ ಅವನನ್ನೇ ಉಪಯೋಗಿಸುತ್ತಿದ್ದೆ. ನಿನ್ನನ್ನು ನಿಗ್ರಹಿಸಿ, ಓಡಿಹೋದ ನಿನ್ನ ತಮ್ಮ ವಿರೋಚಕನನ್ನು ಕರೆತರಿಸಿ ಪಟ್ಟಗಟ್ಟುವ ಕಾಲ ದೂರವಿಲ್ಲವೆಂದು ತಿಳಿ. ಸಿಂಧುವನಕ್ಕೆ ಒಡೆಯನಾದ ನಿನ್ನ ಮಗ ಚಂದ್ರಕೇತುವೋ, ಪುಷ್ಕಲಾವತಿಯ ಆ ಇನ್ನೊಬ್ಬ ಮಲಯಕೇತುವೋ ಯಾರಾದರೂ ಸರಿ, ನಿನಗಿಂತ ವಾಸಿ. ಆದರೆ ಇದಕ್ಕೆ ಕಾಲಕಾಯುತ್ತೇನೆ. ಮೊದಲು ನಂದನಿಗ್ರಹದ ಕೆಲಸ! ಎಲೋ ಚಂದ್ರಗುಪ್ತ! ಈ ಅನಾರ್ಯ ಪೌರವನಿಂದೇನು? ಅರಸ! ನಿನ್ನ ಹಿಂದೆ ನಿಜವಾದ ಆ ಐಲಪುರೂರವನೂ ಈ ಲೋಭಬುದ್ಧಿಯಿಂದಲೇ ನಾಶವಾದ! ನಿನಗೀಗ ಐಶ್ವರ್ಯ ಬಂದಿದೆ! ನಂದರೊಡನೆ ಯುದ್ಧದಲ್ಲಿ ಅದು ಎಲ್ಲಿ ನಾಶವಾದೀತೋ ಎಂಬ ಎಣಿಕೆ ನಿನ್ನದು. ಅದು ನಾನು ತುಂಬಿದ ಕೋಶ ಎಂಬುದನ್ನು ಮರೆತೆಯಲ್ಲ! ಸುಖೀ ಭವ" ಎನ್ನುತ್ತಾ, ಶಾಪಹಾಕುವವನಂತೆ, ಮೇಲೆದ್ದು ಚಂದ್ರಗುಪ್ತನೊಡನೆ ಚಾಣಕ್ಯ ಅರಮನೆ ಯಿಂದ ಹೊರಡಲು ಉದ್ಯುಕ್ತನಾದ!

ಪರ್ವತನಿಗೆ ದಿಗಿಲಾಯಿತು! "ಪೂಜ್ಯರೇ! ಹಾಗಲ್ಲ. ನನ್ನನ್ನು ಮನ್ನಿಸಿ. ನನಗೂ ಸೈನ್ಯಕ್ಕೂ ದಣಿವಾದ್ದನ್ನು ಗಮನಿಸಿ, ಕೊಂಚ ನಿಧಾನಿ

ಸೋಣ ಎಂದು ಹಾಗೆಂದೆ. ನಾನು ಖಂಡಿತ ಕೃತಜ್ಞನೇ ಹೊರತು ಕೃತಘ್ನ ನಲ್ಲ. ಇಂದೇ ಬೇಕಾದರೂ ಹೊರಡೋಣ. ಇದರ ಮೇಲೆ ನಿಗ್ರಹಿಸುವು ದಾದರೆ ನಿಮ್ಮ ಚಿತ್ತ. ತಮ್ಮನ್ನು ನಾನೆಂತು ತಡೆಯಬಲ್ಲೆ ? ನಿಮ್ಮ ಶಕ್ತಿ ಎಲ್ಲಿ, ನಾನೆಲ್ಲಿ" ಎಂದು ಸಮಯೋಚಿತ ವಿನಯೋಪಚಾರ ಸೂಕ್ತಿಗಳಿಂದ ಆಚಾರ್ಯನನ್ನು ಸಮಾಧಾನ ಪಡಿಸಿ ವಾಪಸ್ಸು ಕರೆತಂದ. ಕಮಲಾ ಪೀಡನೆಂಬ ರಾಯಭಾರಿಯನ್ನು ಕರೆಸಿ "ಇವನು ತಮ್ಮ ವಶ. ತಾವು ಇವನನ್ನು ಇಂದ್ರಪ್ರಸ್ಥಕ್ಕೆ ಕಳುಹುವುದಾದಲ್ಲಿ ಉತ್ತಮ ಫಲ ತರುತ್ತಾನೆ". ಎಂದೊಪ್ಪಿಸಿದ. ಶಬರವರ್ಮನಿಗೆ ಚಾಣಕ್ಯ ಹೃದಯವೇ ತಿಳಿಯ ದಾಯಿತು !

ಮರುದಿನ ಉಷಃ ಕಾಲಕ್ಕೆ ಕಮಲಾಪೀಡ ಚಾಣಕ್ಯನ ಬಿಡಾರದಲ್ಲಿ ಕಾಣಿಸಿಕೊಂಡ. ಚಾಣಕ್ಯ ಎರಡು ಪತ್ರಗಳನ್ನು ಅವನಿಗೆ ಬರೆದುಕೊಟ್ಟು "ನಿಮ್ಮ ದೊರೆಯ ಹಸ್ತಾಕ್ಷರ, ಮೊಹರು ಹಾಕಿಸಿ ತನ್ನಿ" ಎಂದು ಹೇಳಿದ. ಮೊಹರಾದ ಪತ್ರಗಳಲ್ಲಿ ಮೊದಲನೆಯದನ್ನು ''ಇದು ನಿಮ್ಮ ಚಾರರು ಮೊದಲು ಇಂದ್ರಪ್ರಸ್ಥಕ್ಕೆ ಒಯ್ಯಬೇಕಾದುದು. ಈ ಎರಡನೆಯದನ್ನು ನೀವೇ ಒಯ್ಯಬೇಕು. ಆದರೆ ನೀವೇ ಮೊದಲು ಇಂದ್ರವರ್ಮನಿಗೆ ಕಾಣಿಸಿ ಕೊಳ್ಳಬೇಕು. ಅದಾದ ನಂತರ ನಿಮ್ಮ ಚಾರ ಇಂದ್ರಪ್ರಸ್ಥದಲ್ಲಿ ಹೀಗೆ ಮಾಡಬೇಕು" ಎಂದು ಮುಂದಿನ ಕೆಲಸಗಳನ್ನೆಲ್ಲಿ ಸವಿಸ್ತರವಾಗಿ ಅತ್ತ ತಿಳಿಸಿದ.

ಕಮಲಾಪೀಡ ಅರ್ಥ ಮಾಡಿಕೊಂಡು ವೇಗಶಾಲೀ ಕುದುರೆಯ ನ್ನೇರಿ ಹೊರಟ. ಚಾಣಕ್ಯ "ಬೇಗ ಈ ಕಾರ್ಯ ಮಾಡಿಕೊಂಡು ಬರಬೇಕು" ಎಂದು ಮಂತ್ರಾಕ್ಷತೆಯ ಆಶೀರ್ವಾದ ಮಾಡಿ ಸ್ನಾನಾಹ್ನಿಕಗಳಿಗೆ ಎದ್ದ. ಚಂದ್ರಗುಪ್ತ ವಿದ್ಯುಲ್ಲೇಖೆಯರು ನಿದ್ರೆಯಿಂದೆದ್ದು ಆಚಾರ್ಯ ಪಾದಗಳಿಗೆ ವಂದಿಸಿ ಬಂದರು.

## ಹತ್ತನೆಯ ಅಧ್ಯಾಯ

# ಭೇದೋಪಾಯ ಸಿದ್ಧಿ !

"ಏನು ! ವೃಷಲನಿಗೆ ರಾತ್ರಿನಿದ್ರೆ ಸರಿಯಾಗಿ ಬಾರಲಿಲ್ಲವೋ ಹೇಗೆ ? ಕಂಗಳೇಕೆ ಕೆಂಪಿವೆ ?" ಎಂದು ಆಚಾರ್ಯ ಚಂದ್ರಗುಪ್ತನನ್ನು ಚುಚ್ಚಿ ಮಾತಾಡಿದ.

"ಗುರುವೆ ? ನಿದ್ರೆಗೆ ನೀವು ಕೊಟ್ಟಿರುವುದೇ ಮೂರುತಾಸು ವೇಳೆ ! ಅಷ್ಟರೊಳಗೇ ಅರಮನೆಯ ನಾಯಿಗಳ ಸತತ ಬೊಗಳಾಟ ಬೇರೆ? ನನ್ನ ಶಯ್ಯಾಗೃಹದಲ್ಲೇ ಸೇರಿಕೊಂಡಂತೆ ಅನಿಸಿತು. ಹುಡುಕಾಡಿದರೆ ಅಲ್ಲೆಲ್ಲೂ ಇಲ್ಲ! ಸಮೀಪದಲ್ಲಿ ಎಲ್ಲೋ ಇರಬೇಕು. ದೊರೆಗೆ ಹೇಳಿ, ಇಂದು ಅವನ್ನು ಬೇರೆಡೆ ಸಾಗಿಸುವಂತೆ ಹೇಳಿ, ಉಪಕರಿಸಬೇಕು." ಎಂದ ಚಂದ್ರಗುಪ್ತ.

ಚಾಣಕ್ಯ : "ಕುಮಾರ ! ನಾಯಿ ಬೊಗಳುವುದು ನಮ್ಮ ಹಿತಕ್ಕಾಗಿಯೇ ! ಈ ಸಣ್ಣ ವಿಷಯವನ್ನು ಪರ್ವತನಿಗೆ ಹೇಳಿ, ದೊಡ್ಡಕಾರ್ಯ

ವಿಘಾತವನ್ನು ನಾನು ಬಯಸಲಾರೆ. ರಾಜಕುಮಾರನು ಈ ನಾಯಿ ಬೊಗಳಿಕೆಗೆ ಅಂಜಬಾರದು. ನಿದ್ರೆಬಾರದಿದ್ದರೆ, ನಿದ್ರೆಬರಿಸುವ ಮಂತ್ರ ನನ್ನಲ್ಲಿದೆ. ಆದರೆ ಯಾವುದೂ ಸ್ವಾಭಾವಿಕವಾಗಬೇಕು. ಮಂತ್ರ ಗುಳಿಗೆ ಗಳಿಗೆ ಅಂಟಿ ಜೀವನ ನಡೆಸಬಾರದು. ಇಂದ್ರಿಯ ನಿಯತಿಯಿದ್ದವನಿಗೆ ನಿದ್ರೆ ಬಾರದೆಂದರೇನು? ನನ್ನ ಎಚ್ಚರಿಕೆಯ ಮಾತುಗಳನ್ನು ಮೀರಲಿಲ್ಲ ವಷ್ಟೆ?" ಎನ್ನುತ್ತಾ, ವಿದ್ಯುಲ್ಲೇಖೆಯ ಮುಖವನ್ನು ಆಚಾರ್ಯ ನೋಡಿದ. ತಗ್ಗಿಸಿದ ತಲೆಯನ್ನು ಅವಳೆತ್ತಲಿಲ್ಲ. ಚಂದ್ರಗುಪ್ತನಿಗೂ ನಾಚಿಕೆಯಾಯಿತು. ದೂರದಲ್ಲಿ ಆಚಾರ್ಯನ ಕಮಂಡಲುವನ್ನು ಹೊತ್ತು ನಿಂತಿದ್ದ ಶ್ರುತವಿನೀತ ಬಲವಂತವಾಗಿ ನಗು ತಡೆದುಕೊಳ್ಳಲು ಯತ್ನಿಸುತ್ತಿದ್ದ! ಚಾಣಕ್ಯನ ಹುಬ್ಬು ಗಂಟು ಆ ನಗುವನ್ನು ಒಡನೆಯೇ ದೂರಮಾಡಿತು. ಚಾಣಕ್ಯ ಸ್ನಾನಕ್ಕೆ ನದಿಗೆ ಹೊರಟ, "ವಿರೋಚಕನಲ್ಲಿ ಅಡಗಿಕೊಂಡಿರುವನೆಂಬ ಮಾಹಿತಿಯನ್ನು ಶೀಘ್ರವಾಗಿ ಪತ್ತೆ ಮಾಡಿ ತರುವಂತೆ ನಮ್ಮ ಗೂಢಚಾರರ ಮುಖಂಡನಿಗೆ ರಹಸ್ಯವಾಗಿ ಅರುಹು" ಎಂದು ಬೃಹದ್ಬಾಹುವೆಂಬ ಕುಶಲ ಮತಿಯ ಶಿಷ್ಯನಿಗೆ ಗುರು ಅಪ್ಪಣೆಯಿತ್ತ. ಇದು ತುರಾತುರಿಯ ವಿಷಯ ವಿರಬೇಕೆಂದೂಹಿಸಿ ಬೃಹದ್ಬಾಹು ಆಗಲೇ ಹೊರಟ.

  

ಇಂದ್ರವರ್ಮ ಇನ್ನೂ ಕಿರಿಯ ವಯಸ್ಸಿನ, ಅನುಭವ ಸಾಲದ ದೊರೆ ಯಾಗಿದ್ದ. ಮಹಾಭಾರತದ ಗತವೈಭವ ತನ್ನ ಪರಂಪರೆಯದೆಂದು ಹೇಳಿ ಕೊಳ್ಳುವ ಭಾಗ್ಯ ಬಿಟ್ಟು ಹೆಚ್ಚು ವಿಶೇಷವೇನೂ ಆ ರಾಜ್ಯದಲ್ಲಿರಲಿಲ್ಲ. ರಾಜ್ಯದಲ್ಲಿ ಅಸಂಖ್ಯಾತ ದೇವಾಲಯಗಳಿದ್ದವು. ಅಲ್ಲಲ್ಲಿ ಪಾಂಚರಾತ್ರಿ ಗಳಿದ್ದರು. ಜೈನ ಬೌದ್ಧ ಧರ್ಮಗಳು ಇನ್ನೂ ಅಲ್ಲಿ ಮಗಧದಂತೆ ಭದ್ರ ತಳವೂರಿರಲಿಲ್ಲ. ಬ್ರಾಹ್ಮಣರು ಪುಷ್ಕಲ ಸಂಖ್ಯೆಯಲ್ಲಿದ್ದರು. ನೆರೆ ರಾಜ್ಯ ವಾದ ಮಗಧದ ಅರಸರಿಗೂ ಇಂದ್ರಪ್ರಸ್ಥದ ದೊರೆಗಳಿಗೂ ಪಾರಂಪರಿಕ ವೈರ, ಸ್ಪರ್ಧೆ ಇದ್ದೇ ಇತ್ತು. ಆದರೆ ಇಂದ್ರವರ್ಮನ ತಂದೆಯು ಮಹಾ ಪದ್ಮನೊಡನೆ, ಅವನ ದಿಗ್ವಿಜಯ ಯಾತ್ರಾಕಾಲದಲ್ಲಿ ಯುದ್ಧದಲ್ಲಿ ಸತ್ತಿದ್ದು, ಅವನ ನಂತರ ಆ ರಾಜ್ಯ ಮಗಧೇಶ್ವರನ ಅಧೀನವಾಗಿತ್ತು. ಇಂದ್ರ ವರ್ಮನಿಗೆ ಸಮರ್ಥಮಂತ್ರಿ, ರಾಕ್ಷಸನಂಥವನೋ ಚಾಣಕ್ಯನಂಥವನೋ

ಪಂಚನದ ಕ್ಷೇತ್ರಕ್ಕೆ ಸಮೀಪದಲ್ಲಿದ್ದು ಹೊರಗಿನ ಶತ್ರುಗಳು ಭಾರತಕ್ಕೆ ಬಂದವರು ಇದಕ್ಕೂ ಕಾಲು ಹಾಕುತ್ತಿದ್ದರು. ಅಲೀಕಸುಂದರನು ದಂಡ ಯಾತ್ರೆ ಮಾಡಿ ಪಂಚನದ ಪ್ರಾಂತವನ್ನು ಕೊಳ್ಳೆಹೊಡೆ ದಾಗ ಇಂದ್ರವರ್ಮ ನಡುಗುತ್ತಿದ್ದ. ಅವನ ಪುಣ್ಯ ಆ ಭಯದಿಂದ ಅವನನ್ನು ತಪ್ಪಿಸಿತು. ಈಗ ಗೂಢಚಾರರು ಪಂಚನದ ಸುಭಿಕ್ಷವಾಗಿ ರುವುದನ್ನೂ ಚಾಣಕ್ಯನೆಂಬ ಅವತಾರ ಪುರುಷ, ಮಂತ್ರವಾದಿ, ಮುತ್ಸದ್ದಿ, ಅರ್ಥಶಾಸ್ತ್ರಜ್ಞ, ತನ್ನ ಕೇವಲ ಬುದ್ಧಿಯಿಂದ ನಾಡನ್ನು ಪರಕೀಯರ ದಾಸ್ಯದಿಂದ ಬಿಡಿಸಿದನೆಂಬುದನ್ನೂ ಅಲ್ಲಿನ ಜಾತ ಕ್ಷತ್ರಿಯರೆಲ್ಲ ಅವನಿಗೆ ಕೃತಜ್ಞರಾಗಿ ಒಂದು ಗೂಡಿರುವರೆಂಬುದನ್ನೂ, ಇದೆಲ್ಲ ಒಂದೇ ತಿಂಗಳಲ್ಲಿ ನಡೆದು ಹೋದ ಪವಾಡವೆಂಬುದನ್ನೂ ಬಹುವಾಗಿ ವರ್ಣಿಸಿ, ದೊರೆಗೆ ಆಶ್ಚರ್ಯಪಡಿಸಿದ್ದರು. "ನನಗೆ ಆ ಮಹಾಪುರುಷನ ಸಹಾಯ ದೊರೆತರೆ!...." ಎಂದು ಇಂದ್ರ ವರ್ಮ ಮನದಲ್ಲೇ ಮಂಡಿಗೆ ತಿನ್ನಲಾರಂಭಿ ಸಿದ್ದ. ಚಿಕ್ಕ ವಯಸ್ಸಿನ ಬ್ರಾಹ್ಮಣ ಮಂತ್ರಿ ಅಗ್ನಿದತ್ತಶರ್ಮನು ಯಥಾ ಶಕ್ತಿ ರಾಜನಿಗೆ ಧೈರ್ಯ ಹೇಳುತ್ತಾ, "ಒಳ್ಳೆ ಕಾಲ ಬರುತ್ತದೆ" ಎಂಬ ಆಶೆ ಯನ್ನು ಕುದುರಿಸುತ್ತಿದ್ದನು.

ಮರುದಿನ–ಗೂಢಚಾರರು ವಾರ್ತೆ ತಂದ ಮೂರನೇ ದಿನ – ಇದ್ದಕ್ಕಿ ದ್ದಂತೆ ಪರ್ವತನ ರಾಯಭಾರಿ, ಕಮಲಾಪೀಡ, ಪೂರ್ವ ಮಾಹಿತಿಯಿಲ್ಲದೆ ಆಸ್ಥಾನಕ್ಕೇ ಬಂದುದು ಪರಮಾಶ್ಚರ್ಯವಾಯಿತು. ಪರ್ವತೇಶನ ರಾಯ ಭಾರಿಯೊಬ್ಬ ಹೀಗೆ ಹಿಂದೆಂದೂ ಬಂದುದಿಲ್ಲ! ಅವನೊಡನೆ ಇವನಿಗೆ ವೈರವೂ ಇಲ್ಲ, ಮೈತ್ರಿಯೂ ಇಲ್ಲವಾಗಿ ಕುತೂಹಲ ಹೆಚ್ಚಿತು. ಯೋಗ್ಯ ರೀತಿಯಿಂದ ರಾಯಭಾರಿಯನ್ನು ಸ್ವಾಗತಿಸಿ, ಬಿಡಾರ ಮಾಡಿ, ವಿಶ್ರಾಂತಿ ಯಾದ ನಂತರ ಸಂಜೆ ಇಂದ್ರವರ್ಮ ಓಲಗಕ್ಕೆ ಬರಮಾಡಿಕೊಂಡು, ''ಏನು ವಿಶೇಷ ? ಅತ್ತ ಎಲ್ಲ ಕುಶಲವಷ್ಟೆ?" ಎಂದು ವಿಚಾರಿಸಿದ.

ಕಮಲಾಪೀಡನೆಂದ: "ಪರ್ವತೇಶ ಮಹಾರಾಜರು ಪ್ರಸನ್ನರಾಗಿ ದ್ದಾರೆ. ಅವರಿಗೆ ಬಂದೊದಗಿದ್ದ ಮಹಾಪತ್ತು ಬ್ರಾಹ್ಮಣಾಗ್ನಿಯ ಕೃಪೆ

ಯಿಂದ ತೊಲಗಿ ರಾಹು ಮುಕ್ತ ಚಂದ್ರರಂತೆ ಈಗ ಅವರು ಸುಸ್ಥಿತಿಯಲ್ಲಿದ್ದಾರೆ. ಆರ್ಯಾವರ್ತದ ಕ್ಷತ್ರಿಯರೆಲ್ಲ ಸದ್ಭಾವನೆಯಿಂದ ಒಗ್ಗೂಡಿ ಅನಾರ್ಯವಾದಗಳು ತಲೆ ಎತ್ತದಂತೆ, ವೈದಿಕ ಸಂಸ್ಕೃತಿಯ ಪುನರುಃಸ್ಥಾಪನೆಗೆ ಟೊಂಕಕಟ್ಟಿ ನಿಲ್ಲುವ, ನಿಲ್ಲಬೇಕಾದ ಕಾಲವಿದು ಎಂದು ಅವರ ಅನುಭವ ಪೂರ್ಣ ಅಭಿಪ್ರಾಯ." ಎಂದು ಬಿನ್ನೈಸಿದ.

ಇಂದ್ರವರ್ಮ ಅಗ್ನಿದತ್ತಶರ್ಮನ ಮುಖ ನೋಡಿದ. "ಅನಾರ್ಯವಾದ–ವೈದಿಕ ಸಂಸ್ಕೃತಿ" ಶಬ್ದಗಳು ಕಮಲಾಪೀಡನ ಇಂಗಿತಕ್ಕೆ ಸೂಚಕವಾಗಿ, ''ಮಗಧದ ವಿರುದ್ಧ ಏನೋ ಸೂಚನೆ ತಂದಿರಬೇಕು'' ಎಂದು ದೊರೆಯ ಕಿವಿಯಲ್ಲಿ ಮಂತ್ರಿ ಉಸಿರಿದ. ಉತ್ಸುಕನಾಗಿ ದೊರೆ, ನಿಯೋಗಿಗೆ ''ವಿಷಯವನ್ನು ಬಿಡಿಸಿ, ವಿವರವಾಗಿ ತಿಳಿಸಿದರೆ, ನಮ್ಮ ಕರ್ತವ್ಯಾಕರ್ತವ್ಯ ಜ್ಞಾನಕ್ಕೆ ಸಹಾಯವಾಗುತ್ತದೆ" ಎಂದು ಹೇಳಿದ.

''ಪರ್ವತೇಶರು ತಮಗೆ ಈ ಪತ್ರವನ್ನು ಕಳುಹಿದ್ದಾರೆ. ತಾವೇ ಪರಾಂಬರಿಸಬೇಕು'' ಎನ್ನುತ್ತಾ ಚಾಣಕ್ಯಕೊಟ್ಟ ಪತ್ರವನ್ನು ಕಮಲಾಪೀಡ ದೊರೆಯ ಕೈಗಿತ್ತ.

ಬಿಡಿಸಿ ಗಟ್ಟಿಯಾಗಿ ಓದುವಂತೆ ಇಂದ್ರವರ್ಮ ಅಗ್ನಿದತ್ತ ಶರ್ಮನಿಗೆ ಅಪ್ಪಣೆ ಮಾಡಿದ; ಅದರ ಒಕ್ಕಣೆ ಇಂತಿತ್ತು:

"ಸ್ವಸ್ತಿ ಶ್ರೀಮತ್ ಚಂದ್ರವಂಶ್ಯರಾದ, ಪಾಂಡವ ಕುಲವಾರಿಧಿಪದ್ಮರಾಗಿ ಸಂಭೂತರಾದ, ಸದಾಚಾರ ಸನಾತನ ಧರ್ಮ ನಿಷ್ಠರಾಗಿ, ಸಾತ್ವಿಕ ಪೋಷಣೆಯಲ್ಲೂ ಸ್ವಕರ್ಮ ನಿರತ ಪ್ರಜೆಗಳ ಸಂರಕ್ಷಣೆಯಲ್ಲೂ ನಿಷ್ಠರಾಗಿ ಭಗವದ್ಭಾಗವತ ಕೃಪಾಶೀರ್ವಾದ ಸಂಪನ್ನರಾದ ಶ್ರೀ ಶ್ರೀ ಇಂದ್ರವರ್ಮ ಮಹಾರಾಜರಿಗೆ, ಅರಿಭಯಂಕರನಾಗಿ, ಯವನ ಸೇನೆಗೆ ಸಿಡಿಲಿನಂತೆ ಎರಗಿ ಆರ್ಯ ಸಂಸ್ಕೃತಿಯ ವಿಪತ್ತನ್ನು ತೊಲಗಿಸಿ, ಸದ್ಧರ್ಮಸಂಜೀವನ, ಸದ್ಧರ್ಮ ಸ್ಥಾಪನೆಗ ಬದ್ಧ ದೀಕ್ಷಿತರಾಗಿ, ಆಚಾರ್ಯ ಚಾಣಕ್ಯ ಪದ ಪದ್ಮ

ಮಧುಪರಾಗಿ, ಅಪಾರ ಸೇನಾಸಂಪತ್ತಿನಿಂದಲೂ, ಬ್ರಾಹ್ಮಣಾಶೀರ್ವಾದ ದಿಂದಲೂ ಸಂಪನ್ನರಾಗಿ ವಿರಾಜಮಾನರಾಗಿರುವ ಪಂಚನದ ಪ್ರಾಂತೇಶ್ವರ ರಾದ ಪರ್ವತ ಮಹಾರಾಜರು ವಿನಯ ಪೂರ್ವವಾಗಿ ಮಾಡುವ ವಿಜ್ಞಾಪನೆ ಯೇನೆಂದರೆ-

ತಮ್ಮ ಪರಾಕ್ರಮ, ವಿದ್ಯೆ, ರೂಪ, ಯೌವ್ವನ ಗುಣ ಶೀಲಗಳು ನಮ್ಮನ್ನು ಪರವಶರನ್ನಾಗಿಸಿ ನಾವು ಪ್ರತ್ಯಕ್ಷ ತಮ್ಮನ್ನು ಭೇಟಿಯಾಗದಿ ದ್ದರೂ, ಮಧ್ಯಸ್ಥ ಮಹಾತ್ಮರ ಮೂಲಕ ನಾವು ಪರಸ್ಪರರನ್ನು ಚೆನ್ನಾಗಿ ಅರಿತುಕೊಂಡಿದ್ದೇವೆ ಎಂದು ನಂಬುತ್ತೇವೆ.

ನಮ್ಮ ಏಕೈಕ ಪುತ್ರಿ ಕುಮಾರಿ ರೂಪವತೀದೇವಿಗೆ ಅರ್ಹರಾದ ರಾಜ ಕುಮಾರನ್ನು ಪರಿಶೀಲಿಸುತ್ತಾ ತಮ್ಮ ಕುಲ, ಶೀಲ, ರೂಪಕ್ಕೆ ಮನ ಸೋತು ತಮ್ಮನ್ನು ನಮ್ಮ ಅಳಿಯದೇವರನ್ನಾಗಿ ಮಾಡಿಕೊಳ್ಳುವ ಉತ್ಕೃಷ್ಟ, ಉತ್ಕಟ ಬಯಕೆ ಮೂಡಿದೆ. ಕನ್ಯೆಯು ತಮ್ಮ ಮನಸ್ಸಿಗೆ ಬರುವವಳಾಗಿಯೇ ಇದ್ದಾಳೆಂದು ನಂಬುತ್ತೇವೆ. ಮಗಧೇಶ್ವರರಿಗೂ ನಮ್ಮ ಸಂಬಂಧ ಬೆಳೆಸುವ ವಿಚಾರವಿದ್ದು ತಾವೇ ನಿರೂಪವನ್ನೂ ಕಳುಹಿದ್ದರು. ಅವರ ಪೂರ್ವೋತ್ತರ ವಿಚಾರಗಳು ತಿಳಿದ ಬಳಿಕ ಆ ಸಂಬಂಧವನ್ನು ನಾವು ತಿರಸ್ಕರಿಸಿ ಆಗಿದೆ. ಇತರ ರಾಜಕುಮಾರರನ್ನು ಸಹ! ತಮಗೆ ಅಭಿಪ್ರಾಯ ವಾದಲ್ಲಿ ಕನ್ಯಾವೀಕ್ಷಣೆಗೆ ತಾವೇ ಕೂಡಲೇ ದಯಮಾಡಿಸಿದರೆ, ಉಭಯ ಕುಶಲ ಬೆಳೆಸಲು ಅನುಕೂಲ. ವೀಕ್ಷಣೆಯ ಅವಶ್ಯವಿಲ್ಲವಾದರೆ, ನಮ್ಮ ರಾಯಭಾರಿಯೊಡನೆ ಒಂದೇ ಸಾಲಿನ ಸದುತ್ತರವನ್ನು ದಯಪಾಲಿಸಿದರೆ, ಮುಂದಿನ ಶುಭಕಾರ್ಯಬೆಳೆಸಲು, ನಾವೇ ತಮ್ಮ ಸನ್ನಿಧಿಗೆ ಬರುತ್ತಲಿ ದ್ದೇವೆ. ತಮ್ಮ ಹಿರಿಯರನ್ನೂ, ಮಂತ್ರಿಪುರೋಹಿತರನ್ನೂ ಕಲೆಹಾ ಆಲೋಚಿಸಿ, ಶೀಘ್ರವಾಗಿ ಉತ್ತರಿಸಬೇಕು. ಇತಿ ಸ್ವಸ್ತಿ ರಾಜಾಧಿರಾಜ ಪರ್ವತೇಶ್ವರರು" ಎಂದು ಮುಗಿಸಿದ್ದ ಈ ಅದ್ಭುತ ಒಕ್ಕಣೆಯನ್ನು ಓದಿಸಿ ಕೇಳಿ ಇಂದ್ರಮರ್ಮ ದೊರೆ ಹಿಗ್ಗಿದ! ಮುಖದಲ್ಲೂ ಸಂತಸಸೂಚಿಸಿದ. ಮಂತ್ರಿಗೂ ಸಂತೋಷವಾಯಿತು. ಪ್ರಬಲ ದೊರೆಯ ಸಂಬಂಧ, ಆಚಾರ

ಚಾಣಕ್ಯನ ಕೃಪಾಶೀರ್ವಾದ ಪಡೆಯುವ ಸಂದರ್ಭ, ಮಗಧದ ದಾಸ್ಯ ವನ್ನು ಕಿತ್ತೊಗೆಯುವ ಅವಕಾಶ, ಮತ್ತೆ ವಂಶದ ಹಿರಿತನವನ್ನು ಮೆರೆ ಯುವ ಮುಹೂರ್ತ ಬಂದೇ ಬಿಟ್ಟಿತೆಂದು ದೊರೆ ಉಬ್ಬಿಹೋದ !

"ನಿಯೋಗಿಗಳೇ! ಎಂಥ ಸಂತಸದ ಅದ್ಭುತ ಸಮಾಚಾರ ತಂದಿರಿ !" ಎನ್ನುತ್ತಾ ಅಗ್ನಿದತ್ತಶರ್ಮನು ನಿಯೋಗಿಗೆ ಅದ್ಭುತ ಗೌರವ ಮಾಡಿಸಿ, ಖಿಲ್ಲತ್ತುಗಳನ್ನು ಇತ್ತು ಸಡಗರ ಸಂಭ್ರಮಗಳಿಂದ ಅವನನ್ನು ಆದರಿಸಿ "ಇಂದು ರಾತ್ರಿ ತಮಗೆ ವಿಶ್ರಾಂತಿಯಾಗಲಿ. ತಮ್ಮ ಅಭಿಪ್ರಾಯಕ್ಕೆ ಪೂರ್ಣ ಒಪ್ಪಿಗೆಯ ಮರುಮಾತನ್ನು ಬರೆಸಿ ನಾಳೆ ಬೆಳಿಗ್ಗೆಯೇ ತಮಗೆ ಸಮರ್ಪಿಸ ಲಾಗುವುದು. ಹಾಲಿಗೆ ಜೇನು ಬೆರೆಸಿದಂತೆ ಈ ಮನೆತನಗಳಲ್ಲಿ ಹೀಗೆ ಸಂಬಂಧ ಏರ್ಪಟ್ಟರೆ ಉಭಯತ್ರರಿಗೂ, ರಾಷ್ಟ್ರಕ್ಕೂ ಕ್ಷೇಮ" ಎನ್ನುತ್ತಾ, ಅವನನ್ನು ಗೌರವದಿಂದ ಬೀಡಾರಕ್ಕೆ ಕಳುಹಿಕೊಟ್ಟನು.

  

ಸೂರ್ಯಾಸ್ತವಾದ ಬಳಿಕ ಇಂದ್ರಪ್ರಸ್ಥನಗರದಲ್ಲಿ ಒಂದು ವಿಚಿತ್ರ ಘಟನೆ ಆಯಿತು. ಊರಿನ ಚಾವಡಿಯಲ್ಲಿ ಪರ್ವತೇಶನ ದೂತನೊಬ್ಬ ಕೈಯ್ಯಲ್ಲಿ ಪತ್ರ ಹಿಡಿದು ವೇಗವಾಗಿ ಕುದುರೆಯಿಂದ ಬಂದಿಳಿದು "ನಮ್ಮ ದೇಶದ ರಾಯಭಾರಿ ಎಲ್ಲಿ ಇಳಿದು ಕೊಂಡಿದ್ದಾರೆ ? ಅವರಿಗೆ ಈ ಪತ್ರ ವನ್ನು ಶೀಘ್ರವಾಗಿ ತಲುಪಿಸಬೇಕಾಗಿದೆ!" ಎಂದು ಬಂದು, ಅಲ್ಲಿನ ಕಾವಲು ಗಾರರನ್ನು ಕೇಳಿದ. ಕಾವಲುಗಾರರು ಮೇಲ್ವಿಚಾರಕನನ್ನು ಕರೆತಂದರು. "ಏನಯ್ಯಾ! ಇಷ್ಟು ಶೀಘ್ರದಲ್ಲಿ ಬಂದಿರುವೆ ? ನೆನ್ನೆಯಷ್ಟೇ ತಾನೇ ನಿಮ್ಮ ರಾಯಭಾರಿ ಬಂದಿರುವರು ? ಅದರೊಳಗೆ ಬೇರೆ ಸಮಾಚಾರವೂ ?" ಎನ್ನುತ್ತಾ, ಊರೆಲ್ಲ ಹಬ್ಬಿದ ವಿವಾಹದ ವಿಷಯಕ್ಕೆ ಏನಾದರೂ ಭಂಗ ಬಂದಿರಬಹುದೆಂದು ವಿಚಾರಿಸುತ್ತ, ಒಡನೆಯೇ ಅವನನ್ನು ಕಮಲಾಪೀಡನ ನಿವಾಸಕ್ಕೆ ಕರೆತರಲು ಯೋಚಿಸಿದರು.

ರಾಜದೂತ ಆ ವಿಳಂಬಕ್ಕೆ ಒಪ್ಪಲಿಲ್ಲ. ಅಧಿಕ ಪ್ರಸಂಗಿಯಾಗಿ ಏನೇನೋ ಮಾತಾಡಿದ! "ಮಗಧದ ರಾಜಕುಮಾರರಂತೆ, ಇಂದ್ರ ವರ್ಮನೂ ಕ್ಷೌರಿಕವಂಶದವನೆಂದು ತಿಳಿದು ನಮ್ಮ ದೊರೆಗಳು ಹೆಣ್ಣು ಕೊಡಲು ಈಗ ತಿರಸ್ಕರಿಸಿದರು! ಇಲ್ಲಿ ನಮ್ಮ ರಾಯಭಾರಿ ತಿಳಿಯದೆ ಬಂದು ಮೋಸ ಹೋದರು!! ಇಂದ್ರವರ್ಮ ರಾಜರು ಶುದ್ಧ ಕ್ಷತ್ರಿಯರೆಂದೂ, ಶುದ್ಧ ಪಾಂಡವ ವಂಶೀಯರೆಂದೂ ಭಾವಿಸಿ, ನಮ್ಮ ರಾಯಭಾರಿಯನ್ನು ನೆನ್ನೆ ವಿವಾಹ ಪ್ರಸ್ತಾಪಕ್ಕೆ ಕಳುಹಿದ್ದರಷ್ಟೆ! ಅತ್ತ ಮಗಧದ ರಾಜ ಕುಮಾರ ತಿರಸ್ಕೃತನಾಗಿ, ಅಪಮಾನಿತನಾಗಿ ರಾಕ್ಷಸಸಮ್ಮುಖದಲ್ಲಿ ಹೀಗೆಂದನಂತೆ. 'ನಾವು ಹಜಾಮರ ಮಿಶ್ರಸಂತಾನವೆಂಬುದು ಬಹು ಜನರಿಗೆ ಹೇಗೆ ತಿಳಿಯದೋ, ಇಂದ್ರವರ್ಮನೂ ಹಾಗೇ ಹಜಾಮವಂಶದ ವನೆಂಬುದನ್ನು ಪರ್ವತನರಿಯ ! ಪಾಪ! ನಾವು ಸಮಾನಮಿಶ್ರವರ್ಣದವ ರೆಂದೂ, ಅವನಿಗೆ ಬೇರಾರೂ ಹೆಣ್ಣು ಕೊಡಲು ಜಾತಕ್ಷತ್ರಿಯರು ಮುಂದೆ ಬರಲಾರರೆಂದೂ ಇಂದ್ರವರ್ಮ ತಿಳಿಯದವ ! ಪತ್ರ ಬರೆದು ಅಪಮಾನಿಸಿದ ಪರ್ವತೇಶನನ್ನು ದಂಡಿಸಲು ನಮ್ಮಲ್ಲಿ ಬೇಕಾದಷ್ಟು ಸೈನ್ಯವಿದೆ. ಇಂದ್ರ ವರ್ಮ ಪರಾಕ್ರಮಿ ಆಗಿದ್ದರೆ ಮಹಾಪದ್ಮರಾಯರಿಗೆ ಹೇಗೆ ಸೋತ ? ಇವನು ಹೇಡಿಯೆಂಬುದನ್ನು ತಿಳಿಯದೆ ಪರ್ವತರಾಜ ಮೋಸ ಹೋದ ! ತಾನು ಯವನನಿಗೆ ಸೋತವನಲ್ಲವೆ? ಹೇಡಿಯ ಹೆಣ್ಣು ಹೇಡಿಯ ಅಳಿಯ ನಿಗೇ ಮಾತ್ರ ಮೀಸಲಲ್ಲವೆ? ನಡೆಯಲಿ, ನಡೆಯಲಿ, ಈ ಮದುವೆ !' ಎಂದು ಛೇಡಿಸಿದನಂತೆ. ಈ ಸಮಾಚಾರ ಪುರುಷಪುರಕ್ಕೆ ಕಮಲಾಪೀಡ ಮಹಾ ಶಯರು ಹೊರಟ ಸಂಜೆಗೇ ಬಂದು ಸೇರಿತು. ತಿಳಿದೂ ತಿಳಿದೂ ಹಜಾಮ ವಂಶದವರಿಗೆ, ಶುದ್ಧ ಕ್ಷತ್ರಿಯರು ಹೆಣ್ಣು ಕೊಡುವುದುಂಟೋ? ಅದನ್ನು ತಿಳಿಸಲೆಂದೇ ವೇಗವಾಗಿ ಬಂದೆ. ನಮ್ಮ ನಿಯೋಗಿಯನ್ನೇ ಇತ್ತ ಕರೆಯಿಂ! ಈ ಊರೊಳಗೆ ಕಾಲಿಡುವುದೂ ನಮ್ಮ ಮರ್ಯಾದೆಗೆ ಕುತ್ತು" ಎಂದು ದೂತ ಹರಟಿದ !

ಚಾವಡಿಯ ರಕ್ಷಕರು ದೂತನಿಗೆ ಚೆನ್ನಾಗಿ ಬಡಿದರು : "ನಮ್ಮ ಅರಸನನ್ನು ಹೀಗೆಲ್ಲ ಬೈಯ್ಯಲು ನೀನಾರು?" ಎನ್ನುತ್ತಾ ಅವನ

ಕೈಯ್ಯಿಂದ ಪತ್ರವನ್ನು ಬಲಾತ್ಕಾರವಾಗಿ ಕಿತ್ತುಕೊಂಡು, ಮಂತ್ರಿಯ ಮನೆಗೆ ಓಡಿ ಅಗ್ನಿದತ್ತ ಶರ್ಮನಿಗೆ ಸಮರ್ಪಿಸಿದರು. ಅರಮನೆಯಿಂದ ಆಗ ತಾನೇ ಬಂದು, ರಾಜಕಾರ್‍ಯಭಾರದಿಂದ ದಣಿದಿದ್ದ ಮಂತ್ರಿ, ಆ ಪತ್ರ ಬಂದ ಬಗೆಯನ್ನು ಕೇಳಿ, ಚಾರ ಹೇಳಿದ ಮಾತಿನಿಂದ ಕುಪಿತನಾಗಿ, ಮತ್ತೆ ಪೋಷಾಕುಧರಿಸಿ ಅರಮನೆಯತ್ತ ನಡೆದ. ರಾಜನನ್ನು ಕಂಡು ಏಕಾಂತ ದಲ್ಲಿ ವಿಷಯವನ್ನು ಬಿನ್ನವಿಸಿದ.

"ಪತ್ರದ ಮೊಹರು ಕೆಡದಂತೆ ಬಿಡಿಸಿ, ಅದರಲ್ಲೇನಿದೆ ಎಂದು ಓದಿ, ನೋಡುವ'' ಎಂದು ದೊರೆ ಮಂತ್ರಿಗೆ ಅಣತಿಯಿತ್ತ. ಅದರ ಒಕ್ಕಣೆ ಹೀಗಿತ್ತು.

"ಇಂದ್ರಪ್ರಸ್ಥವನ್ನು ಸೇರಿರುವ ನಮ್ಮ ನಿಯೋಗಿ ಕಮಲಾಪೀಡ ಮಹಾಶಯರಿಗೆ ಪರ್ವತೇಶ್ವರರು ಅವಸರದಲ್ಲಿ ಬರೆದು ಕಳುಹಿದ ನಿರೂಪ ವೇನೆಂದರೆ ತಾವು ಅತ್ತ ಹೊರಟ ಬಳಿಕ ಮಗಧಕ್ಕೆ ಹೋಗಿದ್ದ ನಮ್ಮ ಗೂಢಚಾರರಿಂದ ಇದೀಗ ತಾನೇ ತಿಳಿದು ಬಂದ ಸಮಾಚಾರವಿದು: ಮಗಧದ ರಾಜಕುಮಾರನನ್ನು ವರ್ಣಸಂಕರವುಳ್ಳವನೆಂಬ ಕಾರಣಕ್ಕಾಗಿ ನಾವು ತಿರಸ್ಕರಿಸಿದೆವಷ್ಟೆ! ಇತ್ತ ಇಂದ್ರಪ್ರಸ್ಥದ ರಾಜಕುಮಾರನ ವಂಶವೂ ಕಳಂಕಿತವಾಗಿರುವುದಂತೆ. ಅವರಿಗೂ ಹಜಾಮರ ರಕ್ತ ಸಂಕರವಾಗಿರುವ ಸುದ್ದಿಯುಂಟು. ನೀವು ಕೂಲಂಕಷವಾಗಿ ಇದನ್ನು ವಿಚಾರಿಸಿ, ಯಾವ ಕಲಕಳಂಕವೂ ಇಲ್ಲವೆಂದು ನಿರ್ವಿವಾದವಾಗಿ ತಿಳಿದುಬಂದರೆ ಮಾತ್ರ ಈ ವಿವಾಹ ವಿಷಯದಲ್ಲಿ ಮುಂದುವರೆಯತಕ್ಕದ್ದು. ಇಲ್ಲವಾದಲ್ಲಿ ಏನಾ ದರೂ ಸಬೂಬು ಹೇಳಿ, ಶಕುನ ಸರಿಬರಲಿಲ್ಲವೆಂತಲೋ, ಊರಿಗೆ ತುರ್ತುರಿ ಯಿಂದ ಹೋಗಿಬರುವುದಿದೆಯೆಂತಲೋ, ಕೂಡಲೇ ಮಾತು ನಿಲ್ಲಿಸಿ ಇಲ್ಲಿಗೆ ಹೊರಟು ಬನ್ನಿ. ಇಂದ್ರಪ್ರಸ್ಥದ ಕಥೆ ನಿಜ ಮಹಾಭಾರತವಾಗಿಯೇ ಇರುವಂತಿದೆ. ಯಾವ ಹುತ್ತದಲ್ಲಿ ಯಾವ ಹಾವೋ! ಯಾರು ಕಂಡ ವರು! ಸದ್ಯ, ದೇವರು ಅಯೋಗ್ಯ ಸಂಬಂಧ ತಪ್ಪಿಸಿದ. ಯಾವ ಕಾರಣದಿಂದಲೂ ಈ ಪತ್ರದ ಒಕ್ಕಣೆ ಬಹಿರಂಗವಾಗದಂತೆ ಎಚ್ಚರ ವಹಿಸಿ

ಕಾರ್ಯ ನಿರ್ವಹಣೆ ಮಾಡಿಕೊಂಡು ಬರತಕ್ಕದ್ದು. ಇನ್ನೊಂದು ಮಾತೂ ಇದೆ. ಮಗಧದ ಹಿಂದಿನ ದೊರೆ ಮಹಾಪದ್ಮ, ರಾಜ್ಯವಿಸ್ತರಣೆಯ ಆಸೆ ಯಿಂದ ಇಂದ್ರಪ್ರಸ್ಥದ ಮೇಲೆ ದಂಡೆತ್ತಿ ಹೋಗಿ ಇಂದ್ರವರ್ಮನ ತಂದೆ ಯನ್ನು ಕೊಂದು, ರಾಜ್ಯವನ್ನು ಅಧೀನ ಮಾಡಿಕೊಂಡಿದ್ದನಷ್ಟೆ! ಈಗ ಪರಮಲೋಭಿಗಳಾದ ನಂದರಿಗೆ ಇಂದ್ರವರ್ಮ ಕೇವಲ ಅಧೀನನಾಗಿದ್ದರೆ ಸಾಲದಂತೆ! ಅವನನ್ನೂ ಸಂಹರಿಸಿ, ರಾಜ್ಯವನ್ನು ತಾವೇ ನೇರ ಆಳಲು ಬಯಸಿ, ಮಗಧಕ್ಕೇ ಸೇರಿಸಿಕೊಳ್ಳುವರಂತೆ. ಮುಗ್ಧನಾದ ರಾಜಕುಮಾರ ನನ್ನು ವಂಚಿಸಿ, ಬೆನ್ನಿಂದ ಇರಿಯುವ ಸಂಚೊಂದನ್ನು ಅಮಾತ್ಯ ರಾಕ್ಷಸ ಸಮರ್ಥವಾಗಿ ನಿರೂಪಿಸುತ್ತಿರುವನಂತೆ. ಇದೇನಾದರೂ ಕೈಗೂಡಿದರೆ, ಮಗಧದ ಕಣ್ಣು ನಮ್ಮ ಸಂಪದ್ಭರಿತ ದೇಶದತ್ತ ಬೀಳುವುದು ಖಂಡಿತ. ಇದಾಗ ಬಾರದೆಂದೇ ಇಂದ್ರವರ್ಮ ದೊರೆಯನ್ನು ನಮ್ಮ ಅಳಿಯನನ್ನಾಗಿಸಿ ಕೊಳ್ಳುವ ಯತ್ನದಲ್ಲಿ ತಮ್ಮನ್ನು ಕಳುಹಿದ್ದೆವು. ದೈವ ಯತ್ನದಲ್ಲಿ ಬೇರೆಯೇ! ಒಳ್ಳೆಯದು, ನೀವು ಬೇಗ ಬರಬೇಕು. ಇತಿ ನಿರ್ದೇಶನದೊಂದಿಗೆ ಪರ್ವತೇಶ ಮಹಾರಾಜರು."

ಪತ್ರವನ್ನು ಓದಿಸಿಕೇಳಿ ಇಂದ್ರವರ್ಮ ಕಿಡಿ ಕಿಡಿಯಾದ! "ಮಗಧದ ನಂದರು ಇಷ್ಟು ನೀಚರಿರುವರೆಂದು ನಾನು ಭಾವಿಸಿರಲಿಲ್ಲ! ತಮ್ಮ ಕಳಂಕ ವನ್ನು ನಮ್ಮ ಮೇಲೇಕೆ ಆರೋಪಿಸಬೇಕು? ಒಂದು ಒಳ್ಳೆಯ ಸಂಬಂಧ ನಮಗೆ ದೊರಕುವುದರಲ್ಲಿದ್ದುದನ್ನು ಈ ನೀಚರು ಹೀಗೆ ತಪ್ಪಿಸುವುದೇ? ನಮ್ಮ ರಾಜ್ಯವನ್ನು ಅಧೀನ ಮಾಡಿಕೊಂಡದ್ದಕ್ಕೆ ತೃಪ್ತಿಯಿಲ್ಲದೆ ಈಗ ನಮ್ಮನ್ನು ಕೊಂದು ರಾಜ್ಯವನ್ನೇ ಅಪಹರಿಸುವ ಯತ್ನವೋ? ನೋಡಿ ಬಿಡೋಣ! ನಮ್ಮ ಸೈನ್ಯಗಳೂ ಸಿದ್ಧವಿರಲಿ. ಪರ್ವತೇಶ್ವರರು ಮಗಧ ದತ್ತ ದಂಡೆತ್ತಿ ಬರುವ ಸುದ್ದಿಯುಂಟು. ನಮ್ಮ ದೇಶದಲ್ಲಿ ಹಾಯದೆ ಮಗಧಕ್ಕೆ ಅವರು ಮುಟ್ಟುವಂತಿಲ್ಲ. ಅತ್ತ ನಂದರೂ ನಮ್ಮ ಸಹಾಯ ವಿಲ್ಲದೆ ಪರ್ವತೇಶ್ವರರನ್ನು ಎದುರಿಸಲಾರರು! ದೈವ ನಮಗೂ ಒಂದು ಒಳ್ಳೆಯ ಅವಕಾಶವನ್ನೇ ನೀಡಿತು. ನಾವು ಈ ಸುಸಂದರ್ಭದ ಸದುಪ ಯೋಗ ಮಾಡಿಕೊಂಡು ನಮ್ಮ ವಂಶದ ಶುದ್ಧತೆಯನ್ನೂ, ಧವಳ ಕೀರ್ತಿ

ಯನ್ನೂ ಎತ್ತಿ ಹಿಡಿದು, ಸ್ವಗೌರವವನ್ನು ರಕ್ಷಿಸಿಕೊಳ್ಳುವುದಲ್ಲದೆ ಆರ್ಯ ಸಂಸ್ಕೃತಿಯ ಹಿರಿಮೆಯನ್ನೂ ರಕ್ಷಿಸುವುದಿದೆ. ನಂದಹಜಾಮರ ಕೊಬ್ಬು ಹೆಚ್ಚಾಯಿತು! ಅವರನ್ನು ಶಿಕ್ಷಿಸಲು, ಇದೇ ಸಮಯ!! ಪರ್ವತೇಶ ನಮ್ಮ ಸಂಬಂಧವನ್ನು ಬೆಳೆಸಿದರೆ ಸಂತೋಷ. ಹಾಗಿಲ್ಲವಾದರೂ ಅವನ ಸಹಾಯವಂತೂ ಈಗ ನಮಗೆ ಅತ್ಯವಶ್ಯ. ಅದು ತಾನೇ ಒದಗಿ ಬರುತ್ತಲೂ ಇದೆ. ಆದುದರಿಂದ ಈ ಪತ್ರವನ್ನು ಮುಂಚಿನಂತೆಯೇ ಮೊಹರು ಕೆಡದಂತೆ, ನಾವು ಓದಿರುವ ಸೂಚನೆ ನಿಯೋಗಿಗೆ ತಿಳಿಯದಂತೆ ಅವರಿಗೆ ತಲುಪಿಸಿ, ಅವರನ್ನೇ ಇತ್ತ ಕರೆಸಿ. ನಾವೇ ಉತ್ತರಿಸುತ್ತೇವೆ" ಎಂದು ದೊರೆ ಆಜ್ಞಾಪಿಸಿದ.

ಚಾರರು ಪತ್ರವನ್ನೊಯ್ದು ಕಮಲಾಪೀಡನಿಗೆ ತಲುಪಿಸಿ; ''ನಿಮ್ಮ ಚಾರನೊಬ್ಬ ಅವಸರದಲ್ಲಿ ಬಂದಿರುವನಂತೆ ಅವನ ಕೈಯ್ಯಲ್ಲಿದ್ದ ಪತ್ರ ಇದು. ರಾಜ ಮರ್ಯಾದೆಯರಿಯದೆ ಬಾಯಿಗೆ ಬಂದಂತೆ ಹರಟುತ್ತಾ ನಮ್ಮ ರಾಜಕುಮಾರನನ್ನು ಚಾವಡಿಯ ನಡು ಬೀದಿಯಲ್ಲಿ ಹೀಯಾಳಿಸಿದ್ದರಿಂದ ಅವನನ್ನು ದಂಡಿಸಬೇಕಾಯಿತು. ಇನ್ನೊಮ್ಮೆ ಇಂಥವನನ್ನು ಇತ್ತ ಕಳುಹಬಾರದು. ನಿಮಗೆ ಅಪೇಕ್ಷೆಯಾದರೆ, ಕಹಿ ಪ್ರಸಂಗ ಮತ್ತೆ ಏರ್ಪಡುವುದಿಲ್ಲವಾದರೆ ಅವನನ್ನೂ ಬಿಡುಗಡೆ ಮಾಡುವೆವು." ಎಂದರು.

ಕಮಲಾಪೀಡ ದಿಗ್ಭ್ರಾಂತಿಯಾದವನಂತೆ ನಟಿಸಿದ! "ಅವನನ್ನು ಬಿಡುಗಡೆ ಮಾಡಿ ಇಲ್ಲಿ ಕರೆತನ್ನಿ! ಏನು ಅವಸರದ ರಾಜಕಾರಣವೋ, ತಿಳಿಯದೆ ಮಾತಾಡಬೇಕಿತ್ತೇ? ಅವನನ್ನು ಕ್ಷಮಿಸಿ" ಎನ್ನುತ್ತಾ ಪತ್ರವನ್ನು ಎತ್ತಿಕೊಂಡು ಓದಿದವನಂತೆ ಮಾಡಿ, ಆಕಾಶವೇ ಕಳಚಿ ತಲೆಯ ಮೇಲೆ ಬಿದ್ದವನಂತೆ ನಟಿಸಿದ. ಬೆಳಗ್ಗೆ ಬಹು ಹೊತ್ತಾದರೂ ಅರಮನೆಯತ್ತ ಹೋಗಲಿಲ್ಲ. ತಲೆನೋವಾಗಿದೆಯೆಂದೂ, ನೋವು ನಿವಾರಿಸಿಕೊಂಡು ಬರುವುದಾಗಿಯೂ ಸಬೂಬು ಹೇಳಿ ಕಳುಹಿದ. ಸೂರ್ಯ ಮೇಲೇರುತ್ತಿದ್ದ.

  

ಅಮಾತ್ಯ ರಾಕ್ಷಸನ ದೂತನೊಬ್ಬ ಅದೇ ವೇಳೆಗೆ ನಗರ ಸಂಭ್ರಮಗಳಿಂದ ಅರಮನೆಯತ್ತ ಬಂದುದನ್ನು ಕಮಲಾಪೀಡ ಚಾರರ ಮುಖಾಂತರ ಅರಿತ. ಏನು ರಾಜ ಕಾರಣವಿದ್ದೀತೆಂಬುದು ಅವನಿಗೆ ಸುಲಭವಾಗಿಯೇ ತಿಳಿಯಿತು. ಆದರೂ ಗೂಢಚಾರರನ್ನು ಸಮಾಚಾರ ತರುವಂತೆ ಹೇಳಿದ. ಪರ್ವತನ ಗೂಢಚಾರರು ಮೊದಲೇ ಇಂದ್ರಪ್ರಸ್ಥದಲ್ಲಿದ್ದರು. ಅವರು ನಡೆದುದನ್ನು ರಾಯಭಾರಿಗೆ ತಿಳುಹಿದರು. ನಡೆದುದು ಇಷ್ಟು. ರಾಕ್ಷಸ ದೂರಾಲೋಚನೆಯಿಂದ ಪತ್ರವೊಂದನ್ನು ಬರೆಸಿ ಕಳುಹಿದ್ದ. ಅದರ ಸಾರ ಇಷ್ಟು. "ಮಗಧದ ಅಧೀನನಾದ ಇಂದ್ರವರ್ಮ ಕೂಡಲೇ ಮಹತ್ವದ ರಾಜ್ಯಕಾರ್ಯಾಲೋಚನೆಯೊಂದಕ್ಕಾಗಿ ಪಾಟಲೀಪುತ್ರಕ್ಕೆ ಬರತಕ್ಕದ್ದು. ಇಲ್ಲವಾದರೆ ಆಪ್ತಮಂತ್ರಿಯನ್ನಾದರೂ ಕಳುಹಬೇಕು. ಶತ್ರುಗಳ ವಂಚನೆಗೆ ಬಲಿಯಾಗಬಾರದು ! ಇಂದ್ರಪ್ರಸ್ಥದ ಪಶ್ಚಿಮದ ಗಡಿಯನ್ನು ಸುರಕ್ಷಿತವಿರಿಸಲು ಸೈನ್ಯವನ್ನು ನಿಯಮಿಸಿ ಸುತ್ತ ನಿಲ್ಲಿಸತಕ್ಕದ್ದು. ಸೈನ್ಯದ ಕೊರತೆಯಿದ್ದರೆ ನಂದಸೈನ್ಯ ಕೂಡಲೇ ರಕ್ಷಣೆಗೆ ಧಾವಿಸಿ ಬರುವುದು. ಯುದ್ಧದ ವೆಚ್ಚಕ್ಕೆ ಹೇಗಾದರೂ, ಹೆಚ್ಚು ತೆರಿಗೆಗಳನ್ನು ವರ್ತಕರ ಮೇಲೆ ವಿಧಿಸಿಯಾದರೂ, ಹಣಕೂಡಿಸಬೇಕು. ದೇವಾಲಯದ ಸಂಪತ್ತು ಇಂದ್ರಪ್ರಸ್ಥರಾಜ್ಯದಲ್ಲಿ ಅಪಾರವಾಗಿದೆಯಷ್ಟೆ. ಆ ಸಂಪತ್ತು ಈಗ ರಾಜ್ಯದ ರಕ್ಷಣೆಗೇ ಉಪಯೋಗವಾಗಲಿ. ದೇವಾಲಯದ ಬೊಕ್ಕಸವನ್ನು ಯುದ್ಧಾನಂತರ ತುಂಬಬಹುದು. ಪರ್ವತ ರಾಜ್ಯದ ಕಡೆಯಿಂದ ಇಂದ್ರವರ್ಮನನ್ನು ಒಲಿಸಿಕೊಳ್ಳಲು ಯತ್ನ ನಡೆಯಬಹುದು. ಕನ್ಯಾಪ್ರಸ್ತಾಪವೇ ಬಂದರೂ ಬಂದೀತು! ಇಂದ್ರವರ್ಮ ಅದಕ್ಕೆ ಮರುಳಾಗಬಾರದು. ಯಾವುದಕ್ಕೂ ಕೂಡಲೇ ಅವನು ಪಾಟಲೀಪುತ್ರಕ್ಕೆ ಬಂದು ಅಮಾತ್ಯನೊಡನೆ ಆಲೋಚಿಸುವುದು ಉಭಯತರಿಗೂ ಕ್ಷೇಮ. ಅವನು ಬಾರದಲ್ಲಿ, ರಾಕ್ಷಸನೇ ಇತ್ತ ಬಂದಾನು! ಸೈನ್ಯವೂ ಬಂದೀತು. ಮುಂದೆ ಏನು ಬೇಕಾದರೂ ಆದೀತು !" ಎಂದು.

ಇಂದ್ರವರ್ಮ ಬೆಚ್ಚಿದ! ಪತ್ರದ ಧ್ವನಿ, ಒಕ್ಕಣೆಗೆ ಸಿಡಿಮಿಡಿಗುಟ್ಟಿದ. ಆ ಹಜಾಮನ ಮಕ್ಕಳು ತನಗೆ ಹೀಗೆ ಬೆದರಿಕೆ ಹಾಕುವುದೇ !

ಎಂದು ಆತ್ಮಗೌರವದ ಉಲ್ಲಂಘನೆಯಿಂದ ನೊಂದ. ಮಂತ್ರಿಯ ಮುಖ ನೋಡಿದ. ಮಂತ್ರಿ. ಮಗಧದ ರಾಜದೂತನನ್ನು ವಿಶ್ರಾಂತಿಗೆ ಕಳುಹಿ, ಉತ್ತರ ಬರೆದು ಕೊಡುವುದಾಗಿ ಹೇಳಿದ. ಕಮಲಾಪೀಡನನ್ನು ಕೂಡಲೇ ಕರೆತನ್ನಿರೆಂದು ಅರಮನೆಯ ದೂತರಿಗೆ ಹೇಳಿದ.

ಈ ಸಂಧಿಯನ್ನು ಕಾಯುತ್ತಿದ್ದ ಕಮಲಾಪೀಡ ವೇಗವಾಗಿ ಅರ ಮನೆಗೆ ಬಂದ. "ಕುಮಾರರಿಗೆ ಅಸ್ವಸ್ಥವೋ! ಕಾರ್ಯದ ಭಾರ ಹೆಚ್ಚಾ ಯಿತೋ? ಮುಖ ದುಗುಡದಲ್ಲಿರುವಂತಿದೆ! ನಮ್ಮಿಂದ ಏನಾದರೂ ಮನಸ್ಸಿಗೆ ಒತ್ತಡವಾಯಿತೋ ?" ತಿಳಿಸಬೇಕೆಂದ.

ಮಂತ್ರಿಯೊಡನೆ ಮಾತಾಡಿಕೊಂಡಿದ್ದಂತೆ ರಾಜಕುಮಾರನೇ ಹೀಗೆಂದ; "ನಿಯೋಗಿಗಳೇ! ಇದೀಗ ಮಗಧದ ದೂತ ಬಂದಿದ್ದಾನೆ. ಚಾಣಕ್ಯ ಚಂದ್ರಗುಪ್ತರು ಪರ್ವತೇಶನ ಸೈನ್ಯದೊಡನೆ ಮಗಧಕ್ಕೆ ಮುತ್ತಿಗೆ ಹಾಕುವ ಸಂಭವವನ್ನು ಅವರು ನಿರೀಕ್ಷಿಸುತ್ತಿರುವಂತಿದೆ. ನನ್ನನ್ನು ಮಗಧರಾಜನಿಗೆ ಕೂಡಲೇ ಬರುವಂತೆ ಹೇಳಿದ್ದಾರೆ. ಅವರಿಗೆ ಸೈನ್ಯ ರಕ್ಷಣೆ, ಧನಸಹಾಯಗಳನ್ನೂ ನಾವು ಒದಗಿಸಬೇಕಂತೆ ದೇವಾಲಯಗಳ ಹಣವಾದರೂ ಸರಿಯಂತೆ! ನೀವು ಕನ್ಯಾಪ್ರಸ್ತಾಪವನ್ನು ತರುತ್ತಿರುವ ವಿಷಯವೂ ಅವರಿಗೆ ತಿಳಿದಿರುವಂತಿದೆ !! ನಾವು ಈ ವಿಷಯದಲ್ಲಿ ಮುಂದು ವರೆಯಬಾರದೆಂದು ಅವರ ಕಡುಸೂಚನೆ; ಬೆದರಿಕೆಯನ್ನೂ ಒಡ್ಡಿದ್ದಾರೆ. ಅದರಿಂದ ಮನಸ್ಸು ಖಿನ್ನವಾಯಿತು. ಅದಿರಲಿ, ನಿಮ್ಮ ಅವಸರದ ಚಾರ ರಾತ್ರಿ ತಂದ ಸಮಾಚಾರವೇನು ?" ಎನ್ನುತ್ತ ಕಪಟವಾಗಿ ಕುಮಾರ ನಕ್ಕ.

ಕಮಲಾಪೀಡ : "ಕುಮಾರ! ನಿಮ್ಮಲ್ಲಿ ಮುಚ್ಚುಮರೆಯೇನು ? ರಾಕ್ಷಸ ಇತ್ತ ನಿಮಗೆ ಈ ವಿವಾಹದಲ್ಲಿ ಪ್ರವರ್ತಿಸದಿರುವಂತೆ ಬೆದರಿಕೆ ಒಡ್ಡಿ ದಂತೆ, ಅತ್ತ ನಮಗೂ ಸಮಾಚಾರ ತಲುಪುವಂತೆ, ಅನ್ಯೋಕ್ತಿಯಿಂದ ತಾವು ಶುದ್ಧವಂಶ ಕ್ಷತ್ರಿಯರಲ್ಲವೆಂದು ಅಭಿಪ್ರಾಯ ಬರುವಂತೆ ಏರ್ಪಡಿಸಿ, ಅದು ಪರ್ವತೇಶ್ವರರ ಕಿವಿಯಲ್ಲಿ ಬಿದ್ದ ಕೂಡಲೇ, ಈ ಸಮಾಚಾರವನ್ನು

ನಿಧಾನವಾಗಿ ಪರಿಶೀಲಿಸಿ ಮುಂದುವರೆಯೋಣವೆಂದು, ನನ್ನನ್ನು ಕೂಡಲೇ ವಾಪಸಾಗುವಂತೆ ಬರೆದು ಕಳುಹಿದ್ದಾರೆ. ಅಷ್ಟೆ ! ಈ ವಿವಾಹವಾದರೆ ಮಗಧಕ್ಕೆ ಅಪಾಯವೆಂಬುದು ರಾಕ್ಷಸನ ಗ್ರಹಿಕೆಯಾಗಿರುವಂತಿದೆ. ನಮ್ಮ ದೊರೆಗಳ ಮೇಲೆ ತಾವು ಕೋಪಿಸಬಾರದು."

ಇಂದ್ರವರ್ಮ : "ರಾಯಭಾರಿಗಳೇ! ನೆನ್ನೆ ಸಂಜೆ ನಿಮ್ಮ ಮೊದಲಿನ ಪ್ರಸ್ತಾಪಕ್ಕೆ ಸಮ್ಮತಿ ಪತ್ರ ಬರೆದುಕೊಡುವುದಾಗಿ ಹೇಳಿದ್ದೆವಷ್ಟೆ! ಈಗ ಸಂದರ್ಭವೇ ಬದಲಾದ ಹಿನ್ನೆಲೆಯಲ್ಲಿ ಈ ಇನ್ನೊಂದುತ್ತರವನ್ನೊಯ್ಯಿರಿ: ನಾವು ಶುದ್ಧ ಕ್ಷತ್ರಿಯರೋ ಇಲ್ಲವೋ ಎಂಬುದನ್ನು ಇನ್ನು ಮುಂದೆ ನಡೆಯುವ ಯುದ್ಧದಲ್ಲಿ ತೋರಿಸಿ ಕೊಡುತ್ತೇವೆ. ಪರ್ವತೇಶ್ವರರು ನಮ್ಮ ಪರಾಕ್ರಮವನ್ನು ಕಂಡಮೇಲೆಯೇ ಅದನ್ನು ನಿರ್ಣಯಿಸಿಕೊಳ್ಳಲಿ. ನಮಗೆ ಶುದ್ಧ ಕ್ಷತ್ರಿಯ ವಂಶದ ಹೆಣ್ಣು ದೊರಕದ ಸಂಶಯವೂ ಇಲ್ಲ. ಭರತ ಭೂಮಿಯಲ್ಲಿ ಅಂಥ ವಂಶಗಳಿನ್ನೂ ಇವೆ. ಮೇಲಾಗಿ ಈಗ ವಿವಾಹದ ಸಂಭ್ರಮ ಕಾಲಕ್ಕಿಂತಲೂ ಯುದ್ಧವಾರಿಯ ಔತಣದ ಕಾಲ ಬಂದೊದಗಿದೆ. ನಾವೇ ಮಗಧದೊಡನೆ ಯುದ್ಧಕ್ಕಿಳಿದು ಸೇಡು ತೀರಿಸಿಕೊಳ್ಳುವುದೇ ? ಅಥವಾ ನಿಮ್ಮ ಅರಸರು ಬರುವ ತನಕ ಕಾಯುವುದೇ ? ಎಂಬುದೇ ಪ್ರಕೃತದ ವಿಚಾರ. ರಾಕ್ಷಸನ ಬೆದರಿಕೆ ಕೈಗೂಡಲು ಎಷ್ಟು ಕಾಲವೋ ತಿಳಿಯದು." ಎನ್ನುತ್ತಾ ಮಂತ್ರಿ ಅಗ್ನಿದತ್ತಶರ್ಮನ ಮುಖ ನೋಡಿದ.

ಅಗ್ನಿದತ್ತಶರ್ಮ ಕಮಲಾಪೀಡನನ್ನು ಕೊಂಚ ರಹಸ್ಯಕ್ಕೆ ಕರೆದು ಕೊಂಚ ನಿಮಿಷ ಇಬ್ಬರೂ ಮಾತಾಡಿ ಕೊಂಡ ನಂತರ ಕಮಲಾಪೀಡ ದೊರೆಗೆಂದ "ಕುಮಾರ ! ನಾನು ನಿಮಗೆ ಅನ್ಯದೇಶದ ರಾಯಭಾರಿಯಾದರೂ, ನನ್ನ ದೊರೆಯಂತೆ ನಾನೂ ನಿಮ್ಮ ಹಿತೈಷಿಯಾಗೇ ಬಂದಿರುವೆ. ರಾಕ್ಷಸನ ಕಪಟ ಜಾಲಕ್ಕೆ ಇಬ್ಬರೂ ಬಲಿಯಾಗಿರುವಂತೆ ಇದ್ದೇವೆ. ಪರೀಕ್ಷಿಸುವ.

ಸದ್ಯ ನೀವು ದುಡುಕದೆ ಜಾಣತನದಿಂದ ಸಂದರ್ಭವನ್ನು ನಿರ್ವಹಿಸುವು ದೊಳ್ಳೆಯದು. ನೀವಾಗಿಯೇ ಎರಗಿ ಮಗಧದ ಅಪಾರ ಸೈನ್ಯಕ್ಕೆ ಬಲಿ ಯಾಗುವುದು ವ್ಯರ್ಥ ಸಾಹಸವಾದೀತು. ನಮ್ಮ ಸೈನ್ಯ ಹೊರಡುವ ದಿನ ಮಾತ್ರ ಕಾಯುತ್ತಾ, ನನ್ನ ಬರವಿಗಾಗಿ ನಿಂತಿದೆ. ಅಷ್ಟರೊಳಗೆ ಈ ವಿವಾಹವಾಗಿದ್ದರೆ ಚೆನ್ನಿರುತ್ತಿತ್ತು. ಇಬ್ಬರಿಗೂ ಆತಂಕವಾದದ್ದು ಒಳ್ಳೆ ಯದೇ ಆಯಿತು. ಬಹಳವೆಂದರೆ ಇನ್ನು ಹತ್ತು-ಹನ್ನೆರಡು ದಿನಗಳಲ್ಲಿ ನಮ್ಮ ಸೈನ್ಯ ಇತ್ತ ಬರುವುದು ಖಂಡಿತ. ಅದರೊಳಗೆ ತಾವು ಮಗಧದ ರಾಯಭಾರಿಗೆ ಏನಾದರೂ ಸಬೂಬು, ನಂಬುವಂಥದ್ದು ಹೇಳಿ, ಆ ಕಡೆಯ ಕುತ್ತನ್ನು ತಪ್ಪಿಸಿಕೊಳ್ಳಿ. ನಮ್ಮ ಅರಸರಿಗೆ ನೀವು ಸಹಾಯಾರ್ಥಿಗಳೆಂದು ತಿಳಿಸಲೇ ? ತಟಸ್ಥರೆಂದು ತಿಳಿಸಲೇ ? ಏನು ಹೇಳಲಿ ?"

ಅಗ್ನಿದತ್ತ : "ತಾವು ಇದೇ ಸಮಯಕ್ಕೆ ಇಲ್ಲಿರುವಂತಾದುದು ನಮಗೆ ಭಾಗ್ಯ. ನಾವು ಮಗಧದ ಆಳರಸರ ಬೇಗೆಯಲ್ಲಿ ನೊಂದಿದ್ದೇವೆ. ಮೊದಲು ಪರಿಭವ. ಹಿಂದಿನ ಅರಸರ ಮೃತ್ಯು. ಈ ಮುನ್ನ ನಿರಪರಾಧಿ ಗಳಾದ ಕಾತ್ಯಾಯನರೆಂಬ ನಮ್ಮ ರಾಜ್ಯದ ಬ್ರಾಹ್ಮಣೋತ್ತಮನನ್ನು ಮಗಧದ ಚಾರರು ನಿಗೂಢವಾಗಿ ಹಿಂಸಿಸಿ ಕೊಂದ ಸಮಾಚಾರವೂ ಬಂದಿತು. ಮಧುರೆಯ ಸಂಕರ್ಷಣಾಲಯದ ಐಶ್ವರ್ಯವನ್ನೂ ಲೂಟಿ ಮಾಡಿದರು. ಮಗಧರ ಅವೈದಿಕ ನಿಲುವು ಸ್ಪಷ್ಟವಾಗಿದೆ. ಇದು ತಮ್ಮ ರಾಷ್ಟ್ರವೇ ಎಂಬಂತೆ ನಿರ್ಭೀತರಾಗಿ ಅವರು ಇಲ್ಲಿ ದಿನಾ ಒಂದು ಅಕೃತ್ಯವನ್ನು ನಡೆಸ ಲಾರಂಭಿಸಿದ್ದಾರೆ. ಆದ್ದರಿಂದ ನಾವು ಪರ್ವತೇಶ್ವರರಿಗೆ ಸಹಾಯ ಮಾಡಲು ನಿರ್ಧರಿಸಿದ್ದೇವೆ. ಯುದ್ಧದಲ್ಲಿ ಗೆದ್ದಾಗ ನಮಗೆ ಈ ಪೂರ್ವದ ಸ್ವಾತಂತ್ರ್ಯ ದೊರೆತರೂ ಸಾಕು. ಈ ನಿರೂಪವನ್ನು ನಿಮ್ಮ ಒಡೆಯ ರಿಗೆ ತಲುಪಿಸುವುದು. ಸೈನ್ಯ ಹೊರಟ ಕೂಡಲೇ ತಿಳಿಸಬೇಕು'' ಎನ್ನುತ್ತಾ ಇಂದ್ರಪ್ರಸ್ಥದ ಹೊರಗಡಿಯಲ್ಲಿ ಸೈನ್ಯ ಪ್ರವೇಶಕ್ಕೆ ಎಲ್ಲೆಲ್ಲಿ ಅವಕಾಶವೆಂಬು ದನ್ನೂ, ಸೈನ್ಯ ಸ್ವಾಗತಕ್ಕೆ ತಮ್ಮ ಏರ್ಪಾಡು ಹೇಗಿರುವುದೆಂಬುದನ್ನೂ ವಿವರಿಸಿದ.

ಕಮಲಾಪೀಡನಿಗೆ ಅಮಿತಾನಂದವಾಯಿತು. ಚಾಣಕ್ಯ ಹೇಳಿದ ಕಾರ್ಯ ಸುಗಮವಾಗಿ ಆದದ್ದು ಒಂದು ಕಡೆ! ಅದಕ್ಕಿಂತ ಮುಂದಿನ ಈ ಅನಿರೀಕ್ಷಿತ ಘಟನೆಯಿಂದ ಇಂದ್ರವರ್ಮ ಮನಬಿಟ್ಟು ಸಹಾಯಕೊಟ್ಟು ಹೇಳಿದ ಸಂದೇಶ ಇನ್ನೊಂದು ಕಡೆ! ರಾಕ್ಷಸನ ಯತ್ನ ಎತ್ತ, ಏನು ಎಂಬುದು ತಿಳಿದ ಸಂತೋಷ ಮತ್ತೊಂದು ಕಡೆ. ಹಿಗ್ಗುತ್ತಾ ಪುರುಷ ಪುರದತ್ತ ಕುದುರೆಯನ್ನೋಡಿಸಿದ, ಅನುಚರರೊಡನೆ.

ಮಗಧದ ಚಾರನಿಗೆ ಕರೆಸಿ ಅಗ್ನಿದತ್ತನೊಡನೆ ರಾಜಕುಮಾರ ಓಲಗ ಕೊಟ್ಟು ಹೀಗೆಂದ: "ನಂದರಾಜಕುಮಾರರಿಗೆ ಹೀಗೆ ತಿಳಿಸಬೇಕು. ಪರ್ವತನ ಪ್ರಬಲ ಸೈನ್ಯ ಇನ್ನೇನು ಇತ್ತಲೇ ಬರುವಂತಿದೆ. ರಾಜಧಾನಿ ಬಿಟ್ಟು ನಾವು ಮಗಧಕ್ಕೆ ಈಗ ಬರುವಂತಿಲ್ಲ. ನೀವು ಹೇಳದೆಯೇ ನಿಮ್ಮ ಕಾರ್ಯದಲ್ಲಿ ನಾವು ತತ್ಪರರಾಗಿ ಪಶ್ಚಿಮದ ಗಡಿಗಳನ್ನು ರಕ್ಷಿಸುತ್ತಿದ್ದೇವೆ. ಹಣ ಸಂಗ್ರಹವೂ ವಿಲಂಬವಾಗುವುದು. ನಮ್ಮ ದೇವಾಲಯಗಳನ್ನು ಯಾರೋ ದಿನಾ ಕೊಳ್ಳೆ ಹೊಡೆಯುತ್ತಿರುವರು. ಅದರ ಮೇಲೆ ನಾವೇ ಉಳಿದುವುಗಳ ಹಣವನ್ನು ಯುದ್ಧಕ್ಕೆಂದು ದುರುಪಯೋಗಿಸಿದರೆ, ಜನ ಸಿಡಿದೇಳುವರು. ಕೊಳ್ಳೆಯೂ ನಮ್ಮ ಕೆಲಸವೆನ್ನುವರು. ಮಗಧದಿಂದಲೇ ಇತ್ತ ನಮ್ಮ ಖರ್ಚಿಗೆ ಕೊಂಚ ಹಣ ಸಂದರೆ ಒಳ್ಳೆಯದು. ನಾವು ಶೀಘ್ರ ವಾಗಿ ಕಾರ್ಯೋನ್ಮುಖರಾಗಲು ಸಾಧ್ಯವಾಗುತ್ತದೆ. ಇಲ್ಲವಾದರೆ ವಿಲಂಬ ಅನಿವಾರ್ಯ. ನೀವು ನಾಲ್ಕು ದಿನ ಇಲ್ಲಿದ್ದು ಹೊರಡುವುದಾದರೆ ನಮ್ಮ ಸ್ಪಷ್ಟಸ್ಥಿತಿಯ ಚಿತ್ರ ಮೂಡುತ್ತದೆ. ಖಚಿತ ಸಮಾಚಾರ ಹೇಳಿ ಕಳು ಹಲೂ ಸಾಧ್ಯ."

ನಾಲ್ಕಾರು ದಿನ ಕಳೆದೇ ದೂತ ಮಗಧಕ್ಕೆ ಹೊರಟ. ಪಾಟಲೀ ಪುತ್ರಕ್ಕೇ ಆರನೆಯ ದಿನ ಸೇರಿದ. ಪರ್ವತನ ಸೇನೆ ಇತ್ತ ಹೊರಟಾಗಿತ್ತು! ರಾಕ್ಷಸನಿಗೆ ದೂತನ ವಿಲಂಬ ಕಾರಣ ತಿಳಿಯಲಿಲ್ಲ. ಬಂದು ಸೇರಿದ ದೂತ

ಹೀಗೆಂದ. ''ಬುದ್ಧಿ, ಇಂದ್ರವರ್ಮರು ಹೀಗೆಂದರು. (ವಿಷಯ ಹೇಳಿದ.) ಆದರೆ ಅವರ ಧ್ವನಿಯಲ್ಲಿ ಹೊಸ ದಿಟ್ಟತನವಿತ್ತು. ಹಳೆಯ ದೈನ್ಯ ಇರಲಿಲ್ಲ. ಆದರೂ ನಮಗೊದಗುವುದಾಗಿ ಹೇಳಿಕಳುಹಿದರು.'' ರಾಕ್ಷಸ ನಿಟ್ಟುಸಿರಿಟ್ಟು ''ಹೆಚ್ಚಿನ ಸಮಾಚಾರವೇನು ?'' ಎಂದ. ದೂತ ಯೋಚಿಸಿ, ''ನಾನು ಸೇರುವ ಮೊದಲೇ, ಪರ್ವತನ ರಾಯಭಾರಿ ಅಲ್ಲಿಗೆ ಬಂದಿದ್ದ.'' ಎಂದ. ರಾಕ್ಷಸ; ''ನಂದರೇ! ಕೆಲಸ ಕೆಟ್ಟಿತು! ಕೆಲಸ ಕೆಟ್ಟಿತು! ಚಾಣಕ್ಯ ಮನುಷ್ಯನಲ್ಲ !'' ಎಂದು ಕುಸಿದ!!



## ಹನ್ನೊಂದನೆಯ ಅಧ್ಯಾಯ

# ರಾಕ್ಷಸನ ಪ್ರತಿ-ತಂತ್ರ !

ರಾಕ್ಷಸನ ಮಾತು ನಂದರಿಗೆ ತಿಳಿಯಲಿಲ್ಲ! ಅಮಾತ್ಯ ವಿವರಿಸಿದ : ''ಆ ಚಾಣಕ್ಯನನ್ನು ನಾವು ಬಿಟ್ಟದ್ದು ತಪ್ಪೇ ಆಯಿತು. ಅತ್ತ ಯವನ ಸತ್ರಪರನ್ನು ಉಪಾಯದಿಂದ ಸಂಹರಿಸಿ, ಪಂಚನದವನ್ನು ಒಗ್ಗೂಡಿಸಿ, ಪರ್ವತೇಶನನ್ನು ಉತ್ತೇಜಿಸಿ, ಅವನ ಪುತ್ರರಿಗೆ ಸತ್ರಪಸ್ಥಾನ ಕೊಡಿಸಿ, ಯವನರಿಗೆ ಸೋತಿದ್ದ ಮಾಂಡಲಿಕ, ಸಾಮಂತ ಸೇನೆಗಳನ್ನೆಲ್ಲ ಒಗ್ಗೂಡಿಸಿ ಇತ್ತ ಬರುತ್ತಿದ್ದಾನಂತೆ. ಇಂದ್ರಪ್ರಸ್ಥದ ಇಂದ್ರವರ್ಮನನ್ನೂ ಒಳಹಾಕಿ ಕೊಂಡು ನಮ್ಮ ವಿರುದ್ಧ ಎತ್ತಿ ಕಟ್ಟಿ, ಮಗಧದ ಗಡಿಯವರೆಗೆ ಸೈನ್ಯ ನಿರಾತಂಕವಾಗಿ ಬರುವಂತೆ ಏರ್ಪಡಿಸಿದ್ದಾನೆ. ಅಯ್ಯೋ! ಆ ಸೈನ್ಯ ವನ್ನು ತಡೆಯುವ ಯಾವ ಅರಸರ ಬಲವೂ ಈಗ ಪಶ್ಚಿಮದತ್ತ ನಮಗಿಲ್ಲ ವಾಯಿತು. ದಕ್ಷಿಣದ ಕಳಿಂಗರು, ಪೂರ್ವದ ಕಾಮರೂಪದ ಅರಸುಬಲ,

ಪುಂಡ್ರಸೈನ್ಯ, ಕಾಶೀರಾಜನ ಬಲ ಇವು ನಮ್ಮತ್ತ ಇವೆ. ಕಾಣ್ವಾಯನ ನನ್ನು ನಮ್ಮ ಚಾರರು ಕೊಂದು ತಪ್ಪು ಮಾಡಿದರು. ಸಮಾಚಾರ ಸಂಗ್ರಹವಷ್ಟೇ ನಮ್ಮ ಗುರಿಯಾಗಿತ್ತು. ಚಾರರ ಅತಿಕ್ರಮಣದಿಂದಾದ ಅನರ್ಥವಿದು. ಸಂಕರ್ಷಣ ದೇವಾಲಯದ ನಾಶವೂ ಅಷ್ಟೇ. ನಮ್ಮ ವಿರುದ್ಧ ಅಪಪ್ರಚಾರ ಸಾಮಗ್ರಿಯಾಗಿ ಇದನ್ನು ಚಾಣಕ್ಯ ಬಳಸುವನು. ಕುರುದೇಶದ ಜನರ ಒಲವು ಮಗಧದ ವಿರುದ್ಧವೇ ಇದೆ! ಇನ್ನು ಚಿಂತಿಸಿ ಫಲವಿಲ್ಲ'' ಎನ್ನುತ್ತಾ ಮುಂದಿನ ಕಾರ್ಯಕ್ಕೆ ಸಿದ್ಧನಾದ.

ಆಪ್ತಚಾರನನ್ನು ಕರೆಸಿ, ಶಕಟಾಯನನ್ನು ಬರಮಾಡಿ, ಕೆಲವು ರಹಸ್ಯ ಪತ್ರಗಳನ್ನು ಬರೆಸುವುದರಲ್ಲಿ ತೊಡಗಿರುವಷ್ಟರಲ್ಲಿ, ಬಾಗಿಲಲ್ಲಿ ಜೀವ ಸಿದ್ಧಿ ಕಾಣಿಸಿಕೊಂಡ! ''ಇವನೇಕೆ ಈಗ ಬಂದ! ಇದು ಅಪಶಕುನ!!'' ಎಂದು ರಾಕ್ಷಸ ಚಿಂತಿಸಿ, ''ಆದರೇನು ಇವನು ಯತಿ; ಪರಮ ವಿರಕ್ತ ಬೇರೆ. ಇವನ ಧರ್ಮನಿಷ್ಠೆಯನ್ನೂ, ತಂತ್ರ ಮಂತ್ರ ಶಕ್ತಿಯನ್ನೂ ಈಗಾಗಲೇ ಪರೀಕ್ಷಿಸಿಯಾಗಿದೆ. ಇವನಿಂದೇನೂ ಕಾರ್ಯವಿಘಾತವಿಲ್ಲ'' ಎಂದು ನಿಶ್ಚಯಿಸಿ, ಅವನನ್ನು ಒಳಗೆ ಕರೆ ತರುವಂತೆ ಭಟರಿಗೆ ಆಜ್ಞೆ ಮಾಡಿದ.

''ಮೌನಿಗಳಾದ ನಮಗೆ ನಿಮ್ಮಲ್ಲಿ ಮಾತ್ರ ಮಾತುಂಟು, ಅಮಾತ್ಯರೆ! ಈಗ ವಾರಕಾಲದಿಂದ ದರ್ಶನವಿಲ್ಲವಾಗಿದೆ. ತಾವು ಸೌಖ್ಯವೇ? ಎಂದು ವಿಚಾರಿಸಿ ಹೋಗಲು ನಾವೇ ಬಂದಿರುವೆವು'' ಎಂದ ಜೀವಸಿದ್ಧಿ, ಆಸನದಲ್ಲಿ ಕುಳ್ಳಿರುತ್ತಾ ''ಜಿನೇಶ್ವರಾ!'' ಎನ್ನುತ್ತಾ, ಧ್ಯಾನಾ ಸಕ್ತನಾದ!

ರಾಕ್ಷಸ ಯೋಚಿಸಿದ: ''ರಹಸ್ಯಕಾರ್ಯ ಆಲೋಚಿಸುವಾಗ ಗಿಣಿಯೂ ಹತ್ತಿರವಿರಬಾರದೆನ್ನುವರು! ಇವನನ್ನು ಹೋಗೆನ್ನುವುದು ಹೇಗೆ? ಏನು ತಿಳಿದುಕೊಳ್ಳುವನು? ನಾವೇ ಹೊರಗೆ ಹೋದರೂ ಅಪಮಾನಿತನಾಗಿ ನಮ್ಮ ಮೇಲೆ ಕೋಪಗೊಂಡಾನು. ಇರಲಿ. ಲೋಕ ವ್ಯವಹಾರವನ್ನೇ ತ್ಯಜಿಸಿರುವ

ಈ ಅಲೌಕಿಕನಿಂದೇನು ಬಾಧೆ ಆದೀತು ?" ಎಂದೆಂದುಕೊಂಡು, ಶಕಟಾ ಯನನಿಗೆ ಹೀಗೆ ಹೇಳಿದ :

"ಮಿತ್ರನೇ! ನಮ್ಮ ದೇಶದ ಗೂಢಾಧಿಕಾರಿಗಳಾದ ಹಲವು ಮುಖ್ಯರು ಈಗಾಗಲೇ ನಮ್ಮ ಸಂಬಳದಲ್ಲಿರುತ್ತಾ, ಪರ್ವತನ ಅಧೀನದ ಸೇನಾ ನಾಯಕರಲ್ಲೂ, ಕಾಶ್ಮೀರದ ದೊರೆಯ ಸೇವೆಯಲ್ಲೂ, ಮಲಯ ಪತಿಯ ಊಳಿಗದಲ್ಲೂ, ಸಿಂಧುದೇಶದ ಸಾಮಂತರ ಬಳಿಯಲ್ಲಿಯೂ, ಕಾಂಭೋಜ, ಗಾಂಧಾರ, ಯವನಬೀಡಾರಗಳಲ್ಲಿಯೂ ಸೇರಿಕೊಂಡಿದ್ದು ವರ್ತಕ ವೇಷದಿಂದ ಆ ಪುಟ್ಟರಾಜರನ್ನೋಲೈಸುತ್ತಾ, ಆತ್ತಣ ಸಮಾಚಾರ ವನ್ನು ಇತ್ತಲೂ, ಇತ್ತಣ ಸೂಚನೆಗಳಿಂದ ಅತ್ತ ವರ್ತಿಸುತ್ತಲೂ ನಮ್ಮ ರಾಜಕಾರ್ಯೋಪಯುಕ್ತರಾಗಿರುತ್ತಾರೆ. ಪರ್ವತನ ಸೇನಾಪತಿಯಾದ ಕುಲೂತವರ್ಮನ ಬಳಿ ನಮ್ಮ ಧನಗುಪ್ತನೇ ಇದ್ದಾನೆ. ಮಲಯಾಧಿಪತಿ ಸಿಂಹನಾದನ ಬಳಿ ಜನದಾಸನಿದ್ದಾನೆ. ಕಾಶ್ಮೀರಪತಿಯ ಬಳಿ ನಯ ಸೇನ ಶ್ರೇಷ್ಠಿ ಇರುತ್ತಾನೆ. ಸಿಂಧುದೇಶಾಧಿಪತಿ ಸೇನಾನಿಯ ಬಳಿ ಮೋಹನ ದಾಸನೂ, ಪಾರಸೀಕ ಸೇನೆಯ ನಾಯಕನ ಬಳಿ ದಂತಿದುರ್ಗನೂ, ಗಾಂಧಾರಪತಿಯಲ್ಲಿ ಕೃಷ್ಣಲಾಲನೂ, ಕಾಂಭೋಜಾಧಿಪತಿಯ ಬಳಿ ಇಳಾ ಗುಪ್ತನೂ ವೇಷಾಂತರದಿಂದ, ನಾಮಾಂತರದಿಂದ ಹೀಗೆ ಸುಮಾರು ಒಂಭತ್ತು ಜನ ನಮ್ಮ ಗೂಢಕಾರ್ಯಕರ್ತರುಂಟು. ಈಗ ಮಿಂಚಿ ಹೋದ ಕಾರ್ಯವನ್ನು ಇವರ ಮೂಲಕ ಮಾಡಿಸಿದಲ್ಲದೆ, ಅಪಾರ ಪರ್ವತನ ಸೇನೆ ಯನ್ನು ನಾವು ಎದುರಿಸುವುದಶಕ್ಯ." ಎನ್ನುತ್ತಾ ಮತ್ತೆ ರಾಕ್ಷಸ ಜೀವ ಸಿದ್ಧಿಯತ್ತ ಹೊರಳಿ ನೋಡಿದ. ಗಾಢಧ್ಯಾನದಲ್ಲಿದ್ದಂತೆ ಜೀವಸಿದ್ಧಿ ಕಂಡ! "ವೃಥಾ ಇವನನ್ನು ಶಂಕಿಸಬಾರದು ! ಶಿವ, ಶಿವ" ಎನ್ನುತ್ತಾ ರಾಕ್ಷಸ ಮುಂದುವರೆದ;

"ಶಕಟಾಯನನೇ ! ಈಗ ಬರೆಸುವ ಪತ್ರದ ಒಂಭತ್ತು ನಕಲು ಗಳನ್ನು ಬೇಗ ಮಾಡಿ, ಬೇರೆ ಬೇರೆ ವಿಳಾಸಕ್ಕೆ ಸರಿಯಾಗಿ ಜೋಡಿಸಿ ತರ ಬೇಕು." ಎನ್ನುತ್ತಾ ಒಕ್ಕಣೆಯನ್ನು ಹೀಗೆ ಬರೆಸಿದ.

"ಸ್ವಾಮಿಭಕ್ತರಾಗಿರುತ್ತ ಅನ್ಯರಾಜರಲ್ಲಿ ವೇಷಾಂತರದಿಂದಿರುವ ನಮ್ಮ ಆಪ್ತ ಕಾರ್ಯವರ್ಗದ ಕಣ್ಮಣಿಯಾದ........ ಮಹಾಶಯರಿಗೆ ಈಗ ಇತ್ತಣಿಂದ ತಿಳಿಸುವ ಶುರ್ತು ಆಜ್ಞೆಯೇನೆಂದರೆ, ನೀವು ಯಾರನ್ನೋಲೈಸುತ್ತಿರುವಿರೋ ಆ ಒಡೆಯರು ಈಗ ಪರ್ವತೇಶನ ಸೈನ್ಯದಲ್ಲಿ ಕೂಡಿಕೊಂಡಿದ್ದು, ಇನ್ನೇನು ಮಗಧದತ್ತ ದಂಡೆತ್ತಿ ಬರಲಿರುವರು. ನಮಗಿರುವ ವೈರಿ, ಚಂದ್ರಗುಪ್ತನೇ ಮಾತ್ರ. ಏನಾದರೂ ಉಪಾಯದಿಂದ ನೀವು ನಿಮ್ಮ ಒಡೆಯರ ಮನಸ್ಸನ್ನು ಮುರಿದು ಸೈನ್ಯದಲ್ಲಿ ಕೂಡಿಕೊಳ್ಳದಂತೆ ಮಾಡಬೇಕು. ಹಣವಿದ್ದಲ್ಲಿ ಯಾವುದೂ ಅಸಾಧ್ಯವಲ್ಲ. ಎಷ್ಟು ಖರ್ಚಾದರೂ ಸರಿ. ಅವರೇ ಸಮಯ ನೋಡಿ, ಚಂದ್ರಗುಪ್ತನನ್ನು ಸಂಹರಿಸಿದರೂ ಸರಿಯೇ! ನೀವೇ ಉಪಾಯಗಳಿಂದ ಅದನ್ನು ಸಾಧಿಸಿದರೂ ಸರಿಯೇ! ಚಂದ್ರಗುಪ್ತನಿಗೆ ಯವನ ಯುವತಿಯೊಬ್ಬಳನ್ನು ಚಾಣಕ್ಯ ಗಂಟು ಹಾಕಿರುವನಂತೆ ! ಅವಳ ಮೂಲಕವೇ ಕುಮಾರನನ್ನು ಸಂಹರಿಸಿದರೂ ಸರಿಯೇ. ಇದಾಗದಿದ್ದರೆ, ನಿಮ್ಮ ಒಡೆಯರ ಸೈನ್ಯ, ಸಕಾಲಕ್ಕೆ ಪರ್ವತನಿಗೊದಗದಂತೆ ನಿಷ್ಕ್ರಿಯರಾಗುವಂತೆ, ಉಪಾಯದಿಂದ ಜಗಳವಾಡಿ ಹೋಗುವಂತೆ ಮಾಡಬೇಕು. ಅದೂ ಆಗದಿದ್ದರೆ, ಇಲ್ಲೇ ಇದ್ದೂ ಸಮಯದಲ್ಲಿ ಆಯುಧವೆತ್ತದಂತೆಯೋ, ಎತ್ತಿದರೂ ಪರ್ವತ ಸೈನ್ಯದತ್ತ ಎತ್ತುವಂತೆಯೋ, ಒಟ್ಟಿನಲ್ಲಿ ಹೇಗೋ ನಮಗೆ ಸಹಕಾರ ನೀಡುವಂತಾದರೆ, ಅವರನ್ನು ನಿರೀಕ್ಷೆಗೆ ಮೀರಿ ಸತ್ಕರಿಸಿ ಗೌರವಿಸಲಾಗುವುದು. ಅವರ ಇಂಗಿತವನ್ನರಿತು ನೀವೇ ಅವರಿಗೆ ಬೇಕಾದ್ದನ್ನು ವಾಗ್ದಾನ ಮಾಡಬಹುದು. ಪರ್ವತನನ್ನು ಸದೆ ಬಡಿದ ನಂತರ ಅವನ ದೇಶ ಕೋಶಗಳನ್ನೇ ಅವರಿಗೆ ಹಂಚಿಯೂ ಕೊಡುತ್ತೇವೆ. ಸೈನ್ಯದಲ್ಲಿ ಸೇರಿರುವ ಪರ್ವತಪುತ್ರ ಮಲಯಕೇತುವನ್ನೂ ಹೀಗೆ ಭೇದಿಸಲು ಯತ್ನಿಸಬೇಕು. ಇಲ್ಲವಾದರೆ ಮುಗಿಸಬೇಕು. ನಿಮ್ಮ ಉಪಕಾರಕ್ಕೆ ಸಮರ್ಥ ಗೌರವ ನಿಮಗೆ ಸಿದ್ಧವಾಗಿದೆ. ಇತಿ ಅಮಾತ್ಯ ರಾಕ್ಷಸ."

ಹೀಗೆ ಬರೆಸಿದ ಒಂಭತ್ತು ಪತ್ರಗಳಿಗೂ ಶಕಟಾಯನ ರಾಕ್ಷಸನ ಮುದ್ರೆಯುಂಗುರದಿಂದ ಮೊಹರು ಮಾಡಿ, ಒಂಭತ್ತು ಮಂದಿ ಶೀಘ್ರ

ಕುದುರೆ ಸವಾರರೊಡನೆ ಪತ್ರಗಳನ್ನು ಕೊಟ್ಟು, ಅವರು ಏನೇನು ಮಾಡ ಬೇಕೆಂಬುದನ್ನೆಲ್ಲ ರಾಕ್ಷಸ ವಿವರಿಸಿ, ಕಳುಹಿದ.

ಚಾರರು ಹೊರಟರು. ಆಕಳಿಸುತ್ತ ಶಕಟಾಯನನೂ ಎದ್ದ. ರಾಕ್ಷಸ ಏಳುವ ವೇಳೆಗೆ "ಜಿನೇಶ್ವರಾ!" ಎನ್ನುತ್ತಾ ಜೀವಸಿದ್ಧಿಯೂ ಬಹಿರ್ಮುಖನಾಗಿ, ''ಮಿತ್ರರೇ ! ನಿಮಗೆ ಯುದ್ಧದ ಸಿದ್ಧತೆ ಬಂದಿರುವಂತೆ ಕಾಣುತ್ತದೆ! ವಾರದಿಂದ ಏಕೆ ಕಾಣುತ್ತಿಲ್ಲ? ನಾವು ಶಾಂತದಲ್ಲಿ ಧ್ಯಾನ ಪ್ರಿಯರು. ನಮ್ಮ ಉಪಸ್ಥಿತಿ ಊರಿಗೆ ಉಪದ್ರವವಾಗಿದ್ದರೆ ಬೇರೊಂದೂ ರತ್ತ ಹೊರಡುವೆವು" ಎನ್ನುತ್ತಾ ಜನೇಶ್ವರ ನಾಮೋಚ್ಚಾರದೊಡನೆ ಅಡಿಯಿಟ್ಟ.

ರಾಕ್ಷಸ : ''ಕ್ಷಪಣಕರೇ ! ಎಂದಿಗಿಂತ ಇಂದು ನಮಗೆ ನಿಮ್ಮ ಅಕಶ್ಯಕತೆ ಹೆಚ್ಚಾಗಿದೆ. ನಾವು ಸೇನಾಸಿದ್ಧತೆಯಲ್ಲಿರುವುದು ನಿಜ. ಪರ್ವತೇಶನ ಸೈನ್ಯ ಬರುತ್ತಿದೆ. ಹಾಳು ಚಾಣಕ್ಯ ಚಂದ್ರಗುಪ್ತನೊಡಗೂಡಿ ಈ ವೈರಿಸೈನ್ಯವನ್ನು ತರುತ್ತಿದ್ದಾನೆ. ತಮ್ಮ ಕೈಚಳಕದಿಂದ ಈ ಸೇನೆಯನ್ನು ನಿವಾರಿಸುವ ಉಪಾಯವುಂಟೊ ?"

ಜೀವಸಿದ್ಧಿ ; "ಜನೇಶ್ವರಾ ! (ಕೊಂಚ ಮೌನ ದಿಂದಿದ್ದು) ಅಮಾತ್ಯರೇ! ಪ್ರಶ್ನೆ ಕೇಳಿದ ಲಗ್ನ ಬಹುಕ್ರೂರವಾಗಿದೆ. ಶನಿ, ಅಂಗಾರಕರಿಬ್ಬರ ವೀಕ್ಷಣವೂ ಅದಕ್ಕಿದೆ! ಭಯಂಕರ ಉತ್ಪಾತಯೋಗ. ಬ್ರಾಹ್ಮಣ ಮಾಡಿದ ದುಷ್ಟ ಕೃತ್ಯಕ್ಕೆ ಬ್ರಾಹ್ಮಣನಿಂದಲೇ ಶಾಸ್ತಿ ಮಾಡಿಸಬೇಕು. ಸಮರ್ಥರಾದ ಬ್ರಾಹ್ಮಣ ಯಾಜಕರನ್ನು ಕರೆಸಿ.'' ಎಂದವನೇ ಹೊರ ಹೊರಟ

ಆ ವೇಳೆಗೆ ಸರಿಯಾಗಿ ರಾಕ್ಷಸನ ಮನೆಯ ಮುಂದೆ ಇಂದುಶರ್ಮನ ಹಿರಿಯ ಶಿಷ್ಯ ಮಾಸೋಪವಾಸಿ ಪೂರ್ವಸಂಕೇತದಂತೆ ಅಲ್ಲಿ ಕಾಣಿಸಿಕೊಂಡ. ತಲೆಯಲ್ಲಿ ಬಹು ದೊಡ್ಡ ಜಟೆಯನ್ನು ಸುತ್ತಿ, ಗಡ್ಡಮೀಸೆ ಧರಿಸಿ, ಹಣೆ

ಯಲ್ಲಿ ಬೆಳ್ಳಿಯಂತೆ ಮಿರುಗುವ ಮೂರೆಳೆ ವಿಭೂತಿಯನ್ನು ಹಾಕಿಕೊಂಡು "ಶಿವ ಶಿವ'' ಎನ್ನುತ್ತಾ, ಕಾಲಲ್ಲಿ ಪಾದುಕೆಗಳನ್ನೂ, ಕಂಕುಳಲ್ಲಿ ಕೃಷ್ಣಾಜಿನವನ್ನೂ ಧರಿಸಿ, ಯಜ್ಞಸೂತ್ರದಿಂದೊಪ್ಪುವ ಸಾಕ್ಷಾತ್ ಪರಶಿವನಂತೆ ಕಂಡ ಅವನನ್ನು ನೋಡಿ, ದಿಗ್ಭ್ರಾಂತನಾದನಂತೆ ನಟಿಸಿ, ಜೀವಸಿದ್ಧಿ ಎಂದ : "ಅಮಾತ್ಯರೇ ! ನಿಮ್ಮ ಶಕುನ ಚೆನ್ನಾಗಿದೆ. ಈ ಮಹಾತ್ಮರು ಎತ್ತಲಿಂದ ಇಲ್ಲಿಗೆ ಬಂದರು ! ಸಾಮಾನ್ಯವಾಗಿ ಬ್ರಾಹ್ಮಣ್ಯವನ್ನೊಪ್ಪದ ನಾವು ಇವರನ್ನು ಮಾತ್ರ ಬಹು ಗೌರವದಿಂದ ಭಾವಿಸುವುದಕ್ಕೆ ಇವರ ತಪಸ್ಸು, ಸರಳತೆ, ನಿಯಮ ನಿಷ್ಠೆಗಳೇ ಕಾರಣ!!" ಎನ್ನುತ್ತಾ ರಾಕ್ಷಸನ ಕುತೂಹಲವನ್ನು ಕೆರಳಿಸಿದನು.

"ಯಾರಿವರು?" ಎಂದ ರಾಕ್ಷಸನ ಪ್ರಶ್ನೆಗೆ, ಜೀವಸಿದ್ಧಿ "ಇವರು ಮಾಸೋಪವಾಸಿಗಳೆಂಬ ಮಹಾಮುನಿಗಳು. ಹಿಮಾಲಯದಲ್ಲಿ ಎಲ್ಲೋ ತಪಸ್ಸಿನಲ್ಲಿದ್ದರೆಂದು ಕೇಳಿದ್ದೆ. ತಿಂಗಳಿಗೆ ಒಮ್ಮೆ ಮಾತ್ರ ಕೊಂಚ ಉಣ್ಣುವ ಈ ಮುನಿಗಳು ಯಾವ ಜೈನಮುನಿಯನ್ನೂ ಈ ವ್ರತದಲ್ಲಿ ಮೀರಿಸಿರುವರೆಂದೇ ನಮಗೆ ಅವರಲ್ಲಿ ಇಷ್ಟು ಶ್ರದ್ಧೆ" ಎಂದು ಅವನನ್ನು ಮುಕ್ತವಾಗಿ ಅತಿಶಯಿಸಿ ಹೊಗಳಿ "ಇವರಿಗೆ ಅಭಿಚಾರಿಕಾದಿ ಸಮಸ್ತ ರಾಜೋಪಯುಕ್ತ ಯಜ್ಞಯಾಗಗಳೂ ಗೊತ್ತು. ಇವರೇಕೆ ಬಂದರೋ ತಿಳಿಯದು. ಆದರೆ ನಿಮ್ಮ ಕಾರ್ಯಸಿದ್ಧಿ ಆದಂತೆಯೇ ! ಕಾವಾಗಿಯೇ ಇತ್ತ ಬರುವುದೆಂದರೇನು !" ಎನ್ನುತ್ತಾ ಹೊರಟ.

ರಾಕ್ಷಸ ಮಾಸೋಪವಾಸಿಯನ್ನು ಕರೆತಂದು ಉಪಚರಿಸಿ, ತನ್ನ ಮತ್ತು ನಂದ ದೊರೆಗಳ ಪರಿಚಯ ಮಾಡಿಸಿ, ಅವನು ಕೃಪೆಮಾಡಬೇಕೆಂದು ಬಿನ್ನೈಸಿಕೊಂಡ. ಅವನು: "ಅಮಾತ್ಯರೇ! ಈ ರಾಜ್ಯಕ್ಕೆ ಈಗ ಗ್ರಹಗತಿ ಚೆನ್ನಾಗಿಲ್ಲ. ರಾಜ್ಯದ ರಾಶಿಯ ಅಧಿಪತಿಗೆ ಕ್ರೂರಗ್ರಹಗಳ ಕಾಟ ಇದೆ. ರಾಶ್ಯಧಿಪತಿಯೇ ಸ್ವಯಂ ಶತ್ರುವಿನ ಮನೆಯಲ್ಲಿದ್ದಾನೆ. ಆ ಶತ್ರುವು ಈ ಅಧಿಪತಿಯನ್ನು ಕ್ರೂರಗ್ರಹಗಳೊಂದೊಡಗೂಡಿ ವೀಕ್ಷಿಸುತ್ತಿದ್ದಾನೆ. ಬಹುದೊಡ್ಡ ಆಪತ್ತು ಬರುವುದರಲ್ಲಿದೆ. ನವಗ್ರಹ ಶಾಂತಿಗೆ

ಇದು ಬಗ್ಗುವುದಿಲ್ಲ. ಕೇವಲ ದಾನ ಧರ್ಮಗಳಿಂದಲೂ ಇದು ನಿವಾರಿತ ವಾಗುವುದಿಲ್ಲ. ಶತ್ರುಪಲಾಯನ ಜಪವನ್ನೂ, ಶತ್ರುಂಜಯ ಯಜ್ಞ ವನ್ನೂ ಕೂಡಲೇ ಆರಂಭಿಸಿ ನಡೆಸಿದರೆ ಶತ್ರುವನ್ನು ಖಂಡಿತ ನಿವಾರಿಸಿ, ಸಂಹರಿಸಬಹುದು. ಇದಕ್ಕೆ ವಿಶೇಷ ಖರ್ಚೂ ಇಲ್ಲ." ಎಂದ.

ಅಮಾತ್ಯ : "ಮಹಾತ್ಮರೇ ! ತಾವು ಯಜ್ಞ ಯಾಗ ಸಮರ್ಥ ರೆಂದೂ ಕೇಳಿರುವೆ. ತಾವೇ ಅಧ್ವರ್ಯುಗಳಾಗಿ ಈ ಯಜ್ಞವನ್ನೂ ಜಪ ವನ್ನೂ ನಡೆಸಿಕೊಡಬೇಕು. ಎಷ್ಟು ಸಂಭಾವನೆಯಾದರೂ ಸರಿ. ಯಾರ್‍ಯಾರು ಇದಕ್ಕೆ ಅವಶ್ಯವೋ ಆ ಋತ್ವಿಕ್ಕುಗಳನ್ನೂ ತಾವೇ ಸಂಪಾದಿಸಿ ಕೂಡಲೇ ಯಾಗಾರಂಭಕ್ಕೆ ಸಂನ್ನದ್ಧರಾಗಬೇಕು. ತಮ್ಮ ಮತ್ತು ಶಿಷ್ಯರ ಸಕಲ ಯೋಗಕ್ಷೇಮವನ್ನೂ ಅರಮನೆ ನೋಡಿಕೊಳ್ಳುತ್ತದೆ.''

ಮಾಸೋಪವಾಸಿ : ''ಮಹದೇವ! ಈಶ್ವರಾ! ನಾವು ಹರಿದ್ವಾರ ದಿಂದ ಬರುತ್ತಾ ಕಾಶೀ ಸೇರುವ ಮಾರ್ಗದಲ್ಲಿ ಆಕಸ್ಮಾತ್ತಾಗಿ ಇತ್ತ ಹಾದು ಬಂದವರು. ವಿರಕ್ತರಾದ ನಮಗೆ ಲೌಕಿಕ ವ್ಯಾಪಾರಗಳಿಂದ ಪ್ರಯೋಜ ನವಿಲ್ಲ. ಆದರೂ ಭಯದಲ್ಲಿರುವವರಿಗೆ ಅಭಯ ನೀಡುವುದು ಆರ್ಯಧರ್ಮ ....ಸರಿ!" ಎನ್ನುತ್ತಾ, ಬಾಗಿಲಲ್ಲಿ ತನ್ನನ್ನು ಹಿಂಬಾಲಿಸಿದ್ದ ಶಿಷ್ಯರನ್ನು ಬರಮಾಡುವಂತೆ ಹೇಳಿ, ಅವರೊಡನೆ ಕಲೆತು ಆಲೋಚಿಸಿದ ನಾಟಕ ಮಾಡಿ, "ನಾಳೆಯೇ ಮುಹೂರ್ತ ಚೆನ್ನಾಗಿದೆ. ಶುಕ್ಲ ತ್ರಯೋದಶೀ ಸಂಜೆ ಪ್ರದೋಷಕಾಲಕ್ಕೆ ಸರಿಯಾಗಿ ಯಾಗದೀಕ್ಷೆ ವಹಿಸೋಣ. ನಗರದ ಉತ್ತರಕ್ಕೆ ನದೀ ತೀರದಲ್ಲಿ ಒಂದು ಗಾವುದ ಉದ್ದಳತೆಯ ಚದರ ಪ್ರದೇಶ ದಲ್ಲಿ ಜಪಶಾಲೆ ನಿರ್ಮಾಣವಾಗಬೇಕು. ಕೇವಲ ಒಣ ಎಲೆ, ಹುಲ್ಲು, ಬೊಂಬು, ಮುಂತಾದ ಆಶ್ರಮ ನಿರ್ಮಾಣೋಪಯುಕ್ತ ಸಾಮಗ್ರಿಗಳಿಂದ ಅದು ನಿರ್ಮಿತವಾಗಿ, ಅಲ್ಲೆಲ್ಲೂ ಶೂದ್ರರ ಸುಳಿವೂ ಸಂಚಾರವೂ ಇರ ಬಾರದು. (ಹಿಂದೆ ಮುಂದೆ ನೋಡಿ) ಆ ದಿಗಂಬರನಂತೂ ಅತ್ತ ತಲೆ ಹಾಕಬಾರದು. ಅರಸರೂ ನೀವೂ ಒಳಬರುವಾಗ ಬೆಂಗಾವಲಿನವರಾರೂ ನಿಮ್ಮ ಜೊತೆ ಬರಬಾರದು. ಆಯುಧಗಳನ್ನು ಯಾರೂ ತರಬಾರದು.

ಅಷ್ಟು, ಮಡಿ, ನಿಯಮ ಈ ಯಾಗಕ್ಕೆ. ಇದಕ್ಕೆ ಬೇಕಾಗುವ ತುಪ್ಪ, ಬೆಣ್ಣೆ, ಕಲ್ಲುಸಕ್ಕರೆ, ಪಚ್ಚೆಕರ್ಪೂರ, ಚರುವಿಗಾಗಿ ಅನ್ನಕ್ಕೆ ದಿನಾ ಅಕ್ಕಿ, ಬೆಲ್ಲ...'' ಎನ್ನುತ್ತ ಪಟ್ಟಿ ಹೇಳ ಹೊರಟ. ತಲೆಶೂಲೆ ಹಿಡಿದವನಂತೆ ರಾಕ್ಷಸ ಕೈಗಳಿಂದ ತಲೆ ಬಿಗಿ ಹಿಡಿದು. "ಅದೇನೆಲ್ಲ ಬೇಕೋ ನಿಮ್ಮದೇ ಉಸ್ತುವಾರಿ ಆಗಲಿ. ಅರಮನೆ ಯಾವುದಕ್ಕೂ ನಿಮ್ಮ ಕೈ ತಡೆ ಹಿಡಿಯು ವುದಿಲ್ಲ" ಎಂದೂ ಅವರಿಗೆ ಆಶ್ವಾಸನೆ ನೀಡಿದ. ಮಾಸೋಪವಾಸಿಯ ಶಿಷ್ಯರು, ನಿತ್ಯೋಪವಾಸೀ, ಜಂಬುಕೇಶ್ವರ, ಮಾಧವಶರ್ಮ, ಯಜ್ಞೇಶ್ವರ ದತ್ತ, ಉದುಂಬರ, ಮೊದಲಾದ ಇಪ್ಪತ್ತು ಯುವ ಮಾಣವಕರು ಗುರು ವಿನ ಆಜ್ಞೆಯಂತೆ ಜಪಶಾಲೆಯ ಸ್ಥಳ ವೀಕ್ಷಣೆ, ಪರ್ಣಶಾಲೆಯ ನಿರ್ಮಾಣ, ಜಪಸಾಮಗ್ರೀ ಸಂಗ್ರಹಣ, ಸ್ಥಳಶುದ್ಧಿ, ಮೃತ್ತಿಕಾ ಸಂಗ್ರಹ, ಪುಣ್ಯಾಹ ಘೋಷ ಇತ್ಯಾದಿ ಕಾರ್ಯಗಳಲ್ಲಿ ತೊಡಗಿದ್ದರು. ಯಾಗ ಶಾಲೆಯ ಕೆಲಸ ರಭಸದಿಂದ ಆರಂಭವಾಯಿತು. ನಂದರಿಗೆ ರಾಕ್ಷಸನ ಕಾರ್ಯಸಾಮರ್ಥ್ಯ ದಿಂದ, ಜೀವಸಿದ್ಧಿಯ ಸಮಯೋಚಿತ ಬೋಧೆಯಿಂದ ಸಂತೋಷ ವಾಯಿತು.

  

ಜೀವಸಿದ್ಧಿಯ ಸಂಕೇತದಿಂದ ರಹಸ್ಯದಲ್ಲಿ ಸಿದ್ಧಾರ್ಥಕ ರಾಕ್ಷಸನ ತಂತ್ರವನ್ನೆಲ್ಲ ಅರಿತು, ಜೀವಸಿದ್ಧಿ ಬರೆದುಕೊಟ್ಟ, ಅಂಕಿತವಿಲ್ಲದ, ಪತ್ರ ವೊಂದನ್ನು ವೇಗಶರ್ಮನಿಗೆ ತಲುಪಿಸಿದ. ವೇಗಶರ್ಮ ಒಡನೆಯೇ ಕುದುರೆಯೇರಿ ಚಾಣಕ್ಯನತ್ತ ಹೊರಟ.

ಅತ್ತ ದಶಮೀ ದಿನದಂದೇ ಅಭಿಜನ್ಮುಹೂರ್ತದಲ್ಲಿ ಪರ್ವತಸೇನೆ ಉತ್ತರಕ್ಕೆ ಹೊರಟು, ನದಿಗಳನ್ನು ಹಾಯುತ್ತಾ, ಅಲ್ಲಲ್ಲಿ ಬೀಡು ಬಿಡುತ್ತಾ, ಕ್ರಮವಾಗಿ ಪೂರ್ವದಿಕ್ಕಿನತ್ತ ಹೊರಳಿ ವಿತಸ್ತಾನದಿಯ ಪೂರ್ವಕ್ಕೆ ಬಂದು ವಿಶ್ರಾಂತಿಯಲ್ಲಿತ್ತು. ಸೈನ್ಯಮಧ್ಯದಲ್ಲಿ ಚಾಣಕ್ಯ, ಚಂದ್ರಗುಪ್ತ, ಪರ್ವತೇಶ್ವರರು, ಸೇನೆಯ ಮುಂದೆ ಶೇಖರನೆಂಬ ಸೈನ್ಯ

ರಕ್ಷಕ, ಒಳಹೊರಗಿನವರನ್ನೆಲ್ಲ ಪರೀಕ್ಷಿಸಿ, ಸಣ್ಣ ಹುಕಡಿಯೊಂದರ ನೆರವಿನಿಂದ ಮುಂಚಿತವಾಗಿ ಹೊರಟು, ಸೈನ್ಯಕ್ಕೆ ಆಹಾರ, ವಿಶ್ರಾಂತಿ, ನೀರು ನೆರಳು ಇರುವ ಜಾಗಗಳನ್ನು ಗುರುತು ಮಾಡಿ, ಸೇನಾನಿವೇಶಕ್ಕೆ, ಉತ್ಥಾನಕ್ಕೆ ಆಜ್ಞೆ ನೀಡುವ ಹೊಣೆ ಹೊತ್ತವನು, ಉಳಿದ ಕಾಂಭೋಜ, ವಾಹ್ಲೀಕ, ಆರಟ್ಟ, ದರದ, ಕಾಶ್ಮೀರ, ಸಿಂಧು, ಭಲ್ಲೂಕ ಮೊದಲಾದ ಪೃಥಕ್ ಸೇನಾ ನಾಯಕರು ತಂತಮ್ಮ ವಿಶಿಷ್ಟ ದೇಶೀಯ ವೇಷಗಳಲ್ಲಿ ಚಾಣಕ್ಯ ಚಂದ್ರ ಗುಪ್ತರ ಸುತ್ತ ದಿನಕ್ಕೊಂದು ವ್ಯೂಹರಚನೆಯನ್ನು ಮಾಡಿಕೊಂಡು, ಎಚ್ಚರಿರುತ್ತಾ, ವೇಗ ವೇಗವಾಗಿ ಸೇನೆ ಹೊರಟಿತ್ತು. ವೇಗಶರ್ಮನನ್ನು ಸೇನಾ ಮುಖದಲ್ಲಿ ಶೇಖರ ತಡೆದು "ಯಾರು?" ಎಂದು ಕೇಳಿದ. "ನನ್ನ ಶಕ್ತಿ ಬಾಣಕ್ಕುಂಟು, ಬಿಲ್ಲಿಗಲ್ಲ! ಬಿಲ್ಲೆತ್ತದ ನಾನು ಮಾಡುವುದನ್ನು ಕ್ಷತ್ರಿಯನೂ ಮಾಡಲಾರ. ಕಡಲೇ ಗಿಡದಲ್ಲಿ ಹುಟ್ಟಿದ ಋಷಿಯೊಬ್ಬ ಇದನ್ನು ಬಲ್ಲ. ನನ್ನ ಕಾರ್ಯ ಒಂದು ಕ್ಷಣವೂ ತಡೆಯಲಾರದು" ಎಂದು ಒಗಟಿಯಂತೆ ಏನೇನೋ ಹೇಳಿದ. ಶೇಖರನಿಗೆ ಏನೂ ತಿಳಿಯಲಿಲ್ಲ. ಚಾಣಕ್ಯ ಶಿಷ್ಯನಿರಬೇಕೆಂಬ ಊಹೆಯಾದರೂ ಅನುಮಾನಿಸಿದ. ದೂರ ದಿಂದ ನೋಡುತ್ತಿದ್ದ ಆಚಾರ್ಯ ಶಿಷ್ಯನೊಬ್ಬ, ಆಚಾರ್ಯನ ಅಪ್ಪಣೆಯಂತೆ ಶೇಖರನಿಗೆ ಏನೋ ಹೇಳಿ, "ಕಡಲೇ ಗಿಡದ ಋಷಿಗೇ ಅದನ್ನು ಹೇಳು ಬಾ! ನಿನ್ನ ಶಕ್ತಿ ಬಿಲ್ಲಿಗೋ ಬಾಣಕ್ಕೋ! ನೋಡಿ ಹೇಳುತ್ತಾರೆ, ಬಾ" ಎಂದು ಅವನನ್ನು ನೇರವಾಗಿ ಆಚಾರ್ಯನ ಬಳಿಗೊಯ್ದು ನಿಲ್ಲಿಸಿದ. ಆಚಾರ್ಯ ತನ್ನ ಏಕಾಂತ ಬಿಡಾರದಲ್ಲಿ ವೇಗಶರ್ಮನಿಂದ ಸಮಾಚಾರವನ್ನೆಲ್ಲ ಅರಿತು ಶೀಘ್ರವಾಗಿ ಕಾರ್ಯೋನ್ಮುಖನಾದ. ಇಂದುಶರ್ಮ ಕಳುಹಿದ್ದ ಪತ್ರದಂತೆ ನಮೂದಾಗಿದ್ದ ಮಗಧದ ಗೂಢಾಧಿಕಾರಿಗಳನ್ನೆಲ್ಲ ಕುರಿತು ಚಿಂತಿಸಲಾರಂಭಿ ಸಿದ. ಇವರನ್ನು ಈಗಾಗಲೇ ಕೊಂದರೆ, ವೈಶ್ಯರಂತೆ ಓಲೈಸುತ್ತಿರುವ ಇವರ ವಧೆಯಿಂದ ವಿವಿಧ ಸೇನಾನಾಯಕರಿಗೆ ಕೋಪಬರುತ್ತದೆ. ಕೊಲ್ಲಲಿಲ್ಲ ವಾದರೆ ಯಾವ ಕ್ಷಣಕ್ಕೆ ಏನು ಮಾಡುವರೋ! ಎಂದು ಚಿಂತಿಸಿ, ಉಪಾಯವನ್ನು ಹವಣಿಸುತ್ತಿರುವಲ್ಲೇ, ಶಿಬಿರ ರಕ್ಷಕರು ಅನುಮಾನಾಸ್ಪದ ನಾದ ಒಂದು ಕುದುರೆ ಸವಾರನನ್ನು ಹಿಡಿತಂದು ಆಚಾರ್ಯನ ಮುಂದೆ ನಿಲ್ಲಿಸಿದರು. ಆಚಾರ್ಯ ವಿಚಾರಣೆ ನಡೆಸಿದ:

"ಎಲ್ಲಿಯವನೋ ನೀನು ?''

''ಗೊತ್ತಿಲ್ಲ, ಬುದ್ಧಿ! ''

"ಶೇಖರ ! ಇವನಿಗೆ ಬಾಯಿ ಬಿಡಿಸುವ ತನಕ ಪೆಟ್ಟು ಹಾಕು ! ಎಲ್ಲಿಂದ ಬಂದನೆಂಬುದೇ ತಿಳಿಯದ ಮೂಢನಂತೆ !''

ಶೇಖರ ಚೆನ್ನಾಗಿ ಬಿಗಿದ. ಚಾರ ಹಲ್ಲುಗಿಂಜುತ್ತಾ "ಹೊಡೆಯ ಬೇಡಿ, ಅಪ್ಪಗಳಿರಾ! ಎಲ್ಲ ಹೇಳುತ್ತೇನೆ" ಎಂದವನೇ, ಅಳುತ್ತಾ ''ಇತ್ತ ಕೆಲಸವೂ ಕೆಟ್ಟಿತು ! ಅತ್ತ ಹೋಗುವಂತೆಯೂ ಇಲ್ಲ. ನನಗೆ ಎರಡು ಹೆಂಡಿರು ಬೇರೆ; ಒಂಭತ್ತು ಮಕ್ಕಳು; ಅವರಿಗಿನ್ನೇನು ಗತಿ !" ಎನ್ನುತ್ತಾ "ಹೋ! '' ಎಂದಳಲಾರಂಭಿಸಿ, ತಲೆಯ ಮುಂಡಾಸಿನಿಂದ ಕಣ್ಣೊರಿಸಿ ಕೊಳ್ಳಲು ಹೋದ. ಅದರೊಳಗಿದ್ದ ಸುರುಳಿಯ ಪತ್ರ ಕೆಳಗೆ ಬಿತ್ತು !

ಚಾಣಕ್ಯ ಶೇಖರನನ್ನು ಕುರಿತು ಆ ಪತ್ರ ತನ್ನ ಕೈಗೆ ಕೊಡುವಂತೆ ಹೇಳಿ, ಶೇಖರನನ್ನು ಪರ್ವತ, ಚಂದ್ರಗುಪ್ತರನ್ನು ಕರೆತರುವಂತೆ ಕಳುಹಿ, ತಾನು ಮನದಲ್ಲೇ ಪತ್ರವನ್ನೋದಿಕೊಂಡು; ''ಎಲ, ಎಲ ! ರಾಕ್ಷಸ!! ನಾನಿನ್ನೂ ಜೀವಂತನಾಗಿ ಎಚ್ಚರದಿಂದಿರುವೆ ! ನಿನ್ನ ತಂತ್ರ ಸಾಗದು" ಎಂದು ಅಂದುಕೊಂಡ.

ಪರ್ವತನಿಗೆ ಸೂಕ್ಷ್ಮದಲ್ಲಿ ವಿಷಯವು ತಿಳಿಸಿ, ಪತ್ರದಲ್ಲಿದ್ದ ಹೆಸರಿನ ಕುಲೂತ ವರ್ಮನ ಬಳಿಯ ಧನಗುಪ್ತನನ್ನು ಕರೆಸಿ, ವಿಚಾರಣೆ ನಡೆಸಿ, ಅವನಿಂದ ಖಚಿತ ಮಾಡಿಕೊಂಡು, "ಪರ್ವತೇಶ! ಈ ದ್ರೋಹಿಯನ್ನೂ, ನಿನ್ನ ಸೇನೆಯಲ್ಲಿ ಹೀಗೆ ಗುಪ್ತಾಶ್ರಯ ಪಡೆದಿರುವ ಈ ಉಳಿದ ಇನ್ನೆಂಟು ಮಂದಿ ದ್ರೋಹಿಗಳನ್ನೂ ನಿನ್ನ ಗೂಢ ರಕ್ಷಕರು ಬೆಂಗಾವಲಿನಲ್ಲಿರುತ್ತಾ ಪಾಟಲೀ ಪುತ್ರದ ಬಳಿ ರಹಸ್ಯದಲ್ಲಿ ಬಿಟ್ಟು ಬರಲಿ. ನಮ್ಮ ಸೇನಾನಾಯಕ ರಿಗೆ ಈ ವಿಷಯ ತಿಳಿಯಬಾರದು. ಕೇಳಿದರೆ ಸೇನಾಪ್ರಯಾಣ ಕಾಲದಲ್ಲಿ ಪೆಟ್ಟಿರಿಗೇನು ಕೆಲಸ ? ಎಂದು ಹೇಳಿ ಬಿಡು. ಅವರಿಗೆ ಸಂಶಯ ಬಂದರೆ

ಎಲ್ಲ, ಚಾಣಕ್ಯರ ಕೆಲಸ; ಯಾರಿಗೆ ಅರ್ಥವಾಗಬೇಕು?' ಎಂದುತ್ತರಿಸು ಸೇನೆ ಹೊರಟಂದಿನಿಂದ ನನ್ನ ಕಾರ್ಯವೈಖರಿ ಪರಿಚಯವಿರುವ ಅವರು ಮರು ಪ್ರಶ್ನೆ ಮಾಡಲಾರರು. ಸೇನೆಗೆ ಸಂಬಂಧವಿಲ್ಲದ ವೈದ್ಯರೂ, ಯುದ್ಧ ಸಾಮಗ್ರೀ ರಕ್ಷಕರೂ, ವಿತರಣ ಕಾರ್ಯದವರೂ ನಟ ನರ್ತಕರಂತೆ ಮನ ರಂಜನೆಯೊದಗಿಸಲು ಬಂದವರೂ, ಸಬೂಬುಗಳಿಂದ ಸೇರಿಕೊಂಡವರೂ ಮೊದಲಾದ ಸಂಶಯಾಸ್ಪದರನ್ನೆಲ್ಲ ಶೇಖರ ಚೆನ್ನಾಗಿ ಪರೀಕ್ಷಿಸಲಿ. ಅನು ಮಾನ ಪ್ರಬಲವಾದರೆ ನನ್ನ ಬಳಿ ಕರೆತರಲಿ. ಯಾವ ಭೂತವನ್ನಾದರೂ ನಾನೇ ಬಿಡಿಸುವೆ" ಎಂದು ಉಗ್ರವಾಗಿ ಅಪ್ಪಣೆ ಮಾಡಿದ. ಚಂದ್ರಗುಪ್ತ ಆಶ್ಚರ್ಯಪಟ್ಟ! ಪರ್ವತನಿಗೆ ಈತ ಸರ್ವಜ್ಞ, ಸರ್ವಶಕ್ತನೆಂಬ ಭಾವನೆ ಅಧಿಕವಾಯ್ತು. "ಈ ಚಾರನನ್ನೇನು ಮಾಡುವುದು?" ಎಂದು ಕೇಳಿದ. "ಇವನಿಗೆ ತಲೆ ಬೋಳಿಸಿ, ಮೂಗು ಕೆತ್ತಿ, ಕತ್ತೆಯ ಮೇಲೆ ಕೂಡಿಸಿ, ಸೈನ್ಯದೊಳಗೆ ಓಡಾಡಿಸಿ, ಬಂದ ದಾರಿಗೆ ಹೋಗಲು ಬಿಡಿ'' ಎಂದು ಆಚಾರ್ಯ ಆಜ್ಞಾಪಿಸಿದ. ಕುಲೂತವರ್ಮನಿಗೆ "ಇದೆಲ್ಲ ಏಕೆ? ಏನು?" ಎಂಬುದೇ ತಿಳಿಯಲಿಲ್ಲ. ಏನೋ ಗೂಢಚರ್ಯೆಯ ವಿಷಯ ಇರಬೇಕೆಂದು ಕೊಂಡು ಸುಮ್ಮನಾದ.

  

ಉಳಿದ ಸೇನಾನಾಯಕರ ಬಳಿಯಿದ್ದ ಮಗಧದ ಗೂಢಚಾರರಿಗೆಂದು ಇನ್ನೆಂಟು ಪತ್ರಗಳನ್ನು ತಂದಿದ್ದ ರಹಸ್ಯದೂತರಿಗೆ ಚಾಣಕ್ಯನ ಈ ದಿಟ್ಟ ಹೆಜ್ಜೆಯಿಂದ ಭಯವಾಯಿತು! ತಮಗೇನು ಆಪತ್ತು ಬರುವುದೋ ! ಎಂದು ಹೆದರಿ, ತಾವು ತಂದಿದ್ದ ಪತ್ರಗಳನ್ನು ತಾನೇ ಹರಿದು ಚೂರು ಚೂರಾಗಿ ಮಾಡಿ ನುಂಗಿಹಾಕಿ, ಸಮಯ ನೋಡಿ ಪಲಾಯನಮಾಡಿದರು !

ಮೂಗು ಕೆತ್ತಿದ್ದ ಮೊದಲ ಭಟನೊಡನೆ ದಾರಿಯಲ್ಲಿ ಸೇರಿಕೊಂಡು, ವೇಗವಾಗಿ ಊರು ಸೇರಿದರು. ವರ್ತಕರ ವೇಷದ ಗೂಢಾಧಿಕಾರಿಗಳೂ, ಈ ಚಾರರೂ ಒಂದೇ ದಿನ ಹಠಾತ್ತಾಗಿ ರಾಕ್ಷಸನನ್ನು ಕತ್ತಲೆಯಾದ ಮೇಲೆ ಕಾಣಿಸಿಕೊಂಡರು.

ರಾಕ್ಷಸನಿಗೆ ಆಶ್ಚರ್ಯವಾಯಿತು ! "ಏನಿರಯ್ಯ ! ನಮ್ಮ ಪತ್ರ ತಲುಪಲಿಲ್ಲವೆ ? ಚಾರರೇ? ಇದೇನು ನೀವು ಹೊರಡಲೇ ಇಲ್ಲವೆ? ಎಲ್ಲರೂ ಹೇಗೆ, ಏಕೆ ಕೂಡಿಕೊಂಡು ಬಂದಿರಿ? " ಎಂದು ಪ್ರಶ್ನೆಯ ಮಳೆಯನ್ನೇ ಸುರಿದ.

ಸಮಾಚಾರ ತಿಳಿದ ಮೇಲೆ ರಾಕ್ಷಸ ಮೂಕ ವಿಸ್ಮಿತನಾದ; ತಾನು ಕಳುಹಿದ್ದು ಒಂಭತ್ತು ಪ್ರತ್ಯೇಕ ಪತ್ರಗಳನ್ನು! ಒಂಭತ್ತು ಪ್ರತ್ಯೇಕ ದೂತರ ಕೈಲಿ! ಚಾಣಕ್ಯನಿಗೆ ಸಿಕ್ಕಿಬಿದ್ದವನು ಒಬ್ಬನೇ ಚಾರ! ಉಳಿದ ವರ್ತಕ ವೇಷದ ಗೂಢ ತಂತ್ರಿಗಳನ್ನೇಕೆ ಚಾಣಕ್ಯ ಸಂಶಯಿಸಿದ? ಇವರು ತನ್ನವ ರೆಂದು ಅವನಿಗೆಂತು ತಿಳಿಯಿತು ? ಉಳಿದ ಚಾರರ ಪತ್ರಗಳನ್ನು ಅವರ ವರೇ ತಿಂದರೆಂದ ಮೇಲೆ ಚಾಣಕ್ಯ ಹೇಗೆ ಇಷ್ಟು ಜನರನ್ನು ಪತ್ತೆ ಮಾಡಿದ? ಅತೀಂದ್ರಿಯಶಕ್ತಿಯೇ ? ಮಂತ್ರವೇ ? ಮಾಟವೆ? ಪತ್ರ ಬರೆದ ಶಕಟಾ ಯನ ನಂಬಿಕೆಗೆ ಅಸ್ಪದವಾದವನು! ಅವನು ಬಾಯಿ ಬಿಟ್ಟಿರಲಿಕ್ಕಿಲ್ಲ! ಇನ್ನು ಜೀವಸಿದ್ಧಿಯೊಬ್ಬ ಅಂದು ಇಲ್ಲಿದ್ದ!! ಅವನೇನಾದರೂ....? ಛೆ, ಛೆ! ಅವನು ವಿರಕ್ತ! ಆದರೂ....ಯಾರನ್ನೂ ನಂಬಬಾರದು! ಜೀವಸಿದ್ಧಿಯೆ?.... ಅವನಾರು ?....

ರಾಕ್ಷಸ ಭಯಭ್ರಾಂತನಾದ ! ಏನು ಮಾಡಲೂ ತಲೆ ಓಡಲಿಲ್ಲ! ತಲೆಯ ಮೇಲೆ ಕೈಗಳನ್ನು ಹೊತ್ತು ''ನಂದ ಮೃತ್ಯುವು ಚಾಣಕ್ಯನ ರೂಪ ದಲ್ಲಿರುತ್ತಾ ಎಲ್ಲೆಲ್ಲೂ ಕೆಲಸ ಮಾಡುತ್ತಿದೆ'' ಎಂದೆಂದು ಕೊಂಡ. ಆ ಮೇಲೆ ತಾನೇ ನಗುತ್ತ ಏನನ್ನೋ ನಿಶ್ಚಯಿಸಿದ-

ಜೀವಸಿದ್ಧಿಗೆ ಗ್ರಹಚಾರ ಒದಗಿ ಬಂದು, ಅವನಿಗೊಂದು ಪರೀಕ್ಷೆ ಕಾದಿತ್ತು !

# ಹನ್ನೆರಡನೆಯ ಅಧ್ಯಾಯ

# ಜೀವ ಸಿದ್ಧಿಯ ಪರೀಕ್ಷೆ

ವಿದ್ಯಾಶರ್ಮನೆಂಬ ಮಧ್ಯ ಮಯಸ್ಸಿನ ಬ್ರಾಹ್ಮಣನನ್ನು ಕರೆದು ರಾಕ್ಷಸ ಅವನಿಗೆ ಜೀವಸಿದ್ಧಿಯ ಚಲನ ವಲನಗಳನ್ನೂ ಇವನ ಶಿಷ್ಯ ಪರಿವಾರದವರನ್ನೂ ಸಮೀಪದಿಂದ ಚೆನ್ನಾಗಿ ಪರೀಕ್ಷಿಸುವಂತೆ ಆಜ್ಞೆ ಮಾಡಿದನು. ಇನ್ನು ಮುಂದಾದರೂ ಕ್ಷಪಣಕನಿಂದ ಅನರ್ಥಬಾರದಿರಲಿ, ಎಂದು.

ಜೀವಸಿದ್ಧಿ ಮೊದಲೇ ಇದನ್ನು ನಿರೀಕ್ಷಿಸಿ, ಆಶ್ರಮದಲ್ಲಿರದೆ, ಊರ ಆಚೆಯ ಅರಳೀ ಮರದ ಕಟ್ಟೆಯ ಮೇಲೆ ಏಕಾಂತವಾಗಿ ಕುಳಿತಿದ್ದ. ನಾಲ್ಕಾರು ದಿನ ತನ್ನ ಶಿಷ್ಯರು ಯಾರೂ ತನ್ನ ಹತ್ತಿರ ಬರಬಾರದೆಂದೂ, ಭಾಗುರಾಯಣನ ಬಳಿಯ ಸಿದ್ಧಾರ್ಥಕನೂ, ವೇಗ ಶರ್ಮನೂ ಸಹ ಎಚ್ಚರಿಕೆಯಿಂದಿರಬೇಕೆಂದೂ ಸೂಚನೆ ಕಳುಹಿದ !

ವಿದ್ಯಾಶರ್ಮನು ಅರಮನೆಯ ಅಂಗಳದ ಆಶ್ರಮದಲ್ಲಿ ವಿಚಾರಿಸಿದ. ಶಿಷ್ಯರು ''ಮುನಿಗಳಿಗೆ ಬೇಸರವಾಗಿದೆ. ಬಹು ದಿನಗಳಿಂದ ಅಮಾತ್ಯರ ಭೇಟಿಯೂ ಇಲ್ಲ, ದೊರೆಗಳ ಭೇಟಿಯೂ ಇಲ್ಲ. ಸದಾಸಂಚಾರ ಶೀಲ ರಾಗಿರುತ್ತಿದ್ದ ಮುನಿಗಳು ಈ ಅರಮನೆಯಲ್ಲಿ ಹೀಗೆ ಸಿಕ್ಕಿ ಹಾಕಿಕೊಂಡು ದಕ್ಕೆ ಪರಿತಪಿಸಿ, ಊರ ಜಗತೀ ಕಟ್ಟೆಯ ಮೇಲೆ ಧ್ಯಾನಾಸಕ್ತರಾಗಿರುವ ರೆಂದು'' ಶಿಷ್ಯನೊಬ್ಬ ಹೇಳಿದ.

''ಯಾರಿಗೂ ಹೇಳಬೇಡ'' ಎಂದು ವಿದ್ಯಾಶರ್ಮನು ಒಂದು ಮೊಹರು ನಾಣ್ಯವನ್ನು ಅವನ ಕೈಗಿತ್ತ. ಉಪಾಯದಲ್ಲಿ ಜೀವಸಿದ್ಧಿಯಿದ್ದ ಮರದ ಕಟ್ಟೆಯ ಬಳಿ ಹೋಗಿ ದೂರದಿಂದಲೇ ನೋಡಿದ. ಸಂಜೆಯ ವರೆಗೂ ಅಲ್ಲೇ ಒಂದು ಮರದ ಹಿಂದೆ ಅವಿತಿಟ್ಟುಕೊಂಡು ನೋಡಿದ. ಕ್ಷಪಣಕ ಆಸನವನ್ನು ಕೂಡ ಬದಲಿಸಲಿಲ್ಲ. ಧ್ಯಾನಾರೂಢನಾಗಿ ಕುಳಿತವನು ಕಣ್ಣನ್ನೂ ಬಿಡಲಿಲ್ಲ !

''ಇವನು ನಿಜವಾಗಿಯೇ ಮಹಾಸಿದ್ಧನಾದ ಮುನಿ. ವಿನಾಕಾರಣ ಇವನಲ್ಲೇಕೆ ರಾಕ್ಷಸನಿಗೆ ಸಂಶಯ ?'' ಎಂದು ಯೋಚಿಸಿ, ಎರಡು ದಿನಗಳ ಬಳಿಕ ವಿದ್ಯಾಶರ್ಮನು, ಹತ್ತಿರಕ್ಕೆ ಬಂದು ಕ್ಷಪಣಕನ ಪಾದಗಳ ಬಳಿ ಕುಳಿತು ಮುನಿ ಕಣ್ತೆರೆಯುವುದನ್ನೇ ನಿರೀಕ್ಷಿಸಿದ.

ದಾರಿಯಲ್ಲಿ ಅತ್ತ ಹಾದು ಹೋಗುವ ಯಾವನೇ ಸಾಮಾನ್ಯ ನಾಗರಿ ಕನಂತೆ ಮುನಿಯ ಆಶ್ರಮದ ಶಿಷ್ಯನೊಬ್ಬ, ಪೂರ್ವ ಸಂಕೇತದಂತೆ, ಒಂದೆ ರಡು ಹಣ್ಣುಗಳನ್ನು ಮುನಿಯ ಮುಂದಿಟ್ಟು ನಮಸ್ಕರಿಸಿ ಹೋದ. ತೊಟ್ಟು ಕಳಚಿದ ಹಣ್ಣುಗಳಾದರೆ ''ಪರೀಕ್ಷೆ ಕಾದಿದೆ'' ಎಂದೂ, ತೊಟ್ಟು ಕಳಚಲಿಲ್ಲವಾದರೆ ''ಸುರಕ್ಷಿತ'' ಎಂದೂ, ಹಿಂದೆ ಮುಂದೆ ವಿಚಾರಿಸಿ ಜಾಗ ರೂಕರಾಗಿಬೇಕೆಂದೂ ಮುನಿ ಆಜ್ಞಾಪಿಸಿ ಬಂದಿದ್ದ. ಮೆಲ್ಲನೆ ಕಣ್ದೆರೆದು ನೋಡಲು ತೊಟ್ಟು ಕಳಚಿದ ಹಣ್ಣುಗಳೇ ಆಗಿದ್ದವು ! ಎದುರಿಗೊಬ್ಬ

ಆಸಾಮಿಯೂ ಕುಳಿತಿದ್ದುದು ಕಂಡಿತು. ಅವನೇಕೆ ಬಂದನೆಂದು ಪ್ರಶ್ನಿಸುವಂತೆ ಮುನಿ ತನ್ನ ನವಿಲಿನ ಪಿಂಛದಿಂದ ಸನ್ನೆ ಮಾಡಿದ. ಬ್ರಾಹ್ಮಣ;

''ಮುನಿವರ್ಯ ! ನನಗೆ ಈ ಸಂಸಾರ ಸಾಕಾಗಿದೆ. ವೈರಾಗ್ಯೋಪದೇಶದಿಂದ ಮುಕ್ತಿಗೆ ಅನುಮತಿಯನ್ನೂ ದೀಕ್ಷೆಯನ್ನೂ ಅನುಗ್ರಹಿಸಬೇಕು" ಎಂದು ನಿಜವಾಗಿಯೂ ಸಂಸಾರದಿಂದ ಬಳಲಿರುವವನಂತೆ ಅಳುತ್ತಾ ಮುನಿಯ ಪಾದಗಳಿಗೆ ಬಿದ್ದ.

ಜೀವಸಿದ್ಧಿ ಬ್ರಾಹ್ಮಣನ ನೆತ್ತಿಯನ್ನು ಗಮನಿಸಿ ನೋಡಿದ. ಹಣೆಯಲ್ಲಿ ಯಾವ ಲಾಂಛನವೂ ಇರಲಿಲ್ಲವಾದರೂ, ತಿಲಕವಿಟ್ಟಗುರುತು ಅಭ್ಯಾಸದಿಂದ ಅಲ್ಲಿ ಮೂಡಿತ್ತು. ''ಇವನು ವೈಷ್ಣವ ಬ್ರಾಹ್ಮಣ"ನೆಂದು ಮುನಿಗೆ ಅರಿವಾಯಿತು. ಆದರೂ ಪರೀಕ್ಷೆ ನಡೆಯಿತು.

"ಶ್ರಾವಕನೇ ! ನೀನು ಬೌದ್ಧನೋ, ಜೈನನೋ ?"

"ಮುನಿವರ್ಯ, ಸಪ್ತ ಪೌರುಷಗಳಿಂದ ನಾವು ಜೈನರು! "

ಮುನಿಯ ಕಪಟ ತಿಳಿಯಿತು. ಜೈನರು ಹಣೆಯಲ್ಲಿ ಲಾಂಛನ ಧರಿಸುವರೆಂದೂ, ಬೌದ್ಧರು ಖಾಲೀ ಹಣೆಯವರೆಂದೂ ಅರಿಯದ ಬ್ರಾಹ್ಮಣ ಮೊದಲಲ್ಲೇ ತಪ್ಪು ಮಾಡಿದ !

ಮುನಿ : ''ಒಳ್ಳೆಯದು. ನಿಮಗೆ ಆದಿ ದೀಕ್ಷೆಯಲ್ಲಿ ಯಾವ ವ್ಯಾಹೃತಿಯಿಂದ ಮಂತ್ರೋಪದೇಶವಾಗಿದೆ? ''

ಬ್ರಾಹ್ಮಣ " (ತಬ್ಬಿಬ್ಬಾಗಿ), ಬಹುಕಾಲಕ್ಕೆ ಹಿಂದೆ ಉಪದೇಶವಾದುದರಿಂದ ಈಗ ನೆನಪಿನಲ್ಲಿಲ್ಲ. ಮುನಿವರ್ಯರು ತಾವೇ ಮತ್ತೆ ಉಪದೇಶಿಸಬೇಕು."

ಮುನಿ ನಗುತ್ತಾ : "ಏನಾದರೂ ಗ್ರಂಥಕಾಲಕ್ಷೇಪವೋ, ತತ್ತ್ವಶ್ರವಣವೋ ಆಗಿದೆಯೆ ?''

ಬ್ರಾಹ್ಮಣ : "ಪ್ರಾರಂಭಿಕವಾಗಿ ಕೊಂಚವೇ ಮಾತ್ರ !"

ಮುನಿ : "ಹಾಗಾದರೆ ದ್ರವ್ಯಗಳೆಷ್ಟು? ಅದರಲ್ಲಿ ಮೂರ್ತ ದ್ರವ್ಯ ವಾವುದು ? "

ಬ್ರಾಹ್ಮಣ : "ಇದೆಲ್ಲ ಕೇಳಿ ಬಹುದಿನವಾಯ್ತು"

ಮುನಿ : "ಅನೇಕಾಂತವಾದವೆಂದರೇನು ?"

ಬ್ರಾಹ್ಮಣ : (ಯೋಚಿಸಿ) "ಏಕಾಂತದಲ್ಲಿರದೇ ಇದ್ದವನಿಗೆ ಏರ್ಪಡುವ ದುಃಖ ಮಾಲೆ"

ಮುನಿ : (ಒಳಗೇ ನಗುತ್ತ, ಇವನು ಜೈನನಂತೂ ಅಲ್ಲ, ಬ್ರಾಹ್ಮಣರಲ್ಲೂ ಮುಠ್ಠಾಳನಿರಬೇಕು ಎಂದು ತೀರ್ಮಾನಿಸಿ) "ಅಯ್ಯಾ! ಈಗ ನಿನಗಿರುವ ದುಃಖ ಅದೇ ಅಲ್ಲವೆ ?"

ಬ್ರಾಹ್ಮಣ : "ಅದೇ ಹೌದು ಮುನಿವರರೇ !"

ಮುನಿ : "ಮೋಕ್ಷವೆಂದರೇನು ಕೇಳಿಬಲ್ಲೆಯಾ ?"

ಬ್ರಾಹ್ಮಣ : "ಮೋಕ್ಷವೆಂದರೆ, ಗುರೂಪದೇಶದಿಂದ ದೇವರನ್ನು ಸಾಕ್ಷಾತ್ಕರಿಸಿಕೊಂಡು ಪ್ರಯಾಣ ಕಾಲದಲ್ಲಿ ಅವನ ಧ್ಯಾನದಲ್ಲೇ ಪ್ರಾಣ ಬಿಟ್ಟು, ಸೂರ್ಯಮಂಡಲವನ್ನು ಭೇದಿಸಿಕೊಂಡು ದೇವರ ಸಾಯುಜ್ಯವನ್ನು ಪಡೆಯುವುದೆಂದು ಕೇಳಿಬಲ್ಲೆ."

ಮುನಿಗೆ ಖಾತರಿಯಾಯ್ತು ! ಇವನು ಬ್ರಾಹ್ಮಣನೆಂದು ದೇವರನ್ನೂ ಸಾಯುಜ್ಯವನ್ನೂ ಜೈನರು ಒಪ್ಪದುದನ್ನು ಇವನರಿಯ ರಾಕ್ಷಸ ಸರಿಯಾದವನನ್ನು ಕಳುಹಲಿಲ್ಲವೆಂದು ತನ್ನೊಳಗೆ ನಕ್ಕು, ಅವನನ್ನು ಮತ್ತೂ ಪರೀಕ್ಷಿಸಿದ.

ಮುನಿ : "ಇದಕ್ಕೆ ಅರ್ಚಿರಾದಿ ಮಾರ್ಗವೆನ್ನುವರಲ್ಲವೆ? "

ಬ್ರಾಹ್ಮಣ : "ಸಂದೇಹವೇನು ? "

ಮುನಿ : " (ಕೋಪದಿಂದ) ಎಲೋ ಮುಠ್ಠಾಳ ಶ್ರಾವಕ! ಬ್ರಾಹ್ಮಣಾಧಮರ ದುಸ್ಸಹ ವಾಸದಿಂದ ನಿನ್ನ ಸಂಸ್ಕಾರವೆಲ್ಲ ಕೆಟ್ಟು ಹೋಗಿದೆ! ವ್ಯಾಹೃತಿ ಕೇಳಿದರೆ ನೆನಪಿಲ್ಲವೆನ್ನುವೆ! ಅನೇಕಾಂತವಾದವೆಂದರೇನೆಂದರೆ ಬಾಯಿಗೆ ಬಂದಂತೆ ಹರಟುವೆ! ಮೋಕ್ಷವೇನೆಂದರೆ ಅರ್ಚಿರಾದಿ ಗಮನವೆನ್ನುವೆ! ದುಷ್ಟರಾದ ವೈಷ್ಣವ ಬ್ರಾಹ್ಮಣರ ಮಾತಿನಂತಿದೆ ನಿನ್ನ ಉತ್ತರ! ಛೆ, ಛೆ, ನಿನ್ನನ್ನು ತಿದ್ದುವುದು ಬಲು ಕಷ್ಟ .... (ಯೋಚಿಸಿ) ಮೊದಲು ಮುಂಡನ (ಕೌರ) ಮಾಡಿಸಿಕೊಂಡು ಬಾ'' ಎಂದಾಜ್ಞಾಪಿಸಿದ. ಬ್ರಾಹ್ಮಣ ತಲೆ ಬೋಳಿಸಿಕೊಂಡು ಬರುವಷ್ಟರಲ್ಲಿ ಮುನಿಯ ಶಿಷ್ಯರಿಬ್ಬರು ಹತ್ತಿರ ಬಂದಿದ್ದರು.

''ಶಿಷ್ಯರೇ! ಈ ಅಸಂಸ್ಕೃತ ಶ್ರಾವಕನಿಗೆ ಮೋಕ್ಷಾಪೇಕ್ಷೆಯುಂಟಾಗಿರುವುದರಲ್ಲಿ ಸಂದೇಹವಿಲ್ಲ. ಆದರೆ ಸಂಸಾರವಾಸ, ಅವಿದ್ಯೆ ಪ್ರಬಲತರವಾಗಿದೆ" ಎಂದವನೇ, ಮುನಿ ಬ್ರಾಹ್ಮಣನಿಗೆ ದಿಗಂಬರ ದೀಕ್ಷೆಯನ್ನಿತ್ತು, ಅವನ ವಸ್ತ್ರಗಳನ್ನು ಕಳಚಿಸಿ, ದಾಂಹೋಕಂಗೆ ದಾನ ಮಾಡಿಸಿ ಬಿಟ್ಟನು! ಸ್ನಾನ ಕಾಲದಲ್ಲೂ ಶಾಟಿ ಧರಿಸಿರೂಢಿಯಾಗಿದ್ದ ಬ್ರಾಹ್ಮಣ ಈ ದುರ್ಗತಿ ಇಷ್ಟು ಘೋರ ರೀತಿಯಲ್ಲಿ ಬರುವುದೆಂಬುದನ್ನು ನಿರೀಕ್ಷಿಸಿರಲಿಲ್ಲ. ರಾಕ್ಷಸನಿಗೆ ಮನದಲ್ಲೇ ಬೈದು ಕೊಂಡ! ಹೆಂಡತಿ ಮಕ್ಕಳ, ಸಂಸಾರ ನಿರ್ವಹಣೆಗಾಗಿ ಅರಮನೆಯ ಉದ್ಯೋಗವನ್ನಾಶ್ರಯಿಸಿ ಬಂದ ತನಗೆ ಪರಸೇವೆ ನಾಯಿ ಪಾಡೆಂಬುದು ನಿಶ್ಚಯವಾಗಿ, ನಿಜವಾಗಿಯೂ ವೈರಾಗ್ಯವುಂಟಾಯಿತು. ತನ್ನ ದಿಗಂಬರತ್ವಕ್ಕೆ ನಾಚಿ, ಅಳಲಾರಂಭಿಸಿದ!

ಮುನಿ : ''ಶಿಷ್ಯರೇ! ನೋಡಿದಿರಾ? ಎಷ್ಟು ವೈರಾಗ್ಯ ಈತನಿಗೆ! ಅಯ್ಯಾ, ಶ್ರಾವಕನೆ! ಇನ್ನು ನೀನು ಸಂನ್ಯಾಸಿಯಾದೆ. ನಾನು ಸಾಕೆನ್ನುವ ತನಕ ಈ ವೃಕ್ಷಕ್ಕೆ ಬೆಳಿಗ್ಗೆ ಐವತ್ತು ಸಲ, ಮಧ್ಯಾಹ್ನ ಅರವತ್ತು ಸಲ, ಸಂಜೆ ನೂರು ಸಲ ಪ್ರದಕ್ಷಿಣೆ ಹಾಕಿ, ನಮಗೂ ನೂರೆಂಟು ಸಲ ದೀರ್ಘ ಪ್ರಣಾಮ ಮಾಡುತ್ತಾ ಹೀಗೆ ನಲವತ್ತೆಂಟು ದಿನ ನಡೆದುಕೊಂಡರೆ ದುಷ್ಟ ಸಂಗದ, ದುಷ್ಟ ಸಂಸ್ಕಾರದ ಫಲ ಕಮ್ಮಿಯಾಗುವುದು. ನಮ್ಮ ಶಿಷ್ಯರು

ನಿಮಗೆ ಜೊತೆಯಾಗಿರುವರು. ಹೆದರುವ ಕಾರಣವಿಲ್ಲ. ವಿರಕ್ತನಿಗೆ ಸಂಸಾರ ಏನೂ ಮಾಡದು" ಎನ್ನುತ್ತಾ ಕೈಸನ್ನೆಯಿಂದ ಬ್ರಾಹ್ಮಣನಿಗೆ ಪ್ರದಕ್ಷಿಣೆ, ನಮಸ್ಕಾರಗಳಿಗೆ ಆರಂಭಿಸಲು ಸೂಚನೆಯಿತ್ತ !

ಸಂಜೆಯಾಗುವುದರೊಳಗೆ ಬ್ರಾಹ್ಮಣ ಸಾಯುವಂತಾಗಿದ್ದ. ಹೆಸಿವೊಂದು ಕಡೆ! ಅಪಮಾನವೊಂದು ಕಡೆ! ಬೇಡವಾದ್ದನ್ನು ಮಾಡಲೇಬೇಕಾದ ನಿರ್ಬಂಧವೊಂದು ಕಡೆ! ಈ ದುರ್ದೆಸೆಯಿಂದ ಪಾರಾಗುವ ಗಳಿಗೆಯನ್ನೆದುರು ನೋಡುತ್ತ, ರಾತ್ರಿಯಾದೊಡನೆ, ಬಹಿದೆಸೆಗೆ ಹೋಗಿ ಬರುವ ನೆಪದಿಂದ ಅರಳೀಕಟ್ಟೆಯಿಂದ ನಿರ್ಗಮಿಸಿ, ಬಹುಕಾಲ ಊರ ಹೊರಗೇ ಇರುತ್ತ, ಅಪರಾತ್ರಿಯಲ್ಲಿ ಮನೆ ಸೇರಿ, ಪ್ರಶ್ನೆ ಕೇಳಿದ ಪತ್ನಿಯ ಮೇಲೆ ಸಿಟ್ಟಾಗಿ ಎರಗಿ, ನಾಲ್ಕಾರು ದಿನ ಜ್ವರ ಬಂದು, ಚೇತರಿಸಿಕೊಂಡು ರಾಕ್ಷಸನನ್ನು ಭೇಟಿಯಾದ.

"ಅಮಾತ್ಯರೇ ! ಅಗ್ನಿಯನ್ನು ಪರೀಕ್ಷಿಸ ಹೋಗಿ ಕೈ ಸುಟ್ಟುಕೊಂಡಂತಾಯಿತು, ನನ್ನ ಪಾಡು!" ಎನ್ನುತ್ತಾ ತನ್ನ ಪರಿಭವವನ್ನೆಲ್ಲ ಬ್ರಾಹ್ಮಣ ರಾಕ್ಷಸನಿಗೆ ವಿವರಿಸಿದ.

"ಹಾಗಾದರೆ, ನನ್ನ ತಂತ್ರ ಚಾಣಕ್ಯನಿಗೆ ಆವನ ತಪಸ್ಸಿನಿಂದಲೋ, ಯಾವುದೋ ಅಭಿಚಾರಿಕ ಕೃತ್ಯದಿಂದಲೋ, ಅದೃಶ್ಯಾಂಜನದಿಂದಲೋ ತಿಳಿದಿರಬೇಕು. ಇದು ಮನುಷ್ಯ ಯತ್ನಕ್ಕೆ ಮೀರಿದ್ದಾಗಿದ್ದು ನಾವು ತಡೆಯುವುದೆಂತು?" ಎಂದು ಮನದಲ್ಲೇ ಅಂದು ಕೊಳ್ಳುತ್ತಾ, ರಾಕ್ಷಸ, ಬ್ರಾಹ್ಮಣನಿಗೆ ವಸ್ತ್ರ ಭೂಷಣ ಧನಗಳಿಂದ ತೃಪ್ತಿಪಡಿಸಿ ಕಳುಹಿದ.

  

"ನಮಗಿನ್ನು ನಗರವಾಸ ಸಾಕು ! ಜನೇಶ್ವರಾ ! ಅರಿ ಸೈನ್ಯಗಳು ಪರಸ್ಪರ ಸಂಘರ್ಷಿಸಿ ಮುಂದಾಗುವ ಹಿಂಸೆಯನ್ನು ನಾವು ನೋಡಲಾರೆವು.

ಮುಂದೆ ಪಾದಯಾತ್ರೆ ಬೆಳೆಸುತ್ತೇವೆ. ಅಮಾತ್ಯರಿಗೆ ಕ್ಷೇಮವಾಗಲಿ" ಎನ್ನುತ್ತಾ ಜೀವಸಿದ್ಧಿ ಒಂದು ದಿನ ರಾಕ್ಷಸನಿಗೆ ಕಾಣಿಸಿಕೊಂಡು ತನ್ನ ಸಂಚಾರದ ಬಯಕೆಯನ್ನು ತಿಳಿಸಿದ.

"ಎಲ್ಲಾದರೂ ಉಂಟೇ ! ಕ್ಷೇಮಂಕರರಾದ ತಾವು ಈ ಅತ್ಯಗತ್ಯ ವೇಳೆಯಲ್ಲಿ ನಂದರೊಡನಿದ್ದು, ಅವರಿಗೆ ಶುಭ ತರುವ ಯಾವುದೊಂದು ಮಾಂತ್ರಿಕ ಆಚರಣೆಯಲ್ಲಿ ತೊಡಗುವುದು ಬಿಟ್ಟು ಈಗ ಪ್ರಯಾಣವೇಂದ ರೇನು ? ತಮಗೆ ಬೇಸರವಾಗಿದ್ದಲ್ಲಿ ತಾವು ನನ್ನೊಡನೆ ಯಾವಾಗ ಬೇಕೆಂದಾಗ ಬಂದು ಕುಳ್ಳಿರಬಹುದು. ನಾನೇ ಬಿಡಿಸಿಕೊಂಡು ಬರುವುದು ಕಠಿಣ. ತಮ್ಮನ್ನು ಅರಮನೆಯಲ್ಲಿ ಯಾರೂ ತಡೆಯಲಾರರು" ಎಂದು ರಾಕ್ಷಸ ಆಶ್ವಾಸನೆ ಕೊಟ್ಟ.

ವಿಧಿಯಿಲ್ಲದವನಂತೆ ಜೀವಸಿದ್ಧಿ ಧ್ಯಾನಾವಿಷ್ಟನಾಗಿ ಅಲ್ಲೇ ಕುಳಿತ. ಒಂದು ಗಳಿಗೆಯಲ್ಲಿ ಅಮಾತ್ಯ ಶಕಟಾಯನನನ್ನು ಕರೆಸಿ ತುರ್ತು ಪತ್ರ ವೊಂದನ್ನು ಬರೆಯಿಸಲಾರಂಭಿಸಿದ. ಜೀವಸಿದ್ಧಿ ಮೈಯೆಲ್ಲ ಕಿವಿಮಾಡಿ ಕೊಂಡು ಕೇಳುತ್ತಾ ಧ್ಯಾನಾವಿಷ್ಟನಾದವನಂತೆ ತೋರಿದ. ರಾಕ್ಷಸ ಬರೆಸಿದ ಮೊದಲ ಪತ್ರ ಕಳಿಂಗದ ಅರಸು ರಾಜವರ್ಮನಿಗೆ. ಒಕ್ಕಣೆ ಹೀಗಿತ್ತು:

"ಸ್ವಸ್ತಿ ಶ್ರೀ ಕಳಿಂಗಾಧಿಪತಿಗಳಾದ ಶ್ರೀ ಶ್ರೀ ರಾಜವರ್ಮರಿಗೆ ನಂದಾಜ್ಞೆಯಿಂದ ಅಮಾತ್ಯ ರಾಕ್ಷಸನು ಬರೆಸುವುದೇನೆಂದರೆ, ಇತ್ತ ಕುಶಲ. ಅತ್ತ ತಮ್ಮ ರಾಜ್ಯದಲ್ಲಿ ಷಡ್ವಿಧ ಈತಿಬಾಧೆಗಳಾವುವೂ ಅತಿವೃಷ್ಟಿ, ಅನಾ ವೃಷ್ಟಿಗಳಿಲ್ಲದಂತೆ ಪ್ರಜಾಕ್ಷೇಮದಿಂದ ತಾವು ಇರುವುದಾಗಿ ಭಾವಿಸುತ್ತೇವೆ. ಪ್ರಕೃತ ನಂದರಾಜ್ಯಕ್ಕೆ ಅನಿರೀಕ್ಷಿತ ಕುತ್ತು ಒದಗಿ ಬಂದಿದ್ದು ತಮ್ಮ ಸಹಾಯ ಅತ್ಯವಶ್ಯವಾಗಿದೆ. ಅತಿ ಪಶ್ಚಿಮದ ಪರ್ವತೇಶ್ವರರು ಬುದ್ಧಿಹೀನ ನಾದ ಚಂದ್ರಗುಪ್ತನೆಂಬ ಹೀನಜಾತಿಯ ನಮ್ಮ ದೇಶದ ಯುವಕನೊಬ್ಬ ನನ್ನೂ, ಶೀಘ್ರಕೋಪಿಯೂ ಹಠಮಾರಿಯೂ, ಅವಿವೇಕಿಯೂ ಆದ

ಬ್ರಾಹ್ಮಣಾಧಮ ಚಾಣಕ್ಯನೆಂಬವನನ್ನೂ ಕೂಡಿಕೊಂಡು, ನಿಷ್ಕಾರಣವಾಗಿ ನಮ್ಮ ಮೇಲೆ ದಂಡೆತ್ತಿ ಬರುತ್ತಿರುವರು. ಅವರನ್ನೆದುರಿಸಲು ನಮ್ಮ ಸೇನೆ ಸದಾ ಸಜ್ಜಾಗಿದೆ. ನಂದರಾಜ್ಯದ ಪಶ್ಚಿಮ ಗಡಿಯ ಇಂದ್ರಪ್ರಸ್ಥದ ಇಂದ್ರವರ್ಮರು ನಮ್ಮ ಆ ಕಡೆ ಗಡಿಯನ್ನು ರಕ್ಷಿಸುವಲ್ಲಿ ಒಪ್ಪಂದದಿಂದ ಬದ್ಧರಾಗಿ ಇದ್ದರೂ, ರಾಜರ ಚಿತ್ತ ತಿಳಿಯಲು ಶಕ್ಯ. ತಾವು ಮಗಧದ ದಕ್ಷಿಣದ ಭಾಗದಿಂದ ನಮ್ಮ ರಾಜ್ಯಕ್ಕೆ ರಕ್ಷಣೆಯೊಯ್ಯುವುದಲ್ಲದೆ, ಯುದ್ಧದಲ್ಲೂ ಸಕ್ರಿಯರಾಗಿ ಪಾಲ್ಗೊಂಡು ನಮಗೆ ಜಯತಂದಲ್ಲಿ ಮಗಧದ ದಕ್ಷಿಣಾರ್ಧಭಾಗವನ್ನು ಯುದ್ಧಾನಂತರ ನಿಮಗೆ ಬಹುಮಾನವನ್ನಾಗಿ ಬಿಟ್ಟುಕೊಡಲಾಗುವುದು. ನಿಮಗೂ ಪಂಚಾಲರಿಗೂ ಆಪ್ತ ಮಿತ್ರತ್ವವುಂಟು; ರಕ್ತಬಾಂಧವ್ಯವೂ ಉಂಟು. ನಿಮ್ಮಿಬ್ಬರ ಸೇನೆ ಕೂಡಿದರೂ ಸುಮಾರು ಎರಡು ಲಕ್ಷ ಯೋಧರೂ, ಆರುಸಾವಿರ ರಥಗಳೂ, ಅರುವತ್ತುಸಾವಿರ ಕುದುರೆಯಾಳುಗಳೂ, ಎರಡು ಸಾವಿರ ಆನೆಗಳೂ ಪಡೆಗೂಡುತ್ತವೆ. ಹೆಚ್ಚಿನ ಸೈನ್ಯ ಕೂಡಿ ಬಂದಲ್ಲಿ ವೆಚ್ಚವನ್ನು ನಾವೇ ಭರಿಸುವೆವು. ನಮ್ಮಲ್ಲಿ ಮೂರು ಲಕ್ಷ ಕಾಲಾಳುಗಳೂ, ಹತ್ತು ಸಾವಿರ ರಥಗಳೂ, ಎಂಭತ್ತುಸಾವಿರ ಕುದುರೆ ಸವಾರರೂ, ಐದು ಸಾವಿರ ಆನೆಗಳೂ ಉಂಟೆಂಬುದು ಜಗತ್ಪ್ರಸಿದ್ಧ. ಕಾಶೀರಾಜನ ಸೈನ್ಯವನ್ನು ಆಪತ್ಕಾಲಕ್ಕೆಂದು ಪ್ರತ್ಯೇಕ ಇಡಲಾಗಿದೆ. ಹಾಳು ಪರ್ವತ ಸೇನೆಯಲ್ಲಿ ಕಾಲಾಳುಗಳೇ ಸುಮಾರು ಎಂಟು ಲಕ್ಷವಿದೆಯಂತೆ! ಶಬರರು, ಯವನರು, ಭಲ್ಲೂಕರು, ಪರ್ವತ ಪ್ರಾಂತದವರೂ ಆದ ಇವರಿಗೆ ಸುಶಿಕ್ಷಣವಿರಲಾರದು! ಕೇವಲ ಮೂವತ್ತು ಸಾವಿರ ಪಡೆಯ ಆ ಯವನ ವೀರ ಅಲೀಕ ಸುಂದರ ಈ ಪರ್ವತನನ್ನೂ ಅವನ ಆರಟ್ಟ, ಕಾಶ್ಮೀರ, ದರದ ಕ್ಷುದ್ರಕಾದಿ ಸೈನ್ಯವನ್ನೂ ಆನೆ ಕುದುರೆಗಳನ್ನೂ ಧ್ವಂಸ ಮಾಡಿದನೆಂದರೆ, ಮಗಧದ ಸೈನ್ಯದೆದುರು ನಿಲ್ಲುವ ಹುಚ್ಚು ಸಾಹಸ ಅವನಿಗೇಕೆ, ಹೇಗೆ ಬಂದಿತೆಂಬುದು ತಿಳಿಯುವುದು ಕಠಿಣ ! ವಿನಾಶದ ವಿಪರೀತ ಬುದ್ಧಿ ಇರಬೇಕು. ಆದ್ದರಿಂದ ಜಯ ನಮಗೇ ಖಂಡಿತ. ಪಾಟಲೀಪುತ್ರದ ನೈಋತ್ಯ ಭಾಗದ ಗಡಿಯಿಂದ ಆಗ್ನೇಯದವರೆಗಿನ ದಕ್ಷಿಣ ಭಾಗದ ರಕ್ಷಣೆಯೆಲ್ಲ ತಮಗೇ ಸೇರಿದ್ದೆಂದು ಈ ಮೂಲಕ ತಿಳಿಸಲಾಗಿದೆ. ಶತ್ರುಗಳು ತಮ್ಮನ್ನೂ ಈ ರಹಸ್ಯವನ್ನೂ ಭೇದಿಸದಂತೆ ಎಚ್ಚರವಹಿಸಬೇಕು! ಚಾಣಕ್ಯ

ನಿಗೆ ಅನುಕೂಲವಾಗಿ ನಮ್ಮ ಅರಮನೆಯ ಗೋಡೆಗಳೂ ಕಂಭಗಳೂ, ವರ್ತಿಸಿ, ನಮಗೆ ದ್ರೋಹಮಾಡಲಾರಂಭಿಸಿವೆ ಎಂದರೆ ಸಂದರ್ಭದ ಕ್ರೂರತೆ, ಭಯಂಕರತೆಗಳನ್ನು ಅರ್ಥಮಾಡಿಕೊಂಡು ನಡೆಯುವುದಿದೆ! ದೂತನ ಕೈಲಿ ಮಾರುತ್ತರವನ್ನು ಒಡನೆಯೇ ಕಳುಹಬೇಕು. ಇಂತು ಕಳಿಂಗ ಹಿತೈಷಿ ಅಮಾತ್ಯ ರಾಕ್ಷಸ.''

ಪತ್ರದ ಒಕ್ಕಣೆಯನ್ನು ಕೇಳಿ ಜೀವಸಿದ್ಧಿ ಬೆಚ್ಚಿದ ! "ರಾಕ್ಷಸ! ಚಾಣಕ್ಯನಿಗೆ ಅರಮನೆಯ ಕಂಭ ಗೋಡೆಗಳೂ ಅನುಕೂಲವಾಗಿರುವುದಕ್ಕೆ ನಂದರ ದುರ್ನೀತಿ, ದುರ್ವಿನಯಗಳೇ, ಕಾರಣವೇ ಹೊರತು, ಚಾಣಕ್ಯನ ಅವಿವೇಕವೋ ಚಂದ್ರಗುಪ್ತನ ಬುದ್ಧಿ ಹೀನತೆಯೋ ಅಲ್ಲ! ಇದನ್ನು ಈಗಲೇ ಆಚಾರ್ಯನಿಗರುಹಿ ಉಪಕರಿಸದಿದ್ದರೆ ನಾಸಿದ್ದೇನು ಪ್ರಯೋಜನ !" ಎನ್ನುತ್ತಾ ಉಚ್ಛ್ವಾಸ ನಿಃಶ್ವಾಸಗಳನ್ನೂ ಬಂಧಿಸಿ ಕಿವಿದೆರೆದು ಕುಳಿತ !

ರಾಕ್ಷಸ ಎರಡನೆಯ ಪತ್ರವನ್ನು ಬರೆಸತೊಡಗಿದ! ಅದು ಪರ್ವತೇಶ್ವರ ನಿಗೇ ನೇರವಾಗಿ ಬರೆಸಿದ ಪತ್ರ!! ಒಕ್ಕಣೆ ಹೀಗಿತ್ತು :-

"ಸ್ವಸ್ತಿಶ್ರೀ ಯವನಾರಿವೀರ ಮಸ್ತಕಪಾದನೂ, ಆರ್ಯಸಂಸ್ಕೃತಿಯ ರಕ್ಷಣಾಧುರೀಣನೂ, ಪ್ರಾಚೀನ ಚಂದ್ರವಂಶ್ಯ ಕೀರ್ತಿಧ್ವಜ ರಕ್ಷಕನೂ, ಅಭಿನವ ಪುರೂರವನೂ ಆದ ಪರ್ವತೇಶ ಮಹಾರಾಜಾಧಿರಾಜನಿಗೆ, ಮಗಧ ನಂದರಾಜಾಜ್ಞೆಯಿಂದ ಅಮಾತ್ಯ ರಾಕ್ಷಸನು ಬರೆಸಿ ಕಳುಹುವ ನಿರೂಪ ವೇನೆಂದರೆ ತಾವು ಈಗ ತಾನೇ ಅಸಾಧ್ಯವನ್ನು ಸಾಧ್ಯ ಮಾಡಿ ಪಂಚನದ ಪ್ರಾಂತವನ್ನು ಏಕೀಕರಿಸಿ ದಣಿದಿರುವಿರೆಂದು ಊಹಿಸುತ್ತೇವೆ. ಅಭಿನಂದನೆ ಗಳು.

ಇತ್ತ ತಮಗೂ ನಮಗೂ ಯಾವ ಕಾಲದಲ್ಲೂ ಯಾವ ಕಾರಣ ದಿಂದಲೂ ವೈರವಿಲ್ಲ. ತಾವು ಸಹಾಯಾಪೇಕ್ಷಿಗಳಾಗಿದ್ದರೆ ಇಡೀ ನಂದ ಸೇನೆಯೇ ಯವನ ವಿಜಯ ರಣವಾರಿಯಾಗಿ ತಮ್ಮ ವಶದಲ್ಲಿದ್ದು ಆ

ವಿಜಯವನ್ನು ಸಾಧಿಸಿಕೊಡುತ್ತಿತ್ತು. ದುರ್ಬ್ರಾಹ್ಮಣನ ಕುಟಿಲವಿದ್ಯೆಯನ್ನು ತಾವು ನಂಬಿ ಬಳಸಿ, ಕ್ಷತ್ರಿಯ ವಿದ್ಯೆಗೆ ಇದು ಕಳಂಕವೂ ಆಗಿದೆ. ವಿಧಿಯಿಲ್ಲದೆ ತಾವು ಇದನ್ನುಪಯೋಗಿಸಿರಲೂ ಸಾಕು. ಶೈಲೂಷಕನನ್ನು ಮಾರಣ ಹೋಮದಿಂದ ಕೊಂದ ಆ ಬ್ರಾಹ್ಮಣಾಧಮ ಯಾರನ್ನು ಯಾವಾಗ ಬೇಕಾದರೂ ಹಾಗೆ ಕೊಂದಾನು ! ತಮ್ಮ ಸರದಿ ಯಾವಾಗ ? ಎಂದು ತಾವೂ ಭಯಭೀತರಾಗಿರಲು ಸಾಕು! ಮಗಧಕ್ಕಿಂತಲೂ ಈ ಬ್ರಾಹ್ಮಣಾಧಮನ ಬಗ್ಗೆ ತಾವು ಎಚ್ಚರವಹಿಸಬೇಕು. ತಮ್ಮ ಕ್ಷೇಮದಲ್ಲಿ ನಮ್ಮದೂ ಅಡಗಿದೆ. ನಮಗೆ ತಮ್ಮ ಮೇಲೆ ಹಗೆಯಿಲ್ಲವೆಂದು ಹೇಳಿದೆವು. ಉಪಾಯ್ಯ ನೋಡಿ ಚಂದ್ರಗುಪ್ತನನ್ನು ತಾವೇ ಸಂಹರಿಸಿದರೆ, ಅಥವಾ ಜೀವಂತ ನಮಗೆ ಹಿಡಿದು ಕೊಟ್ಟರೆ, ಮಗಧದ ಪಶ್ಚಿಮಾರ್ಧವನ್ನು ನಾವೇ ಸ್ವಪ್ರೀತಿಯಿಂದ ಕೊಡುತ್ತೇವೆ. ಚಂದ್ರಗುಪ್ತನೇ ಯುದ್ಧದಲ್ಲಿ ಗೆದ್ದರೆ, ನಿಮ್ಮ ಸೈನ್ಯದ ಹಾನಿಯ ಹೊರತು ನಿಮಗೆ ಬೇರಾವ ಲಾಭವೂ ಇರುವುದಿಲ್ಲ! ಬ್ರಾಹ್ಮಣ ನಿಮಗೆ ಏನಾದರೂ ಆಸೆ ತೋರಿಸಿದ್ದರೂ, ವಂಚಕನ ಮಾತುಗಳನ್ನು ನಂಬಿ ನೀವೇ ಆಮೇಲೆ ಪಶ್ಚಾತ್ತಾಪ ಪಡಬೇಕಾಗುತ್ತದೆ. ಮಗಧ ನಿಮ್ಮ ಪರ್ವತ ರಾಜ್ಯಕ್ಕೆ ಬಲುದೂರು. ಇಲ್ಲಿನ ನದೀ, ದುರ್ಗ, ಅರಣ್ಯಗಳು ದುಸ್ತರ. ಇಲ್ಲಿನ ಹವೆ ನಿಮ್ಮ ಸೈನ್ಯಕ್ಕೆ ಒಗ್ಗಲಾರದು ! ಊರು ಬಿಟ್ಟು ಬಹುದೂರ ಬರುವ ನೀವೆಲ್ಲ ಜೀವಂತವಾಗಿ ಮತ್ತೆ ಊರು ಸೇರುವುದು ಕಠಿಣ! ನೀವೇ ಗೆದ್ದಿರಿ ಎಂದಿಟ್ಟುಕೊಂಡರೆ ಈ ಮಾತು !! ಸೋತರಂತೂ ಮಾಗಧದ ಗಡಿ ಭಲ್ಲೂಕ, ಯವನ ಪ್ರಾಂತಗಳ ವರೆಗೆ ಹೋಗಿ, ಮಹಾಪದ್ಮರಾಯರು ಎರಡನೆಯ ಪರಶುರಾಮರಾಗಿಯೂ ಮಾಡದುದನ್ನು ನಾವೇ ಮಾಡಿದ ಕೀರ್ತಿ ನಮಗೆ ಬರುತ್ತದೆ. ಇತ್ತ ನೇಪಾಳದ ಕಿರಾತ ಸೈನ್ಯವೂ, ನೈಋತ್ಯದ, ಉಜ್ಜಯಿನೀ, ಅವಂತೀ, ವಿದರ್ಭಗಳ ದೊರೆಗಳೂ ನಮ್ಮನ್ನು ಕೂಡಿಕೊಂಡು, ನಿಮ್ಮ ಸೈನ್ಯವನ್ನು ಹಿಂದಿನಿಂದ ಎದುರಿಸಿಯಾರು. ಒರಳುಕಲ್ಲಿನಲ್ಲಿ ಸಿಕ್ಕಿಕೊಂಡ ದೋಸೆಯ ಹಿಟ್ಟಿನಂತೆ ನಿಮ್ಮ ಸ್ಥಿತಿ ಏನಾದೀತೆಂದು ನೀವು ಯೋಚಿಸಬೇಕು. ಚಂದ್ರಗುಪ್ತನಿಗೆ ಆ ಬ್ರಾಹ್ಮಣಾಂಗಾರನು ಯಾವನೋ ಯವನ ಸ್ತ್ರೀಯನ್ನು ಗಂಟು ಹಾಕಿರುವನಂತೆ ! ಯವನರನ್ನು ಗೆದ್ದ ನಿಮಗಲ್ಲವೇ ಅವಳು ಬಹುಮಾನವಾಗಿ

ದೊರೆಯಬೇಕು? ವಿಲಾಯತಿ ಹಣ್ಣನ್ನು ತಿಂದು ಸಿಪ್ಪೆ ಬೀಜಗಳೂ ಉಳಿಯದಂತೆ ಹೊರಗೆ ಉಗಿಯುವುದನ್ನು ಬಿಟ್ಟು, ಈಗ ಈ ಕೊಳಕು ಹಣ್ಣನ್ನು ಇಲ್ಲಿಯವರೆಗೆ ತರುವುದೇ ? ಸಂಸ್ಕಾರ ಶೂನ್ಯಳಾದ ಅವಳು ಚಂದ್ರಗುಪ್ತನಿಗೆ ರಾಣಿಯಾದಾಳೇ ? ಹಿಂದೆ ವಸಿಷ್ಠರ ಕಾಮಧೇನುವನ್ನು ವಿಶ್ವಾಮಿತ್ರರು ಹಿಂಸಿಸಿದಾಗ, ಧೇನುವಿನ ಯೋನಿ ಪ್ರಾಂತದಿಂದ ಬಂದ ಈ ಯವನರು ಯಾವ ಪುರುಷಾರ್ಥಕ್ಕೆ ಬದುಕಿ ಸತ್ತವರೆಂಬುದನ್ನು ಈ ಧಾರ್ಮಿಕ ಇತಿಹಾಸ ತಿಳಿಸದೆ ? ಯವನಳಾದ ಅವಳಿಗೆ ಹುಟ್ಟುವ ಮಗ ಆರ್ಯರಾಜ್ಯಕ್ಕೆ ದೊರೆಯಾದಾನೆ ? ಆದುದರಿಂದ ಅವಳನ್ನು ಉಪಾಯದಿಂದ ನೀವು ವಶಪಡಿಸಿಕೊಂಡರೆ ನಮಗೂ ಉಪಕಾರ, ಆರ್ಯ ಧರ್ಮಕ್ಕೂ ಉಪಕಾರ; ಚಂದ್ರಗುಪ್ತ ಚಾಣಕ್ಯರು ಕುಪಿತರಾದರೆ, ಅವರನ್ನು ಅಲ್ಲೇ ಸಂಹರಿಸಲೂಬಹುದು. ಯಾವ ಸೇನೆಯೂ ಇಲ್ಲದ ಅವರು ಕ್ಷತ್ರಿಯರಾದ ನಮ್ಮ ನಮ್ಮ ನಡುವೆ ಏರ್ಪಡಿಸುವ ಕಲಹದಿಂದ ಅವರಿಗೆ ಲಾಭ ದೊರೆಯುವುದರಲ್ಲಿ ಯಾವ ಪುರುಷಾರ್ಥವೂ ನಮಗಾಗಲಾರದು ! ಬುದ್ಧಿವಂತರೂ, ಶೂರರೂ ಆದ ತಾವು ಯೋಚಿಸಬೇಕು. ಆ ಯವನಳನ್ನೇ ಚಂದ್ರಗುಪ್ತಸಂಹಾರಕ್ಕೆ ಬಳಸಿದರೂ, ಸರಿಯೇ ! ಇದೇ ಉತ್ತಮೋಪಾಯ!! ಚಾಣಕ್ಯ ದುಬ್ರಾಹ್ಮಣನಾದರೂ, ಚಂದ್ರಗುಪ್ತ ಸತ್ತರೆ ತಣ್ಣಗಾದಾನು: ತಾನೇ ಕತ್ತಿಯೆತ್ತಲಾರ; ಅಷ್ಟು ವರ್ಣನಿಯಮವನ್ನು ಅವನು ಪಾಲಿಸಿಯಾನು. ತಾವು ಬೇಗ ಉತ್ತರಿಸಬೇಕು; ಇತ್ತ ಕಾರ್ಯೋನ್ಮುಖರೂ ಆಗಬೇಕು. ಇಂತು ತಮ್ಮ ಹಿತೈಷಿ. (ಚಾರನ ಕೈಲೇ ಉತ್ತರ ಕಳುಹಿ.) ಅಮಾತ್ಯ ರಾಕ್ಷಸ.''

  

ಅಮಾತ್ಯ ರಾಕ್ಷಸನ ದೂತರು ಅತ್ತ ಹೊರಟರು. ಇತ್ತ ಜೀವಸಿದ್ಧಿ ಬಹಿರ್ಮುಖನಾಗಲು ಕೊಂಚ ವೇಳೆಯಾಯ್ತು. ಅಮಾತ್ಯ ಅದನ್ನೆದುರು ನೋಡುತ್ತಿದ್ದ. ಸಹಜವಾಗಿ ಧ್ಯಾನ ಮುಗಿಸಿ ಎದ್ದವನಂತೆ, ಜೀವಸಿದ್ಧಿ ಎದ್ದು ''ಜೀನೇಶ್ವರಾ'' ಎನ್ನುತ್ತಾ ಪಿಂಛದಿಂದ ರಾಕ್ಷಸನನ್ನಾಶೀರ್ವದಿಸಿ ಹೊರಟ.

ಆಶ್ರಮಕ್ಕೆ ಬಂದವನೇ ಆ ಪತ್ರಗಳ ನಕಲನ್ನು ಯಥಾವತ್ತಾಗಿ ಮಾಡಿದ. ಏಕಸಂಥಿಗ್ರಾಹಿಯೆಂದು ಚಿಕ್ಕವಯಸ್ಸಿಂದಲೇ ಪ್ರಸಿದ್ಧನಾಗಿದ್ದ ಅವನು, ಚಾಣಕ್ಯನಂತೆಯೇ ಕೇಳಿದ ಪ್ರತಿ ಅಕ್ಷರವನ್ನೂ ಹದಿನೈದು ದಿನ ನೆನಪಿಡುವ ಶಕ್ತಿ ಹೊಂದಿದ್ದನಷ್ಟೆ! ಆವೆರಡು ಪತ್ರಗಳ ಜೊತೆಗೆ, "ಪಕ್ಷಿಗಳ ಗೊಡೆಯ! ಎಚ್ಚರಿಕೆ!! ಪಕ್ಷಿರಾಜನಿಗೆ ಸರ್ಪದ ಕಾಟ ಅಶಕ್ಯವಾದರೂ ಹಳೇ ಹುತ್ತದಿಂದ ಹೊಸವೆರಡು ಹಾವು ಹೊರಟಿವೆ. ಬಹುಭಯಂಕರ ಹಾವು ಗಳು! ಒಂದು ಕಾಳಿಂಗ ಸರ್ಪ ! ಮತ್ತೊಂದು ಪರ್ವತಪ್ರಾಯವಾದ ಹೆಬ್ಬಾವಿನಂತೆ! ಹಾವುಗಳನ್ನು ಸರ್ವೇಶ್ವರನ ಆಲಯಕ್ಕೇ ಕಳುಹಿದೆ. ಕೃಪೆ ಮಾಡಿ ನಿಗ್ರಹಿಸಿ, ಪಕ್ಷಿರಾಜರು ಅನ್ವರ್ಥರಾಗಬೇಕು" ಎಂಬ ಮೂರನೆಯ ಗೂಢಭಾಷೆಯ ಪತ್ರವನ್ನೂ ಬರೆದು, ಮೊದಲೆರಡನ್ನು ವೇಗಶರ್ಮನ ಕೈಲಿ ಸಂಕರ್ಷಣಾಲಯಕ್ಕೆ ತ್ವರಿತವಾಗಿ ಕಳುಹಿದ. ತನ್ನ ಪತ್ರವನ್ನು, ಪಳಗಿದ, ಮಾತಾಡುವ ಪಾರಿವಾಳ ಪಕ್ಷಿಯ ಕೊರಳಿಗೆ ಕಟ್ಟಿ "ಬಂಗಾರದ ಪಕ್ಷಿಯೆ ! ವಿಜಯೀಭವ ! ಆರ್ಯ ಚಾಣಕ್ಯರ ಬಳಿ, ಪಶ್ಚಿಮದತ್ತ ವಿತಸ್ತಾನದೀ ತೀರದ ಈಚಿನ ಬೀಡಿಗೆ ಹೋಗಿ ಬಾ!" ಎನ್ನುತ್ತಾ ಅದನ್ನು ಮುದ್ದಿಸಿ, ಆ ರಾತ್ರಿಯೇ ರಹಸ್ಯದಲ್ಲಿ, ಆ ದಿಕ್ಕಿನತ್ತ ಮೇಲಕ್ಕೆ ಎಸೆದ! ಈ ಬಗೆಯ ಸೇವೆಗಳನ್ನು ಹಿಂದೆಯೂ ಜಾಗರೂಕನಾಗಿ ನೆರವೇರಿಸಿದ್ದ ಆ ಪಕ್ಷಿ ಮರು ದಿನ ಸಂಜೆಯೊಳಗೆ ಚಾಣಕ್ಯನ ಶಿಬಿರದತ್ತ ವೇಗವಾಗಿ ಸೇರಿ ಆಕಾಶ ದಿಂದ ಧರೆಗಿಳಿಯಿತು! ದೂರದಿಂದ ಪಕ್ಷಿ ಬರುತ್ತಿದ್ದುದನ್ನು ಸ್ವಯಂ ಚಂದ್ರಗುಪ್ತನೇ ಕಂಡ! ಚಾಣಕ್ಯ ನೀತಿ ರೀತಿಯನ್ನರಿತ ಅವನ ಪಕ್ಷಿಯನ್ನು ಕೈಗಳಿಂದ ಬಾಚಿತಬ್ಬಿ, ಮುದ್ದಿಸಿ, ದಣಿದ ಅದಕ್ಕೆ ಹಾಲೂಡಿಸಿ, ಕೊರಳಲ್ಲಿದ್ದ ಸಣ್ಣ ಪತ್ರವನ್ನು ಬಿಚ್ಚಿ ನೋಡಿದ: "ಪಕ್ಷಿಗಳಗೊಡೆಯ"! ಎಂಬುದರಿಂದ ಇದು ಆರ್ಯಚಾಣಕ್ಯನಿಗೇ ಬರೆದ ಪತ್ರವೆಂದು ಖಾತರಿ ಯಾಯಿತು. ಒಂದು ಸಲ ಓದಿದ್ದರಿಂದ ಏನೂ ತಿಳಿಯಲಿಲ್ಲ ! ಎರಡು ಮೂರು ಸಲ ಓದಿದ ಮೇಲೆ "ಹಳೆಯ ಹುತ್ತ" ಎಂದರೆ ಮಗಧದ ನಂದರು, ಹಳೆಯ ವೈರಿಗಳೆಂದೂ, "ಹಾವೆಂ"ದರ ತಂತ್ರಗಳೆಂದೂ, "ಕಾಳಿಂಗ ಸರ್ಪ"ವೆಂದರೆ ಕಳಿಂಗ ದೇಶದ ಅರಸನಿಗೆ ಸಂಬಂಧ ಪಟ್ಟ ರಾಕ್ಷಸನ ತಂತ್ರನೆಂದೂ, "ಪರ್ವತ"ಪ್ರಾಯವಾದ ಹೆಬ್ಬಾವೆಂದರೆ

"ಪರ್ವತ ರಾಜ''ನಿಗೆ ಸಂಬಂಧ ಪಟ್ಟವೆಂದೂ, ಈ ವಿವರಗಳನ್ನು "ಸರ್ವೇಶ. ರನ ಆಲಯ"ವೆಂದರೆ ಸಂಕರ್ಷಣ ಆಲಯಕ್ಕೆ, ಮಧುರೆಗೆ, ಇಂದುಶರ್ಮ ಕಳುಹಿರುವನೆಂದೂ ಊಹಿಸಿ, ತಡ ಮಾಡದೆ, ಒಡನೆಯೇ ಚಾಣಕ್ಯನ ಬಳಿ ಸೇರಿ "ಒಡೆಯ ಹಾವು! ಹಾವು!" ಎಂದು ಹೇಳಿದ. ಸುತ್ತ ಮುತ್ತ ನೋಡಿದ ಚಾಣಕ್ಯ ಸಂಧ್ಯೋಪಾಸನೆ ಮುಗಿಸಿ ಬಂದು, ಬಿಡಾರದಲ್ಲಿ ಪಕ್ಷಿಯನ್ನು ಕಂಡು ಕಣ್ಣೀರು ಹಾಕಿದ. ಪಕ್ಷಿಯನ್ನು ಬಹುಕಾಲದ ಹಿಂದೆ ಕಳೆಕೊಂಡಿದ್ದ ಅವನ ಹೃದಯದಲ್ಲಿ ಕುಟಿಲತೆಯೇ ತುಂಬಿತ್ತೆಂದು ಅಜ್ಞರು ಹೇಳಿದರೂ, ಚಾಣಕ್ಯ ಮಗುವಿನಂತೆ ಆ ಪಕ್ಷಿಯನ್ನು ಮುದ್ದಿಸಿದ. ಯಾಗಾಂಗವಾಗಿ ತಯಾರಿಸಿ ಮಿಕ್ಕಿದ್ದ ಕ್ಷೀರಾನ್ನವನ್ನು ತಾನೇ ಪಕ್ಷಿಗೆ ಉಣಿಸಿ, ಅದು ಅವನ ಹೆಗಲ ಮೇಲೆ, ತಲೆಯ ಮೇಲೆ, ಶಿಖೆಯ ಮೇಲೆ ಕುಳಿತು ಪ್ರೇಮದಿಂದ ''ಕಿಚಿ, ಕಿಚಿ" ಎಂದು ಮಾತಾಡುತ್ತಿರಲು, ಪತ್ರದ ಒಕ್ಕಣೆಯನ್ನು ಓದಿಕೊಂಡು ಚಂದ್ರಗುಪ್ತನ ಮುಖ ನೋಡಿದ. ''ತನಗೆ ತಿಳಿದಿದೆ'' ಎಂದು ಅವನ ಮುಖದಿಂದ ಅರಿತು, ಚಾಣಕ್ಯ ಹುಬ್ಬು ಗಂಟಿಕ್ಕಿದ! ಕಣ್ಣುಗಳಲ್ಲಿ ಕಿಡಿಯನ್ನೇ ಉಗುಳುತ್ತಿದ್ದ ಆ ದೃಶ್ಯದಿಂದ ಅಂದು ಚಂದ್ರಗುಪ್ತನಿಗೂ ಕ್ಷಣಕಾಲ ಭಯವಾಯಿತು : "ಎಲ! ವೃಷಲ! ದುಷ್ಟಾನ್ನ ಸೇವೆಯಲ್ಲಿ ಪಿಂಡ ಬೆಳೆಸುತ್ತಿರುವ ಆ ಅಮಾತ್ಯನು ಈ ಬ್ರಾಹ್ಮಣನಿಗೆ ಸಮವಾದಾನೇನೊ ? ನೋಡುತ್ತಿರು ! ಅವನ ತಂತ್ರವನ್ನು ಅವನಿಗೇ ಉರುಲು ಹಾಕುತ್ತೇನೆ" ಎಂದವನೇ, ಏನನ್ನೋ ಯೋಚಿಸಿದ. ಏನೋ ಮಿಂಚಿತು ! "ವತ್ಸ! ನಿನಗೆ ಈ ಪರ್ವತನಿಂದಲೂ ಅಪಾಯ ಬರುವಂತಿದೆ! ಇಕೋ, ಕಿವಿ ಮಾತು !" (ಎನ್ನುತ್ತಾ) ವಿದ್ಯುಲ್ಲೇಖೆಗೆ ಸಂಬಂಧಿಸಿದಂತೆ ಹಲವು ವಿಷಯಗಳನ್ನು ರಹಸ್ಯದಲ್ಲಿ ಹೇಳಿದ. "ಪರ್ವತನಿಗೆ ಈ ಯವನ ರಮಣಿಯಲ್ಲಿ ಹುಚ್ಚಿದೆ! ನಾನು ಬಲ್ಲೆ! ಅದು ಎಷ್ಟು ಆಳದ ಹುಚ್ಚೆಂದು ತಿಳಿಯಲು ಅವಳನ್ನೇ ಉಪಯೋಗಿಸುವ. ನೀನು ಗಾಬರಿಯಾಗಬೇಡ. ಏಕಾಂತದಲ್ಲಿ ಅವಳನ್ನೇ ಇತ್ತ ಕಳುಹು" ಎಂದವನೇ, ಯುವಶಿಷ್ಯನೂ ಕುಶಾಗ್ರಮತಿಯೂ ಆದ ಶಶಿಶರ್ಮನೆಂಬ ತನ್ನ ಆಪ್ತ ಶಿಷ್ಯನನ್ನು ಕರೆದು "ವತ್ಸ, ನೀನೀಗಲೇ ಮಧುರೆಯ ಸಂಕರ್ಷಣಾಲಯಕ್ಕೆ ಹೋಗಿ, ನಮ್ಮ ಹೊಸ ಆಶ್ರಮದ ಕುಲಪತಿ ಬೋಧಸಮುದ್ರನನ್ನು

ಕಂಡು ಬಾ. ಏನಾದರೂ ಕಾಗದ ಪತ್ರಗಳನ್ನು ಕೊಟ್ಟಾನು. ನೀನು ತಲುಪುವ ವೇಳೆಗೆ ಆ ಪತ್ರ ನಮ್ಮತ್ತ ಹೊರಟಿದ್ದರೂ ಇದ್ದೀತು. ನಾವೀಗ ಜಾಲಂಧರ ಕ್ಷೇತ್ರವನ್ನು ದಾಟಿದ್ದೇವೆ. ಹಸ್ತಿನಾವತಿ ದೂರವೇನೂ ಇಲ್ಲ. ಮಾರ್ಗಮಧ್ಯದ ನಮ್ಮ ಇತರ ಆಶ್ರಮಗಳನ್ನು ವಿಚಾರಿಸುತ್ತಾ ಬೇಗ ಹೋಗಿ, ನಾಳೆಯಾಗುವುದರೊಳಗೆ ಪತ್ರಗಳನ್ನು ತಾ. ಜಾಗ್ರತೆ. ಶತ್ರು ಗೂಢಚಾರರು ಇದ್ದಾರು. ನಿನ್ನ ರಕ್ಷಣೆಗೆ ಚಂದ್ರಗುಪ್ತನ ಆಪ್ತ ಅಂಗ ರಕ್ಷಕ ಬರುತ್ತಾನೆ. ಅವನ ಕುದುರೆಯ ಮೇಲೆಯೇ ಹೊರಡು'' ಎನ್ನುತ್ತಾ ಏರ್ಪಾಡುಗಳನ್ನು ಮಾಡಿದ. ಅಂಗರಕ್ಷಕನೂ, ಶಶಿಶರ್ಮನೂ ವೈಶ್ಯ ವ್ಯಾಪಾರಿಗಳಂತೆ ವೇಷ ಧರಿಸಿ, ವಿಭೂತಿ, ಕುಂಕುಮ, ಕೇಸರಿ, ನಾಮ, ಪಚ್ಚೆಕರ್ಪೂರದ ಸರಕುಗಳ ಒಂದೆರಡು ಮೂಟೆಗಳನ್ನು ಹೇರಿಕೊಂಡು ಸಂಕರ್ಷಣಾಲಯದತ್ತ ಹೊರಟರು.

  

''ವತ್ಸೆ! ನೀನು ನನಗೆ ಮಗಳಿದ್ದಂತೆ! ನೀನು ನಿಜವಾಗಿಯೂ ಚಂದ್ರ ಗುಪ್ತನನ್ನು ಪ್ರೀತಿಸುವೆಯಾ ? ಆ ಪ್ರೀತಿಯ ಆಳ ಎಷ್ಟು ತೋರಿಸ ಬಲ್ಲೆಯಾ ?" ಚಾಣಕ್ಯನೆಂದ.

ವಿದ್ಯುಲ್ಲೇಖೆ ಬಿಕ್ಕಿಬಿಕ್ಕಿ ಅತ್ತಳು: ''ಈ ಪರೀಕ್ಷೆ ಏಕೆ? ಸಂಶಯವೇ? ದೇಶ, ಬಾಂಧವರು ಎಲ್ಲರನ್ನೂ ತೊರೆದು ಬಂದ ನನ್ನನ್ನು ಹೀಗೆ ಸಂಶಯಿ ಸುವುದಕ್ಕಿಂತ ಕೊಲ್ಲುವುದೇ ಲೇಸು'' ಎಂದಳು.

"ಹಾಗಾದರೆ ಪ್ರಿಯತಮನಿಗಾಗಿ, ಪತಿಗಾಗಿ, ನೀನೀಗ ಕಠಿಣ ಕಾರ್ಯವೊಂದನ್ನು ಮಾಡಬೇಕಾಗಿದೆ." ಆಚಾರ್ಯನೆಂದ.

"ಆರ್ಯರೇ! ಯವನ ರಮಣಿಯರಿಗೆ ಕತ್ತಿ ಹಿಡಿಯುವುದೂ ಗೊತ್ತು. ಅದೇ ತಾನೇ ತಮ್ಮ ಸೂಚನೆ ?"

"ಹಾಗಲ್ಲ, ಮಗಳೇ ! ನೀನೀಗ ಕತ್ತೆಯೊಂದನ್ನು ಹಿಡಿಯಬೇಕಿದೆ. ಕುದುರೆಗಳ ಮಧ್ಯೆ ಸೇರಿಕೊಂಡು ಅದು ಹಾವಳಿ ಮಾಡುತ್ತಿದೆ. ಅದು ಎಷ್ಟರ ಮಟ್ಟಿಗೆ, ಯಾವ ಜಾತಿಯ ಕತ್ತೆ ಎಂದು ಪತ್ತೆ ಹಚ್ಚಿ ನೀನೊಬ್ಬಳೇ ಹೇಳಬಲ್ಲೆ! ನನಗೆ ಕತ್ತೆಯ ಪರೀಕ್ಷೆಯ ಪ್ರಯೋಗ ತಿಳಿಯದು. ಅದರ ಸಿದ್ಧಾಂತವನ್ನಷ್ಟೇ ನಾನು ಬಲ್ಲೆ!'' ಎನ್ನುತ್ತಾ ಅವಳ ಕಿವಿಯಲ್ಲಿ ಏನೋ ಹೇಳಿದ !

ಕೇಳಿ ಕಿಲಕಿಲನೆ ಅವಳು ನಕ್ಕಳು. ಚಾಣಕ್ಯ ತುಟಿಯ ಮುಂದೆ ಬೆರಳಿಟ್ಟು! "ಮೊದಲು ಅಡಕವಾಗಿ ನಗುವುದನ್ನು ಕಲಿ; ನಾನೂ ಇಲ್ಲಿರುವೆ ! ಜನ ಏನೇನೋ ಹೇಳಬಾರದು.'' ಎಂದೆಚ್ಚರಿಸಿದ !



## ಹದಿಮೂರನೆಯ ಅಧ್ಯಾಯ

# ಚಾಣಕ್ಯ ಬುದ್ಧಿ ವೈಭವ !

ಹುಣ್ಣಿಮೆಯ ರಾತ್ರಿ. ಸೈನ್ಯ ಇಪ್ಪತ್ತು ಗಾವುದಕ್ಕಿಂತ ಹೆಚ್ಚು ದೂರ ಪ್ರಯಾಣ ಮಾಡಿ ದಣಿದು ಬೀಡು ಬಿಟ್ಟಿತ್ತು. ಫಾಲ್ಗುಣದ ಆ ಸುಂದರ ರಾತ್ರಿಗೇ ಅಲಂಕಾರನಾದ ಚಂದ್ರ, ಸೈನ್ಯ ಮಧ್ಯದಲ್ಲಿನ ಚಂದ್ರ ಗುಪ್ತನಂತೆ ಶಾಂತನಿರಲಿಲ್ಲ! ಕಾಮಿಗಳ ಮನಸ್ಸನ್ನು ಕೆದಕಿ ಕೋಲಾಹಲ ಮಾಡಿ, ತಾನೇನೂ ಮಾಡದವನಂತೆ ಆಗಸದಲ್ಲಿ ಶಾಂತನಾಗಿದ್ದ ! ಅವನೂ ಚಾಣಕ್ಯ ಶಿಷ್ಯನೋ ! ಅದು ಪರ್ವತೇಶನಿಗಂತೂ ಗೊತ್ತಿರಲಿಲ್ಲ !

ದೊರೆ ತನ್ನ ಶಿಬಿರದ ಹೊರಗೆ ಶತಪಥ ಹಾಕುತ್ತಿದ್ದ. ರಾತ್ರಿ ಸರಿಯುತ್ತ ಹನ್ನೆರಡು ಗಂಟೆಯನ್ನು ದಾಟಿದ್ದಿರಬೇಕು. ಆಚಾರ್ಯ ಶಿಬಿರ

ದತ್ತ ನೋಡಿದ ! ಸೈನ್ಯವೆಲ್ಲ ನಿದ್ರಿಸುತ್ತಿತ್ತು. ಪ್ರಾಯಃ ಆಚಾರ್ಯನೂ ನಿದ್ರಿಸಿರಬೇಕು: ಅದು ಅವನ ದಿನನಿತ್ಯದ ಪದ್ಧತಿ-ಪೂರ್ವರಾತ್ರಿಯಲ್ಲೇ ಮಲಗಿ ಉಷಃ ಕಾಲಕ್ಕೆ ಪೂರ್ವದಲ್ಲೇಳುವುದು. ಅರಮನೆಯಲ್ಲಿರಲಿ, ಡೇರಿನಲ್ಲಿರಲಿ, ಅಡವಿಯಲ್ಲಿರಲಿ, ಮರುಭೂಮಿಯಲ್ಲಿರಲಿ. ಸೂರ್ಯ ಚಂದ್ರರ ಗತಿ ನಿಯಮಗಳಂತೆ ಆಚಾರ್ಯನ ನಿಯಮವೂ ಅಷ್ಟು ಬಿಗಿ ಯಾಗಿತ್ತು. ಚಂದ್ರಗುಪ್ತನನ್ನೂ ತನ್ನೆಡೆಯೇ ಮಲಗಿಸಿಕೊಂಡು, ಮಗ ನನ್ನು ತಂದೆ ಕಾಪಾಡುವಂತೆ, ಚಾಣಕ್ಯ ಆ ತನ್ನ ಕಣ್ಮಣಿಯನ್ನು ಹಗಲೂ ಇರುಳೂ ರಕ್ಷಿಸುತ್ತಿದ್ದ.

ಸಿಂಧುವನದಲ್ಲಿ ಶೈಲೂಷಕನನ್ನು ಚಾಣಕ್ಯ ಕೊಂದ ಮೇಲೆ ಸೆರೆ ಸಿಕ್ಕ ದ್ವಿಭಾಷಿಯನ್ನು ಪರ್ವತ ತನ್ನೆಡೆ ಇಟ್ಟುಕೊಂಡು, ಅವನಿಂದ ಅಷ್ಟಿಷ್ಟು ಯವನ ಭಾಷೆಯನ್ನು ಕಲಿಯುತ್ತಿದ್ದ. ವಿದ್ಯುಲ್ಲೇಖೆಗಂತೂ ಹೊತ್ತು ಹೋಗದೆ ಸದಾ ಆ ದ್ವಿಭಾಷಿಯಿಂದ ಪರ್ವತರಾಜ್ಯದ ಭಾಷೆಯನ್ನು ಅರಿ ಯಲು ಯತ್ನಿಸುತ್ತಾ ಮುರುಕು ಮುರುಕಾಗಿ ಮಾತಾಡಲು, ತಿಳಿಯಲು ಸಫಲಳಾಗಿದ್ದಳು.

ಪರ್ವತ ದ್ವಿಭಾಷಿಯನ್ನೆಬ್ಬಿಸಿ, ವಿದ್ಯುಲ್ಲೇಖೆಯೊಡನೆ ತುರ್ತಾಗಿ ಮಾತಾಡುವುದಿದೆಯೆಂದೂ, ಅವಳು ನಿದ್ರಿಸಿರದಿದ್ದರೆ, ಬೇರಾರಿಗೂ ತಿಳಿಯ ದಂತೆ ಅವಳನ್ನು ಉಪಾಯದಿಂದ ಕರೆತರಬೇಕೆಂದೂ, ಹೇಳಿ ಅವನಿಗೊಂದು ರತ್ನಹಾರವನ್ನು ಬಹುಮಾನವನ್ನಾಗಿತ್ತ. "ಏನೋ ಇದೆ!" ಎಂದು ಅರ್ಥ ಮಾಡಿಕೊಂಡ ಆ ದ್ವಿಭಾಷಿ ವಿದ್ಯುಲ್ಲೇಖೆಯ ಶಿಬಿರದತ್ತ ನಡೆದ. ಆಚಾರ್ಯನ ಶಿಬಿರದ ಪಕ್ಕದಲ್ಲೇ ಅದು ಇದ್ದು, ಚಾಣಕ್ಯಶಿಷ್ಯರು ಹಲ ವರು ಅದರೊಳಗಿದ್ದು ಚಾಣಕ್ಯನಿಗೇನೂ ಕಮ್ಮಿಯಿಲ್ಲದೆ ಆ ಯವನ ಕನ್ಯೆ ಯನ್ನು ಕಾಯುತ್ತಿದ್ದರು. ದ್ವಿಭಾಷಿ ಬಂದಾಗ ಅವರು ನಿದ್ರಾಭರದಲ್ಲಿದ್ದ ವರಂತೆ ನಟಿಸಿದರು. ವಿದ್ಯುಲ್ಲೇಖೆ ನಿದ್ರಿಸಿರಲಿಲ್ಲ. ಚಾಣಕ್ಯ ಹೇಳಿದ ಕೆಲಸ ಅವಳು ನಿದ್ರೆಹೂಡದಂತೆ ಮಾಡಿತ್ತು. ದ್ವಿಭಾಷಿ ಮೆಲ್ಲನೆ ಕಿರು ಬೆಳಕಿನಲ್ಲಿ ಅವಳನ್ನು ಮುಟ್ಟಿ ತನ್ನೊಡನೆ ಬರುವಂತೆ ಕೈಸನ್ನೆ ಮಾಡಿದ.

ಸ್ವದೇಶಮಿತ್ರನೊಡನೆ ಅವಳು ಎದ್ದು, ಸೀರೆ ಸರಿ ಪಡಿಸಿಕೊಂಡು, ಸುತ್ತು ಮುತ್ತ ನೋಡಿ, ಯಾರಿಗೂ ತಿಳಿಯಲಿಲ್ಲವೆಂದು ನಿಟ್ಟುಸಿರಿಟ್ಟ ನಾಟಕ ಮಾಡಿ ಅವನನ್ನು ಹಿಂಬಾಲಿಸಿದಳು. ಪರ್ವತನ ಶಿಬಿರದೊಳಕ್ಕೆ ಅವಳನ್ನು ತಂದು ಬಿಟ್ಟು ದ್ವಿಭಾಷಿ ಹಿಂದೆ ಸರಿದ. ವಿದ್ಯುಲ್ಲೇಖೆಯ ಎದೆ ಪಟಪಟನೆ ಬಡಿದು ಕೊಳ್ಳುತ್ತಿತ್ತು. ಪರ್ವತ ಮಾತಾಡಲು ಪ್ರಾರಂಭಿಸಿದ. ಅವಳ ಹತ್ತಿರ ಸರಿದು ಮೆಲು ದನಿಯಲ್ಲಿ ಹೀಗೆಂದ :

ಪರ್ವತ : "ರಾಜಕುಮಾರಿ! ನಿದ್ರೆಬರಲಿಲ್ಲವೆ ? ನಿನ್ನವರನ್ನೆಲ್ಲ ಕಳೆದುಕೊಂಡು, ಸಾಂತ್ವನ ಮಾಡುವವರೂ ಇಲ್ಲದೆ, ಸೈನ್ಯ ಮಧ್ಯದಲ್ಲಿ ಸಿಕ್ಕಿಕೊಂಡು ನಿನಗೆ ಬೇಸರವಾಗಿಲ್ಲವೆ ?"

ಕುಮಾರಿ : "ದೊರೆಯೇ! ಇಲ್ಲಿನವರೆಲ್ಲ ಈಗ ನನ್ನವರೇ ಆಗಿರುವ ರಲ್ಲವೆ ? ತಮ್ಮ ಸೈನ್ಯ ನನ್ನನ್ನು ಸರಿಯಾಗಿಯೇ ನೋಡಿಕೊಳ್ಳುತ್ತಿದೆ. ಕೃತಜ್ಞತೆಗಳು. ಬೇಸರವುಂಟು. ಕೊಂಚ ದಿನ ತಾನೆ !

ಪರ್ವತ : "ನಿನ್ನ ದೇಶದ ಹುಣ್ಣಿಮೆಗೂ ಇಲ್ಲಿನದಕ್ಕೂ ವ್ಯತ್ಯಾಸ ತಿಳಿಯುವುದೇ !''

ಕುಮಾರಿ ; (ಕಿಲಕಿಲನೆ ನಕ್ಕಳು. ಆ ಶಿಬಿರದ ಹೊರಗಿಂದ ಗಾಳಿ ಗೆಂದು ಬಿಟ್ಟ ಜಾಗೆಯಲ್ಲಿ ಸಾಂದ್ರವಾದ ಚಂದ್ರಿಕೆ ಒಳಬರುತ್ತಾ ಅವಳ ಕೆನ್ನೆಯ ಎರಡೂ ಗುಳಿಗಳನ್ನು ವಿಲಕ್ಷಣವಾಗಿ ತೋರಿ, ಪರ್ವನಿಗೆ ಮೃತ್ಯು ಸುಳಿಗಳಾಗಿ ಪರಿಣಾಮ ಬೀರಿದವು. ಹತ್ತಿರ ಸಮೀಪಿಸಿ, ಕೈಗಳನ್ನು ಹಿಡಿದುಕೊಂಡ !)'' "ಹುಣ್ಣಿಮೆಯೇ ಆದರೂ ಪರಿಸರ ಅದನ್ನು ವಿಲ ಕ್ಷಣವನ್ನಾಗಿಸುತ್ತದೆ." (ಅವನ ಕೈಗಳನ್ನು ಅವಳು ಕೊಡವಿಕೊಳ್ಳಲಿಲ್ಲ.)

ಪರ್ವತ : "ನನ್ನ ಉಪಸ್ಥಿತಿ ಆ ಹುಣ್ಣಿಮೆಯನ್ನು ನಿನಗೇನು ಮಾಡಿದೆ ? ಹುಣ್ಣಿಮೆಯ ಪೂರ್ಣ ಪ್ರಯೋಜನವನ್ನು ನೀನು ಪಡೆಯ

ಬೇಡವೆ ? ದೊರೆಯೊಬ್ಬ ಪಕ್ಕದಲ್ಲಿದ್ದೂ, ತಿಳಿಗೊಳನ ಪಕ್ಕದಲ್ಲಿ ಬಾಯಾರಿ ಸತ್ತಂತೆ, ನೀನು ಬೇಸರಿಸುವುದೇ ?''

ಕುಮಾರಿ ; "ನನ್ನ ಪತಿ ಪಕ್ಕದಲ್ಲಿದ್ದರೂ ಆ ಬ್ರಾಹ್ಮಣ ಸೇರಬಿಡುವುದಿಲ್ಲ ಎಂದು ನಿಮಗೆ ಹೇಗೆ ತಿಳಿಯಿತು ?''

ಪರ್ವತ : (ಸಿಟ್ಟಿನಿಂದ) "ಆ ದೊರೆಯನ್ನಲ್ಲ ನಾನು ಹೇಳಿದ್ದು! ಸ್ವಂತ ಸೈನ್ಯವೂ ಇಲ್ಲದ, ಕತ್ತಿಯನ್ನೇ ಹಿಡಿಯದ, ಶೂದ್ರಪುತ್ರನನ್ನು ನಾನೂ ಎಂದೂ ದೊರೆ ಎನ್ನಲಾರೆ! ಇಲ್ಲಿರುವ ಒಬ್ಬನೇ ದೊರೆ ನಾನು. ಶುದ್ಧ ಕ್ಷತ್ರಿಯ ಜಾತ. ನನ್ನಿಂದೇನೂ ನಿನಗೆ ಅಪೇಕ್ಷೆ ಇಲ್ಲವೆ" ಎನ್ನುತ್ತಾ ಅವಳನ್ನು ಆಲಿಂಗಿಸಲು ಪ್ರಯತ್ನಿಸಿದ.

ಕುಮಾರಿ : (ಚಕಿತಳಾದಂತೆ ನಟಿಸಿ) "ದೊರೆಯೇ! ಯಾವುದಕ್ಕೂ ಕಾಲವುಂಟು. ಅದನ್ನು ತಿಳಿಯದವ ಮೂರ್ಖ! ಕಾಮುಕ್ಕೆ ಕಣ್ಣಿಲ್ಲವೆನ್ನುವುದು ನಿಜ. ಅದು ದುರ್ದೈವಿಗಳ ಪಾಡು. ಅದಕ್ಕೊಂದು ಕಣ್ಣು ಕೊಟ್ಟರೆ ಅದು ಅಮೃತವಾಗಿ, ಜೀವನ ಸುಖಾಂತವಾಗುತ್ತದೆ. ನನ್ನ ತಂದೆಗೂ ಇದು ತಿಳಿಯಲಿಲ್ಲ. ನಾನು ಅವನನ್ನು ಜುಗುಪ್ಸೆಯಿಂದ ಕಂಡುದೇ ಈ ವಿಷಯದಲ್ಲಿ."

ಪರ್ವತ ; "ಹಾಗಾದರೆ ನಮಗೆ ಸಕಾಲ ಬರುವುದೆಂದು ನಿನ್ನ ಭರವಸೆಯೇ ? ನೀನಿಷ್ಟ ಪಟ್ಟರೆ ನಿನ್ನನ್ನು ನನ್ನ ರಾಣಿ ಮಾಡುವೆ. ಶೂದ್ರನಿಂದ ನಿನಗೆ ಸಿಗದ ಭೋಗವೆಲ್ಲ ದೊರೆಯುತ್ತದೆ! ನಿನ್ನ ಕಲ್ಪನೆಗೇ ಅದು ಈಗ ನಿನಗೆಟುಕದು ! ತಿಳಿ ! ನಮ್ಮಲ್ಲಿ ಬ್ರಾಹ್ಮಣ ಕಾಟವೂ ಇರಲಾರದು. ಬರೀ ಯುದ್ಧದಿಂದ ನನಗೂ ಬೇಸರವಾಗಿದೆ. ಈ ಬ್ರಾಹ್ಮಣನ ಭಯದಿಂದ ಇತ್ತ ಬರಬೇಕಾಯಿತು. ಮಗಧವನ್ನು ಯಾರು ಆಳಿದರೇನು? ಅವರು ಹಜಾಮರು! ಇವನು ಶೂದ್ರ!! ನಿನ್ನ ತಂದೆ ಸತ್ತು ಅವಾಂತರವಾದ ದಿನ, ಆ ಬ್ರಾಹ್ಮಣನ ಭಯದಿಂದ ನಾನು ನಿನ್ನನ್ನು ಅಂದೇ ಪರಿಗ್ರಹಿಸ

ಲಿಲ್ಲ. ಈಗಲೂ ಕಾಲ ಮಿಂಚಿಲ್ಲ. ನನಗೆ ಸಕಾಲವಾವುದೆಂದು ಸೂಚಿಸಿ ಬಲ್ಲೆಯಾ ?''

ಕುಮಾರಿ : ''ಈ ನನ್ನ ಪತಿಯನ್ನೇನು ಮಾಡುವಿರಿ ?''

ಪರ್ವತ : ''ಏನು ಮಾಡೋಣ, ನೀನೇ ಹೇಳು. ನಿನಗೆ ಅವನು ಬೇಡವಾದರೆ ಆಯಿತು.''

ಕುಮಾರಿ : ''ಅಮೃತದ ಬಂಗಾರದ ಕೊಡವಿರುವಾಗ, ಹೆಂಡದ ಗಡಿಗೆಗೆ ಯಾರು ಆಸೆ ಪಡುವರು ?''

ಪರ್ವತ : ''(ಸಂತೋಷದಿಂದ) ಹಾಗಾದರೆ ಆ ಗಡಿಗೆ ಒಡೆದಾಗ ಚೂರಾಗುತ್ತದೆ! ಅದಕ್ಕೆ ದಿನ, ವಾರ, ತಿಥಿ ನಕ್ಷತ್ರಗಳನ್ನು ನೋಡುವವ ರುಂಟೋ ?''

ಕುಮಾರಿ : "ಹಾಗಲ್ಲ ! ನಿಮ್ಮ ದೇಶದಲ್ಲಿ ಎಲ್ಲಕ್ಕೂ ಜ್ಯೌತಿಷ ನೋಡುವಿರಿ, ಹೌದೊ ? ಆ ಬ್ರಾಹ್ಮಣ ಬೇರೆ ಇದ್ದಾನೆ. ಯಾವ ಗಡಿಗೆ ಯನ್ನೂ ಅವನು ಒಡೆಯಲು ಬಿಡುವುದಿಲ್ಲ. ನಿಮಗದು ಸುಲಭವೆ?"

ಪರ್ವತ : (ಯೋಚಿಸಿ) ''ನಿನ್ನೊಡನೆ ಮುಚ್ಚುಮರೆಯೇನು ? ಎಷ್ಟಿದ್ದರೂ ನನ್ನವಳಾಗುವವಳು ! ಮಗಧ ಸಮೀಪಿಸುತ್ತ, ರಾಕ್ಷಸನೇ ನಾದರೂ ಬಯಸಿದರೆ, ಸಹಕರಿಸಿದರೆ, ಆ ಮುದುಕ, ದುಷ್ಟ ಬ್ರಾಹ್ಮಣ ನನ್ನೂ, ಆ ಶೂದ್ರನನ್ನೂ ರಾಕ್ಷಸನಿಗೇ ಒಪ್ಪಿಸಿ, ಮಗಧವನ್ನು ಕೊಳ್ಳೆ ಹೊಡೆದು, ಬ್ರಾಹ್ಮಣನನ್ನು ವಂಚಿಸಿ, ಸುಖವಾಗಿ ಊರಿಗೆ ಮರಳಿ, ಇಡೀ ಉತ್ತರಾಪಥದ ಚಕ್ರವರ್ತಿಯಾಗುತ್ತೇನೆ. ಏನೂ ಲಾಭವಿಲ್ಲದೆ ಆ ಬ್ರಾಹ್ಮಣನ ಹಿಂದೆ ಬರುತ್ತಾ ಅವನು ಹೇಳಿದಂತೆಲ್ಲ ಕೇಳಲು ನಾನೇನು ಅವನ ಹಿತ್ತಲ ಆಕಳೇ ? ಈ ವರೆಗೆ ಈ ಉದ್ದೇಶ್ಯ ಅವನಿಗೆ ತಿಳಿಯುವಂತೆ ನಟಿಸಿರುವೆ.''

ಕುಮಾರಿ : ("ಆರ್ಯರು ಊಹಿಸಿದ್ದು ತಪ್ಪಲ್ಲ; ಸರಿಯಾಗೇ ಇದೆ.'' ಎಂದು ತನ್ನೊಳಗೇ ಅಂದುಕೊಂಡು,) "ದೊರೆಗಳೇ ! ಆ ಬ್ರಾಹ್ಮಣನನ್ನು ಅಷ್ಟು ಸುಲಭವಾಗಿ ವಂಚಿಸಬಲ್ಲಿರಾ ? ನಿಮ್ಮ ಉದ್ದೇಶ್ಯ ಕೈಗೂಡುವುದು ನಿಜವೆ ?''

ಪರ್ವತ : "ಸುಲಭವೆಂಬುದು ಸ್ಪಷ್ಟವಾಗಿಯೇ ಇದೆ. ಅದಕ್ಕಾಗಿಯೇ ನಾನೂ ಈಗ ಸುಮ್ಮನಿರುವೆ. ಅತ್ತ ಮಗಧದ ಸೈನ್ಯ, ಇತ್ತ ನಮ್ಮದೂ ಸೇರಿ ಎರಡೂ ಬ್ರಾಹ್ಮಣನ, ಆ ಶೂದ್ರನ ಎದುರಾದರೆ, ಶೂದ್ರನನು ನಾನೋ-ನೀನೋ!– ಮುಗಿಸಿದರೆ, ಬ್ರಾಹ್ಮಣ ಹತಾಶನಾಗಿ ಹೋಗುವನು. ಮಂತ್ರಮಾಟಕ್ಕೆ ಅವನಿಗೆ ಅವಕಾಶಕೊಟ್ಟರಲ್ಲವೇ, ಭಯ ! ಯಾರೂ ಯಾರನ್ನೂ ಶಾಶ್ವತವಾಗಿ ಬೆದರಿಸಲಾರರು ! ಈ ಬೆದರಿಕೆ ಒಂದು ದಿನ ಕೊನೆಗೊಳ್ಳಲೇಬೇಕು ! ನಾನು ನಿನ್ನ ತಂದೆಗೂ ಆ ಅಲೀಕ ಸುಂದರನಿಗೂ, ಕೊನೆಗೆ ಯಮನಿಗೂ ಅಂಜಿದವನಲ್ಲ! ಆದರೆ ಈ ಕಪಿಮುಸುಡಿಯ ಬ್ರಾಹ್ಮಣ ಭೂಮಿಯ ಭೂತಗಳೆಲ್ಲದರ ಸಾಕಾರ ಭಯಮೂರ್ತಿಯಾಗಿದ್ದಾನೆ. ಇನ್ನೆಷ್ಟು ದುರ್ವಿದ್ಯೆಗಳು ಅವನಿಗೆ ವಶವೊ? ಈಗ ನಾನಿಲ್ಲಾಡುತ್ತಿರುವುದನ್ನೂ ಅವನು ಮಂತ್ರಶಕ್ತಿಯಿಂದ ಕೇಳಿ ತಿಳಿಯುತ್ತಿದ್ದರೂ ಇದ್ದಾನು !"

ಶಿಬಿರದ ಹೊರಗೆ ಕಿವಿಯಾಲಿಸುತ್ತಿದ್ದ ಆಚಾರ್ಯ ಶಿಷ್ಯರಿಬ್ಬರು, ಒಬ್ಬರ ಮುಖವನ್ನೊಬ್ಬರು ನೋಡಿಕೊಂಡು, ಆ ಬೆಳದಿಂಗಳಿನಲ್ಲಿ ಸಂತಸಪಟ್ಟರು !

ಕುಮಾರಿ : "ಎಷ್ಟು ದಿನ ಈ ಭಯದಲ್ಲಿದ್ದು ಸಾಯುವಿರಿ?''

ದೊರೆ : ''ಅವಶ್ಯವಿದ್ದಷ್ಟು ದಿನ ಏನೂ ಮಾಡುವಂತಿಲ್ಲ. ಆದರೆ ! ....ಆ ಕೊಲೆಗಡುಕ ಬ್ರಾಹ್ಮಣ ಒಂದು ದಿನ ಹೋಗಲೇಬೇಕು....ಶೂದ್ರನೂ ಸಹ !'' ಎನ್ನುತ್ತಾ ವಿದ್ಯುಲ್ಲೇಖೆಯನ್ನು ಬಲವಾಗಿ ಆಲಿಂಗಿಸಿ, ಚುಂಬಿಸಿದ.

ಈ ಸರ್ವೇಸಾಧಾರಣ ಧರ್ಮದ ದೇಶದವಳಾದ ಆ ಯವನ ತರುಣಿ, ಅವ ನಿಂದ ಬಿಡಿಸಿಕೊಂಡು, ''ಹಾಗಾದರೆ, ಯಾವುದು ಸಕಾಲವೆಂದು ಹೇಗೆ ತಿಳಿಯಲಿ ?" ಎಂದಳು.

ದೊರೆ : "ಮಗಧದ ಕತೆ ಮುಗಿಯಲಿ; ನಾನು ಸಂಕೇತದಿಂದ ತಿಳಿಸುವೆ" ಎಂದ. ತರುಣಿ ಏಳುವಷ್ಟರಲ್ಲಿ ಆಚಾರ್ಯ ಶಿಷ್ಯರು ಶಿಬಿರ ಸೇರಿ ''ನಿದ್ರಿಸಿ"ದ್ದರು.

  

ಚಾಣಕ್ಯ ಶಿಷ್ಯನೂ ಚಂದ್ರಗುಪ್ತನ ಅಂಗರಕ್ಷಕನೂ ಕರ್ಪೂರ ಮಾರಾಟದ ಶೆಟ್ಟರ ವೇಷದಲ್ಲಿ ಹೊರಟವರು ಮಧ್ಯಾಹ್ನಕ್ಕೆ ಸರಿಯಾಗಿ ಒಂದು ನದಿಯ ದಡದಲ್ಲಿ ಇಳಿದು ಕುದುರೆಯನ್ನು ಮರಕ್ಕೆ ಕಟ್ಟಿ ದಣಿ ವಾರಿಸಿಕೊಳ್ಳಲು ನದಿಯಲ್ಲಿಳಿದು ಈಸಿ ಸ್ನಾನಮಾಡಿದರು. ಶಿಷ್ಯ ತನ್ನ ಆಹ್ನಿಕವನ್ನು ಮುಗಿಸಿದ.

ಅದೇ ವೇಳೆಗೆ ಅದೇ ನದೀ ತೀರಕ್ಕೆ ಮತ್ತೊಬ್ಬ ಸವಾರ ವೇಗ ವೇಗ ವಾಗಿ ಬಂದು, ತಾನೂ ಕುದುರೆಯನ್ನು ಪಕ್ಕದ ಮರಕ್ಕೆ ಕಟ್ಟಿ, ಸ್ನಾನಕ್ಕಿ ಳಿದು ಆಹ್ನಿಕ ಮಾಡಿದ. ಅವನ ಕೊರಳಲ್ಲೂ ಯಜ್ಞಸೂತ್ರವಿತ್ತು. ಕುದುರೆಯ ಬೆನ್ನಿನ ಮೇಲೆ ಎರಡೂ ಕಡೆ ಜೋತಾಡುತ್ತಿದ್ದ ಚೀಲಗಳನ್ನು ಬಹು ಎಚ್ಚರಿಕೆಯಿಂದ ಅವನು ಕೆಳಗಿಳಿಸಿ, ತಾನು ಸ್ನಾನಕ್ಕಿಳಿದ ಘಟ್ಟದ ಸಮೀಪದಲ್ಲೇ ಇಟ್ಟು ಅದರ ಮೇಲೆ ತನ್ನ ಕಳಚಿದ ಉಡುಪನ್ನು ಹೇರಿ, ಆ ಇನ್ನೊಬ್ಬ ಸವಾರನನ್ನೂ ಯುವಕನನ್ನೂ ಸಂಶಯದಿಂದ ನೋಡಲಾರಂಭಿ ಸಿದ ! ಯುವಕನಿಗೆ ಈ ಆಗಂತುಕನನ್ನು ಎಲ್ಲೋ ನೋಡಿದ ನೆನಪಾದರೂ ನೆನಪನ್ನು ಸಂಬಡಂತೆ ಶಿಕ್ಷಣ ಪಡೆದಿದ್ದನಷ್ಟೆ! ಆಕಾಶವನ್ನು ನೋಡುತ್ತಾ ''ಪಕ್ಷಿರಾಜಾಯ ತೇ ನಮಃ !" ಎಂದು ಮೂರು ಸಲ ಹೇಳಿ, ಮೇಲೆ ಹಾರಾಡುತ್ತಿದ್ದ ಗರುಡ ಪಕ್ಷಿಗೆ ಕೈಯೆತ್ತಿ ಮುಗಿದ.

ಚಕಿತನಾದ ಹೊಸ ಕುದುರೆಸವಾರ : "ಆ ಪಕ್ಷಿಯಲ್ಲಿ ವಿಶೇಷ ವೇನು ?" ಎಂದು ಕೇಳಿದ. ಯುವ ಶಿಷ್ಯ: "ಅಪ್ಪಾ, ಅದು ಸಾಮಾನ್ಯ ಪಕ್ಷಿಯಲ್ಲ! ಯಾವ ಹಾವಿಗೂ ಹೆದರದು; ಕಾಳಿಂಗ ಸರ್ಪವಾಗಲಿ, ಪರ್ವತ ದಂಥ ಹೆಬ್ಬಾವಾಗಿರಲಿ, ಈ ಪಕ್ಷಿ ಜೀರ್ಣಿಸಿಕೊಳ್ಳಬಹುದು" ಎಂದ.

ಆಗಂತುಕ : (ಚಕಿತನಾಗಿ) "ಹಾಗಾದರೆ ಹೊಸ ಹಾವುಗಳನ್ನು ನಿನ್ನ ಕೈಗೆ ಕೊಡಲೇ ? ಪಕ್ಷಿಯ ಬಳಿ ಬಿಟ್ಟು ಪರೀಕ್ಷಿಸುವೆಯಾ ?"

ಯುವಶಿಷ್ಯ : "ಆ ಹಾವುಗಳನ್ನು ಪಡೆಯಲೆಂದೇ ಬಂದಿರುವೆ ! ಸರ್ವೇಶ್ವರನ ದೇವಾಲಯದ ತನಕ ಪ್ರಯಾಣ ಮಾಡುವ ಆಯಾಸವೇ ತಪ್ಪಿತು !"

ಆಗಂತುಕ : "ಎಚ್ಚರಿಕೆ! ಹೊರಬಿಟ್ಟರೆ ಈ ಹಾವುಗಳು ಯಾರನ್ನೂ ಕಚ್ಚಿಯಾವು. ನಿರಪರಾಧಿಗಳು ಸಾಯಬಾರದು. ಹುತ್ತದ ಸುತ್ತ ಜಹ ಶಾಲೆ ನಿರ್ಮಾಣವಾಗಿದೆಯೆಂದು ಪಕ್ಷಿಗೆ ಹೇಳು. ದಿಗಂಬರ ಅದರ ವ್ಯವಸ್ಥೆ ಚೆನ್ನಾಗಿ ಮಾಡಿರುವನು. ಚಂದ್ರಾಸ್ತ ಕಾಲವನ್ನು ನಿರೀಕ್ಷಿಸುತ್ತಿರುವನು. ಇನ್ನು ಹದಿನೈದು ದಿನಗಳೊಳಗೆ ಪರ್ವತದ ನದಿಗಳು ಅತ್ತ ಪ್ರವಿಸಬೇಕು. ಹಾವು ಹಿಡಿಯುವ ಕಿರಾತರು ಉತ್ತರದಿಂದ ಬರುತ್ತಿರುವರು. ಕಾಳಿಂಗ ಸರ್ಪಕ್ಕೆ ಬಹು ಬಿಗಿ ಬಂದೋಬಸ್ತು ಬೇಕು. ಹೆಬ್ಬಾವೂ ಸಾಮಾನ್ಯವಲ್ಲ! ವಿದೇಶೀ ನಾಗಿಣಿಯನ್ನೂ ಚೆನ್ನಾಗಿ ರಕ್ಷಿಸಿಕೊಳ್ಳಬೇಕು. ಒಟ್ಟಿನಲ್ಲಿ ಚಂದ್ರಗ್ರಹಣ ಆಗದಂತೆ ನೋಡಿಕೊಳ್ಳಬೇಕು, ಎಂದು ದಿಗಂಬರನ ವಿಶೇಷ ಎಚ್ಚರಿಕೆಯನ್ನು ಹಾವಾಡಿಗನಿಗೆ ಹೇಳು. ಗರುಡ ಪಕ್ಷಿಗೆ ಹೇಳುವು ದೇನು ?" ಎನ್ನುತ್ತಾ "ಹಾವಿನ" ಪೆಟ್ಟಿಗೆಯನ್ನು ಯುವ ಶಿಷ್ಯನಿಗಿತ್ತ. ಆಗಂತುಕ ವಾಪಸ್ಸು ಹೊರಡಲು ಅಣಿಯಾದ.

ಯುವಶಿಷ್ಯ : "ದಿಗಂಬರನಿಗೆ ಕೊಂಚ, ಕುಂಕುಮ, ಕಸ್ತೂರೀ, ಕೇಸರಿಗಳನ್ನು ಕೊಂಡೊಯ್ಯುತ್ತಿರುವೆ. ಈ ವಿಭೂತಿ ಅವನ ಮೈಗೆ ಅಪ್ಯಾಯವಾಗಿರುತ್ತದೆ" ಎಂದು ಹೇಳಿ ಚಾಣಕ್ಯನ ಪತ್ರವನ್ನು ಆ

ಸಾಮಗ್ರಿಗಳ ಚೀಲದಲ್ಲಿ ಬಚ್ಚಿಟ್ಟಿದ್ದನ್ನು ಸರಕುಗಳೊಡನೆ ಇತ್ತ. ಇಬ್ಬರೂ ಬಂದ ದಾರಿಗೆ ಹೊರಟರು.

  

ಚಾಣಕ್ಯನಿಗೆ ಜೀವಸಿದ್ಧಿ ಬರೆದು ಕಳುಹಿದ್ದ ರಾಕ್ಷಸನ ಪತ್ರಗಳ ನಕಲುಗಳು ಕೈ ಸೇರಿದವು. ತನ್ನ ಊಹೆ ಸರಿಯಾದುದಕ್ಕೆ ಸಂತೋಷ ಪಟ್ಟ. ಜಪಶಾಲೆಯ ನಿರ್ಮಾಣ ಕಾರ್ಯ ಮುಗಿದು ಇಂದು ಶರ್ವ, ನಂದರ ವಧೆಗೆ ಗಡುವನ್ನ – ''ಚಂದ್ರಾಸ್ತ''ವೆಂದರೆ, ಫಾಲ್ಗುನ ಅಮಾವಾಸ್ಯೆಯು ತನಕ ಕೊಟ್ಟಿರುವುದು ಸರಿ ಎನಿಸಿತು. ನಡೆಯಲಿ ಈ ಮಾರಣ ಹೋಮದ ಪೂರ್ಣಾಹುತಿ ಆ ಅಮಾವಾಸ್ಯೆಯಂದೇ ! ಪರ್ವತ ಸೈನ್ಯ ಖಂಡಿತ ಇನ್ನು ಹನ್ನೆರಡು ದಿನಗಳಲ್ಲಿ ಅಲ್ಲಿರುವುದು. ''ಹಾವು ಹಿಡಿಯುವ ಕಿರಾತರು ಉತ್ತರದಿಂದ ಬರುತ್ತಿರುವ'' ಸಮಾಚಾರ ಹೊಸದು. ನೇಪಾಳದ ಸೈನ್ಯ, ಹಿಂದೆ ಚಂದ್ರಗುಪ್ತನೇ ಕಟ್ಟಿದ್ದು ಸ್ವಯಂ ಪ್ರೇರಣೆಯಿಂದಲೋ, ಇಂದುಶರ್ಮನ ಸೂಚನೆಯಿಂದಲೋ, ಉತ್ತರದ ಕಡೆಯಿಂದ ಪಾಟಲೀಪುತ್ರವನ್ನು ಮುತ್ತಿಗೆ ಹಾಕುವುದೇ ಸರಿಯಾದ ವ್ಯವಸ್ಥೆ! "ಚಂದ್ರಗ್ರಹಣ'' ಎಂದುದು ಚಂದ್ರಗುಪ್ತನನ್ನು ಹಿಡಿಯುವ ರಾಕ್ಷಸನ ತಂತ್ರವಿರಬೇಕು ! ''ವಿಶೇಷ ನಾಗಿಣಿ'' ವಿದ್ಯುಲ್ಲೇಖೆಯನ್ನು ತಾನು ಸರಿಯಾಗಿಯೇ ನೋಡಿಕೊಂಡಿರುವೆನು–ಎಂದು ಚಾಣಕ್ಯ ಲೆಕ್ಕ ಹಾಕಿ ತೃಪ್ತಿ ಪಟ್ಟ.

ಆ ಪಾರಿವಾಳವನ್ನು ಸಂಜೆ ಚಾಣಕ್ಯ ಮತ್ತೆ ಜೀವಸಿದ್ಧಿಯತ್ತ ಕಳುಹಿದ್ದ. ಕೊರಳಲ್ಲಿ ಉತ್ತರ ಹೀಗೆ ಬರೆದಿದ್ದ. "ವಾತರಶನನಿಗೆ ಎತ್ತಲೂ ಕಿವಿಯಾದುದಕ್ಕೆ ಸಂತೋಷ. ನದಿಗಳು ವೇಗವಾಗಿ ಹೊಗಳತ್ತ ಪ್ರವಿಸುತ್ತಿವೆ. ಚಂದ್ರಾಸ್ತಕ್ಕೆ ಮುಂಚೆಯೇ ಇಂದ್ರನೊಡಗೂಡಿ ಅಲ್ಲಿರುತ್ತವೆ. ಕಾಳಿಂಗಸರ್ಪ, ಪರ್ವತದಂಥ ಇನ್ನೊಂದನ್ನು ಹಿಡಿಯಲಾಗುವುದು. ಹುತ್ತವನ್ನು ಜಾಗರೂಕವಾಗಿ ರಕ್ಷಿಸಿ ಹಾವುಗಳು ಹೊರಹೋಗದಂತೆ ನೋಡಿಕೊಳ್ಳುವುದು. ಕಾಮದೇವನಿಗೆ ಒಂದು ಹೂವು ಒಗೆಯಬೇಕು. ಜಾಗ್ರತೆ,

ಒಂದೇ ಹೂವು! ಮುದ್ರೆ ಅಲ್ಲೇ ಇದೆ. ಬಿಲ್ಲಿಗಿಂತ ವೇಗವಾದದ್ದು ಬರುತ್ತಿದೆ. ವಿವರ ತರುತ್ತದೆ. ಪಕ್ಷಿರಾಜ.''

ಇಂದುಶರ್ಮನತ್ತ ಪಕ್ಷಿ ಬಂದು ಸಮಾಚಾರ ತಿಳಿಸಿತು; ವಾತ=ಗಾಳಿಯನ್ನೇ, ರಶನ=ಬಟ್ಟೆಯನ್ನಾಗಿ ಉಳ್ಳದ್ದು ಹಾವು, ಅಥವಾ ದಿಗಂಬರ! ನದಿಗಳು ಎಂದರೆ ಪರ್ವತರ ಸೈನ್ಯಗಳು; ''ಇಂದ್ರನೊಡಗೂಡಿ'' ಎಂದರೆ ಇಂದ್ರಪ್ರಸ್ಥದ ದೊರೆ ಇಂದ್ರವರ್ಮನೊಡನೆ ಎಂಬರ್ಥವಿರಬೇಕು; "ಹೂಗಳತ್ತ'' ಎಂದದ್ದು ಪಾಟಲೀಪುರವನ್ನು ಕುರಿತು. ಕುಸುಮಪುರವೆಂಬ ಇದರ ಇನ್ನೊಂದು ಅಭಿದಾನದಿಂದ. "ಕಾಮದೇವ'' ಎಂದದ್ದು ಯಾರನ್ನು ? ಹೋ! .... ತಿಳಿಯಿತು. ಕಾಮರೂಪದೇಶಾಧಿಪತಿಯಾದ ಕಮಲವರ್ಮನನ್ನು ಕುರಿತು! ''ಒಂದು ಹೂವು'' ಎಂದದ್ದು ಅವನನ್ನು 'ತಟಸ್ಥ'ನನ್ನಾಗಿಸುವ ಉಪಾಯ ಕುರಿತು ಇರಬೇಕು; "ಎರಡು'' ಎಂದಿದ್ದರೆ ಭೇದೋಪಾಯ ಆಗುತ್ತಿತ್ತು, ಚಾಣಕ್ಯ ಭಾಷೆಯಲ್ಲಿ!! ತಾನದನ್ನು ಚೆನ್ನಾಗಿ ಬಲ್ಲವನಲ್ಲವೆ? "ಜಾಗ್ರತೆ, ಒಂದೇ ಹೂವು'' ಎಂದದ್ದರಲ್ಲಿ ತಾನೇ ಆ ಉಪಾಯಕ್ಕೆ ಯತ್ನಿಸಬೇಕೆಂಬ ಅರ್ಥವಿರಬೇಕು. ಬೆಳಗ್ಗೆಯಾಗುವುದರಲ್ಲಿ ವೇಗಶರ್ಮ ವಿವರ ತರುತ್ತಾನೆ, ನೋಡಿ ಮಾಡೋಣ. ''ಮುದ್ರೆ ಅಲ್ಲೇ ಇದೆ." ಎಂದರೇನು? ಶಕಟಾಯನನ ಪತ್ತೆ ಮಗ ವಿನಯಶರ್ಮನ ಉಂಗುರವೆ ? ಅಲ್ಲ! ಅಲ್ಲ!! ಅಮಾತ್ಯ ರಾಕ್ಷಸನ ಮುದ್ರಿಕೆಯಿರಬೇಕು!! ಹೌದು. ಅದಿಲ್ಲವೆ ರಾಕ್ಷಸ ಬರೆದಂತೆ ಪತ್ರವನ್ನು ಕಾಮರೂಪದ ದೊರೆಗೆ ಬರೆಸಿ ಕಳುಹಲು ಶಕ್ಯವಿಲ್ಲ! ಶಕಟಾಯನನ ಹೊರತು ಅದು ಬೇರೊಬ್ಬರಲ್ಲಿಲ್ಲ! ಏನು ಮಾಡುವುದು ? ಎಂದು ಜೀವಸಿದ್ಧಿ ಕೆಲಹೊತ್ತು ಯೋಚಿಸಿ, ಚಾಣಕ್ಯನ ಇಂಗಿತವನ್ನು ಅರ್ಥಮಾಡಿಕೊಂಡು, ಸುಲಭವಾಗಿ ಅದು ತಿಳಿಯದುದಕ್ಕೆ ತಾನೇ ತನ್ನನ್ನು ಹಳಿದುಕೊಂಡ. ''ಕಾಳಿಂಗ ಸರ್ಪವನ್ನೂ, 'ಪರ್ವತ'ನನ್ನೂ ಚಾಣಕ್ಯನೇ ಗಮನಿಸಿಕೊಳ್ಳುವ ಭಾವವನ್ನೂ ಅರಿತ. ಬೆಳಗಿನ ಝಾವಕ್ಕೆ ಮುಂಚೆಯೇ ವೇಗಶರ್ಮ ರಹಸ್ಯದಲ್ಲಿ ಬಂದು ಜೀವಸಿದ್ಧಿಯನ್ನು ಕಂಡು ತನ್ನ ಕಾರ್ಯಫಲವನ್ನೂ, ಚಾಣಕ್ಯನ ಸಿದ್ಧತೆಗಳನ್ನೂ, ತಿಳಿಸಿ, ಅವನ ಪತ್ರವನ್ನೂ ಕೊಟ್ಟ. ಕ್ಷಪಣಕನಿಗೆ

ಪಕ್ಷಿಯ ಕೊರಳಿನ ಪತ್ರದ ತನ್ನ ಅರ್ಥೈಕೆ ಸರಿ ಎನಿಸಿತು. ಮತ್ತೇ ನಾನೀಗೂ ಪತ್ರವಿದೆಯೇ ? ಎಂಬ ದಿಗಂಬರನ ಪ್ರಶ್ನೆಗೆ ಚಾಣಕ್ಯನ ಆ ಇನ್ನೊಂದು ಪತ್ರದ ಮಾದರಿಯನ್ನೂ ಕೊಟ್ಟು, "ಇದನ್ನೇನು ಮಾಡ ಬೇಕೆಂದು ನನಗೆ ತಿಳಿಸಲಿಲ್ಲ. ತಾವೇ ನಿರ್ಧರಿಸಿ ನಡೆಯಬೇಕು" ಎಂದು ತ್ತರಿಸಿದ. ಆ ಪತ್ರದ ಒಕ್ಕಣೆಯನ್ನು ಗೂಢಭಾಷೆಯಿಂದ ಗ್ರಹಿಸಿ, ಜೀವ ಸಿದ್ಧಿ ಅದನ್ನು ಪ್ರಕಟ ಭಾಷೆಯಲ್ಲಿ ಬರೆದು, ಬೆಳಗಾಗುವುದರಲ್ಲಿ ಸಿದ್ಧಾರ್ಥ ಕನನ್ನು ತನ್ನತ್ತ ಕರೆಸಿ, ತನ್ನ ಬಳಿಯಿದ್ದ ವಿನಯಶರ್ಮನ ಉಂಗುರವನ್ನು ಅವನ ಕೈಯಲ್ಲಿ ಆ ಪತ್ರವನ್ನಿಕ್ಕು, ಅವನ ಕಿವಿಯಲ್ಲಿ ಅವನೇನು ಮಾಡ ಬೇಕೆಂಬುದನ್ನು ತಿಳಿಸಿದ. ಬುದ್ಧಿವಂತನಾದ ಸಿದ್ಧಾರ್ಥಕ ಒಡನೆಯೇ ಕಾರ್ಯೋನ್ಮುಖನಾದ.

ಶಕಟಾಯನನ ನಿಕಟ ಪರಿಚಯವನ್ನು ಬಾಗುರಾಯಣನ ಮೂಲಕ ಮಾಡಿಕೊಂಡು ವಿಶೇಷ ಕಾರ್ಯಗಳ ನಿಮಿತ್ತ ಪದೇ ಪದೇ ಅವನಲ್ಲಿಗೆ ಹೋಗಿ ಬರುತ್ತಿದ್ದ ಸಿದ್ಧಾರ್ಥಕ, ಶಕಟಾಯನನ ಹಸ್ತಾಕ್ಷರಗಳ ವೈಲಕ್ಷಣ್ಯ ಗಳನ್ನು ತುಂಬಾ ಜಾಗ್ರತೆಯಾಗಿ ಅಭ್ಯಸಿಸಿ, ಆ ಅಕ್ಷರಗಳಂತೆಯೇ ಬರೆ ಯಲು ಚೆನ್ನಾಗಿ ರೂಢಿಸಿಕೊಂಡಿದ್ದ ! ಇಂದುಶರ್ಮ ಕೊಟ್ಟ ಪತ್ರದ ಮಾದರಿಯನ್ನು, ಆ ಒಕ್ಕಣೆಯನ್ನು, ಈಗ ನಂದರ ಅರಮನೆಯ ಶಾಯಿ ಯಲ್ಲಿ, ಅರಮನೆಯ ವ್ಯವಹಾರಕ್ಕೆ ಉಪಯೋಗಿಸುವ ಖಾಲಿ ಹಾಳೆಯಲ್ಲಿ (ಶಕಟಾಯನನ ಮನೆಯಿಂದ ಕದ್ದು ತಂದದ್ದರಲ್ಲಿ!) ಹೀಗೆ ಬರೆದ.

"ಸ್ವಸ್ತಿ, ನಮ್ಮ ಪರಮ ಮಿತ್ರರಾದ ಕಾಮರೂಪದೇಶಾಧಿಪತಿ ಕಮಲವರ್ಮ ಮಹಾರಾಯರಿಗೆ ಮಗಧೇಶ್ವರರಾದ ನಂದರಾಜರ ಪ್ರಧಾನಾ ಮಾತ್ಯನಾದ ರಾಕ್ಷಸ ಮಂತ್ರಿಯು ಮಾಡುವ ವಿಜ್ಞಾಪನೆಗಳು. ಕುತರ್ಾಗಿ ತಮಗೆ ಈಗ ತಿಳಿಸುವ ನಿದೇಶವೇನೆಂದರೆ, ನಮ್ಮ ರಾಷ್ಟ್ರಕ್ಕೆ ಆಕಸ್ಮಿಕವಾಗಿ ಬಂದೊದಗಿರುವ ಈ ವಿಪತ್ತಿನ ಬಗೆಗೆ ನಿಮಗೆ ಈಗಾಗಲೇ ಬೇರೆ ಬೇರೆ ಮೂಲಗಳಿಂದ ತಿಳಿದಿರಬೇಕೆಂದು ನಂಬುತ್ತೇವೆ. ಪಶ್ಚಿಮದಿಂದ ಪರ್ವತೇಶ್ವ ರನು ಅಪಾರ ಸೈನ್ಯದೊಡಗೂಡಿ ನಮ್ಮತ್ತ ದಂಡೆತ್ತಿ ಬರುತ್ತಿರುವನು.

ಇಂದ್ರಪ್ರಸ್ಥದ ಇಂದ್ರವರ್ಮನೂ ಅವರ ಕಡೆ ಸೇರಿರುವಂತಿದೆ. ಪಶ್ಚಿಮದ ಸಮ್ಮ ಗಡಿ ಹೀಗೆ ದುರ್ಬಲವಾಗಿರುವಾಗ ನಮ್ಮ ಸೈನ್ಯ ಅತ್ತ ಗಮನ ವನ್ನು ಕೇಂದ್ರೀಕರಿಸಬೇಕಾಗಿದೆ. ದಕ್ಷಿಣದ ಕಳಿಂಗರು ನಮಗೆ ಎಂದಿ ನಿಂದಲೂ ಪರಮ ವೈರಿಗಳಾಗಿರುತ್ತಾ, ಈ ದುಸ್ಸಂದರ್ಭವನ್ನು ಬಳಸಿ ಅತ್ತ ಣಿಂದ ನಮ್ಮನ್ನು ಕೆಣಕುವ ಸಂದರ್ಭವೂ ಇದೆ. ತಲೆ ತಲಾಂತರಗಳಿಂದ ನೀವು ಮಗಧದ ಪರಮ ಮಿತ್ರರು. ಈ ಸಮಯದಲ್ಲಿ ನೀವು ನಮಗೆ ನೇರ ಸೈನ್ಯ ಸಹಾಯ ಮಾಡುವುದು ಬೇಡ. ಕಳಿಂಗರೇನಾದರೂ ನಮ್ಮತ್ತ ದಂಡೆತ್ತಿ ಬರುವ ಸೂಚನೆಯಿದ್ದರೆ, ನೀವು ಎಲ್ಲಿ, ಯಾವಾಗ ಅವರನ್ನು ಎದುರಿಸಬೇಕಾಗುವುದೆಂಬುದನ್ನು ನಮ್ಮ ಸಮರ್ಥ ಗೂಢಚಾರರ ಪಡೆಯ ನೆರವಿನಿಂದ ತಿಳಿದು, ನಾವೇ ತಮಗೆ ತಿಳಿಸುತ್ತೇವೆ. ಅಲ್ಲಿಯವರೆಗೆ ಪೂರ್ವದ ನಮ್ಮ ಗಡಿಯಾಚೆಯೇ ಸಿದ್ಧರಾಗಿ ನಿಂತು, ನಮ್ಮ ಸಂದೇಶವನ್ನು ಎದುರು ನೋಡುತ್ತಿರಬೇಕು. ಎಲ್ಲ ಸೈನ್ಯವನ್ನೂ ಒಟ್ಟಾಗಿ ಉಪಯೋಗಿಸಿ, ಕೈ ಸುಟ್ಟುಕೊಳ್ಳುವುದು ಜಾಣತನವಲ್ಲ! ನಿಮ್ಮ ಸೈನ್ಯ ನಮ್ಮ ಮೂಲ ಬಲದಂತೆ ಆಪತ್ಕಾಲಕ್ಕೆ ರಕ್ಷೆಗಿರಲಿ. ನಮ್ಮ ಸಂದೇಶದಂತೆ ನಡೆಯುವುದು- ಇತಿ ಅಮಾತ್ಯ ರಾಕ್ಷಸ."

ಪತ್ರವನ್ನು ಬರೆದು ಮುಗಿಸಿ, ಸಿದ್ಧಾರ್ಥಕನಿಗೇ ಆಶ್ಚರ್ಯವಾಯಿತು! ಶಕಟಾಯನನ ಹಸ್ತಾಕ್ಷರಗಳಂತೆಯೇ ದುಂಡಗೆ ಸ್ಪುಟವಾಗಿ ಬರೆದಿದ್ದ ಯಾರೂ ಶಂಕಿಸುವಂತಿರಲಿಲ್ಲ, ಅದನ್ನು! ಪತ್ರದ ಸುರುಳಿಯನ್ನು ಜೋಳಿಗೆ ಯಲ್ಲಿ ಹಾಕಿಕೊಂಡು ನೇರವಾಗಿ ಶಕಟಾಯನನ ಮನೆಗೆ ಹೋದ ಸಂಧ್ಯಾ ಕಾಲ ಮುಗಿದು ಬೆಳ್ಳಗೆ ಬೆಳಗಾಗಿತ್ತು.

ಮುದುಕನಾದ ಶಕಟಾಯನ ಪ್ರಾತರಾಹ್ನಿಕಗಳನ್ನು ಮುಗಿಸಿ, ದೇವರಿಗೆ ವಂದಿಸುತ್ತಿದ್ದ; "ದೇವರೇ! ಇದ್ದ ಒಬ್ಬ ಮಗನನ್ನೂ ಅಕಾಲ ದಲ್ಲಿ ಕರೆದುಕೊಂಡು ಬಿಟ್ಟೆ! ಮುದುಕರಾದ ನಮ್ಮಿಬ್ಬರಿಗೆ ಗತಿಯಾಗಿದ್ದ ಪುತ್ರ ಹೋಗಿಯೂ ನಮಗೆ ಮರಣ ಬರಲಿಲ್ಲ! ನೀಚ ನಂದರ ಈ ಹಾಳು ಸೇವೆಯಲ್ಲಿ ಇನ್ನೆಷ್ಟು ದಿನ ಹೀಗೆ ಬದುಕಿರಬೇಕೋ!!" ಎನ್ನುತ್ತಾ

ದಿನದಂತೆ ಆಳುತ್ತಾ, ನಮಸ್ಕಾರ ಹಾಕಲು ಶಕ್ತಿಯಿಲ್ಲದೆ, ಕುಸಿದು ಕುಳಿತಿದ್ದ. ಅವನ ಹೆಂಡತಿ ಭಾಗೀರಥೀದೇವಿಯು ಕಣ್ಣೊರೆಸಿಕೊಳ್ಳುತ್ತಾ ಬಿಕ್ಕುತ್ತಿದ್ದಳು. ಸಿದ್ಧಾರ್ಥಕ ಅವರಿಗೆ ಮಗನ ನೆನಪನ್ನು ತರುತ್ತಾ, ಆ ಕೊರತೆಯನ್ನು ತೀರಿಸುತ್ತಿರುವ ಭಾವದಲ್ಲಿ ಈಗಾಗಲೇ ಅಲ್ಲಿ ಪ್ರತಿಷ್ಠಿತನೂ ಆಗಿದ್ದ. ಬೆಳಗ್ಗೆ ಎದ್ದೊಡನೆಯೇ ಹೀಗೆ ಅನಿರೀಕ್ಷಿತನಾಗಿ ಬಂದ ಅವನನ್ನು ಕಂಡು ಶಕಟದಾಸನಿಗೆ ಆಶ್ಚರ್ಯವಾಯಿತು ! "ಏನಯ್ಯಾ! ರಾಜಕಾರ್ಯವೆ ? ಇಷ್ಟು ಬೇಗ ಬಂದೆ" ಎನ್ನುತ್ತಾ, ಕಣ್ಣೊರೆಸಿಕೊಂಡು, ಮುದುಕ ಒಳ ಮನೆಯಿಂದ ಹಜಾರಕ್ಕೆ ಬಂದ. ''ಕೆಲಸವಿದೆ, ಮಂತ್ರಿಗಳೇ! ಕಾರಣವಿಲ್ಲದೆ ಸಿದ್ಧಾರ್ಥಕ ಅವೇಳೆಯಲ್ಲಿ ಬರುವನೇ ?'' ಎಂದು ಹೇಳಿ, ರಾಜವ್ಯವಹಾರ ಲೇಖನ ಮಂತ್ರಿ, ಕಾರ್ಯರೂಢನಾಗಿ ಕುಳ್ಳಿರುವ ಕೈಮೇಜು ಮಣೆಯ ಬಳಿ ಕುಳಿತ. ರಾಯಸದ ಸಾಮಗ್ರಿಗಳೆಲ್ಲ ಆ ಕೈಪೆಟ್ಟಿಗೆಯೊಳಗಿದ್ದುವು ! ಖಾಲಿ ಹಾಳೆಗಳು, ಶಾಯಿ, ಲೇಖನಿ, ರಾಕ್ಷಸನ ಮುದ್ರೆಯುಂಗುರ, ಮೊಹರಿಗೆ ಬೇಕಾದ ಅರಗು, ಮುದ್ರೆಯುಂಗರದ ಚಿಹ್ನೆಯನ್ನೆತ್ತಲು ಬೇಕಾಗುವ ಶಾಯಿ, ಬಂದವರು ಸುತ್ತ ಕೂಡಲು ಹಾಸಿಗೆಯಂಥ ಮೆತ್ತನೆ ಹಾಸುಗಳು; ಒರಗಲು ದಿಂಬುಗಳು. ಗೋಡೆಗಳಲ್ಲಿ ಸುಂದರ ಪಟಗಳು; ವಿವಿಧ ದೇಶೀಯ ಅರಸರ ಬಿರುದು ಬಾವಲಿಗಳು; ಅಲ್ಲಲ್ಲಿನ ಗೂಢಚಾರರ ಗುಪ್ತ ವಿಳಾಸಗಳು. ಪತ್ರಗಳನ್ನು ಒಯ್ಯುವವರ ಹೆಸರು ಪಟ್ಟಿ; ಅವರಿಗೆ ಆಗಿಂದಾಗ್ಯೆ ಕೈ ಮೇಲೆ ಕೊಡಬೇಕಾದ ವೆಚ್ಚಕ್ಕೆ ಮುಂಗಡವಾಗಿ ಸಾಕಾಗುವಷ್ಟು ಬಂಗಾರದ ಹೊನ್ನುಗಳನ್ನು ಒಳಗೊಂಡ ಕಬ್ಬಿಣದ ಖಜಾನೆ ಪಟ್ಟಿಗೆಗಳು.

ನಿಲುವಂಗಿಯನ್ನೂ, ಮುಂಡಾಸವನ್ನೂ ಧರಿಸಿ ಶಕಟದಾಯನ ಬಂದು ತನ್ನ ಆಸನದಲ್ಲಿ ಕುಳಿತ. "ಏನು''? ಎಂಬಂತೆ ಸಿದ್ಧಾರ್ಥಕನ ಮುಖ ನೋಡಿದ. ಸಿದ್ಧಾರ್ಥಕ ರಾಯಸದ ಆ ವೃದ್ಧ ಮಂತ್ರಿಯ ಸುಕ್ಕುಗಟ್ಟಿದ ಮುಖವನ್ನು ಕೊಂಚ ಹೊತ್ತು ಏನೂ ಹೇಳದೆ ದಿಟ್ಟಿಸಿ ನೋಡಿ, ತನ್ನ ಮೂಗು ಹೊಳ್ಳೆಗಳನ್ನರಳಿಸುತ್ತಾ, ಗಲ್ಲ ಆದುರುತ್ತಾ, ಧ್ವನಿಗದ್ಗದಿತ

ವಾಗುತ್ತಾ ಕಣ್ಣುಗಳಿಂದ ಪಟಪಟನೆ ನೀರು ಸುರಿಸುತ್ತಾ, ಅಳಲಾರಂಭಿಸಿದ !!

ಶಕಟಾಯನನಿಗೆ ಒಂದೂ ಅರ್ಥವಾಗಲಿಲ್ಲ ! "ಏನಯ್ಯಾ! ಯಾರಾದರೂ ಸತ್ತರೇನು ? ಬೆಳ್ಳಂ ಬೆಳಗ್ಗೆ ಹೀಗೆ ಅಳುವುದೆಂದರೇನು? ಬಾಗುರಾಯಣ ಕ್ಷೇಮವೇ ? ನಿನ್ನ ಅಧ್ಯಾಪಕ ಗುರುಗಳು ಕ್ಷೇಮವೆ? ಅವಾತ್ಯ ರಾಕ್ಷಸ ಸೌಖ್ಯವೇ?...." ಎನ್ನುತ್ತಾ ಯಾರ ಮರಣ ಸೂಚಕ ಆ ಅಳು ಎಂಬುದನ್ನು ಊಹಿಸಲು ಯತ್ನಿಸಿದ. ಸಿದ್ಧಾರ್ಥಕ ಮನಸ್ಸನ್ನು ಸಮಾಧಾನಕ್ಕೆ ತಂದು ಕೊಂಡವನಂತೆ ನಟಿಸಿ, ''ಅಯ್ಯಾ, ನನಗೆ ತಾತನಂತಿರುವ ನಿಷ್ಕಪಟ ಸ್ವಭಾವದ, ದೈವ ಭಕ್ತರಾದ ನಿಮಗೆ ಈ ಹೊಟ್ಟೆಯುರಿಸುವ ಕೆಟ್ಟ ಸಮಾಚಾರವನ್ನೆಂತು ತಿಳಿಸಲಿ?" ಎನ್ನುತ್ತಾ ಕೈಗಳಿಂದ ಮುಖ ಮುಚ್ಚಿಕೊಂಡು ಮತ್ತೆ ಅಳಲಾರಂಭಿಸಿದ. ಮುದುಕನಿಗೆ ಮತ್ತೆ ಅಳು ಬಂತು. ''ಹೇಳು, ಹೇಳು ! ಇನ್ನೇನು ಕೆಟ್ಟ ಸಮಾಚಾರ ತಾನೇ ನನಗುಂಟು! ಕೇಳಬಾರದ್ದನ್ನು ಎಂದೋ ಕೇಳಿಯಾಯಿತು ! ಅದಕ್ಕಿಂತ ಇನ್ನೇನು ಕ್ರೂರವಿರಲು ಶಕ್ಯ?" ಎಂದ.

ಅಳು ನಿಲ್ಲಿಸಿ ಸಿದ್ಧಾರ್ಥ ಕೇಳಿದ: "ಜೀಯಾ ! ನಿಮ್ಮ ಪುತ್ರರ ಹೆಸರು ವಿನಯಶರ್ಮ ಅಲ್ಲವೆ? ಅವರು ಕಣ್ಮರೆಯಾದಾಗ ಅವರ ಮೈ ಮೇಲೆ ಒಡವೆ ವಸ್ತ್ರಗಳೇನಿದ್ದುವು, ಹೇಳುವಿರಾ ?" ಶಕಟಾಯನ : (ನೆನೆಸುತ್ತಾ) "ಅವನು ಸಾಯುವ ಮುಂಚೆ, ಆ ವರ್ಷ ಮಹಾನಂದಿ ಅರಸರು ನನಗೂ ಅವನಿಗೂ ದೀಪಾವಳಿ ಹಬ್ಬದ ಕಾಣಿಕೆಯಾಗಿ ಬಂಗಾರದ ಉಂಗುರಗಳನ್ನು ಮಾಡಿಸಿ ಕೊಟ್ಟಿದ್ದರು ! ಆ ಪ್ರಭುಗಳ ರೀತಿಯೇ ಬೇರೆ ! ಸುನಂದಾದೇವಿಗೆ ಹಗಲಿರುಳೂ ದುಡಿದ, ನನ್ನ ಮಗ ! ಇಗೋ ನನ್ನ ಉಂಗುರ'' ಎನ್ನುತ್ತಾ ''ಶಕಟ" ಎಂದು ಕೆತ್ತಿಸಿ ಬರೆಸಿದ್ದ ತನ್ನ ಬಂಗಾರದ ಉಂಗುರವನ್ನು ತೋರಿಸಿದ. "ವಿನಯನಿಗೂ ಒಂದು ಹೀಗೇ ಕೊಟ್ಟಿದ್ದರು. ಅವನೊಡನೆ ಅದೂ ಹೋಯಿತು! ಮಗನ ನೆನೆಪಿಗೆ ಏನೂ ಉಳಿಯಲಿಲ್ಲ; ಈ ದುಃಖದ ಹೊರತು, ಹೆತ್ತ ತಾಯಿಯ ಹೊರತು, ಕೊರಗುವ ಈ

ಮುದುಕನ ಹೊರತು ಏನೇನೂ ಉಳಿಯಲಿಲ್ಲ" ಎನ್ನುತ್ತಾ ಮತ್ತೆ ಮುದುಕ ಅತ್ತ.

ಸಿದ್ಧಾರ್ಥಕ ತನ್ನ ಜೋಳಿಗೆಯಿಂದ "ವಿನಯ" ಎಂಬ ಅಂಕಿತದ ಅಂಥದೇ ಬಂಗಾರದ ಉಂಗುರವನ್ನು ಹೊರತೆಗೆದು, ಮುಖಮುಚ್ಚಿಕೊಂಡಿದ್ದ ಮುದುಕನ ಕೈಬಿಡಿಸಿ, ಅದರೊಳಗೆ ಹಾಕಿ, ಮುದುಕನ ಮುಖ ನೋಡಿದ !

ಶಕಟಾಯನ ಬೆಚ್ಚಿದ; ತನ್ನ ಕಣ್ಣನ್ನು ತಾನೇ ನಂಬಲಿಲ್ಲ! ''ಇದು ಹೇಗೆ ಇಲ್ಲಿ ಬಂತು? ಎಂದು ಕೇಳಿದ. ಸಿದ್ಧಾರ್ಥ ಜೀವಸಿದ್ಧಿ ವಾಡಿದ ಪವಾಡವನ್ನೆಲ್ಲ ವಿವರಿಸಿ, ಮಹಾನಂದಿಯ ಶಯ್ಯಾಗೃಹದ ನೆಲಮಾಳಿಗೆಯ ನೆಲದಲ್ಲಿ ಅದು ದೊರೆತ ಬಗೆಯನ್ನೂ, ಚಂದ್ರಗುಪ್ತನಿಂದ, ಈ ವೃತ್ತಾಂತ ವನ್ನು ಕೇಳಿದರೆ ತಿಳಿಯುವುದೆಂದೂ ಸಂಕ್ಷೇಪವಾಗಿ ಕಥೆ ಹೇಳಿದ.

ಹೆಂಡತಿಗೆ ತೋರಿಸುವುದಾಗಿ ಶಕಟಾಯನ ಒಳಗೆ ಓಡಿದ; ಆ ಮುದುಕ ಶರೀರದಲ್ಲೂ ಆ ಉಂಗುರ ವಿದ್ಯುತ್ ಸಂಚಾರ ಮಾಡಿಸಿತ್ತು! ಮೂರ್ಛಿತಳಾದ ಅವಳಿಗೆ ಅವನು ಶೈತ್ಯೋಪಚಾರ ಮಾಡಿ, ಅವಳನ್ನೂ ಕೈಹಿಡಿದು ಕರೆದುಕೊಂಡು ಬಂದು, ಸಿದ್ಧಾರ್ಥಕನನ್ನು ಹೆಚ್ಚು ವಿವರ ಗಳನ್ನು ಕೇಳುವ ವೇಳೆಗೆ, ಸಿದ್ಧಾರ್ಥಕ ಪೆಟ್ಟಿಗೆ ತೆರೆದು ರಾಕ್ಷಸನ ಮುದ್ರೆ ಯುಂಗುರದಿಂದ ತಾನು ಬರೆದ ಪತ್ರಕ್ಕೆ ಮುದ್ರಿಸಿ, ಮೊಹರು ಮಾಡಿ ಆಗಿತ್ತು! ಪತ್ರ ಸುರಕ್ಷಿತವಾಗಿ ಜೋಳಿಗೆ ಸೇರಿತು !!

ಸಿದ್ಧಾರ್ಥಕ ವಿನಯಶರ್ಮನ ಅಸ್ಥಿಪಂಜರ ದೊರೆತ ಕಥೆಯನ್ನೂ, ಜೈನನಾದರೂ ಆ ಸಂನ್ಯಾಸಿ ಅದಕ್ಕೆ ಬ್ರಾಹ್ಮಣರಿಂದ ಸಂಸ್ಕಾರ ಮಾಡಿಸಿದ ರೀತಿಯನ್ನೂ, ತಾನು ಕೇಳಿದ್ದಂತೆ ವರ್ಣಿಸಿ, "ಪ್ರಾಯಃ ಇದೆಲ್ಲ ಆ ಹಜಾಮ ಮಹಾಪದ್ಮನ ಕೆಲಸ ಇರಬೇಕು!" ಎಂದು ನಂದವಂಶದಲ್ಲಿ ತಿರಸ್ಕಾರ, ದ್ವೇಷ ಬರುವಂತೆ ಮನಸ್ಸಿಗೆ ಕಟ್ಟಿದ. ''ಅಮಾತ್ಯನ ಪಾತ್ರ ಇದರ ಲ್ಲುಂಟೇ ?" ಎಂದು ಕೇಳಿದ ಮುದುಕನಿಗೆ "ಶಿವಶಿವಾ! ಮುತ್ತಿನಂಥ

ಮನುಷ್ಯ! ಅವನು ಬೇಡವೆಂದರೂ ಈ ಹಚಾವುನೂ, ಸುನಂದಾದೇವಿಯೂ ಕೂಡಿ, ನಿಮ್ಮ ಮಗನನ್ನು ಮುಗಿಸಿದರಂತೆ! ಮೌರ್ಯರಾಯರ ಕಾಲದವರೆಗೂ ಇದು ರಹಸ್ಯ. ಚಂದ್ರಗುಪ್ತನಿಗೆ ಇದು ತಿಳಿದಿದೆಯೆಂದು ಜೀವಸಿದ್ಧಿ ಅಂಜನ ಹಾಕಿ ನೋಡಿ ಹೇಳಿದರು! ಮೌರ್ಯರೇ ಪಟ್ಟದಲ್ಲಿದ್ದರೆ ಈ ಅಕೃತ್ಯ ನಡೆಯುತ್ತಿರಲಿಲ್ಲ! ಅವರಿಗೆ ಇದು ಗೊತ್ತಿದೆಯೆಂದೇ ನಂದರು ಅವರನ್ನು ಮುಗಿಸಿದರಂತೆ! ನಾನು ಕೇಳಿದ ಸಮಾಚಾರ" ಎಂದು ಸಿದ್ಧಾರ್ಥಕ ಕಳ್ಳೆ ಕಟ್ಟಿ ಕಥೆ ಹೇಳಿದ.

ಶಕಟಾಯನನ ಎದೆಯೊಡೆಯಿತು ! ದ್ರೋಹಿ ನಂದರ ಅನ್ನವನ್ನು ಇನ್ನೂ ತಿನ್ನುತ್ತಿರುವುದಕ್ಕೆ ತನ್ನ ಬಗೆಗೇ ತಿರಸ್ಕಾರವೂ, ಹೇಸಿಗೆ ಭಾವವೂ ಉಂಟಾದುವು. ''ಎಲೈ ಪುತ್ರಪ್ರಾಯನೇ! ಇನ್ನು ಈ ರಾಜ್ಯದಲ್ಲಿದ್ದು ಪಿಂಡ ಬೆಳೆಸುವುದರಿಂದೇನು ಲಾಭ! ಎಲ್ಲಾದರೂ ಯಾತ್ರೆ ಹೋಗಿ ಸತ್ತರೂ ಸರಿಯೆ ! ಉತ್ತರಕ್ರಿಯೆ ಮಾಡುವವರೂ ನನಗಿಲ್ಲ; ಕಾಶಿಯಲ್ಲೇ ಹೋಗಿ ಸಾಯುವೆವು" ಎನ್ನುತ್ತಾ ಹೊಸ ನಿರ್ಧಾರವನ್ನು ಪ್ರಕಟಿಸಿದ.

ಸಿದ್ಧಾರ್ಥಕ : ''ಹಾಗಲ್ಲ! ಮಂತ್ರಿಗಳೇ ! ಇದಾಗಿ ಎಷ್ಟೋ ವರ್ಷಗಳುರುಳಿವೆ. ಈಗ ಇದ್ದಕ್ಕಿದ್ದಂತೆ ಈ ರೀತಿ ನೀವು ಹೊರಟರೆ, ನಂದರಿಗೆ ನಿಮ್ಮಲ್ಲಿ ಸಂಶಯ ಬರುವುದು. ಮೊದಲೇ ಬ್ರಾಹ್ಮಣರನ್ನು ಕಂಡರಾಗದ ಅವರು ಅಮಾತ್ಯನಿಗೂ ಕೇಡು ಮಾಡಿಯಾರು ! ನೀವಿ ಬ್ಬರೂ ಸಮಯ ನೋಡಿ, ಬ್ರಹ್ಮಹತ್ಯೆಗೆ ಪ್ರಾಯಶ್ಚಿತ್ತವಾಗಿ, ರಾಷ್ಟ್ರ ಕ್ಷೇಮಾರ್ಥವಾಗಿ, ನಂದರ ವಿರುದ್ಧ ಏನಾದರು ಸಾರ್ಥಕ ಕೆಲಸ ಕೈಗೂಡು ವಂತೆ ಮಾಡುವುದು ಬಿಟ್ಟು, ಹೊರಟರೇನು ಬಂತು ? ಅತ್ತಣಿಂದ ಚಂದ್ರ ಗುಪ್ತನೂ ದಂಡೆತ್ತಿ ಬರುತ್ತಿರುವನು! ಮಹಾಪುರುಷರಾದ ಚಾಣಕ್ಯರೂ ಇತ್ತ ಬರುತ್ತಿರುವರು. ಬ್ರಾಹ್ಮಣ್ಯದ ರಕ್ಷಣೆಗೆ ದೇವರು ಮುಂದುಕರಾದ ತನ್ನು ಕೈಯ್ಯಿಂದ ಏನನ್ನು ಉದ್ದೇಶಿಸಿರುವನೋ ? ಯಾರಿಗೆ ಗೊತ್ತು ? ಇಲ್ಲಿದ್ದೇ ಕೆಲಸ ಆಗಬೇಕು. ಈ ಉಂಗುರ ನಿಮ್ಮಲ್ಲೇ ಇರಲಿ; ಯಾರಿಗೂ ಕ್ಷಪಣಕರಿಗೂ–ಇದು ತಿಳಿಯುವುದು ಬೇಡ. ರಾಕ್ಷಸನಿಗೂ ತೋರಿಸಿ

ಕೊಳ್ಳಬೇಡಿ, ನಿಮ್ಮ ಈ ಪರಿಜ್ಞಾನವನ್ನು! ಸಮಯ ಬರುತ್ತದೆ!' ಎನ್ನುತ್ತಾ ಹೊರಟ.

ಇಷ್ಟು ಉಪಕಾರಿಯಾದ, ಸ್ನೇಹಮಯ ಪುತ್ರನಂತಿರುವ ಅವನನ್ನು ಶಕಟಾಯನ ತನ್ನ ಎಲುಬು ಹಂದರವಾಗಿದ್ದ ಎದೆಯಿಂದ, ತೋಳುಗಳಿಂದ ತಬ್ಬಿಗೊಂಡ. ಅತ್ತ ಮುದುಕಿಗೆ ನಮಸ್ಕರಿಸಿ ಸಿದ್ಧಾರ್ಥಕ ಹೊರಟ.

ರಾಕ್ಷಸನ ಉಂಗುರದಿಂದ ಮುದ್ರಿತವಾದ ಆ ಪತ್ರವನ್ನು ರಹಸ್ಯದಲ್ಲಿ ಚಾರುಹಾಸನೆಂಬ ತನ್ನ ಪ್ರೌಢ ಶಿಷ್ಯನ ಬಳಿ ಕೊಟ್ಟು ಜೀವಸಿದ್ಧಿ ಕಾಮ ರೂಪಕ್ಕೆ ಕಳುಹಿದ. ಮಗಧನ ಚಾರನ ವೇಷದಲ್ಲಿ ಕುದುರೆಯನ್ನೇರಿ, ಅದೃಶ್ಯನಾಗಿ ಚಾರುಹಾಸ ಅದನ್ನು ಕಮಲವರ್ಮನ ಕೈಗೆ ತಲುಪಿಸಿದ.

ಅದರ ಮೊದಲ ದಿನವಷ್ಟೇ ಅಮಾತ್ಯ ರಾಕ್ಷಸ ಕಳುಹಿದ್ದ ಇನ್ನೊಂದು ಪತ್ರ ಅವನಿಗೆ ತಲುಪಿತ್ತು; ''ನಿಮ್ಮ ಸೇನೆಯೊಡನೆ ಮಗಧಕ್ಕೆ ಬರ ತಕ್ಕದ್ದು! ಪರ್ವತನ ಸೇನೆಯನ್ನೆದುರಿಸಲು ನಿಮ್ಮ ಸಹಾಯ ಈಗ ಅತ್ಯವಶ್ಯ" ಎಂಬ ಆ ಪತ್ರದ ಒಕ್ಕಣೆಗೆ ವಿರುದ್ಧವಾದ ಈ ಪತ್ರವನೋದಿ ದೊರೆಗೆ ಯಾವುದನ್ನು ನಂಬಬೇಕೆಂದು ತಿಳಿಯಲಿಲ್ಲ! ಮಂತ್ರಿಯಮುಖ ನೋಡಿದ.

ಶುಕನಾಸನೆಂಬ ಆ ಮಂತ್ರಿ ಯೋಚಿಸಿದ! "ಪ್ರಭು! ಎರಡರ ಅಕ್ಷರ, ಮುದ್ರೆಗಳೂ ಒಂದೇ ಇವೆ. ಪ್ರಾಯಶಃ ಮೊದಲ ಅಪ್ಪಣೆ ಬರೆದು ಕಳುಹಿದ ನಂತರ, ಈ ಕಳಿಂಗ ಸೇನಾ ಸಮಾಚಾರ ಬಂದಿರಬೇಕು. ನಾವು ಅವರನ್ನು ಎದುರಿಸುವ ದಿನ, ಕಾಲ, ದೇಶಗಳನ್ನು ತಿಳಿಸುವ ಮಗಧದ ಪತ್ರವೊಂದನ್ನು ಎದುರು ನೋಡುತ್ತಾ ಕಾಯಲೆಂದೇ ಈ ತುರ್ತು ಪತ್ರ ಸ್ಪಷ್ಟ ತಿಳಿಸುತ್ತದೆ. ಎಲ್ಲ ಸಮಂಜಸವಾಗಿದೆ," ಎನ್ನುತ್ತಾ ಸರಿಯಾದ ಉತ್ತರ ಬರೆಸಿ, "ದೂತನ'' ಕೈಲಿ ಕಳುಹಿದ.

ಚಾರುಹಾಸ ತಂದ ಪತ್ರವನ್ನು ಜೀವಸಿದ್ಧಿ ಚಾಣಕ್ಯನಿಗೆ ರವಾನಿಸಿದ! ಕಾಮರೂಪದ ಅರಸನನ್ನು "ಒಂದೇ ಹೂವಿ''ನಿಂದ ಆಚಾರ್ಯ ಹೀಗೆ

ತಟಸ್ಥನನ್ನಾಗಿಸಿದ ವಿಷಯ ರಾಕ್ಷಸನಿಗೆ ತಿಳಿಯದೆ, ಸಹಾಯ ನಿರೀಕ್ಷಿಸುತ್ತ ದಿನಗಳು ಬಹುಮುಖ್ಯವಾದ ಆ ದಿನಗಳು, ಹಾಳಾಗಿ ಉರುಳಿದವು!

  

ವಿದ್ಯುಲ್ಲೇಖೆಯಿಂದ ಪರ್ವತನ ಗೂಢ ಹೃದಯಾಭಿಪ್ರಾಯವನ್ನರಿತ ಚಾಣಕ್ಯ ಶಿಷ್ಯರ ವರದಿಯೊಡನೆ ತಾಳೆ ಹಾಕಿ, ವಿಷಯವನ್ನು ಖಚಿತ ಮಾಡಿಕೊಂಡ. ಸೈನ್ಯ ಮಥುರೆಯ ಬಳಿಗೇ ಹತ್ತಿರ ಹತ್ತಿರ ಬಂದಿತ್ತು. ಇಂದ್ರವರ್ಮನ ಸ್ವಾಗತದೊಡನೆ ಸೈನ್ಯ ಸಂಚಾರ ಸುಖವಾಗಿತ್ತು. ಚಾಣಕ್ಯ ತುಂಬ ಯೋಚಿಸಿದ. ವಿದ್ಯುಲ್ಲೇಖೆಗೆಂದ :

"ಮಗಳೇ ! ನೀನಿಲ್ಲಿದ್ದರೆ ನಿನಗೂ ಅಪಾಯ. ನನಗೂ ಚಿಂತೆ. ನನ್ನ ಶಿಷ್ಯನೊಡನೆ ನಿನ್ನನ್ನು ಸುರಕ್ಷಿತವಾಗಿ ಸಂಕರ್ಷಣಾಲಯಕ್ಕೆ ಕಳುಹುವೆ. ಯುದ್ಧ ಮುಗಿದ ನಂತರ ಗಂಡನನ್ನು ಕೂಡಿಕೊಳ್ಳುವೆ ಯಂತೆ."

ಅವಳು ಅಳುತ್ತಾ ಪ್ರಬಲವಾಗಿ ತಲೆಯಲ್ಲಾಡಿಸಿದಳು; "ನೀವೂ ನನ್ನ ಪತಿಯೂ ಇರುವೆಡೆಯಿಲ್ಲದ ಸುರಕ್ಷೆ ನನಗೆ ಬೇರೆಡೆ ಬರುವುದೇನು ? ಇಲ್ಲಿದ್ದರೆ ಕಿಂಚಿತ್ ಪ್ರಯೋಜನವಾದರೂ ಆದೀತು. ಇತ್ತ ಪರ್ವತನ ಕೇಡು, ಅತ್ತ ಮಗಧದ ಉಪಟಳ ಇರುತ್ತಾ, ಸಂಕರ್ಷಣಾಲಯದಲ್ಲಿ ನನಗೇನು ಕೆಲಸ!" ಎಂದು ಆಚಾರ್ಯನ ಮನವೊಲಿಸಿದಳು. ಚಾಣಕ್ಯ ಮೆಚ್ಚಿದ.

  

"ಕುಮಾರ! ಪರ್ವತನ ಕೃತಘ್ನತೆಯನ್ನು ನೋಡಿದೆಯಾ ? ಉಪಾಧ್ಯಾಯನೂ ವೈದ್ಯನೂ ಕಾರ್ಯ ಮುಗಿದ ಮೇಲೆ ಅಪ್ರಯೋಜಕರನ್ನು ವಂತಾಯಿತು ! ನಿನ್ನನ್ನು ನಂದರಿಗೆ ಹಿಡಿದು ಕೊಡಲು ಸಮಯ ಕಾಯು

ತ್ತಿರುವನಂತೆ ! ನನ್ನನ್ನೂ ಮುಗಿಸುವನಂತೆ ! ಚಾಣಕ್ಯ ಇದನ್ನು ಆಗ ಗೊಡುವನೋ ! ಇರಲಿ. ಈಗ ಈ ಅವನ ಭಾವ ನಮಗೆ ತಿಳಿದಂತೆ ನಾವು ತೋರಿಸಿಕೊಳ್ಳಬಾರದು. ನಂದ ನಿಗ್ರಹ ಆಗಲಿ. ಮುಂದಿನ ಮಾತು !'' ಎನ್ನುತ್ತಾ ಚಂದ್ರಗುಪ್ತನಿಗೆ ವಿದ್ಯುಲ್ಲೇಖೆ ತಂದ ಸಮಾಚಾರ ತಿಳಿಸಿದ. ಚಂದ್ರಗುಪ್ತನಿಗೆ ಆಶ್ಚರ್ಯವಾಯಿತು! "ನಿಜವೇ ?" ಎಂಬಂತೆ ಆವಳತ್ತ ನೋಡಿದ. ಅವಳು ಲಜ್ಜೆಯಿಂದ ತಲೆತಗ್ಗಿಸಿ, ನಗುತ್ತಿದ್ದಳು." ಈ ಯವನ ರಮಣಿಯ ಎದೆಗಾರಿಕೆಯೇ ಸರಿ!" ಎಂದು ಚೇಷ್ಟೆ ಮಾಡಿದ.

  

ಕಮಲಾಪೀಡನನ್ನು ಶೀಘ್ರವಾಗಿ ಚಾಣಕ್ಯ ಕಳಿಂಗದ ರಾಜಧಾನಿ ಭುವನೇಶ್ವರಕ್ಕೆ ಕಳುಹಿದ್ದ. "ಕಳಿಂಗದ ಅರಸರು ಪರಂಪರೆಯಿಂದ ಮಗ ಧಕ್ಕೂ ವೈರಿಗಳು. ಕಾಮರೂಪಕ್ಕೂ ವೈರಿಗಳು. ಈಗ ಪ್ರಬಲವಾದ ಪರ್ವತಸೇನೆ ಮಗಧಕ್ಕೆ ಮುತ್ತಿಗೆ ಹಾಕಲಿದೆ. ಈಗ ಕಳಿಂಗ ಅರಸು ಉಪಾಯದಿಂದ ಹೀಗೆ ತನ್ನ ಕೆಲಸ ಮಾಡಿಕೊಳ್ಳಬೇಕು. ಹಳೆಯ ಹಗೆ ಯನ್ನು ಮರೆಯುವಂತೆ ರಾಕ್ಷಸ ಒಲೈಸಿಯಾನು! ಅದು ಮರುಳು ಮಾತು!! ಕಾಮರೂಪದ ಅರಸನನ್ನು-ಮಿತ್ರರಾದ ನಂದರಿಗೆ ಒದಗಿ ಬಾರದಂತೆ, ನಿಷ್ಕ್ರಿಯ ಮಾಡಲಾಗಿದೆ. ಅವನ ಸೈನ್ಯ ಮುಂದಡಿಯಿಡದು. ಪರ್ವತ ಸೇನೆ ನಂದರನ್ನು ಸದೆಬಡಿಯುವ ಸಮಯಕ್ಕೆ-ಫಾಲ್ಗುಣ ಅಮಾವಾಸ್ಯೆಗೆ ಸರಿಯಾಗಿ ಕಳಿಂಗರಾಜ ಕಾಮರೂಪವನ್ನು ಸುಲಭವಾಗಿ ಜಯಿಸಬಹುದು. ತಾವೇ ಕಷ್ಟದಲ್ಲಿರುವ ನಂದರೂ ಅವರ ಸಹಾಯಕ್ಕೆ ಬರಲಾರರೆಂಬುದು ಖಚಿತ. ಅಷ್ಟರಲ್ಲಿ ಮಗಧವೂ ಚಂದ್ರಗುಪ್ತನ ವಶವಾಗಿರುತ್ತದೆ. ಮಗಧದ ದಕ್ಷಿಣ ಗಡಿಯನ್ನು ಪರ್ವತ ಸೇನೆಯೇ ಸುತ್ತುವರಿದು ಶತ್ರುನಿಗ್ರಹ ಮಾಡೀತು. ಕಳಿಂಗರು ಚಂದ್ರಗುಪ್ತನಿಗೆ ನೇರ ಸಹಾಯ ಮಾಡಬೇಕೇ ನಿಲ್ಲ. ಕಾಮರೂಪರನ್ನು ಒಂದು ಕೈ ನೋಡಿ ಕೊಂಡರೆ ಸಾಕು ! ತಮಗೂ ಅದು ಲಾಭ. ಈ ಉಪಕಾರಕ್ಕೆ ಪ್ರತಿಯಾಗಿ ಚಂದ್ರಗುಪ್ತ,

ಕಳಿಂಗದ ಭಾಗಗಳನ್ನು ಮಹಾಪದ್ಮ ವಶಪಡಿಸಿಕೊಂಡದ್ದನ್ನು ವಾಪಸ್ಸು ಕೊಡುವನು ಬೇರೆ ಬಹುಮಾನಗಳೂ ಕಾದಿವೆ.'' ಎಂಬ ಧೋರಣೆಯಲ್ಲಿನ ಪತ್ರ ಕಳಿಂಗರಾಜನಿಗೆ ತಲುಪಿ, ಸಂತೋಷಪಟ್ಟು, ಕಾರ್ಯೋನ್ಮುಖನಾದ.

ನಂದರು ಸುತ್ತ ವೈರಿಗಳನ್ನು ಹೊಂದುವಂತೆ ಮಾಡಿದ ಚಾಣಕ್ಯನ ಬುದ್ಧಿ ವೈಭವಕ್ಕೆ ಚಂದ್ರಗುಪ್ತ ಮರುಳಾದ! ವಿದ್ಯುಲ್ಲೇಖೆಯಂತೂ ಅವನನ್ನು ಸರ್ವಶಕ್ತನಾದ "ದ್ಯೌಃಪಿತೃ" (ಜೂಪಿಟರ್) ಎಂದೇ ಭಾವಿಸಿ, ಅವನ ಹೃದಯಾನುಸಾರಿಯಾಗಿದ್ದಳು.



## ಹದಿನಾಲ್ಕನೆಯ ಅಧ್ಯಾಯ

# ನಂದರ ಕೊನೆಯ ಸಭೆ!

ಅಮಾತ್ಯ ರಾಕ್ಷಸನಿಗೆ ಗೂಢಚಾರರು ಎತ್ತಣಿಂದಲೂ ಬರಿಯ ಕೆಟ್ಟ ಸಮಾಚಾರವನ್ನೇ ತಂದರು: "ಇಂದ್ರಪ್ರಸ್ಥದ ಇಂದ್ರವರ್ಮ ಪರ್ವತನನ್ನು ಕೂಡಿಕೊಂಡು ಎರಡೂ ಸೈನ್ಯಗಳು ಪಾಟಲೀ ಪುತ್ರಪ್ರಾಂತದ ಗಡಿಯತ್ತ ಬರುತ್ತಿವೆ.'' 'ನೇಪಾಳದ ಕಿರಾತ ಸೈನ್ಯ ಪಡೆ ಕೈಕೊಟ್ಟಿತು ! ಅವರೂ ಚಂದ್ರಗುಪ್ತನತ್ತ ಸೇರಿದರು" "ಕಳಿಂಗ ಸೈನ್ಯ ಕಾಮರೂಪದತ್ತ ಹೊರಟು, ಅತ್ತ ಕಾಮರೂಪದೇಶದಿಂದ ಯಾವ ಸೈನ್ಯ ನೆರವೂ ಸಿಗುವಂತಿಲ್ಲ" ಎಂಬೀ ಬಗೆಯ ಸಮಾಚಾರಗಳು ಏಕ ಕಾಲಕ್ಕೆ ಬಂದು ರಾಕ್ಷಸ ಚಿಂತಾ ಸಮುದ್ರದಲ್ಲಿ ಮುಳುಗಿದ! ಸಭೆಗೂಡಿಸಿ ಇತರ ಮಂತ್ರಿಗಳ, ಸೇನಾಧ್ಯಕ್ಷ, ಗಜಾಧ್ಯಕ್ಷ, ಅಶ್ವಾಧ್ಯಕ್ಷ, ಕೋಶಾಧ್ಯಕ್ಷ, ನಗರರಕ್ಷಕ ಗೂಢಚಾರರ ಪಡೆಯ,

ಮುಖಂಡ, ಆಯುಧಶಸ್ತ್ರ ಉತ್ಪನ್ನ ವಿಭಾಗದ ಮುಖ್ಯ, ಮುಂತಾದ ಮುಖ್ಯ ಗಣ್ಯರ ಸಭೆಯೊಂದನ್ನು ಕೂಡಿಸಿದ. ಅವಸರ ಅವಸರದಲ್ಲಿ ಕರೆದ ಈ ಸಭೆಗೆ ನವನಂದರು ಶುಭ್ರ ಉಡುಪು ತೊಟ್ಟು, ಮಣಿಗಟ್ಟಿಳೆ ಬಂಗಾರದ ಆಭರಣಗಳನ್ನು ಧರಿಸಿ, ಕರ್ಪೂರ ವೀಳೆಯವನ್ನು ಮೆಲ್ಲುತ್ತಾ, ವಂದಿ ಮಾಗಧರು ಹೊಗಳುತ್ತಾ ಒಂಭತ್ತು ದಿವ್ಯ ರಾಜಾಸನಗಳಲ್ಲಿ ಮಂಡಿಸಿದರು. ಮೊದಲನಂದ ರಾಜಪೀಠದಲ್ಲಿ ಆಸೀನನಾಗಿದ್ದ. ಯುದ್ಧದ ಭೀತಿಯೋ, ಏನಾಗುವುದೆಂಬ ಆತಂಕವೋ, ಜವಾಬ್ದಾರಿಯೋ, ಕೊಂಚವೂ ಅವರಿಗಿದ್ದಂತೆ ತೋರಲಿಲ್ಲ. ಗಣಿಕೆಯರು ಸುಂದರ ನವಿಲುಗರಿಯ ಬೀಸಣಿಗೆಯಿಂದ ಬೀಸುತ್ತಿದ್ದರು. ಅಮಾತ್ಯರಾಕ್ಷಸನ ಬಲಕ್ಕೆ ವಕ್ರನಾಸನೆಂಬ ಮಂತ್ರಿಯೂ, ನಿರುಪಯುಕ್ತನಾದ ಸುಬಂಧುವೂ, ಶಕಟಾಯನನೂ, ಇನ್ನಿತರರೂ ಕುಳಿತಿದ್ದರು. ಮಹಾಪ್ರಯಾಸಪಟ್ಟು ಸರ್ವಾರ್ಥಸಿದ್ಧಿ ರಾಯನನ್ನು (ಮಹಾಪದ್ಮನನ್ನೂ) ರಾಜಸಭೆಗೆ ಕರೆತರಲು, ಸಲಹೆ ಕೇಳಲು ರಾಕ್ಷಸ ಎಷ್ಟೆಷ್ಟೋ ಯತ್ನಿಸಿ ಒತ್ತಡ ತಂದ! ನಂದರೇ ಹೋಗಿ ಹೇಳಿದರೂ. ಪಾರ್ಶ್ವವಾಯು ಹಿಡಿದು ತನ್ನ ಕರ್ಮಕ್ಕೆ ತಾನೂ ಬಲಿಯಾಗಿರುವುದಾಗಿಯೂ, ನಾಲಿಗೆಯಿಲ್ಲದ ಅವನು ಈಗ ಬಂದರೂ ನಿರುಪಯುಕ್ತನೆಂದೂ, ವಾನಪ್ರಸ್ಥನಾಗಿರುವ ಅವನಿಗೆ ನಿಶ್ಚಿಂತೆಯಿಂದ ಸಾಯ ಬಿಡಬೇಕೆಂದೂ ಹಳೆಯ ದೊರೆ, ಹಾಳೆಯ ಮೇಲೆ ಬರೆಸಿ ಅಭಿಪ್ರಾಯವನ್ನು ಖಂಡ ತುಂಡವಾಗಿ ಹೇಳಿಕಳುಹಿದ.

ರಾಕ್ಷಸ ಸೇನಾಧ್ಯಕ್ಷರಾಗಿ ಒಬ್ಬೊಬ್ಬರ ಮತವನ್ನು ಕೇಳಿ, ರಾಷ್ಟ್ರ ರಕ್ಷಣೆಗೆ ಈಗ ಏನುಪಾಯವೆಂದು ಸೂಚಿಸಲು ಅಜ್ಞಾಪಿಸಿದ.

ಬಾಗುರಾಯಣ ಹೇಳಿದ : ಸುತ್ತಲೂ ಈಗ ಶತ್ರುಗಳಾಗಿರುವುದು ಅನಿರೀಕ್ಷಿತವೇನಲ್ಲ! ಹಿಂದೆ ರಾಯನ ಕಾಲದಲ್ಲಾದ ದಿಗ್ವಿಜಯಾನಂತರ, ಕುದಿಯುತ್ತಿದ್ದ ಆ ನೆರೆ ರಾಜ್ಯಗಳ ಅರಸರ ಮನದ ಹುಣ್ಣು ಆರಿಸಲು ಮಗಧ ಏನನ್ನೂ ಮಾಡಿಲ್ಲ. ಸಮಯಕಾಯುತ್ತಿದ್ದ ಅವರಿಗೆ ಇದು ಕಾಲ! ಚಾಣಕ್ಯನ ತಂತ್ರಕ್ಕೆ ಬಲಿಯಾಗಿ ಸುತ್ತಣ ಎಲ್ಲರೂ ಮಗಧದ ವೈರಿ

ಗಳಾದರೂ. ದೈವ ಮಗಧಕ್ಕೆ ಎದುರಾಗಿದೆ. ಮಗಧದ ಸೈನ್ಯ ಅಪಾರ ವಾದರೂ ಪರ್ವತಸೇನೆಗೆ ಎತ್ತಲೂ ಸರಿಸಮವಾಗದು. ಯಾವ ಶತ್ರುವಿಗೂ ಇದೂ ಯಾವ ಮೂಲೆಗೂ ಸಾಲದು ! ಆದುರಿಂದ ಇರುವ ಸೈನ್ಯವೆಲ್ಲ ಜಮಾಯಿಸಿ ರಾಜಧಾನಿಯ ರಕ್ಷಣೆ ಮಾಡುವುದಕ್ಕೇ ನಿಯಮಿಸಬೇಕು. ಒಂಭತ್ತುವರೆ ಮೈಲಿ ಉದ್ದ, ಎರಡು ಮೈಲಿ ಅಗಲವಿರುವ, ಎಂಟು ಕಡೆ ಮಹಾದ್ವಾರಗಳನ್ನು ಹೊಂದಿ ಅಪಾರ ಸಂಪದ್ಭರಿತವಾಗಿರುವ ರಾಜಧಾನಿ ಯನ್ನು ರಕ್ಷಿಸಿದರೇ ಸಾಕು. ಹತ್ತು ವರ್ಷಕ್ಕಾಗುವ ಆಹಾರ ದಾಸ್ತಾನು ಅಲ್ಲದೆ. ಶತ್ರುಗಳು ಹತಾಶರಾಗಿ ತಾವೇ ಹೋದಾರು ! ಮೊದಲ ರಾಧಾನಿಯನ್ನು ರಕ್ಷಿಸುತ್ತಾ, ಹೊರಗಿನಿಂದ ಉಜ್ಜಯಿನಿ, ಅವಂತಿ, ವಿದರ್ಭ, ಕುಂತಲ ದೇಶಗಳ ದೂರ ಸೈನ್ಯವನ್ನು ತರಿಸಿಕೊಳ್ಳಲು ಗೂಢವಾಗಿ ಯತ್ನಿಸಬೇಕು. ಅದೊಂದೇ ದಾರಿ. ಬೇರಾವದಾರಿಯೂ ಪೂರ್ಣ ವಿನಾಶದ ಮಾರ್ಗ – ಎಂದು.

ಬಲಗುಪ್ತ, ಭದ್ರಭಟ, ಡಿಂಗಿರಾತ, ಚಿತ್ರವರ್ಮ, ಮೊದಲಾದ ಸಕಲ ಸೇನಾ ವಿಭಾಗಾಧಿಕಾರಿಗಳೂ ಅದನ್ನೇ ಅನುಮೋದಿಸಿದರು. ನಗರಾಧ್ಯಕ್ಷನೂ ಧ್ವನಿಗೂಡಿಸಿದ. ಕೋಶಾಧ್ಯಕ್ಷನು ಹೊಸ ಸೈನ್ಯ ಜಮಾವಣೆಗೆ ಹಣವಿಲ್ಲವೆಂದನು. ವಕ್ರನಾಸನೂ ಇದನ್ನನುಮೋದಿಸಿ, ಅದಕ್ಕೆ ಕಾಲವೂ ಸಾಲದೆಂದೂ, ಚಾಣಕ್ಯನ ಮಂತ್ರಶಕ್ತಿಗೆ ಪ್ರತಿಯಾಗಿ ಜೀವಸಿದ್ಧಿಯ ಜಪತಪಾನುಷ್ಠಾನಗಳೂ, ಮಾಸೋಪವಾಸಿಯ ಯಜ್ಞವೂ ನಡೆಯುತ್ತಿರುವುದರಿಂದ ಭಯವೇನಿಲ್ಲದೆಂದೂ ಹೇಳಿದ. ಶಕಟಾಯನನು "ಎಲ್ಲವೂ ಕರ್ಮಾಯತ್ತ ! ಕಾಲಾಯತ್ತ" ಎನ್ನುತ್ತಾ ಮೇಲಿನ ಅಭಿ ಪ್ರಾಯಕ್ಕೇ ಉತ್ತೇಜನವಿತ್ತನು !

ರಾಕ್ಷಸನಿಗೆ ಕೋಪ ಬಂದಿತು ! ಇತರ ಅಮಾತ್ಯರಿಗೂ ಸೇನಾಧ್ಯಕ್ಷ ರಿಗೂ ಯಾರಿಗೂ ಮಗಧದ ಸಮಗ್ರರಕ್ಷಣೆಯ ವಿಷಯದಲ್ಲಿ ಅಕ್ಕರೆ ಇರದು ದನ್ನು ಗಮನಿಸಿ, ಮನದಲ್ಲೇ ! "ಶಿವ, ಶಿವಾ ! ಬ್ರಾಹ್ಮಣ ಶಾಪವು ಫಲ ಕೊಡುತ್ತಿರುವುದು. ನಾನೂ ಬ್ರಾಹ್ಮಣನಾದರೂ ಸ್ವಾಮಿನಿಷ್ಠೆಯೆಂಬುದು

ಧರ್ಮ ! ನಂದರು ದೈವದ್ವೇಷಿಗಳು: ಧನ, ಸುಖ, ಭೋಗ ಪ್ರಿಯರು. ಎರಡು ತಲೆಮಾರಿನ ಪಾತಕಗಳ, ದುಷ್ಕರ್ಮಗಳ ಪರಿಪಾಕ ಕಾಲ ಸಮೀಪಿಸಿರುವಂತಿದೆ'' ಎಂದು ಕೊಳ್ಳುತ್ತಾ,

"ಏನಿರಯ್ಯ! ಯುದ್ಧ ಕಾಲದಲ್ಲಿ ಮಂತ್ರ, ಜಪ, ತಪಗಳಿಂದ ಶತ್ರು ನಿಗ್ರಹದ ಮಾತಾಡುವುದು ರಾಜನೀತಿಯೆ! ಮಂತ್ರದಿಂದಲೇ ಎಲ್ಲ ಆಗುವುದಾದರೆ, ಸೈನ್ಯ ಏತಕ್ಕೆ ಬೇಕು? ಅಮಾತ್ಯನ ಆವಶ್ಯಕತೆಯೇನು? ರಾಜರ ಅನ್ನವುಂಡ ಋಣ ತೀರಿಸುವ ಕಾಲ ಬಂದಾಗ 'ಕಾಲಾಯತ್ತ,' 'ಕರ್ಮಾಯತ್ತ' ಎಂಬ ವೇದಾನ್ತದ ಮಾತೇ! ಇದು ಉದ್ಯೋಗದ ಲಕ್ಷಣವಲ್ಲ. ಶಕ್ತಿ ಮೀರಿ ರಾಷ್ಟ್ರರಕ್ಷಣೆಯ ಉಪಾಯವನ್ನು ತಿಳಿಸಿರಿ" ಎಂದನು.

ಮೊದಲು ಯಾರೊಬ್ಬರೂ ಮಾತೆತ್ತಲಿಲ್ಲ. ನಂತರ ಭಾಗುರಾಯಣ ಹೇಳಿದ. ''ರಾಜರ ಅನ್ನ ವುಂಡ ಋಣ ತೀರಿಸಬೇಕೆಂದೇ ಈ ವ್ಯಾವಹಾರಿಕದ ಮಾತಾಡಿದೆ. ತಮಗೆ ನಮ್ಮ ಸ್ವಾಮಿ ನಿಷ್ಠೆಯಲ್ಲಿ ಸಂಶಯವಾದರೆ, ತಮ್ಮ ಚಿತ್ತ" ಎನ್ನುತ್ತಾ ಶಸ್ತ್ರವನ್ನು ತಂದು ನಂದರ ಆಸನಗಳ ಮುಂದೆ ಇಡಹೋದ! ಉಳಿದವರೂ ತಂತಮ್ಮ ಶಸ್ತ್ರಗಳನ್ನು ಎತ್ತಿ ತಂದರು.

ರಾಕ್ಷಸ "ಕೆಲಸ ಕೆಟ್ಟಿತು!'' ಎಂದು ಚಿಂತಿಸಿ "ಸೇನಾಧ್ಯಕ್ಷರುಗಳೇ! ಇಷ್ಟು ಸಣ್ಣ ಮಾತಿಗೆ ಕೋಪವೇತಕ್ಕೆ ? ನಮ್ಮೊಳಗೆ ಏಕಮತ್ಯವಿರಬೇಕಾದ ಕಾಲ ಇದು. ಇದೂ ಒಂದು ಬಲವೇ! ನಿಮ್ಮ ಶಕ್ತಿ, ನಿಷ್ಠೆಯ ವಿಷಯಗಳಲ್ಲಿ ಯಾರಿಗೂ ಸಂಶಯವಿಲ್ಲ " ಎಂದು ಬಹಿರಂಗವಾಗಿ ಅವರನ್ನು ಪ್ರೋತ್ಸಾಹಿಸಿದರೂ, ತನ್ನೊಳಗೇ ''ಇವರೂ ಚಾಣಕ್ಯನ ಭೇದೋಪಾಯಗಳಿಗೆ ಬಲಿಯಾಗಿರುವರೋ, ಹೇಗೆ ?" ಎಂದು ಸಂಶಯಪಟ್ಟು, ತಾನೇ ಹೀಗೆ ಸಮಾಧಾನ ಮಾಡಿಕೊಂಡ: "ನಂದರು ಪ್ರಜಾನುರಾಗವನ್ನೇ, ಅಧಿಕಾರಿಗಳ ಪ್ರೀತಿಯನ್ನೇ ಗಳಿಸಲು ಏನನ್ನೂ ಮಾಡಿಲ್ಲ! ಎಲ್ಲವನ್ನೂ ಅಮಾತ್ಯನ ಮೇಲೆ ಹಾಕಿ ನಿಶ್ಚಿಂತರಾಗಿದ್ದಾರೆ! ಒಬ್ಬ ಅಮಾತ್ಯ ಏನು ಮಾಡಿಯಾನು ? ಆದುದಾಗಲಿ, ದೇವರ ಇಷ್ಟ! ದೇವರನ್ನೇ ನಂಬಿದವನಿಗೆ

ಅವನು ಹೇಗೆ ಒಲಿಯಬೇಕು?'' ಎಂದೆಂದು ಕೊಳ್ಳುತ್ತಾ ಸಭೆಯಂತ್ಯಾ ಯನಾಯಿತೆಂದು ನಂದರಿಗೆ ಕಣ್ಸನ್ನೆಯಿಂದ ಸೂಚಿಸಿದ. ನಂದರು ಎದ್ದು ಹೊರಟರು. ಸಭೆ ಮುಕ್ತಾಯವಾಯ್ತು.

  

ಸಭೆಯಿಂದ ಹೊರಟ ರಾಕ್ಷಸ ಕಾಲವಿಲಂಬ ಮಾಡದೆ, ಶಕಟಾಯನ ನನ್ನು ಕರೆಸಿ, ಪರ್ವತರಾಜನಿಗೆ ಪತ್ರ ಬರೆಸಿದ್ದರ ಬಗೆಗೆ ಉತ್ತರವೇನಾದರೂ ಬಂದಿತೇ ? ಎಂದು ವಿಚಾರಿಸಿದ. ಕಳಿಂಗದಿಂದಲೂ ಉತ್ತರಬಾರದ್ದನ್ನು ಗಮನಿಸಿ ಬಹು ನಿರಾಶನಾದ. ಜಪಶಾಲೆಯಲ್ಲಿ ಯಜ್ಞ ಎಷ್ಟು ಮುಂದು ವರೆಯಿತೆಂದು ನೋಡಿ ಬರಲು ಹೊರಟ.

ಮಾಸೋಪವಾಸಿಯ ಶಿಷ್ಯರು ಅಮಾತ್ಯನನ್ನು ಪೂರ್ಣಕುಂಭದೊಡನೆ ಸ್ವಾಗತಿಸಿ, ಯಾಗಭೂಮಿಯನ್ನೆಲ್ಲ ತೋರಿಸಿದರು. ತುಪ್ಪದ ವಾಸನೆ ಯಿಂದ ಯಾಗ ಶಾಲೆ ಘಮಘಮಿಸುತ್ತಿತ್ತು. ಬ್ರಾಹ್ಮಣರ ಸಂಭ್ರಮ, ಉತ್ಸಾಹಗಳನ್ನು ನೋಡಿ ರಾಕ್ಷಸನಿಗೆ ಹಿಂದಿದ್ದ ದುಗುಡ ಕೊಂಚ ಕಮ್ಮಿ ಯಾದರೂ, ''ಇದೆಲ್ಲ ನಂದರನ್ನು ಕಾಪಾಡೀತೇ ? ಕರ್ಮಫಲವನ್ನು ಯಾರಿಗೆ ವರ್ಗಾಯಿಸುವುದು?" ಎಂಬ ಚಿಂತೆ ಮತ್ತೆ ಆವರಿಸಿತು. ಸೂರ್ಯ ಮುಳುಗುವುದರಲ್ಲಿದ್ದ. ರಾಕ್ಷಸ, ಭಾರವಾದ ಹೆಜ್ಜೆಗಳನ್ನು ಹಾಕುತ್ತ ತನ್ನ ನಿವಾಸದತ್ತ ಹೊರಟ.

ದಾರಿಯಲ್ಲಿ ಜೀವಸಿದ್ಧಿಯ ದರ್ಶನವಾಯಿತು. ''ಏನು ಅಮಾತ್ಯರೇ! ಜಪಶಾಲೆಯಿಂದ ಬರುತ್ತಿರುವಂತಿದೆ! ಎಲ್ಲ ಸುವ್ಯವಸ್ಥಿತವಾಗಿ ನಡೆಯುತ್ತಿದೆ ಯಷ್ಟೆ! ಬಹು ಚಿಂತಾಕ್ರಾಂತರಾಗಿರುವಂತಿದೆ !'' ಎಂದು ವಿಚಾರಿಸಿದ.

ರಾಕ್ಷಸ ಏನೋ ಉತ್ತರಿಸಿದ. ಜೀವಸಿದ್ಧಿ ಹೇಳಿದ. "ಇಂದು ದ್ವಾದಶೀ ರಾತ್ರಿ ಸಮೀಪಿಸುತ್ತಿದೆ. ನಾಳೆಯಿಂದ ಮೂರುದಿನ ನಂದರಿಗೆ

ಕ್ರೂರಗ್ರಹಗಳ ಯೋಗವಿದೆ. ಇದೋ ಈ ವಿದ್ಯಾಧರೀ ಪ್ರಸಾದವನ್ನು ಅವರಿಗೆ ಹಾಲಲ್ಲಿ ಕಲೆಸಿ, ಮಲಗುವ ಮುನ್ನ ಕುಡಿಸಿದರೆ, ದೈವೀ ಪ್ರಸಾದ ನೆರವಾಗುವುದು" ಎನ್ನುತ್ತಾ ನಿದ್ರೆ, ಆಲಸ್ಯ, ಬುದ್ಧಿಮಾಂದ್ಯಗಳನ್ನು ಬರಿಸುವ ಭಸ್ಮವೊಂದನ್ನು ಭರಣಿಯಲ್ಲಿ ರಾಕ್ಷಸನ ಕೈಗೆ ಕೊಟ್ಟ. ಆ ತಿಂಗಳೆಲ್ಲ ಯಾವ ಭಸ್ಮ, ಔಷಧ, ಮಂತ್ರ ತಂತ್ರಗಳಿಂದಲೂ ಏನೂ ಫಲ ಕಾಣದೆ, ಬರೀ ಸೋಲಿನ, ಪ್ರಯತ್ನ ವ್ಯರ್ಥದ, ಕಾರ್ಯನಾಶದ ಸಮಾಚಾರ ಗಳನ್ನೇ ಕೇಳಿದ್ದ ರಾಕ್ಷಸ, ಯಾಂತ್ರಿಕವಾಗಿ ಆ ಭರಣಿಯನ್ನು ಸ್ವೀಕರಿಸಿ, ಕ್ಷಪಣಕನಿಗೆ ವಂದಿಸಿ, ಮನೆಗೆ ನಡೆದ. ತುಂಬಾ ದಣಿದಿದ್ದು ಬೇಗ ನಿದ್ರಿಸಿದ.

  

"ಏನು ಪರ್ವತೇಶರೇ! ಮಗಧದಿಂದ ಪತ್ರವೇನಾದರೂ ಬಂದಿತೇ? ನಮಗೆ ಹೇಳಲೇ ಇಲ್ಲವಲ್ಲ!'' ಎಂದು ಚಾಣಕ್ಯ ಆ ರಾತ್ರಿ ಪರ್ವತನನ್ನು ದಿಢೀರನೆ ಕೇಳಿದ. ಪರ್ವತೇಶ ಗಾಬರಿಯನ್ನು ತೋರಗೊಡದೆ, "ಅದೇನು ದೊಡ್ಡ ಸಮಾಚಾರ! ಎಂದು ತಮಗೆ ತಿಳಿಸಲಿಲ್ಲ. ಶತ್ರುಗಳು ಈ ಸಂದರ್ಭಗಳಲ್ಲಿ ಅನುಸರಿಸಿ ಬರೆಯುವ ಮಾಮೂಲು ಮಾತುಗಳಲ್ಲಿ ನಮ್ಮನ್ನು ನಿಮ್ಮಿಂದ ಪ್ರತ್ಯೇಕಿಸಲು ಏನೇನೋ ರಾಕ್ಷಸ ಬರೆಸಿದ್ದ.''

ಚಾಣಕ್ಯ ; (ಕೋಪದಿಂದ), "ಅಯ್ಯಾ ದೊರೆಯೇ! ನೀನು ಸತ್ರ ಪರನ್ನು ನಿಗ್ರಹಿಸುವುದಕ್ಕೆ ನಾನು ಸಂಕಲ್ಪ ಮಾಡಿದಾಗಿನಿಂದ ಪ್ರತಿಯೊಂದು ವಿಷಯವೂ ನನ್ನ ಗಮನಕ್ಕೆ ಬಾರದೆ ಹೋಗದುದಿಲ್ಲ. ಶತ್ರುವಿನ ಊರು ಇಷ್ಟು ಸಮೀಪಿಸಿರುವಾಗ, ಎಷ್ಟು ಸಣ್ಣ ವಿಷಯವಾದರೂ ಬಹು ದೊಡ್ಡ ಪ್ರಮಾದದಲ್ಲಿ ಕೊನೆಗೊಂಡೀತು ಎಂದು ನಿನಗೆ ತೋರಲಿಲ್ಲವೆ? ಉಳಿದವರಿಗೆ ಕಾಣದ ಅರ್ಥಗಳು ಚಾಣಕ್ಯನಿಗೆ ಎಂಥ ಸರಳ ಪತ್ರಗಳಲ್ಲೂ ಕಾಣುವು ವೆಂಬುದನ್ನು ನೀನರಿಯೆಯಾ? ಅದಿರಲಿ. ನಾನಾಗಿ ಕೇಳದಿಯೇ ಇದ್ದರೆ ನೀನೀ ವಿಷಯವನ್ನೇ ನನಗೆ ಹೇಳುತ್ತಿರಲಿಲ್ಲವಷ್ಟೆ! ಈ ವಂಚನೆಯಿಂದ ನಿನಗೇ ಕೇಡಾದೀತು. ಒಳೆಯದು ಆ ಪತ್ರವನ್ನಿತ್ತ ತಾ.''

ಪರ್ವತ : "ಆರ್ಯರೇ, ನಮ್ಮ ಸೈನ್ಯಕ್ಕೆ ಈ ಸಮಾಚಾರವೇ ತಿಳಿಯ ಬಾರದೆಂದು ಮುನ್ನೆಚ್ಚರಿಕೆಯಿಂದ ಅದನ್ನು ಹರಿದು ಹಾಕಿ ಬಿಟ್ಟೆ."

ಚಾಣಕ್ಯ : "ಹರಿದು ಹಾಕಿದ ಪತ್ರಗಳಿಂದಲೂ, ಸತ್ತು ಸುಡಲ್ಪಟ್ಟ ವರ ಬೂದಿಯಿಂದಲೂ ಚಾಣಕ್ಯ ಪುನಃ ಸೃಷ್ಟಿ ಮಾಡಬಲ್ಲ! ಆ ಪತ್ರದಲ್ಲಿ ಬೇರೇನು ಮುಖ್ಯ ವಿಷಯಗಳಿದ್ದವು ?"

ಪರ್ವತ ; "ಚಂದ್ರಗುಪ್ತನನ್ನು ಹೀನ ಕುಲದವನೆಂದೂ, ತಮ್ಮನ್ನು ದುರ್ಬ್ರಾಹ್ಮಣರೆಂದೂ ಬೈದು ಬರೆದಿತ್ತು. ಇದಕ್ಕೇಕೆ ಖೇದ ?''

ಚಾಣಕ್ಯ : "ಚಂದ್ರಗುಪ್ತನನ್ನು ರಾಕ್ಷಸನಿಗೆ ಒಪ್ಪಿಸಬೇಕೆಂದು ಬರೆದಿರಲಿಲ್ಲವೊ ? ಚಾಣಕ್ಯನನ್ನು ಉಪಾಯದಿಂದ ಕೊಲ್ಲಿಸಬೇಕೆಂದು ಬರೆದಿರಲಿಲ್ಲವೊ ? ವಿದ್ಯುಲ್ಲೇಖೆಯಿಂದ ಚಂದ್ರಗುಪ್ತನನ್ನು ವಧಿಸುವ ಸೂಚನೆಯಿರಲಿಲ್ಲವೋ ? ನಿಮಗೆ ಮಗಧದ ಅರ್ಧರಾಜ್ಯ ಕೊಡುವ ಪ್ರಸ್ತಾಪವಿರಲಿಲ್ಲವೋ? ನಮ್ಮಲ್ಲೇಕೆ ಮುಚ್ಚುಮರೆ ? ಎಲ್ಲವನ್ನೂ ನೀನಾ ಗಿಯೇ ಹೇಳಿಬಿಡು !!''

ಪರ್ವತ : (ಮೈಬೆವರುತ್ತ, ನಾಲಗೆಯೊಣಗಿ, ಭಯವಾದರೂ ತೋರಿಸಿಕೊಳ್ಳದೆ) "ಆಚಾರ್ಯರಿಗೆ ಇದೆಲ್ಲ ತಿಳಿದ ಬಗೆ? ಏನಾದರೂ ಕನಸಾಯಿತೋ ? ಮಂತ್ರಶಕ್ತಿಯೋ ?''

ಚಾಣಕ್ಯ : "ಕನಸೆಂದೇ ಇಟ್ಟುಕೋ ! ಆ ಕನಸಿನ ಉತ್ತರ ಭಾಗವನ್ನು ನೀನು ಕೇಳಬೇಡವೆ ?''

ಪರ್ವತ ; "ಅಪ್ಪಣೆಯಾಗಬೇಕು !''

ಚಾಣಕ್ಯ : "ನೀನು ವಿದ್ಯುಲ್ಲೇಖೆಯನ್ನು ಕೆಣಕಿ ಸತ್ತಂತೆಯೂ (ಪರ್ವತ ಮೂರ್ಛೆ ಹೋಗುವುದರಲ್ಲಿದ್ದ ! ತತ್ತರಿಸಿದ !!) ನಿನ್ನ ತಮ್ಮ

ವಿರೋಚಕನನಿಗೆ ಪಟ್ಟಾಭಿಷೇಕವಾದರೂ ಅವನೂ ಅಕಾಲ ಮೃತ್ಯುವನ್ನೈದಿ ದಂತೆಯೂ, ನಂದರನ್ನು ನಿಗ್ರಹಿಸಿ ಚಂದ್ರಗುಪ್ತ ಮಗಧಾಧಿಪತಿಯಾ ದಂತೆಯೂ, ಅಮಾತ್ಯನೇ ಮತ್ತೆ ಅವನ ಮಂತ್ರಿಯಾದಂತೆಯೂ, ನಾನು ತಪೋ ವನಕ್ಕೆ ನಡೆದಂತೆಯೂ....."

ಪರ್ವತ : "ಇದು ಆಚಾರ್ಯರು ಕಂಡ ಕನಸೋ, ಕಾಣುತ್ತಿರುವ ಕನಸೋ ? ಓಡಿಹೋದ ವಿರೋಚಕನೇಕೆ ತಮ್ಮ ಕನಸಿನಲ್ಲಿ ಬಂದ !" (ಭಯದಿಂದ ಕತ್ತರಿಸಿದ.)

ಚಾಣಕ್ಯ : "ಇದು ನನಸಾಗುವುದರಲ್ಲಿರುವ ಕನಸು ! ವಿರೋಚಕ ಓಡಿ ಹೋಗಿಲ್ಲ. ನಾಳೆ ನಮಗೆ ಮಗಧದ ಗಡಿಯೊಳಗೆ ಸ್ವಾಗತ ನೀಡುವ ಮೊದಲ ನಮ್ಮ ಸೈನ್ಯ ತುಕಡಿ ಅವನದ್ದೇ. ಪತ್ತೆ ಮಾಡಿ, ಬುದ್ಧಿ ಹೇಳಿ ನಾನೇ ಕರೆಸಿದ್ದೇನೆ. ನೀನು ಭಯ ಪಡಬೇಡ. ನಿನ್ನನ್ನು ಮೇಲೆತ್ತಿದ ನಾನೇ ನಿನ್ನ ನಿಗ್ರಹಕ್ಕೆ ಕೈ ಹಾಕಲಾರೆ. ದೊರೆಗಳ ಚಿತ್ತ ಚಂಚಲ ವಾದುದರಿಂದ ಯಾವುದೂ ಅಸಂಭವವಲ್ಲ. ಕನಸುಗಳು ಮುಂದಾಗುವು ದನ್ನು ಸೂಚಿಸುವುದು ಮಾತ್ರವಲ್ಲದೆ, ತಡೆಯಲು ಮಾನವ ಯತ್ನದಿಂದ ಸಾಧಿಸುವುದನ್ನೂ ಸೂಚಿಸುತ್ತವೆ. ದೈವ ಸಂಕಲ್ಪದಿಕ್ಕು ಎತ್ತ ಎಂಬ ಸೂಚನೆ ಅವುಗಳಲ್ಲಿವೆ ಎಂದು ವೇದವ್ಯಾಸರು ಬ್ರಹ್ಮಸೂತ್ರಗಳಲ್ಲಿ ಬರೆದಿ ರುವರು !"

ಪರ್ವತ ; "ವಿರೋಚಕನನ್ನು ತಾವು ಕರೆಸಿದ್ದನ್ನು ನನಗೇಕೆ ಹೇಳಲಿಲ್ಲ ?"

ಚಾಣಕ್ಯ : "ಅದು ನಮಗೆ ವಿರೋಧದ ಸಮಾಚಾರವಲ್ಲ! ಹಾಗಿದ್ದರೆ ಮೊದಲೇ ಹೇಳುತ್ತಿದ್ದೆ, ನಿವಾರಿಸುತ್ತಿದ್ದೆ. ಇದು ಮಾತ್ರವಲ್ಲ. ನೇಪಾಳದ ಕಿರಾತ ಸೇನೆ ಉತ್ತರದಿಂದ ಪಾಟಲೀ ಪುತ್ರವನ್ನು ಮುತ್ತಲಿದೆ. ಇಂದು ದ್ವಾದಶೀ ರಾತ್ರಿ ಮುಗಿಯುತ್ತ ಬಂದಿದೆ. ನಾಳೆ ಸಂಜೆಯೊಳಗೆ ಪಾಟಲೀ ಪುರದ ಬಾಗಿಲಲ್ಲಿರುವೆವು. ಶೇಖರನನ್ನು ಕೇಳು. ಮಗಧದ ಗಡಿಯೊಳಗೆ

ಯಾರಾದರೂ ನಮ್ಮನ್ನು ತಡೆದುದುಂಟೊ ? ಇದೆಲ್ಲ ಶುಭ ಶಕುನಗಳಲ್ಲವೆ? ಜನರು ತಾವಾಗಿಯೇ ಪ್ರೀತಿಯಿಂದ ಎಲ್ಲೆಲ್ಲೂ ನಮ್ಮನ್ನು ಸ್ವಾಗತಿಸಿದ್ದರ ಅರ್ಥ ತಿಳಿದೆಯಾ ? ರಾಜರ ಅಪ್ರಿಯತೆ, ದುರಾಡಳಿತೆ, ಮದೋನ್ಮತ್ತತೆ, ಧರ್ಮಾತಿಕ್ರಮಣ, ಅತ್ಯಾಚಾರಗಳಿಗೆ ಇದು ಸಾಕ್ಷಿ. ಇನ್ನೆರಡು ಸಮಾಚಾರ ಹೇಳುವೆ, ಕೇಳು. ದಕ್ಷಿಣದ ಗಡಿಯ ಕಳಿಂಗರು ಪೂರ್ವದ ಕಾಮರೂಪದ ಮೇಲೆ ದಂಡೆತ್ತಿ ಹೋಗಿರುವರು. ನಂದರಿಗೆ ಯಾರ ಬಲವೂ ಇಲ್ಲ. ನಿನ್ನ ಸೈನ್ಯ ನೆಪಕ್ಕೆ ಮುತ್ತಿ ಕೀರ್ತಿ ಪಡೆಯಲಿ. ಚಾಣಕ್ಯ, ತಂತ್ರದಿಂದ, ಮಂತ್ರದಿಂದ ಎಲ್ಲ ಸಾಧಿಸಿರುವನು. ಅವನ ಸಾಮರ್ಥ್ಯ ಈಗಲಾದರೂ ತಿಳಿಯಿತೆ? ಅಮಾವಾಸ್ಯೆ ರಾತ್ರಿ ಕಳೆದು ಬೆಳಗಿನ ಝಾಮವಾಗುವುದರೊಳಗೆ ಯುದ್ಧ ಮುಗಿದಿರುವುದು! ಹೋಗಿ ನಿನ್ನ ಕಾರ್ಯ ನೋಡು !!"

ಪರ್ವತ ಬೆರಗಾಗಿ ತನ್ನ ತಪ್ಪುಗಳಿಗೆ, ದುರ್ಬಲತೆಗಳಿಗೆ ನಾಚಿ ನೀರಾದ. ಈ ಬ್ರಾಹ್ಮಣನನ್ನು ವಂಚಿಸಿ ಪಾರಾಗುವುದು ದುಸ್ತರ ಎಂದು ದೃಢ ನಂಬಿಗೆಯಾಯಿತು ! ನಾಲ್ಕು ದಿನ ವಿದ್ಯುಲ್ಲೇಖೆಯ ಕಡೆ ಕಣ್ಣೂ ಹಾಯಿಸಬಾರದೆಂದು ಕೊಂಡ ! ಚಾಪಲ್ಯ ಬಿಡುವುದೇ ? ಅವಳನ್ನು ಆ ಮೇಲೆ ನೋಡಿದಾಗೆಲ್ಲ ಮಹಾಕಾಳಿಯಂತೆ ಕಾಣಲಾರಂಭಿಸಿದಳು !

  

ರಾಕ್ಷಸನನ್ನು ರಾತ್ರಿ ಚಾರರು ನಿದ್ರೆ ಮಾಡಗೊಡಲಿಲ್ಲ. ಗಳಿಗೆಗೊಮ್ಮೆ ಎಬ್ಬಿಸುತ್ತಾ ಪಶ್ಚಿಮದ ಗಡಿಯ ಒಂದೊಂದೇ ನಗರ ಕ್ರಮಶಃ ಶತ್ರುಗಳ ಪಾಲಾದುದನ್ನು ಹೇಳುತ್ತಾ ಬಂದರು ! ಸೂರ್ಯೋದಯಕ್ಕೆ ಸರಿಯಾಗಿ ಉತ್ತರದಿಂದ ನೇಪಾಳೀ ಸೈನ್ಯವೂ ಮಗಧದ ಗಡೀ ಊರುಗಳನ್ನು ಕಬಳಿಸುತ್ತಾ ಬಂದ ಸಮಾಚಾರವನ್ನೂ ತಂದರು. ರಾಕ್ಷಸನೆದ್ದು ಇಷ್ಟ ದೇವತೆಗೆ ಪ್ರಾರ್ಥಿಸಿ ಶೀಘ್ರವಾಗಿ ಸ್ನಾನಾಹ್ನಿಕಗಳನ್ನು ಮುಗಿಸಿ ಸೇನಾಧ್ಯಕ್ಷರುಗಳನ್ನು ಕರೆಸಿ, ಮೂಲ ಬಲವನ್ನು ನಗರರಕ್ಷೆಗಿಟ್ಟು ಉಳಿದ ಬಲಗಳು ಸಮವಾಗಿ ಹಂಚಿಕೊಂಡು ಕೋಟೆಯ ಎಂಟೂ ಬಾಗಿಲುಗಳ ಹೊರಗೆ

ಶತ್ರುಗಳನ್ನೆದುರಿಸಲು ಹೊರಡಬೇಕೆಂದಪ್ಪಣೆ ಮಾಡಿದನು. ಸಿದ್ಧವಾದ ಸೈನ್ಯ ಹೊರಟಿತು.

ತ್ರಯೋದಶೀ ಬೆಳ್ಳಿಗೆ ರಾಕ್ಷಸನಿಗೆ ಕ್ಷಪಣಕ ತಾನೇ ಕಾಣಿಸಿಕೊಂಡ. ಸೈನ್ಯಗಳು ಹೊರಟ ಲಗ್ನ ಶುಭವಾಗಿಲ್ಲವೆಂದೂ ಸಂಜೆ ಗೋಧೂಳಿ ಲಗ್ನ ಪ್ರಶಸ್ತವಾಗಿದೆಯೆಂದೂ ಹೇಳಿದ. ''ಕ್ಷಪಣಕರೇ! ಇದು ತಡ ಮಾಡುವ ಕಾಲವಲ್ಲ! ಪ್ರತಿಯೊಂದಕ್ಕೂ ಲಗ್ನ, ಮುಹೂರ್ತ ನೋಡುತ್ತ ಎಲ್ಲ ಶುಭ ವಾಗಿದ್ದೇ ನಮಗೆ ಪ್ರಾರಂಭದಿಂದಲೇ ಎಷ್ಟು ಅಶುಭವಾಗಿದೆಯೆಂಬುದನ್ನು ನೀವರಿಯಿರಾ ?" ಎಂದು ರಾಕ್ಷಸ ಸಿಡಿಮಿಡಿಗುಟ್ಟುತ್ತಾ ಹೇಳಿದನು !

ದಂಡು ಹೊರಟ ಸಮಾಚಾರ ಬಂದಿತು. ಇತ್ತ ದಕ್ಷಿಣದಿಂದ ಕಳಿಂಗರು ಸಹಾಯಕ್ಕೆ ಬಂದ ಯಾವ ಸಮಾಚಾರವೂ ಬರಲಿಲ್ಲ. ಭದ್ರ ಭಟಾದಿಗಳಿಗೆ ರಾಕ್ಷಸ ಪಾಟಲೀಪುತ್ರದ ದಕ್ಷಿಣ ಕೋಟೆಯ ಬಳಿ ಯಾವ ರಕ್ಷಣೆಯೂ ಇಲ್ಲವಾದುದರಿಂದ ಅತ್ತ ಕೊಂಚ ಸೈನ್ಯವನ್ನು ಕಳುಹಿ ಕೊಟ್ಟು ಉಳಿದವನ್ನು ಸಮಯೋಚಿತವಾಗಿ ನಿಯೋಗಿಸುವಂತೆ ಹೇಳಿ ಕಳುಹಿದ. ಪೂರ್ವದಿಂದಲೂ ಕಾಮರೂಪದ ಸೈನ್ಯ ಒದಗಿ ಬರಲಿಲ್ಲ ! ಅದುದೇನೆಂದೇ ರಾಕ್ಷಸನಿಗೆ ತಿಳಿಯಲಿಲ್ಲ !

ಅಂದು ಸಂಜೆಯವರೆಗೂ ಸೈನ್ಯಗಳು ವೀರಾವೇಶದಿಂದ ಹೋರಾಡಿ ಸಾವಿರಾರು ಸೈನಿಕರು ಸತ್ತಸುದ್ದಿಯೂ, ಆನೆ, ಕುದುರೆ, ಬಿಲ್ಲಾಳುಗಳ ಮರಣವಾರ್ತೆಯೂ, ವಿಜಯಶ್ರೀಯು ನಿರಂತರವಾಗಿ ಪರ್ವತ ಸೇನೆಗೆ ಒಲಿಯುತ್ತಿರುವುದಾಗಿಯೂ, ಪಾಟಲೀಪುರಕ್ಕೆ ಕೇವಲ ಇಪ್ಪತ್ತು ಗಾವುದ ದೂರದಲ್ಲಿರುವುದಾಗಿಯೂ ಸಮಾಚಾರ ಬಂದಿತು ! ಕಾರಣವೇನೆಂದು ವಿಚಾರಿಸಿದ್ದಕ್ಕೆ ಸೇನಾ ಮುಖಂಡರುಗಳು ಊರಲ್ಲೇ ಉಳಿದು, ತಮ್ಮ ಪ್ರತಿನಿಧಿಗಳನ್ನು ಮಾತ್ರವೇ ಮುಂಚೂಣಿಯಲ್ಲಿ ಕಳುಹಿದ್ದಾಗಿ ತಿಳಿಯ ಬಂತು !

"ಏನಯ್ಯಾ ! ಇದು ಗೆಲ್ಲುವವರ ಲಕ್ಷಣವೇ? ನೀವೆಲ್ಲ ಏಕೆ ಇಲ್ಲೇ ಉಳಿದಿರಿ ?" ಎಂದು ರಾಕ್ಷಸ ಬಾಗುರಾಯಣಾದಿಗಳಿಗೆ ಕೇಳಿದ.

"ನಾವೆಲ್ಲ ಹೊರಗೇ ಹೊರಟರೆ ಊರನ್ನು ನಾಳೆ ರಕ್ಷಿಸುವವರಾರು ? ಇದು ಅಸಾಮಾನ್ಯ ಸಂದರ್ಭ ! ಯಾವುದಾದರೂ ಒಂದೇ ಕಡೆಯಿಂದ ಒಬ್ಬ ಶತ್ರು, ಸೇನೆಯೊಡನೆ ಎದುರಾದರೆ, ಎದುರಿಸುವೆವೆಂದು ಹೇಳ ಬಹುದು ! ಈ ಪ್ರಳಯ ಸೇನೆ ನಾಲ್ಕೂ ಕಡೆಗಳಿಂದ ಏಕಕಾಲಕ್ಕೆ ಮುತ್ತಿಗೆ ಹಾಕಿರುವಾಗ ಯುದ್ಧ ತಂತ್ರನಿರೂಪಣೆಗೂ ವೇಳೆ ಸಾಲದಾದಾಗ, ಪ್ರಧಾನ ವಾದದ್ದು ನಗರ ರಕ್ಷಣೆಯಲ್ಲವೆ ? ದಕ್ಷಿಣದ ಕಡೆಗೂ ಪರ್ವತನ ಒಂದು ಸೇನಾ ವಿಭಾಗ ಬಂದು ಆವರಿಸಿದೆ. ಅವರ ಸೈನ್ಯವೇ ಎಲ್ಲೆಲ್ಲೂ ಕಾಣ ಬರುತ್ತಿದೆ ! ಎಲ್ಲಿಂದ ಬಂದರೋ ? ಇಷ್ಟು ಸೈನ್ಯವನ್ನು ಹೇಗೆ ತಾನೇ ಕೂಡಿಸಿದನೋ ಪರ್ವತೇಶ? ಅಥವಾ ಚಾಣಕ್ಯನೇ ಹಿಂದಿನ ವಸಿಷ್ಠನಂತೆ ಈ ಸೈನ್ಯವನ್ನು ತಪಃಶಕ್ತಿಯಿಂದಲೇ ಸೃಷ್ಟಿ ಮಾಡಿದನೋ? ಹೇಳಬಲ್ಲವ ರಾರು ? 'ಚಂದ್ರಗುಪ್ತ ಮಹಾರಾಜನಿಗೇ ಜಯವಾಗಲಿ' ಎಂಬ ಜಯ ಘೋಷ ಎಲ್ಲೆಲ್ಲೂ ಮುಗಿಲು ಮುಟ್ಟುತ್ತಿದೆ! ನಮ್ಮ ಸೇನೆಯ ಅನೇಕ ತುಕಡಿಗಳು ಶತ್ರುಗಳಿಗೆ ಸೆರೆಸಿಕ್ಕಿವೆಯಂತೆ ! ಉಳಿದದ್ದು ಓಡುತ್ತಿದೆ ಯಂತೆ! ಸುಶಿಕ್ಷಿತವಾದ ನಮ್ಮ ಸೇನೆ ಹೀಗೇಕೆ ನಡೆದುಕೊಳ್ಳುತ್ತಿದೆ ಯೆಂಬುದೇ ತಿಳಿಯುತ್ತಿಲ್ಲ." ಎಂದು ಬಾಗುರಾಯಣ ತನ್ನ ಕಷ್ಟವನ್ನೆಲ್ಲ ಹೇಳಿದ.

ರಾಕ್ಷಸನಿಗೆ ದಿಗ್ಭ್ರಾಂತಿಯಾಯಿತು. "ಹೊಸ ಸೈನ್ಯಗಳನ್ನು ಕಳುಹು. ನಗರಕ್ಕೆ ಬಂದೋಬಸ್ತು ಕಾವಲಿರಲಿ" ಎಂದವನೇ ಅರಮನೆ ಯತ್ತ ಹೊರಟ. ಗೆಲುವು ಅನಿಶ್ಚಿತವಾಗಿ ಮನಸ್ಸು ವ್ಯಾಕುಲವಾಯಿತು. ನಂದರ ಅಕೃತ್ಯಗಳನ್ನು ನೆನೆದ. ಪ್ರಜೆಗಳೂ ಸೈನಿಕರೂ ಚಂದ್ರಗುಪ್ತನಿ ಗಾದ ಅನ್ಯಾಯಕ್ಕೆ ಮರುಗಿ ಅವನತ್ತ ಈಗ ಒಲವು ತೋರುತ್ತಿರುವುದು ಸ್ವಾಭಾವಿಕವೆನಿಸಿತು.

ಜೀವಸಿದ್ಧಿ ರಹಸ್ಯದಲ್ಲಿ ಚಾಣಕ್ಯನಿಗೆ ಸಂದೇಶ ಕಳುಹಿದ: ಬಾಗು ರಾಯಣಾದಿಗಳು ಉತ್ಸಾಹದಿಂದ ಯುದ್ಧ ಮಾಡಲಾರರು. ರಾಕ್ಷಸ ಹತಾಶನಾಗಿದ್ದಾನೆ. ನಗರಭೇದನ ಚತುರ್ದಶೀ ರಾತ್ರಿಯೊಳಗೆ ಮುಗಿದು, ಸೈನ್ಯ ಒಳಬರಬೇಕು. ಅಮಾವಾಸ್ಯೆಯ ರಾತ್ರಿಗೆ ಸರಿಯಾಗಿ ಯಾಗ ಶಾಲೆಯಲ್ಲಿ 'ಪೂರ್ಣಾಹುತಿ' ನಡೆಯಲಿದೆ! ನೇಪಾಳೀ ಸೈನ್ಯವನ್ನು ಅದರ ಸುತ್ತ ನಿಲ್ಲಿಸಿ ಯಜ್ಞಪಶುಗಳು ಹೊರಗೋಡದಂತೆ ವ್ಯವಸ್ಥೆಯಾಗಬೇಕು. ಸ್ವಯಂ ಚಾಣಕ್ಯನೂ ಚಂದ್ರಗುಪ್ತನೂ ಅಲ್ಲಿಗೆ ಪ್ರತ್ಯಕ್ಷ ಬಂದು ಪ್ರತಿಜ್ಞೆ ಯನ್ನು ಪೂರೈಸಿಕೊಳ್ಳತಕ್ಕದ್ದು-ಇತ್ಯಾದಿ.

ಇತ್ತ ಅರಮನೆಗೆ ನಡೆದ ರಾಕ್ಷಸ, ತಲೆತಗ್ಗಿಸಿ, ನಂದರು ನಿದ್ರೆಯಿಂದೇ ಳುವ ವೇಳೆಯನ್ನು ಎದುರು ನೋಡುತ್ತ ಕುಳಿತ. ಎದ್ದು ಬಂದ ಅವರು ರಾಕ್ಷಸನನ್ನು ಆ ವೇಳೆಯಲ್ಲಿ ಅಲ್ಲಿ ಕಂಡು "ಏನಾಯಿತು ? ಎಲ್ಲ ಸರಿಯಾಗಿ ನಡೆಯುತ್ತಿದೆಯಷ್ಟೆ!" ಎಂದು ಕೇಳಿದರು.

ಮುಂದಿನ ಮೃತ್ಯುವನ್ನು ಕೊಂಚವೂ ಅರಿಯದ ಅವರು ಶಾಂತಿ ಕಾಲದಲ್ಲೆಂಬಂತೆ ನಿರ್ಭೀತರಾಗಿರುತ್ತಾ, ಪತ್ನೀಸಮೇತರಾಗಿ ಭೋಗ ದಲ್ಲಿದ್ದುದು ರಾಕ್ಷಸನಿಗೆ ಅಶುಭ ಸೂಚಕವಾಗಿ ಕಂಡಿತು. ಬಾಯಲ್ಲಿ ಏನೂ ಹೇಳದೆ, ಯುದ್ಧದಲ್ಲಿ ನಂದಸೇನೆ ಎಲ್ಲೆಡೆಯಿಂದ ಹಿಮ್ಮೆಟ್ಟುತ್ತಿರುವ ಸಮಾಚಾರವನ್ನು ಸೂಕ್ಷ್ಮವಾಗಿ ತಿಳಿಸಿದ. "ಎಷ್ಟು ಹೆಚ್ಚು ಹಣ ವೆಚ್ಚ ವಾದರೂ ಸರಿ! ಸೈನಿಕರನ್ನು ಬಹುಮಾನಗಳಿಂದ ಹುರಿದುಂಬಿಸಿ, ವಿಜಯ ಲಕ್ಷ್ಮೀ ನಮ್ಮತ್ತಲೇ ಒಲಿಯುವಂತೆ ಮಾಡಬೇಕೆಂ"ದು ಆಜ್ಞಾಪಿಸಿ, ನಂದರು ಪ್ರಾತರಾಹ್ನಿಕಗಳನ್ನು ನಡೆಸಲು ಹೊರಟರು.

"ಆ ವಿಜಯಲಕ್ಷ್ಮೀಯು ಹಾಳು ಚಾಣಕ್ಯನನ್ನೋ, ಹೀನ ಚಂದ್ರ ಗುಪ್ತನನ್ನೋ ತಾನಾಗಿ ಒಲಿದು ಹೋದರೆ, ಯಾರೇನು ಮಾಡಬೇಕು ? ನಂದರ ಪರವಾಗಿ ಅವಳನ್ನು ಇಲ್ಲೇ ಉಳಿಯುವಂತೆ ಬಲಾತ್ಕರಿಸುವವ ರಾರು ?'' ಎಂದು ರಾಕ್ಷಸ ಮನದಲ್ಲೇ ಹೇಳಿಕೊಂಡು ಹೊರಟ.

ಅಪಜಯದ ವಾರ್ತೆ ಕ್ಷಣಕ್ಷಣಕ್ಕೂ ಬರುತ್ತಿತ್ತು. ಚತುರ್ದಶೀ ಸಂಜೆಯೊಳಗೆ ಶತ್ರುಗಳು ಕೋಟೆಯ ಗೋಡೆಯ ಎಂಟೂ ಬಾಗಿಲ ಬಳಿ ಜಮಾಯಿಸಿರುವುದಾಗಿಯೂ, ನಂದ ಸೇನೆಯ ಪ್ರತಿರೋಧಶಕ್ತಿ ಕಡಿಮೆ ಯಾಗುತ್ತಿರುವುದಾಗಿಯೂ ಸಮಾಚಾರ ಬಂದಿತು. ಅಂದು ರಾತ್ರಿ ಪಂಜಿನ ಬೆಳಕಿನಲ್ಲಿ ತಾನೇ ನಗರರಕ್ಷಣೆಯ ವ್ಯವಸ್ಥೆಯ ಉಸ್ತುವಾರಿಯನ್ನು ನೋಡಿ ಬರಲು ರಾಕ್ಷಸ ಹೊರಟ. ಕೋಟೆ ಗೋಡೆಯ ಮೇಲಿಂದ ನೋಡಿದ ದೃಶ್ಯ ಎಡೆಯೊಡೆಸಿತು! ಬಾಗುರಾಯಣ ಎತ್ತಲೂ ಸಮರ್ಥ ಸಂಖ್ಯೆಯಲ್ಲಿ ಸೈನ್ಯ ಸೇರಿಸಿರಲಿಲ್ಲ. ಆನೆ ಕುದುರೆಗಳೆಲ್ಲ ಎತ್ತ ಹೋದವು? ಬಿಲ್ಲಾಳುಗಳೆಲ್ಲಿ ಹೋದರು? ಇವರಿಗೆ ಯಾರೂ ಹೇಳುವ ಕೇಳುವವರಿಲ್ಲವೆ? ಎಂದು ರಾಕ್ಷಸ ಯೋಚಿಸಿದ. ತಾನೇ ಯುದ್ಧಕ್ಕೆ ಅಂದು ಹೋಗುವುದೆಂದೂ ತೀರ್ಮಾನಿಸಿದ.



## ಹದಿನೈದನೆಯ ಅಧ್ಯಾಯ

# ನಂದವಧೆ

ರಾತ್ರಿಯೆಲ್ಲ ಸೇನಾ ವ್ಯವಸ್ಥೆಯನ್ನು ತಾನೇ ಮಾಡಿದ ರಾಕ್ಷಸ ದಣಿದು ತಲೆನೋವಿನಿಂದ ಅಮಾವಾಸ್ಯೆಯ ಬೆಳಿಗ್ಗೆ ಸೂರ್ಯೋದಯಕ್ಕೆ ಮನೆ ಸೇರಿದ. ಬಲವಾಗಿ ನಿದ್ದೆ ಬರುತ್ತಿತ್ತು. ಕೊಂಚ ಹೊತ್ತು ಮಲಗಿ ದಲ್ಲದೆ ಅಂದಿನ ಮುಂದಿನ ಕಾರ್ಯಗಳನ್ನು ತಾನು ಗಮನಿಸುವುದಶಕ್ಯ ವೆಂದೆನಿಸಿ ನಿದ್ರೆ ಹೋದ !

ನಂದರು ಅಂದು ತಾವೇ ಯುದ್ಧಕ್ಕೆ ಹೊರಡುವುದಾಗಿ ನಿಶ್ಚಯಿಸಿ ದರು. ಈ ವಿಷಯವನ್ನು ಸಿದ್ಧಾರ್ಥಕ ಕ್ಷಪಣಕನಿಗೂ, ಮಾಸೋಪ ವಾಸಿಗೂ ತಿಳಿಸಿದರು. ಕೆಲಸ ಕೆಟ್ಟಿತೆಂದು ಕೊಂಡ ಮಾಸೋಪವಾಸಿಯು ''ಇಂದು ಪೂರ್ಣಾಹುತಿಯ ಪೂರ್ಣತಿಥಿ. ಒಡೆಯರು ಎಲ್ಲೂ ಹೋಗ

ಕೊಡದು. ವಿಜಯಶ್ರೀಯು ಬಹುದೂರದಲ್ಲಿಲ್ಲ" ಎಂದು ಸಮಾಚಾರ ವನ್ನೂ, ಯಾಗ ಪ್ರಸಾದವಾಗಿ ಕುಂಕುಮ, ಮಾಲೆಗಳನ್ನೂ ಅರಮನೆಗೆ ಕಳುಹಿದ. ನಂದರು ರಾಕ್ಷಸನಿಗೆ ಸಮಾಚಾರ ತಿಳಿಸಿ, ಏನು ಮಾಡ ಬೇಕೆಂದು ಕೇಳಿದರು. ''ಸ್ವಾಮಿಯಾದ ನೀವು ಒಳಗಿರುವುದೇ ಲೇಸು. ನಿಮಗೇನಾದರೂ ಕೇಡಾದರೆ ಯುದ್ಧವೇ ಮುಗಿದು ಹೋದಂತೆ" ಎಂದು ರಾಕ್ಷಸನೂ ಅದನ್ನನುಮೋದಿಸಿದ. ಮತ್ತೆ ನಿದ್ರೆ ಹೋದ. ಹಿಂದೆಂದೂ ಇಲ್ಲದಂತೆ ಆ ಅಮಾವಾಸ್ಯೆಯ ಹಗಲು ರಾಕ್ಷಸನನ್ನು ಈ ಜಾಡ್ಯ ಭಾವ ಏಕೆ ಆವರಿಸಿತೆಂದು ಅವನೇ ಚಕಿತನೂ ಆದ. ವಿನಾಶ ಕಾಲ ಹತ್ತಿರ ಬಂತೆಂದು ಹೃದಯ ಹೇಳಿತು.

  

ಚಿನ್ನದ ಪಲ್ಲಕ್ಕಿಯಲ್ಲಿ ಕುಳಿತ ಚಾಣಕ್ಯ ಸೈನ್ಯದ ಪ್ರಗತಿಯನ್ನು ಕಾಣುತ್ತ ಸಂತೋಷ ಪಟ್ಟ. ಎತ್ತೆತ್ತಲಿಂದಲೂ ಜಯಕಾರ ಕೇಳುತ್ತಿತ್ತು. ಪರ್ವತನೂ ಪ್ರಸನ್ನನಾಗಿದ್ದ. ಉತ್ತರದ ಬಾಗಿಲಿನ ಕಡೆ ಮಲಯ ಕೇತು ವಿನ ಸೈನ್ಯವನ್ನು ಕಳುಹಬೇಕೆಂದು ಚಾಣಕ್ಯ ಆಜ್ಞಾಪಿಸಿ, ಶೇಖರನನ್ನು ಬರಹೇಳಿದ. ಅವನ ಕಿವಿಯಲ್ಲಿ ಏನೋ ಹೇಳಿ ಕಳುಹಿದ. ಪರ್ವತನಿಗೆ ಅಂದಿನ ದಿನದ ಯುದ್ಧ ನಿರ್ಣಾಯಕವೆಂದೂ, ಸೈನಿಕರಿಗೆ ಹುರಿದುಂಬಿಸು ವಂತೆಯೂ ಹೇಳಿ, ಚಾಣಕ್ಯ ಧ್ಯಾನಾಸಕ್ತನಾಗಿ ತನ್ನ ಗುರು–ಶುಕ್ರ ಬೃಹ ಸ್ಪತಿಗಳನ್ನೂ, ಶ್ರೀಮನ್ನಾರಾಯಣನನ್ನೂ ತನಗೆ, ವಿಜಯವಾಗುವಂತೆ ಪ್ರಾರ್ಥಿಸಿದ. ಚಂದ್ರಗುಪ್ತನೂ ನಿಯಮದಿಂದಿದ್ದು ಗತಿಸಿದ ತನ್ನ ಪಿತೃ ಪಿತಾ ಮಹಾದಿಗಳಿಗೆ ತರ್ಪಣ ಮಾಡಿ, ಸೈನಿಕರಿಗೆ ಉಡುಗೊರೆಗಳನ್ನು ಹಂಚಿದ. ಮಧ್ಯಾಹ್ನದ ಸೂರ್ಯ ಇಳಿಯಲಾರಂಭಿಸಿದ್ದ. ಭೀಕರ ಕಾಳಗ ಎಲ್ಲೆಡೆ ನಡೆಯುತ್ತಿತ್ತು.

ಚಾಣಕ್ಯ ಮತ್ತೆ ಸ್ನಾನ ಮಾಡಿ ಪಿತೃ ತರ್ಪಣಾದಿಗಳನ್ನು ಮುಗಿಸಿ ಬಂದ- ವರ್ಷದ ಕೊನೆಯ ಅಮಾವಾಸ್ಯೆ ಅದು ! ಮರುದಿನ ವಸಂತ

ನವರಾತ್ರಿಯ ಆರಂಭ. ಚಂದ್ರಗುಪ್ತನಿಗೆ ವಿಜಯವೆಂಬುದರಲ್ಲಿ ಎಷ್ಟೂ ಸಂಶಯವಿರಲಿಲ್ಲ. ತಾನೂ ಸನ್ನದ್ಧನಾಗಿ ಯುದ್ಧಕ್ಕೆ ಪ್ರವೇಶಿಸುವುದಾಗಿ ಚಂದ್ರಗುಪ್ತ ಹೇಳಿದ! ಆಚಾರ್ಯ ಅದನ್ನು ತಡೆದ. ''ಈ ಯುದ್ಧ ವನ್ನೆಲ್ಲ ಪರ್ವತನ ಕಡೆಯವರೇ ಮಾಡಲಿ. ಸ್ವಂತ ನಿನ್ನ ಸೈನ್ಯವಿಲ್ಲದೆ ಅವರ ಮಧ್ಯೆ ನೀನೇನು ಮಾಡುವೆ ?'' ಎಂದ. "ಆಚಾರ್ಯ! ನನಗೆ ಬೇಸರವಾಗಿದೆ! ಯಾವುದಕ್ಕೂ ನನಗೆ ಸ್ವಾತಂತ್ರ್ಯವಿಲ್ಲದಂತೆ ಮಾಡಿ ಬಿಟ್ಟಿ ರುವಿರಿ. ಹೆಂಡತಿಯನ್ನು ಕೂಡುವುದಕ್ಕೂ ನಿಮ್ಮ ಅನುಮತಿಬೇಕಾದಂತೆ ಏರ್ಪಡಿಸಿದ್ದೀರಿ! 'ಅವಳ ಮೈ ಮೇಲೆ ಏನೇನು ಲಕ್ಷಣವಿದೆ, ತಿಳಿದು ಬಾ' ಎನ್ನುತ್ತೀರಿ! ಅವಳನ್ನು ಪರ್ವತನ ಬಳಿ ಅಶ್ಲೀಲ ಭಾವದಲ್ಲಿ ಹೋಗಿ ಬರು ವಂತೆ ಪ್ರೇರಿಸುತ್ತೀರಿ! ಏನಾಯಿತೆಂದೂ ನನಗೆ ಹೇಳಲಾರಿರಿ ! ಇತ್ತ ಯುದ್ಧ ಮಾಡುವುದಕ್ಕೂ ಬಿಡುತ್ತಿಲ್ಲ. ಸಾಕಿದ ನಾಯಿ ಬೆಕ್ಕುಗಳಿಗೂ ಇರುವ ಸ್ವಾತಂತ್ರ್ಯ ನನಗಿಲ್ಲವಾಗಿದೆ ! ಮುಂದೆ ದೊರೆಯಾದ ಮೇಲೆ ಹೀಗಾದರೇನು ಗತಿ ? ನನ್ನ ಹೆಂಡತಿಯ ಎದುರೇ ನನ್ನನ್ನು ಅಪ ಮಾನಿಸುತ್ತೀರಿ!" ಎಂದು ಚಂದ್ರಗುಪ್ತ, ವಿನಯದಿತಪ್ಪದಲೇ ತನ್ನ ದುಗುಡ ಹೇಳಿಕೊಂಡ.

ವಿದ್ಯುಲ್ಲೇಖೆ ನಗುತ್ತಿದ್ದಳು! ಚಂದ್ರಗುಪ್ತನಿಗೆ ಕೋಪ ಬಂದಿತ್ತು!! ಆಚಾರ್ಯನ ಮುಖ ಮತ್ತೆ ನೋಡಿದ ! ಆಚಾರ್ಯನ ಕಿಡಿಗಾರುತ್ತಿದ್ದ ಕಂಗಳನ್ನೂ, ಅವನ ಬದ್ಧಭ್ರುಕುಟಿಯನ್ನೂ ಕಂಡು ಚಂದ್ರಗುಪ್ತನ ಕೋಪ ಇಳಿಯಿತು. ತಲೆತಗ್ಗಿಸಿದ

ತಪ್ಪು ತಿದ್ದಿಕೊಂಡ ಶಿಷ್ಯನ ಮನಃಸ್ಥಿತಿಯನ್ನು ಗಮನಿಸಿ ಚಾಣಕ್ಯನೂ ಪ್ರಸನ್ನನಾದ. "ವತ್ಸ! ನಾನು ಮಾಡುತ್ತಿರುವ ಪ್ರತಿಯೊಂದು ಕೆಲಸವೂ ನಿನ್ನ ಹಿತಕ್ಕಾಗಿಯೇ ! ಎಲ್ಲವನ್ನೂ ವಿವರಿಸುವುದಕ್ಕೆ ವೇಳೆಯಿಲ್ಲ. ಬೇರೆ ಯವರಿಗೆ ಅದು ತಿಳಿಯಬಾರದೆಂಬ ನಿಯಮವೂ ಇದೆ. ನಾನು ಎಚ್ಚರ ವಹಿಸದಿದ್ದರೆ ಇಷ್ಟು ಹೊತ್ತಿಗೆ ನೀನು ನಂದರ ಸೆರೆಯಲ್ಲೋ, ಪರಲೋಕ ದಲ್ಲೋ ಇರುತ್ತಿದ್ದೆ. ರಾಕ್ಷಸನ ತಂತ್ರ ಹಾಗಿತ್ತು. ಇತ್ತ ಪರ್ವತನೂ

ದುರಾಲೋಚನೆ ನಡೆಸಿದ್ದ. ನಿನ್ನ ಹೆಂಡತಿಯ ಮೇಲೆ ಕಣ್ಣಿಟ್ಟಿದ್ದ. ಅವನನ್ನು ಕೆಣಕಿ, ಅವನ ಹೃದಯವನ್ನು ತಿಳಿಯಲೆಂದೇ ವಿದ್ಯುಲ್ಲೇಖೆಯನ್ನು ಅವನತ್ತ ಕಳುಹಿದ್ದು. ಹೆಣ್ಣೊಬ್ಬಳೇ ಮಾಡಬೇಕಾದ ಆ ಕೆಲಸಕ್ಕೆ ನಾನೇ ಹೋಗಬೇಕಿತ್ತೆನ್ನುವೆಯಾ ?" ಚಾಣಕ್ಯ ಕೇಳಿದ.

ಚಂದ್ರಗುಪ್ತ : "ಪರ್ವತನೇನಾದರೂ ಆ ರಾತ್ರಿ ಅವಳಲ್ಲಿ ಬೀಜಾವಾಪ ಮಾಡಿದ್ದರೆ, ಆಗ ನನ್ನ ಪೌರುಷದ ಪಾಡೇನಾಗುತ್ತಿತ್ತು ? 'ಚಾಣಕ್ಯರೇ ಚಂದ್ರಗುಪ್ತಪತ್ನಿಗೆ ಪರ್ವತನನ್ನು ಪ್ರವೇಶ ಮಾಡಿಸಿದರು' ಎಂಬ ಮಾತು ನಿಮಗೂ ಕಳಂಕ ತರುತ್ತಿತ್ತು! ಅಷ್ಟು ದೂರಕ್ಕೆ ಅವಳನ್ನು ಪ್ರೋತ್ಸಾಹಿಸುವುದೇ ?"

ಚಾಣಕ್ಯ : "ಪರ್ವತನೇನಾದರೂ ಬೀಜಾವಾಪ ಮಾಡಿದ್ದರೆ ಅವನ ವೃಷಣಗಳನ್ನೇ ಛೇದಿಸುತ್ತಿದ್ದೆ! ಅವಳು ಒಡಂಬಟ್ಟಿದ್ದರೆ ನಿನಗೆ ಬೇರೆ ಹತ್ತು ಒಪ್ಪುವ ಮಡದಿಯರನ್ನು ತಂದು ಮಾಡಿಸುತ್ತಿದ್ದೆ !! ಇಷ್ಟರ ಮೇಲೆ ನಿನ್ನ ಹೆಂಡತಿಯನ್ನೇ ನೀನು ಎಷ್ಟು ಚೆನ್ನಾಗಿ ತಿಳಿದುಕೊಂಡಿರುವೆ, ನೋಡಿಕೋ ! ಅವಳು ಆ ಕೆಲಸಕ್ಕೆ ಒಪ್ಪುತ್ತಿದ್ದಳೇ ? ಎಂಬುದನ್ನು ಅವಳನ್ನೇ ಕೇಳಿ ಹೇಳು. ದೂರದಲ್ಲಿದ್ದು ನೋಡುವ ನನಗೇ ಅವಳು ತಿಳಿದಂತೆ ನಿನಗೇ ತಿಳಿಯಲಿಲ್ಲವಾದುದೂ ದುರ್ದೈವ ! ವೃಷಲ! ಹೆಣ್ಣೆಂಬುದು ಭೋಗದ ಸಾಮಗ್ರಿಯಲ್ಲವೋ ! ಅರ್ಥೈಸಲ್ಪಡಬೇಕಾದ ಜೀವವಸ್ತು ಅದು! ಸತಿಪತಿಯರು ನಿಜವಾಗಿ ಅರ್ಥಮಾಡಿಕೊಂಡರೆ ಯಾವ ಅನರ್ಥವೂ ಆಗಲಾರದು. ಜೀವಸಿದ್ಧಿ ಅಪ್ಪಟ ಬ್ರಾಹ್ಮಣ. ಯಜ್ಞೋಪವೀತವನ್ನೂ ತ್ಯಜಿಸಿ, ಬಟ್ಟೆಬರೆಗಳನ್ನೂ ಬಿಟ್ಟು ದಿಗಂಬರನಾಗಿ ಅವನು ಚಾಣಕ್ಯನ ಆಜ್ಞಾಧಾರಕನಾಗಿರುತ್ತಾ ಅವನಿಗೇನು ಬ್ರಾಹ್ಮಣ್ಯ ಹೋಯಿತೇ ? ತ್ಯಾಗದಲ್ಲಿ ಬೆಳೆಯದ ಧರ್ಮವೂ ಉಂಟೆ ? ವಿದ್ಯುಲ್ಲೇಖೆಯನ್ನು ಕಂಡಂದಿನಿಂದ ಅವಳು ಎಂಥ ಸ್ತ್ರೀ ಎಂಬುದನ್ನರಿತೆ. ಅದಕ್ಕೇ 'ಇವಳನ್ನು ತಿರಸ್ಕರಿಸಬೇಡ' ಎಂದದ್ದು! ಎಲ್ಲ ನಿನಗೇ ಮುಂದೆ ತಿಳಿಯುತ್ತದೆ. ಅವಸರಪಡಬಾರದು."

ಚಂದ್ರಗುಪ್ತ : "ವಿದ್ಯುಲ್ಲೇಖೆಯನ್ನು ಪರ್ವತ ಕೆಡಿಸಿದ್ದರೆ, ಆ ಮೇಲೆ ಅವನ ಯಾವ ಭಾಗಕ್ಕೆ ತಾವು ಶಾಸ್ತಿ ಮಾಡಿದ್ದರೂ ನನಗೇನು ಲಾಭ ವಿರುತ್ತಿತ್ತು? ಇವಳೂ ಒಡಂಬಟ್ಟಿದ್ದರೆ ನನ್ನ ಎದೆಯೂ ಒಡೆಯು ತ್ತಿತ್ತು! ತಾವು ಹೇಗೂ ಈ ಪ್ರಸಂಗವನ್ನೇರ್ಪಡಿಸಬಾರದಿತ್ತು ! ಇದು ಸರಿ ಎಂದು ಸಮರ್ಥಿಸುವಿರಾ ?"

ಚಾಣಕ್ಯ : "ಸ್ತ್ರೀಯೊಬ್ಬಳು ಬಲಾತ್ಕಾರವಾಗಿ ದೂಷಿತಳಾದರೆ ಅವಳನ್ನು ಶುದ್ಧಿ ಮಾಡಬರುವುದು ಎಂಬ ಪ್ರಾಚೀನ ಮತ ನನ್ನದು. ವೇಶ್ಯೆಯರಿಗೂ ನಾನು ನಿಯಮಗಳನ್ನು ವಿಧಿಸಿರುವುದನ್ನು ನೀನು ನನ್ನ ಗ್ರಂಥದಲ್ಲಿ ಓದಲಿಲ್ಲವೆ? ಇಷ್ಟವಿಲ್ಲದ ಸೂಳೆಯನ್ನು ವಿಟನು ಬಲಾತ್ಕರಿಸಿದ ರೇನೇ ದಂಡ ಹಾಕುವ ನಾನು ಗೃಹಿಣಿಯೊಬ್ಬಳನ್ನು ದುಷ್ಟನ ವಶಕ್ಕೆ ಬಿಡು ವೆನೆ ? ಚಾಣಕ್ಯ ತಂತ್ರದಲ್ಲಿ ನಿನಗೆ ವಿಶ್ವಾಸವಿಲ್ಲವೆ ? ಇದಕ್ಕೆ ಮೇಲೆ ನಿನಗೆ ಧರ್ಮಪತ್ನಿಯೊಬ್ಬಳಿದ್ದಾಳೆ. ಇಲ್ಲೇ ಮಗಧದಲ್ಲಿ- ಅವಳು ಶೂದ್ರಳೇ ಇದ್ದರೂ ಅವಳನ್ನೇಕೆ ನೀನು ಹೀಗೆ ನೆನಪು ಮಾಡಿಕೊಳ್ಳಲಾರೆ ? ಹೊಸಹೆಂಡತಿ, ವಿಲಾಯತಿಯವಳೆಂಬ ಮೋಹವೇ ? ಇಷ್ಟರ ಮೇಲೆ ಅವಳು ಉತ್ತಮ ಸ್ತ್ರೀಯೋ ಅಲ್ಲವೋ ಎಂದು ಲಕ್ಷಣಗಳನ್ನು ನೀನಿನ್ನೂ ತಿಳಿದು ನನಗೆ ಹೇಳಲಿಲ್ಲ !''

ಚಂದ್ರಗುಪ್ತ : (ನಗುತ್ತ, ತಲೆಯಳ್ಳಾಡಿಸುತ್ತಾ) "ಆಚಾರ್ಯರೇ, ಮೋಹಾವಸ್ಥೆ ತಲೆಗೇರಿದರೆ ಸ್ತ್ರೀ ತನ್ನನ್ನು ಪುರುಷ ಪರೀಕ್ಷಿಸಲು ಬಿಟ್ಟು ಸುಮ್ಮನೆ ಹೆಣದಂತೆ ಮಲಗಿರುವಳೇ ? ಆ ಪುರುಷನಾದರೂ ಹೆಣ ಪರೀಕ್ಷ ಕನಂತೆ, ಭಾವನಾ ಶೂನ್ಯನಾಗಿ, ಅವಳನ್ನು ಪರೀಕ್ಷಿಸುವುದು ಶಕ್ಯವೋ ? ತಮ್ಮ ಯೌವ್ವನ ಮುಗಿದಾಯಿತು ! ಯೌವ್ವನದಲ್ಲಿರುವವರಿಗೇಕೆ ಈ ಶಿಕ್ಷೆ ವಿಧಿಸುವಿರಿ ?"

ಚಾಣಕ್ಯ : ''ಮೂರ್ಖ ! ಸ್ತ್ರೀ ಲಕ್ಷಣಗಳನ್ನು ವಿಂಗಡಿಸಿ, ಪರೀಕ್ಷಿಸಿ ಬರೆದವರಿಗಿಲ್ಲದ ಮೋಹ ನಿನಗೆ ಇದೆಯೆನ್ನುವೆಯಾ? ಮನೋ

ವಿಕಾರದಲ್ಲಿ ನಡೆದ ಸಂಗಮದಿಂದ ಲೋಕಹಾನಿಕರ ವ್ಯಕ್ತಿಗಳೇ ಹುಟ್ಟುವರು! ಪ್ರಾಣಿಗಳಿಗೂ ಸಾಮಾನ್ಯವಾದ ಕಾಮಕ್ರಿಯೆಯನ್ನು ನಾನು ಶಾಸ್ತ್ರವನ್ನಾಗಿಸಿರುವುದು ಅದು ಆ ಮಟ್ಟಕ್ಕೆ ಇಳಿಯಬಾರದೆಂಬುದಕ್ಕಾಗಿಯೇ ! ನಾನು ಮಾತ್ರವಲ್ಲ ! ನನ್ನ ಪೂರ್ವದ ಶಾಸ್ತ್ರಜ್ಞರ ಮತವೂ ಇದೇಯೇ ! ಮೊದಲು ಅವಳ ಲಕ್ಷಣಗಳನ್ನು ನೋಡಿ ನನಗೆ ಹೇಳು."

ಚಂದ್ರಗುಪ್ತ : "ನನ್ನಿಂದಾಗದು ಗುರುಗಳೇ, ಈ ಕೆಲಸ !''

ಚಾಣಕ್ಯ : "ಇಷ್ಟು ಸಣ್ಣ ಕೆಲಸ ಮಾಡದ ನೀನು ರಾಜ್ಯವನ್ನು ಹೇಗೆ ಆಳುವೆಯೋ ?... (ಯೋಚಿಸಿ) ಇರಲಿ. ಅವಳು ಹೇಗೂ ಈ ದೇಶದವಳಲ್ಲ. ಅವಳಲ್ಲಿ ಹುಟ್ಟುವ ಮಗು ರಾಜನಾಗಲು ಮಗಧದ ಪ್ರಜೆಗಳಿಗೆ ಅಭಿಪ್ರಾಯವಾಗುವುದೋ ಇಲ್ಲವೋ ! ಹೇಳಲಾಗದು! ಅವಳಂತೂ ವೈಷ್ಣವ ಧರ್ಮ ಸ್ವೀಕಾರ ಮಾಡಿ ಆಗಿದೆ. ಭಾರತೀಯತ್ವಕ್ಕೆ ಕೊರತೆ ಇಲ್ಲವಾದರೂ, ಜನರನ್ನು ಒಲಿಸುವುದು ಕಷ್ಟ. ನೀನೋ ಶೂದ್ರ. ನಿನಗೊಂದು ಕ್ಷತ್ರಿಯ ಹೆಣ್ಣನು ತಂದ ಹೊರತು ನಾನು ತಪೋ ಭೂಮಿಗೆ ಹೊರಡುವವನಲ್ಲ !''

ಚಂದ್ರಗುಪ್ತ ; ''ಏನು ? ಇನ್ನೊಂದು ಮದುವೆಯೆ ? ಆಚಾರ್ಯರೆ, ಯುದ್ಧ ಕಾಲದಲ್ಲಿ ನನ್ನನ್ನು ಅಣಕ ಮಾಡುತ್ತಿಲ್ಲವಷ್ಟೆ! ತಾವು ಹೇಳಿದಾಗೆಲ್ಲ, ತಾವು ಸೂಚಿಸಿದ ಹೆಣ್ಣನ್ನು ನಾನು ವಿವಾಹವಾಗಲು ನನ್ನನ್ನು ಗೊಂಬೆಯೆಂದು ಭಾವಿಸಿರುವಿರಾ ? ತಮ್ಮ ಚಿತ್ತದಲ್ಲಿ ಇನ್ನೇನೇನುಂಟು?" ಚಾಣಕ್ಯ ಉತ್ತರಿಸುವ ಮುಂಚೆ ಭಯಂಕರ ರಣ ಭೇರಿವಾದ್ಯಗಳ ಕಹಳೆಗಳ ಮೊರೆ ವಾಯುವ್ಯದ ಕಡೆಯಿಂದ ಬಂದಿತು. ಚಾರರನ್ನು ಅದೇನು ತಿಳಿದು ಬರುವಂತೆ ಚಾಣಕ ಆಜ್ಞಾಪಿಸಿದ. ಚಾರ ನೋಡಿ ಬಂದು ಹೇಳಿದ :

''ಬುದ್ಧಿ ! ಸ್ವಯಂ ಅಮಾತ್ಯ ರಾಕ್ಷಸರೇ ಅತ್ತ ಯುದ್ಧಕ್ಕೆ ಬಂದಿದ್ದಾರೆ ! ಮಗಧದ ಸೈನ್ಯ ಸರಿಯಾಗಿ ಯುದ್ಧ ಮಾಡುತ್ತಿಲ್ಲವೆಂದು

ಭಾವಿಸಿ ಅಮಾತ್ಯರು ಮಾತ್ರವಲ್ಲದೆ, ಕಿರಿಯ ಅಮಾತ್ಯ ವಕ್ರನಾಸರನ್ನೂ ಕರೆತಂದಿದ್ದಾರೆ. ಅಲ್ಲಿ ಇಂದ್ರಪ್ರಸ್ಥದ ಇಂದ್ರವರ್ಮರಾಯರು ತಮ್ಮ ಸೈನ್ಯದೊಡಗೂಡಿ ಕೋಟೆ ಬಾಗಿಲನ್ನು ಭೇದಿಸಲು ಯತ್ನಿಸಿದ್ದರು. ಅಮಾತ್ಯ ಕೋಪದಿಂದೆಸೆದ ಭಲ್ಲೆಯೊಂದು ಇಂದ್ರವರ್ಮರ ಎದೆಯನ್ನು ಭೇದಿಸಿ ಕೊಂದಿತು. ಮಗಧದ ಸೈನಿಕರ ಆಕ್ರೋಶ, ಕಹಳೆನಾದ, ರಣ ಭೇರೀ ಶಬ್ದ ಅದು !"

ಚಾಣಕ್ಯ ಕ್ಷಣ ಕಾಲ ಸ್ತಬ್ಧನಾದ ! ಈ ಅಪಜಯವನ್ನು ಅವನು ನಿರೀಕ್ಷಿಸಿರಲಿಲ್ಲ ! ಒಡನೆಯೇ ಯುದ್ಧ ಭೂಮಿಗೆ ಪಲ್ಲಕ್ಕಿಯಲ್ಲಿ ಧಾವಿಸಿ, ಇಂದ್ರವರ್ಮನ ತಮ್ಮ ವೀರಸೇನನಿಗೆ ಪರ್ವತನ, ಚಂದ್ರಗುಪ್ತನ ಎದುರು ತನ್ನ ಕೈಯ್ಯಿಂದಲೇ ಪಟ್ಟಾಭಿಷೇಕವನ್ನು ಅಲ್ಲಿಂದಾಗಲೇ ಮಾಡಿ : "ವತ್ಸ ! ಇಂದ್ರಪ್ರಸ್ಥದ ಸೇಡನ್ನು ನೀನು ತೀರಿಸಿಕೊಳ್ಳಬೇಕು. ಚಾಣಕ್ಯನ ತಪಃ ಶಕ್ತಿ ನಿನ್ನ ಬೆನ್ನಿಗಿದೆ," ಎಂದು ಅಭಯ ದಾನ ಮಾಡಿದ.

ದೂರದಿಂದಲೇ ಇದನ್ನು ನೋಡುತ್ತಿದ್ದ ರಾಕ್ಷಸ : ''ಇಷ್ಟು ನಿಗ್ರಹಾ ನುಗ್ರಹ ಸಾಮರ್ಥ್ಯವುಳ್ಳ ತಪಸ್ವೀ ಏನನ್ನು ತಾನೇ ಸಾಧಿಸಲಾರ ! ಹೊಸ ಇಂದ್ರನನ್ನೇ ಸೃಷ್ಟಿ ಮಾಡುವ ಸಂಕಲ್ಪ ಹೊತ್ತ ಅಂದಿನ ವಿಶ್ವಾಮಿತ್ರರಿಗೆ ಇವನೇನು ಕಡಿಮೆ ? ಇಂಥವನನ್ನು ಎದುರು ಹಾಕಿಕೊಂಡು ನಂದರು ಹಾಳಾದರು! ದೊಡ್ಡ ತೂತು ಬಿದ್ದ ಕೆರೆಯನ್ನು ಸರಿಪಡಿಸಿ ನೀರು ನಿಲ್ಲಿ ಸುವ ಪ್ರಯತ್ನದಂತೆ, ನಾನು ಈ ಮಹಾತ್ಮನ ಎದುರು ನಡೆಸುತ್ತಿರುವ ವ್ಯಾಪಾರವೆಲ್ಲ ವ್ಯರ್ಥ !'' ಎಂದು ನಿಟ್ಟುಸಿರಿಟ್ಟ.

ದೂರದಿಂದ ಅವನನ್ನು ಕಂಡ ಚಾಣಕ್ಯ, ಪಲ್ಲಕ್ಕಿಯಲ್ಲಿ ಕುಳಿತು, ಸೈನಿಕರಿಗೆ ಬಂಗಾರದ ಮೊಹರುಗಳನ್ನೂ, ವಿಧವಿಧ ಭೂಷಣಗಳನ್ನೂ ಬಹು ಮಾನವಾಗಿ ಎರಚುತ್ತಾ, ಸಮೀಪಕ್ಕೆ ಬಂದು ಕಿರುಚಿದ ; 'ಎಲವೋ ರಾಕ್ಷಸ ! ನೀನು ಜಾತಿಯಲ್ಲಿ ಬ್ರಾಹ್ಮಣನಾಗಿದ್ದು, ಅಮಾತ್ಯರ ಮಧ್ಯೆ ಶ್ರೇಷ್ಠನೆಂಬರ್ಥದಲ್ಲಿ ನಿನ್ನನ್ನು ರಾಕ್ಷಸಪ್ರಾಯನೆಂದು ಈ ವರೆಗೆ ತಿಳಿದಿದ್ದೆ!

ತನ್ನ ಧರ್ಮದಲ್ಲಿದ್ದು ಯುದ್ಧ ಮಾಡುತ್ತಿದ್ದ ಇಂದ್ರವರ್ಮನನ್ನು, ನಿನ್ನ ಧರ್ಮಬಿಟ್ಟ ನೀನು ಹೀಗೆ ವಧಿಸಿ, ಈಗ ನಿಜವಾಗಿಯೇ ರಾಕ್ಷಸನಾಗಿ ಹೋದೆ! ನಿನ್ನ ಒಡೆಯರಿಗೆ ಧಿಕ್ಕಾರವಿರಲಿ ! ನೀನು ಅವರನ್ನೆಲ್ಲಿ ಬಚ್ಚಿಟ್ಟರೂ ಪರೀಕ್ಷಿತನನ್ನು ಕಚ್ಚಿದ ತಕ್ಷಕನಂತೆ ಈ ತಕ್ಷಶಿಲೆಯ ಬ್ರಾಹ್ಮಣ ಜೀವಂತ ಬಿಡಲಾರ ! ಮಗಧದ ನಿನ್ನಂಥ ಬ್ರಾಹ್ಮಣಾಧಮರಿಗೆ ಧಿಕ್ಕಾರ!! ಎನ್ನುತ್ತಾ, ಕೈಯ್ಯಲ್ಲಿ ಅಭಿಮಂತ್ರಿಸಿದ ಧಾನ್ಯ ಬೀಜಗಳನ್ನು ಅವನತ್ತ ಎಸೆದ.

ರಾಕ್ಷಸ ನಾಚಿಕೆಯಿಂದ ಬೇರತ್ತ ನಡೆದ. ಸಂಧ್ಯಾಕಾಲ ಸಮೀಪಿಸುತ್ತಿತ್ತು. ಮೈಯ್ಯೆಲ್ಲಾ ಗಾಯವಾದ ರಾಕ್ಷಸನನ್ನು ಅನುಚರರು ಅವನ ಶಿಬಿರದತ್ತ ಸಾಗಿಸಿದರು. ಜೀವಸಿದ್ಧಿಯೂ ಆ ವೇಳೆಗೆ ಅಲ್ಲಿಗೆ ಬಂದು ಮಣಿಮಂತ್ರೌಷಧಗಳಿಂದ ರಾಕ್ಷಸನ ಮೈಯ್ಯನ್ನು ಉಪಚರಿಸಿ, ಕೊಂಚ ಹೊತ್ತು ವಿಶ್ರಾಂತಿ ತೆಗೆದುಕೊಳ್ಳುವಂತೆ ಬಲಾತ್ಕರಿಸಿದ. "ಕ್ಷಪಣಕರೇ ! ಅತ್ತ ಸೈನ್ಯ ಸೋಲಿನ ಅಂಚಿನಲ್ಲಿದೆ. ಇತ್ತ ನನಗೆ ವಿಶ್ರಾಂತಿಯೇ ! ಲಕ್ಷಾವಧಿ ಸೈನಿಕರ ಹೆಣ ಬೀಳುತ್ತಿದೆ! ಆನೆ, ಕುದುರೆ, ಕಾಲಾಳು, ಬಿಲ್ಲಾಳುಗಳ ಲೆಕ್ಕ ಎಷ್ಟು ಉಳಿದಿದೆಯೆಂಬುದೇ ತಿಳಿಯುತ್ತಿಲ್ಲ. ಭದ್ರಭಟ, ಡಿಂಗಿರಾತಾದಿಗಳು ಯಾರೂ ಮನಬಿಟ್ಟು ಯುದ್ಧ ಮಾಡುತ್ತಿಲ್ಲ! ನನಗೆಂಥ ವಿಶ್ರಾಂತಿ!" (ಅಳುವಂತಾದ). ಜೀವಸಿದ್ಧಿ "ಇದೋ ಈ ದಿವ್ಯೌಷಧ ಕುಡಿದರೆ, ಒಂದೆರಡು ಗಂಟೆಗಳಲ್ಲಿ ನವಯೌವ್ವನ ಬರುತ್ತದೆ. ಮನಸ್ಸಿನ ದುಗುಡವೂ ಕಮ್ಮಿಯಾಗುತ್ತದೆ." ಎಂದವನೇ ಒಂದು ಬೇಪಿನ ಕಷಾಯವನ್ನು ಸ್ನೇಹದ ಬಲಾತ್ಕಾರದಿಂದ ಕುಡಿಸಿದ. ರಾಕ್ಷಸನಿಗೆ ಗಾಢ ನಿದ್ರೆ ಹತ್ತಿತ್ತು !

  

ಅಮಾವಾಸ್ಯೆಯ ಸರಿರಾತ್ರಿಗೆ ಪಂಜಿನ ಬೆಳಕಿನಲ್ಲಿ ಯುದ್ಧ ಇನ್ನೂ ನಡೆದೇ ಇತ್ತು. ಚಾಣಕ್ಯನ ಸೂಚನೆಯಂತೆ ಹೊರಟಿದ್ದ ಶೇಖರ ಪರ್ವತ

ಸೇನೆಯ ದೊಡ್ಡ ತುಕಡಿಗೆ ಕಾಶೀ ಸೈನಿಕರಂತೆ ವೇಷ ತೊಡಿಸಿ, ಪೂರ್ವದ ಕಡೆಯಿಂದ, ಕಾಶೀಮಾರ್ಗವು ಪಾಟಲೀ ಪುರವನ್ನು ಸೇರುವ ಕಡೆ ತಂದು ನಿಲ್ಲಿಸಿದ್ದ. ತನ್ನ ಸಂಕೇತವನ್ನು ಕಾಯುತ್ತಿದ್ದ. ಇತ್ತ ಉತ್ತರದಲ್ಲಿ ನೇಪಾಳೀ ಕಿರಾತ ಸೈನ್ಯ ಯಾಗಶಾಲೆಯನ್ನು ಸುತ್ತುವರಿದು ನಿಂತಿತ್ತು.

ಯುದ್ಧ ಭಾರವನ್ನೆಲ್ಲ ರಾಕ್ಷಸನಿಗೊಪ್ಪಿಸಿ ನಂದರು ಬಿಡಾರಗಳಲ್ಲಿ ಮಡದಿಯರೊಡನೆ ಸುಖಶಯ್ಯೆಯಲ್ಲಿ ಮಲಗಿದ್ದರು! ಅದೇ ಅವರ ಜೀವಿತದ ಕೊನೆಯ ರಾತ್ರಿ ಎಂಬುದನ್ನು ಅವರರಿಯರು !!

ಚಾರನೊಬ್ಬ ಬಿಡಾರದ ಬಾಗಿಲಿಗೆ ಬಂದು "ಬುದ್ಧಿಯವರನ್ನು ಎಬ್ಬಿಸಿ ! ಯಜ್ಞಶಾಲೆಯ ಪುರೋಹಿತರು ಬಂದಿದ್ದಾರೆ. ಪೂರ್ಣಾಹುತಿ ಯಂತೆ" ಎಂದು ದ್ವಾರರಕ್ಷಕರಿಗೆ ಹೇಳಿದ. ದ್ವಾರರಕ್ಷಕ ಮೊದಲು ಹಿಂಜರಿದರೂ, ನಂತರ ಒಳಗೆ ಮಲಗಿದ್ದ ನಂದರನ್ನು ಎಬ್ಬಿಸಿದ.

ಸ್ವಯಂ ಸಮಿದ್ಧಾರ್ಥಕನೇ ನಾಲ್ವರು ಅನುಚರರೊಡನೆ ಅತ್ತ ಬಾಗಿಲಲ್ಲಿ ನಿಂತಿದ್ದ. ವಿಷಯವನ್ನು ವಿಜ್ಞಾಪಿಸಿದ. ನಂದರಿಗೆ ಯಾವ ಯಾಗವೂ ಬೇಡವಾಗಿತ್ತು. ಅವರ ಹಿಂಜರಿತವನ್ನು ಕಂಡು ಮಾಸೋಪ ವಾಸಿ "ಪೂರ್ಣಾಹುತಿಯ ವೇಳೆಗೆ ದೇವತಾಹಸ್ತವೇ ಅಗ್ನಿಯಿಂದ ಮೇಲೆ ಬಂದು ಆಹುತಿಯನ್ನು ಸ್ವೀಕರಿಸುತ್ತದೆ. ಜಯಾಪೇಕ್ಷಿಗಳಾಗಿದ್ದರೆ, ತಾವು ಅವಶ್ಯವಾಗಿ ಆ ಹಸ್ತವನ್ನು ಸಂದರ್ಶಿಸಿ, ಅದರ ಆಶೀರ್ವಾದವನ್ನು ಪಡೆಯ ಬೇಕು. ಈ ಗಳಿಗೆ ಬಿಟ್ಟರೆ ಅದು ಮತ್ತೆ ಇಡೀ ಜೀವನದಲ್ಲಿ ಸಿಗಲಾರದು" ಎನ್ನುತ್ತಾ ಬಣ್ಣ ಬಳಿದು ಹೇಳಿದ.

ನಂದರು ಉಡುಪುಗಳನ್ನು ತೊಟ್ಟು, ಭೂಷಣಗಳನ್ನು ಧರಿಸಿ, ಪತ್ನಿ ಯರನ್ನು ಸಂತೈಸಿ, "ರಾಕ್ಷಸನನ್ನು ಕರೆಸಿರಿ" ಎಂದರು. "ಅಮಾತ್ಯರಿಗೆ ಎರಡು ರಾತ್ರಿಯಿಂದ ನಿದ್ರೆಯಿಲ್ಲ. ಬಹು ದಣಿದು ಗಾಯಗೊಂಡಿದ್ದಾರೆ.

ಈ ಸಂಜೆ ಹೇಗೂ ನಮಗೇ ಜಯವಾಗಿ ಇಂದ್ರಪ್ರಸ್ಥದ ದೊರೆಯ ಹನನ ವಾಗಿದೆ. ಪರ್ವತಸೇನೆ ತತ್ತರಿಸುತ್ತಿದೆ ಎಂಬ ವಾರ್ತೆಯೂ ಉಂಟು. ಸ್ವಯಂ ಪರ್ವತನನ್ನೇ ಸಜೀವ ಸೆರೆ ಹಿಡಿಯಲು ರಾಕ್ಷಸ ಅಪ್ಪಣೆ ಮಾಡಿ, ತಂತ್ರನಿರೂಪಿಸಿ ಆಗಿದೆ; ಚಂದ್ರಗುಪ್ತನನ್ನೂ ಸಹ ! ಆದುದರಿಂದ ಉಭಯ ಸೇನೆಗಳೂ ವಿಶ್ರಾಂತಿಗೊಳ್ಳುತ್ತಿರುವ ಈ ಸರಿ ರಾತ್ರಿಯಲ್ಲಿ ಅವರಿಗೆ ಕೊಂಚ ವಿಶ್ರಾಂತಿಯಾಗಲಿ" ಎಂದು ರಾಕ್ಷಸನ ಸೇವಕ ಹೇಳಿದ. ಅದೂ ಸರಿ ಎನ್ನಿಸಿದ ನಂದರು ವಾಡಿಕೆಯಂತೆ ಪಾದರಕ್ಷೆ ಧರಿಸಿ, ಕತ್ತಿ ಗಳನ್ನೂ ಧರಿಸಿ, ಬೆಂಗಾವಲಿನವರೊಡನೆ ಹೊರಟರು. ಸಮಿದ್ಧಾರ್ಥಕ ಜ್ಞಾಪಿಸಿದ. ''ಇವರೇನಾದರೂ ಯಾಗ ಭೂಮಿಯ ಹೊರವಳಯದಲ್ಲೇ ನಿಲ್ಲಬೇಕಾಗುತ್ತೆ! ತಾವೂ ಅಲ್ಲಿ ಶಸ್ತ್ರಗಳನ್ನು ತರಬಾರದೆಂದು ನಮ್ಮ ಗುರುಗಳು ಯಾಗಭೂಮಿಯ ಶುದ್ಧೀಕರಣಕಾಲಕ್ಕೇ ನಿಮಗೆ ಹೇಳಿದ್ದರು. ನೆನಪಿಸುವುದು ಕರ್ತವ್ಯ !'' ನಂದರು ಇದನ್ನು ನಂಬಿದರು ! ಪರ್ವತನ ಸೈನ್ಯ ಓಡುತ್ತಿರುವಾಗ ಹೆದರಿಕೆಯ ಕಾರಣವೇನು ? ರಾಕ್ಷಸನೇ ನಿಶ್ಚಿಂತೆ ಯಿಂದ ನಿದ್ರಿಸುವಾಗ ಇನ್ನೇನು ಭಯ? ಮೇಲಾಗಿ ಇವರು ಹೋಗುತ್ತಿರು ವುದು ಜಪಯಾಗಶಾಲೆಗೆ ! ಅಲ್ಲಿ ಆಯುಧಗಳ ಕೆಲಸವೇನೆನ್ನುತ್ತಾ, ಕಾಲ್ನಡಗೆಯಲ್ಲೇ ವೇಗವಾಗಿ ಹೊರಟರು.

ಅಷ್ಟರಲ್ಲಿ ಆಗ್ನೇಯದ ಕಡೆಯಿಂದ ರಣಭೇರಿಗಳ ಅಬ್ಬರ, ಜಯಕಾರ ಧ್ವನಿ ಕೇಳಿಸಿತು. ನಂದರು ಅದೇನೆಂದರು. ''ಅತ್ತ ನಮ್ಮ ಸೈನ್ಯ ವಿಜಯ ಸಾಧಿಸಿತು. ಪರ್ವತ ಸೈನಿಕರು ಸಹಸ್ರ ಸಂಖ್ಯೆಯಲ್ಲಿ ಸೆರೆ ಸಿಕ್ಕರಂತೆ" ಎಂದೊಬ್ಬ ಚಾರ ನಿವೇದಿಸಿದ.

ಮತ್ತಷ್ಟು ದೂರ ಹೋದ ಮೇಲೆ ಇತ್ತ ದಕ್ಷಿಣದ ಬಾಗಿಲತ್ತ ಮತ್ತೆ ಎದೆಯೊಡೆಸುವ ಸೈನಿಕರ ಚೀತ್ಕಾರ; ಕಹಳೆಗಳನಾದ, ಶತಘ್ನಿಗಳ "ಧಂ" ಕಾರ ಧ್ವನಿ ಕೇಳಿಸಿತು. ''ಕಳಿಂಗ ಸೈನಿಕರೂ ಕಾಮರೂಪದವರೂ ಬಡಿ ದಾಡಿ ಸಾಯುತ್ತಿರುವ ಘಟ್ಟ'' ಎಂದುತ್ತರ ಬಂತು.

ಕತ್ತಲಲ್ಲಿ ಯಾಗ ಭೂಮಿಯನ್ನು ಬಳಸಿ ಯವನಾಕೃತಿಯಲ್ಲಿ ನಿಂತ ಸೈನಿಕರನ್ನು ಕುರಿತು ''ಇವರಾರು ?" ಎಂದು ನಂದರು ಕೇಳಿದರು. ''ಇವರೆಲ್ಲ ಮಗಧದ ಸೈನಿಕರು, ಯಾಗ ಶಾಲೆಯ ರಕ್ಷಣೆಗೆ ನಿಂತವರು'' ಎಂದುತ್ತರ ಬಂತು !

ಯಾಗ ಭೂಮಿಯು ಪೂರ್ವದ್ವಾರಕ್ಕೆ ಬರುತ್ತಾ ನಂದರಿಗೆ ತಮ್ಮ ಸೈನಿಕರ ವೇಷದಲ್ಲೇ ನಿಂತಿದ್ದ ಶೇಖರನ ಸಮುದ್ರಪ್ರಾಯಸೇನೆ ಕಣ್ಣಿಗೆ ಬಿತ್ತು! ಮನಸ್ಸಿಗೆ ಯಾವ ಅಳುಕೂ ಆತಂಕವೂ ಇಲ್ಲದೆ ಮಹಾದ್ವಾರಕ್ಕೆ ಬಂದು ಇನ್ನೇನು ಯಾಗ ಭೂಮಿಯಲ್ಲಿ ಪ್ರವೇಶಿಸುವ ಹೊತ್ತಿಗೆ, ಒಂದು ಪಲ್ಲಕ್ಕಿಯಲ್ಲಿ ಸೈನಿಕರು ಯಾರನ್ನೋ ಹೊತ್ತು ತರುತ್ತಿದ್ದುದೂ, ಸುತ್ತಲ ಸೈನಿಕರು ಅವಾಚ್ಯ ಅಶ್ಲೀಲ ಬೈಗಳಗಳಿಂದ ಅವನನ್ನು ಬೈಯ್ಯುತ್ತಿದ್ದುದೂ ಕಣ್ಣಿಗೆ ಬಿತ್ತು. ಅವನಾರೆಂದು ಕೇಳಿದ ನಂದರಿಗೆ ಪಲ್ಲಕ್ಕಿಯ ಮುಖಂಡ; ''ಇವನೇ ಮಲಯ ಕೇತು ! ಪರ್ವತನ ಪುತ್ರ! ಸೆರೆಸಿಕ್ಕ! ತಮಗೆ ತೋರಿ ಸಲು ಕರೆತಂದೆವು'' ಎನ್ನುತ್ತಾ ಪೂರ್ವದ್ವಾರಕ್ಕೆ ಸರಿಯಾಗಿ ಅದನ್ನು ಇಳುಹಿದರು. ಯಾಗ ಶಾಲೆಯ ಪ್ರಾಕಾರದ ಹೊರಗೆ ನಿಂತಿದ್ದ ಅರ ಮನೆಯ ಮಿತ ಪರಿವಾರ, ಕುತೂಹಲ ತಡೆಯದೆ, ''ಮಲಯ ಕೇತು'' ವನ್ನು ನೋಡಲು ಬಾಗಿಲಲ್ಲಿ ಸೇರಿ, ಒಬ್ಬರ ಮೇಲೊಬ್ಬರು ಬೀಳುತ್ತಾ ಜನ ಸಂಮ್ಮರ್ದವಾಯಿತು.

ಆ ಅರಮನೆಯ ಪರಿವಾರದ ಜಾಗೆಯನ್ನು ನೇಪಾಳೀ ಸೈನಿಕರು ತುಂಬಿ ನಿಂತರು ! ಮಾಸೋಪವಾಸೀ ಎದ್ದು ಬಂದು ರಾಜೋಪಚಾರ, ಆಶೀರ್ವಾದಗಳಿಂದ ನಂದರನ್ನು ಒಳಗೆ ಸ್ವಾಗತಿಸಿದ. ನಂದರು ಒಳ ಹೊಕ್ಕರು. ಅವರಿಗೂ ಮಲಯಕೇತುವನ್ನು ನೋಡುವ ಬಯಕೆಯಿತ್ತು. ಒಳ ಬಂದವರೇ ಬಾಗಿಲತ್ತ ಹೊರಳಿ, ''ಎಲೋ ಮೂರ್ಖ ! ಚಂದ್ರಗುಪ್ತ ನನ್ನೊಪ್ಪಿಸಿದ್ದರೆ, ನಿನಗೆ ಈ ದುಃಸ್ಥಿತಿ ಬರುತ್ತಿತ್ತೆ? ಆ ಕಪಿ ಮುಸುಡಿಯ ಬ್ರಾಹ್ಮಣನನ್ನು ನಂಬಿ ನೀನೂ ನಿನ್ನ ತಂದೆಯೂ ಕೆಟ್ಟಿರಿ. ಇತ್ತ ಬಂದು ಮುಖ ತೋರಿಸು! ನಿನ್ನ ಸುಟ್ಟಮುಖ ಹೇಗಿರುತ್ತೆಂದು ನೋಡುವ !''

ಎಂದು ಕಟಕಿ ಮಾತುಗಳನ್ನಾಡಿದರು. ಕಪಟ ಮಲಯಕೇತು: ''ನನಗೆ ಲಜ್ಜೆಯಾಗಿದೆ! ಹೇಗೆ ಹೊರಬರಲಿ?" ಎನ್ನುತ್ತಾ ಅಳುವಿನ ಧ್ವನಿ ಮಾಡಿದ. "ಇಷ್ಟು ಅಳುಬುರುಕನಾದ ನೀನು ಯುದ್ಧಕ್ಕೆ ಬಂದುದು ಹೇಗೆ?" ಎಂದು ನಂದರು ಚುಚ್ಚಿದರು. "ಹೀಗೆ!" ಎನ್ನುತ್ತಾ, ಪಲ್ಲಕ್ಕಿಯ ಒಳಗಿನ ಪರ್ವತ ಸೈನಿಕನೊಬ್ಬ ಕತ್ತಿ ಬಿಚ್ಚಿ ಹಿಡಿದು ಹೊರ ಜಿಗಿದು, ನಂದರತ್ತ ಭಯಂಕರ ಮುಖ ಮಾಡಿದ! ಪಲ್ಲಕ್ಕಿಯ ರಕ್ಷಕರು ನಂದರನ್ನು ಸುತ್ತು ವರೆದು ಆಯುಧ ಸಮೇತ ನಿಂತರು. ಕ್ಷಣಮಾತ್ರದಲ್ಲಿ ಇದು ನಡೆದು, ನಂದರಿಗೆ ಅದೇನಾಯಿತೆಂಬುದೇ ತಿಳಿಯಲಿಲ್ಲ. "ಇವನಾರು? ಇದೇನು? ಯಾರ ತಂತ್ರವಿದು" ಎನ್ನುತ್ತಾ ನಂದರು ದಿಗ್ಭ್ರಾಂತರಾದರು! "ಅಯ್ಯೋ! ಶೂದ್ರರೆಲ್ಲ ಒಳ ಬಂದರು! ಯಾಗ ಕೆಟ್ಟು ಹೋಯಿತು! ಇನ್ನೇನು ಮಾಡುವುದು? ಇಲ್ಲಿ ಯಾಗ ಸಂರಕ್ಷಕರೂ ಇಲ್ಲ!'' ಎನ್ನುತ್ತಾ ಮಾಸೋಪವಾಸಿ, ಶಿಷ್ಯರೊಡನೆ ಯಾಗ ಭೂಮಿಯಿಂದ ಈ ಗದ್ದಲದಲ್ಲಿ ಎಲ್ಲೋ ಪರಾರಿಯಾದನು.

''ನಿಮ್ಮ ಪ್ರಶ್ನೆಗೆ ನನ್ನ ಉತ್ತರವಿದೆ. ಇದೆಲ್ಲ ನನ್ನ ತಂತ್ರ"ವೆನ್ನುತ್ತಾ ಚಾಣಕ್ಯನೂ ಚಂದ್ರಗುಪ್ತನೂ ಯಾಗಶಾಲೆಗೆ ಪ್ರವೇಶಿಸಿದರು!

ನಂದರಿಗೆ ತಾವು ಮೃತ್ಯುವಿನ ದವಡೆಯಲ್ಲಿ ಸಿಕ್ಕಿ ಹಾಕಿ ಕೊಂಡುದು ಈಗ ಪೂರ್ಣ ಅರಿವಿಗೆ ಬಂದಿತು. "ಚಂದ್ರಗುಪ್ತ! ನಿರಾಯುಧರಾದ ನಮ್ಮೊಡನೆ ಈಗ ಹೇಡಿಯಂತೆ ನೀನು ಆಯುಧ ಹಿಡಿದು ಬರುವುದು ಧರ್ಮವಲ್ಲ!!'' ಎಂದು ಗರ್ಜಿಸಿದರು.

"ನನ್ನ ತಂದೆ, ತಾತ, ಅವರ ನೂರು ಅನುಚರರನ್ನು ವಂಚಿಸಿ, ಅನ್ನಾಹಾರವಿಲ್ಲದೆ ನೆಲಮಾಳಿಗೆಯಲ್ಲಿ ಕೊಂದಾಗ ನಿಮ್ಮ ಧರ್ಮ ಎಲ್ಲಿ ಹೋಗಿತ್ತು?" ಎಂದು ಚಂದ್ರಗುಪ್ತನೂ ಪ್ರತಿ ಗರ್ಜಿಸಿದ!

"ಬ್ರಾಹ್ಮಣೋತ್ತಮನಾದ ನನ್ನನ್ನೂ, ಅತಿಥಿ ಧರ್ಮವನ್ನೂ ಮೀರಿ, ಊಟಕ್ಕೆ ಕುಳಿತ ಆಸನದಿಂದ ಎಳೆಸಿ, ಮುಡಿಗೆ ಕೈ ಹಾಕಿಸಿ, ಬ್ರಾಹ್ಮಣಾಧಮನೆಂದು ಬೈದು ಹೊರದಬ್ಬಿದಾಗ ಆ ಧರ್ಮ ಎಲ್ಲಿ ಹೋಗಿತ್ತೋ ?'' ಎಂದು ಚಾಣಕ್ಯನೂ ಗರ್ಜಿಸಿದ.

ಅರಮನೆಯ ಪರಿವಾರವನ್ನೆಲ್ಲ ಶೇಖರನ ಸೈನ್ಯ ಮುಗಿಸಿತ್ತು! ನಂದರು ಸುತ್ತ ನೋಡಿದರು! ಕಾಶೀ ಸೈನ್ಯವೆಂದು ತಾವು ತಿಳಿದದ್ದೂ ಪರ್ವತನ ಸೈನ್ಯವೇ ಎಂದು ಅರಿವಾಯಿತು. ಚಾಣಕ್ಯನ ಭಯಂಕರ ಮುಖವನ್ನು ಕಂಡು ಭಯವೂ ಆಯಿತು. ಸಿಕ್ಕಿದ ಕಡೆ ಯಾಗ ಶಾಲೆಯಲ್ಲಿ ಓಡಾಡಿ, ಸಿಕ್ಕಿದ ಆಸನ, ಸೌಟು, ಮೊದಲಾದ ಪದಾರ್ಥಗಳಿಂದಲೇ ಹೊಡೆದಾಡಿ ಚಾಣಕ್ಯ ಚಂದ್ರಗುಪ್ತರನ್ನೆದುರಿಸಲು ಬಂದರು. ಚಂದ್ರಗುಪ್ತ ಮೂವರು ಕೊನೆಯ ನಂದರನ್ನು ಒಂದೇ ಏಟಿಗೆ ಕತ್ತಿಯಿಂದ ಕೊಂದ ! ಅವರ ತಲೆಗಳು ಗಗನಕ್ಕೆ ಚಿಮ್ಮಿ ರಕ್ತದ ಕಾರಂಜಿ ಆ ಶರೀರಗಳಿಂದ ಹೊರಟಿತು. ಸೈನಿಕರು ಅತ್ತಿತ್ತ ಅವರು ಓಡದಂತೆ ಚಂದ್ರಗುಪ್ತನತ್ತ ಅವರನ್ನು ತಳ್ಳುತ್ತಿದ್ದರು. ಇನ್ನಿಬ್ಬರನ್ನೂ ಚಂದ್ರಗುಪ್ತ ಹಾಗೇ ಸಂಹರಿಸಿದ ! ಉಳಿದ ನಾಲ್ವರನ್ನು ಹಿಡಿದು, ಕೊರಳಿಗೆ ಹಗ್ಗಬಿಗಿ, ಹಗ್ಗವನ್ನು ಯಾಗ ಶಾಲೆಯ ತೊಲೆಗೆ ಬಳಸಿ, ಅದನ್ನು ಎಳೆಯುವ ತುದಿಯನ್ನು ಚಾಣಕ್ಯನ ಕೈಗೆ ಸೈನಿಕರು ಕೊಟ್ಟರು. ಅವನದನ್ನು ಚಂದ್ರಗುಪ್ತನ ಕೈಲೇ ಕೊಟ್ಟು "ಇದು ನಿನ್ನ ಹಕ್ಕು; ಬ್ರಾಹ್ಮಣನಿಗೆ ಅದು ಅಧರ್ಮ; ನಿನ್ನ ಪಿತೃಗಳ ಋಣವನ್ನು ತೀರಿಸಿಕೋ'' ಎಂದು ಆಚಾರ್ಯ ಅಪ್ಪಣೆ ಮಾಡಿದ. ಹಗ್ಗ ಸೆಳೆಯಿತು. ನಂದರ ಉದ್ದನೆ ನಾಲಗೆಗಳು ಬಾಯಿಂದ ಹೊರ ಚಾಚಿ, ಕಾಲುಗಳು ಆಕಾಶಕ್ಕೆ ಜಗಿದು, ಅವರ ಹೆಣಗಳು ಯಾಗ ಶಾಲೆಯ ತೊಲೆಯಿಂದ ತೂಗಾಡುತ್ತಾ, ಅಗ್ನಿಜ್ವಾಲೆಯ ಬೆಳಕಿನ ನೆರಳುಗಳಲ್ಲಿ ಭೂತಾಕಾರದಲ್ಲಿ ಅಲ್ಲಿದ್ದವರನ್ನು ಅಣಕಿಸಿದವು.

ಚಾಣಕ್ಯ ಚಂದ್ರಗುಪ್ತರು ಹೊರಬಂದರು. ಯಾಗಶಾಲೆಗೆ ಬೆಂಕಿ ಹಚ್ಚಲಾಯಿತು! ಆಕಾಶದೆತ್ತರಕ್ಕೆ ಪುಟಿದ್ದೆದ್ದ ಜ್ವಾಲೆ ಅಮಾವಾಸ್ಯೆ

ರಾತ್ರಿಯ ಕತ್ತಲೆಯಲ್ಲಿ ಸೈನಿಕರ ಕಣ್ಣುಗಳನ್ನು ಕುರುಡು ಮಾಡಿದಂತೆ ಎನಿಸಿದವು. ಸೈನಿಕರು ಹರ್ಷೋದ್ಗಾರ ಮಾಡಿದರು ! ರಣ ಕಹಳೆಗಳು ಮೊಳಗಿದುವು ! ರಣಭೇರಿಗಳು ಶತ್ರುಗಳ ಎದೆ ಸೀಳುವ ಶಬ್ದ ಮಾಡುತ್ತಾ ದಿಕ್ಕುಗಳೇ ಬಿರಿದವು.

ಆಚಾರ್ಯ ಶಿಷ್ಯರೊಡನೆ ಆ ಅಪರ ರಾತ್ರಿಯಲ್ಲೂ ನದಿಗೆ ಹೊರಟು ಸಚೇಲ ಸ್ನಾನ ಮಾಡಿ, ಒದ್ದೆಯಾದ ತನ್ನ ಶಿಖೆಯನ್ನು ಗಂಟು ಹಾಕಿ "ಇಂದು ಪ್ರತಿಜ್ಞೆ ತೀರಿದ್ದು, ನನ್ನ ಗುರುಗಳು ತೃಪ್ತರಾದರು'' ಎನ್ನುತ್ತಾ ಆನಂದ ಬಾಷ್ಪ ಸುರಿಸಿದ.



## ಹದಿನಾರನೆಯ ಅಧ್ಯಾಯ

# ಪರ್ವತೇಶನ ಮರಣ!

ಜೀವಸಿದ್ಧಿಯ 'ಔಷಧ'ದಿಂದ ಗಾಢನಿದ್ರೆಯಲ್ಲಿದ್ದ ರಾಕ್ಷಸನನ್ನು ಚಾರರು ಬಂದು ಎಬ್ಬಿಸಿದರು. ''ಜೀಯಾ ! ಸರ್ವನಾಶವಾಯಿತು !'' ಎನ್ನುತ್ತಾ ಭಯದಿಂದ, ಶೋಕದಿಂದ ಗದ್ಗದಿಸುತ್ತಾ ನಡುಗುತ್ತಾ ನಿಂತರು. ಕಣ್ಣುಜ್ಜಿಕೊಂಡು ಎದ್ದ ರಾಕ್ಷಸ "ಏನು ?'' ಎನ್ನುವಂತೆ ನೋಡಿದ. "ಸ್ವಾಮಿ ! ನಂದರ ಕೊಲೆಯಾಯಿತು ! ಯಾಗಶಾಲೆಗೆ ಬೆಂಕಿ ಬಿದ್ದಿತು!...." ಎನ್ನುತ್ತಾ ರಾಕ್ಷಸನ ಕಾಲ ಮೇಲೆ ಬಿದ್ದರು. ಕ್ಷಣಕಾಲ ಏನೂ ತಿಳಿಯದೆ, "ಇದೇನೆನ್ನುವಿರಿ ?.... ಆ್ಞಂ! ನಾನೇಕೆ ಇಷ್ಟು ಹೊತ್ತು ನಿದ್ದೆ ಮಾಡಿದೆ? ನಂದರೇಕೆ ಅರ್ಧರಾತ್ರಿಯಲ್ಲಿ ಯುದ್ಧಕ್ಕೆ ಹೊರಟರು?...." ಎನ್ನುತ್ತಾ ಪೂರ್ವಾಪರಗಳನ್ನು ವಿಚಾರಿಸಿ, ನಡೆದುದನ್ನೆಲ್ಲ ತಿಳಿದುಕೊಂಡ !

ಎಲ್ಲ ಚಾಣಕ್ಯನ ತಂತ್ರವಿರಬೇಕೆಂದು ಗ್ರಹಿಸಿದ. ಹೊರಗೆ ಬಂದು ನೋಡಿದ. ಯಾಗಶಾಲೆಯ ಬೆಂಕಿ ಗಗನಕ್ಕೆ ನಾಲಗೆ ಚಾಚಿ ಉರಿಯುತ್ತ, ನಂದರ ದೇಹಗಳನ್ನು ರುಚಿ ನೋಡಿ ಚಪ್ಪರಿಸುತ್ತಿತ್ತು ! ಸ್ವಾಮಿಭಕ್ತನಾದ ಅವನ ಕಣ್ಣಲ್ಲಿ ಧಾರೆಯಂತೆ ನೀರು ಸುರಿದಿತ್ತು ! ಸಮಯ ಪ್ರಜ್ಞೆಯಿಂದ, ಸಿದ್ಧವಾಗಿ ನಿಂತಿದ್ದ ಕುದುರೆಯನ್ನು ಹತ್ತಿ ಹೋದ !

ಬಾಗುರಾಯಣ, ಭದ್ರಭಟಾದಿಗಳು ಅವಸರದಿಂದ ಅವನೆಡೆಗೇ ಬರುತ್ತಿದ್ದರು : ಅಮಾತ್ಯರೇ! ಸರ್ವನಾಶವಾಯಿತು! ದೈವ ಮೊದಲಿಂದಲೂ ನಮಗನುಕೂಲವಿರದೆ, ಇಂದು ತನ್ನ ಸೇಡನ್ನು ತೀರಿಸಿಕೊಂಡಿತು! ನಗರದ ಎಂಟು ಬಾಗಿಲುಗಳ ಪೈಕಿ ನಾಲ್ಕು ಶತ್ರುಗಳಿಂದ ಭೇದಿಸಲ್ಪಟ್ಟಿತು. ಇನ್ನುಳಿದ ಬಾಗಿಲುಗಳನ್ನು ರಕ್ಷಿಸಿಯೂ ಪ್ರಯೋಜನವಿಲ್ಲ! ನಾವಾಗಿಯೇ ಚಂದ್ರಗುಪ್ತನನ್ನು ಕಾಣಿಸಿಕೊಂಡು ನಗರವನ್ನು ಅವನಿಗೊಪ್ಪಿಸಿದರೆ ನಿರಪರಾಧೀ ಪ್ರಜೆಗಳ ಕಗ್ಗೊಲೆಯಾದರೂ ತಪ್ಪುವುದು. ಇಲ್ಲವಾದರೆ ಪರ್ವತನ ಸೈನ್ಯ ಅತ್ಯಾಚಾರಕ್ಕಿಳಿಯುವುದು...." ಎಂದು ಸಂಧಿಯ, ಸೋಲೊಪ್ಪಿದ ಮಾತುಗಳನ್ನಾಡಿದರು. ರಾಕ್ಷಸನಿಗೆ ಅವರ ಮನದ ಒಲುವು ತಿಳಿದು ವ್ಯಸನವಾಯಿತು! "ಅಮಾತ್ಯನೆಂದೂ ಅಷ್ಟು ಸುಲಭವಾಗಿ ಸೋಲೊಪ್ಪಲಾರ! ನಂದರಿಗೆ ಸರಿಯಾದ ಉತ್ತರಾಧಿಕಾರಿಗಳನ್ನು ಸೃಷ್ಟಿಸಿ, ಯುದ್ಧವನ್ನು ಮುಂದುವರೆಸುತ್ತಾನೆ. ನಿಮಗಿಷ್ಟವಿಲ್ಲವಾದರೆ ಹಾಳಾಗಿ ಹೋಗಿ!" ಎನ್ನುತ್ತಾ ತನ್ನ ದುಗುಡವನ್ನೂ ನಿಶ್ಚಯವನ್ನೂ ಪ್ರಕಟಿಸಿದ. ಬಾಗುರಾಯಣ ಹೇಳಿದ. "ಅಮಾತ್ಯರೇ! ಇದು ಇಷ್ಟಾನಿಷ್ಟದ ಪ್ರಶ್ನೆಯಲ್ಲ ! ಕಾರ್ಯಾಕಾರ್ಯದ ವ್ಯಾವಹಾರಿಕದ ಮಾತು! ನಂದರೇ ಹೋದ ಮೇಲೆ ಉತ್ತರಾಧಿಕಾರಿಗಳೆಂದರೇನು ? ಅವರಾರಿಗೂ ಮಕ್ಕಳಿಲ್ಲ! ನಂದ ಪತ್ನಿಯರಿಗೆ ಪುನರ್ವಿವಾಹ ಮಾಡಿ, ಮಕ್ಕಳಾಗಿ, ಅವರು ಯುದ್ಧ ಶಿಕ್ಷಣ ಪಡೆದು, ಇಲ್ಲಿ ಯುದ್ಧ ಮುಂದುವರಿಸುವುದೆಂಬುದು ಹುಚ್ಚು ಮಾತಲ್ಲವೆ ? ನಿಮಗೇನು ಭೂತ ಹಿಡಿದಿದೆಯೆ ? ಪ್ರಧಾನಾಮಾತ್ಯರಾದ ತಾವು ಪ್ರಜೆಗಳ ಪರವಾಗಿ ಚಂದ್ರಗುಪ್ತನನ್ನು ಕಂಡು, ಸಮಾಧಾನ ಹೇಳಿ, ಯುದ್ಧವನ್ನು ಇನ್ನು ಕೈ ಬಿಡುವಂತೆ ಹೇಳಿ, ಅರಮನೆಗೆ ಕರೆತರುವುದು ಬಿಟ್ಟು ಉಳಿದು

ದೇನು? ವಿವೇಕವನ್ನು ತಂದುಕೊಳ್ಳಿ! ಚಂದ್ರಗುಪ್ತನೂ ಅರಸು ಮನೆತನವೇ! ಅವನೀಗ ಸರಿಯಾದ ಉತ್ತರಾಧಿಕಾರಿ!! ಅವನಿಗೂ ಈವರೆಗೆ ಸಾಕಷ್ಟು ಅನ್ಯಾಯವಾಗಿದೆ. ನಾವು ಉಂಡ ಅನ್ನಕ್ಕೆ ತೀರಿಸಬೇಕಾದ ಋಣ ತೀರಿಸಿ ಆಯ್ತು. ನಮ್ಮ ನಿಷ್ಠೆ ಪಾಟಲೀಪುರದ ಸಿಂಹಾಸನಕ್ಕೆ ಬದ್ಧವಾಗಿಯೇ ಇದೆ. ಪಕ್ಷಾಂತರದ ಪ್ರಶ್ನೆ ಇದಲ್ಲ. ವಿನಾಕಾರಣ ಅತಿರೇಕಕ್ಕಿಳಿದರೆ ವೃಥಾ ರಕ್ತಪಾತ, ಜನಹಿಂಸೆ, ರಾಷ್ಟ್ರಹಾನಿಗಳೇ ಆಗುವುವು" ಎಂದು ಸಮ ಯೋಚಿತ ಹಿತೋಪದೇಶ ಮಾಡಿದರು. ರಾಕ್ಷಸನಿಗೆ ಇದೊಂದೂ ರುಚಿಸ ಲಿಲ್ಲ. ಕ್ಷಣಕಾಲ ಬುದ್ಧಿ ಅವರು ಹೇಳಿದುದನ್ನು ಮೆಚ್ಚಿದರೂ ಅವನ ಮನಸ್ಸು ಅದಕ್ಕೊಡಂಬಡಲಿಲ್ಲ! "ನಿಮ್ಮ ಮನಸ್ಸಿಗೆ ಬಂದಂತೆ ನೀವು ನಡೆದುಕೊಳ್ಳಿರಿ ! ನನಗೆ ಮನಸ್ಸು ನೆಮ್ಮದಿಯಿಲ್ಲ'' ಎನ್ನುತ್ತಾ ಶಿಬಿರ ದಿಂದ ಹೊರಹೊರಟ.

ಶೀಘ್ರಬುದ್ಧಿಯ ರಾಕ್ಷಸ ತನ್ನ ಮನೆಗೆ ಬಂದು, ಪತ್ನಿಯನ್ನೂ ಎಳೆ ವಯಸ್ಸಿನ ಪುತ್ರನನ್ನೂ ಎಬ್ಬಿಸಿ, ಚಾರರೊಡನೆ ಅವರನ್ನು ತನ್ನ ಮಿತ್ರ ನಾದ ಚಂದನದಾಸನೆಂಬ ಶ್ರೈಷ್ಠಿಯ ಮನೆಗೆ ಗುಪ್ತವಾಗಿ ಕಳುಹಿ, "ನಾನು ಬರುವವರೆಗೆ ಇವರ ರಕ್ಷಣೆಯ ಭಾರ ನಿನ್ನದು''ಎಂದುಹೇಳಿ ಕಳುಹಿ ದನು. ಅರಮನೆಯ ನಾನಾ ಕಾರ್ಯಾಧ್ಯಕ್ಷರುಗಳು ಆ ಇಳಿ ರಾತ್ರಿ ಯಲ್ಲೂ ಸಂದಣಿಸಿ ''ತಮಗೇನಪ್ಪಣೆ ?'' ಎಂದು ರಾಕ್ಷಸನನ್ನು ಕೇಳಲು ಬಂದಿದ್ದರು. ಒಬ್ಬೊಬ್ಬರಿಗೂ ಸಮಯೋಚಿತವಾಗಿ ಒಂದೊಂದು ಸಮಾ ಧಾನವನ್ನೂ, ಮುಂದಿನ ಕೃತ್ಯಗಳನ್ನೂ, ತಂತ್ರಗಳನ್ನೂ ಬೇಗ ಸೂಚಿಸುತ್ತ ರಾಕ್ಷಸನು ಜೀವಸಿದ್ಧಿಯನ್ನು ಬರಮಾಡಿಕೊಂಡ.

"ನಾವು ಮಾಡಿದ ಮಂತ್ರ, ಜಪ, ಯಾಗಗಳೆಲ್ಲ ವ್ಯರ್ಥವಾದುವು! ಚಾಣಕ್ಯನ ಶಕ್ತಿ ಇವೆಲ್ಲವನ್ನೂ ನಿಷ್ಫಲ ಮಾಡಿತು! ನಿಮಗೆ ಮುಖ ತೋರುವುದಕ್ಕೇ ನಾಚಿಕೆಯಾಗಿದೆ!" ಎನ್ನುತ್ತಾ ಕ್ಷಪಣಕ ಕಾಪಟ್ಯವನ್ನು ತೋರುತ್ತಾ, ದುಃಖವನ್ನು ಅಭಿನಯಿಸಿದ.

"ಮಿತ್ರರೇ! ಲೋಕದಲ್ಲಿ ಮಿತ್ರನು ಮಾಡಬೇಕಾದ್ದನ್ನು ತಾವು ಮಾಡಿರುವಿರಿ. ಆಗಿದ್ದೆಲ್ಲ ದೈವಯೋಗ! ಅದನ್ನು ತಡೆಯಬಲ್ಲವರಾರು ? ಇದಕ್ಕೆ ತಾವು ಚಿಂತಿಸಬಾರದು. ಈಗ ತಮಗೆ ಒಂದು ಮುಖ್ಯ ಜವಾಬ್ದಾರಿಯನ್ನು ಹೊರಿಸುತ್ತಿರುವೆನು. ತಾವು ಬೇಸರಿಸದೆ ನಿರ್ವಹಿಸಿದರೆ ನನ್ನ ಮನಕ್ಕೆ ಅದೇ ತೃಪ್ತಿ" ಎನ್ನುತ್ತಾ ಅರಮನೆಯಲ್ಲಿ ತಾನು ಆ ಹದಿನೇಳು ವರ್ಷಗಳ ವರೆಗೆ ಗೂಢವಾಗಿ ಬೆಳೆಸಿಟ್ಟ ವಿಷಕನ್ಯೆಯೊಬ್ಬಳನ್ನು ಕರೆಸಿ, ಅವಳನ್ನು ಜೀವಸಿದ್ಧಿಯ ವಶಕ್ಕೆ ಒಪ್ಪಿಸಿ, ಹೀಗೆಂದ.

"ಕ್ಷಪಣಕರೇ ! ಈಗ ಹದಿನೇಳು ವರ್ಷಗಳ ಹಿಂದೆ, ಒಂದು ದಂಡ ಯಾತ್ರಾ ಕಾಲದಲ್ಲಿ ಯುದ್ಧಭೂಮಿಯಲ್ಲಿ ನಿಧನರಾದ ಶತ್ರುರಾಜ ವಲ್ಲಭ ದೇವರ ಮಗಳಿವಳು. ಅನಾಥ ಶಿಶುವಾಗಿ ಈ ಕೂಸು ಅಗ ಅಳುತ್ತಿರಲು, ಕರುಣೆಯಿಂದ ತಂದು ಮಗಳಂತೆ ಬೆಳೆಸಿ, ರಕ್ಷಿಸಿ, ಇವಳನ್ನು ಇನ್ನೇನು ನಂದ ಪುರಂದರನಿಗೆ ವಿವಾಹ ಮಾಡಿಸಿ ಆನಂದ ಪಡೋಣವೆಂದಿದ್ದೆ! ಈಗ ನಂದರೇ ಸತ್ತ ಬಳಿಕ ಇವಳನ್ನು ಕೈಹಿಡಿಯುವ ರಾಜಕುಮಾರರು ಇಲ್ಲಾರೂ ಉಳಿದಿಲ್ಲ. ನೀವು ಇವಳನ್ನು ಕುಮಾರರ ಚಂದ್ರಗುಪ್ತನಿಗಾದರೂ ನನ್ನ ಪರವಾಗಿ ಒಪ್ಪಿಸಿ ನನ್ನ ಮನೋರಥವನ್ನು ನೆರವೇರಿಸಬೇಕು. ನಂದವಧೆಯಿಂದ ಬೇಸತ್ತ ರಾಕ್ಷಸ ವೈರಾಗಿಯಾಗಿ ಹೋದನೆಂದು ತಾವು ಚಾಣಕ್ಯರಿಗೆ ಹೇಳಿ, ರಾಜಾರ್ಹಳಾದ ಇವಳನ್ನು ಚಂದ್ರಗುಪ್ತನಿಗೆ ನನ್ನ ಕಾಣಿಕೆಯೆಂದೂ, ನನ್ನ ಅಭಿಮಾನ ಪುತ್ರಿಯೆಂದೂ, ಇವಳೊಡನೆ ಸುಖಪಡುವ ಪುರುಷನು ಸ್ವರ್ಗವನ್ನೇ ಹೊಂದಿ ಅಪ್ಸರೆಯೊಡನೆ ಆನಂದ ಪಟ್ಟಂತಾಗುವುದೆಂದೂ ಒಡಂಬಡಿಸಿ ದುಃಖತಪ್ತವಾದ ನನ್ನ ಮನಸ್ಸಿಗೆ ನೆಮ್ಮದಿಯನ್ನು ತರಬೇಕು."

ಇಷ್ಟವಿಲ್ಲದಿದ್ದರೂ ಒಪ್ಪಿದವನಂತೆ ನಟಿಸಿ ಜೀವಸಿದ್ಧಿ ಹೀಗೆಂದ: "ಅಮಾತ್ಯರು! ನಾವು ವಿರಕ್ತರು! ದಿಗಂಬರನಾದ ನನ್ನೊಡನೆ ಇವಳು ಬೀದಿಯಲ್ಲಿ ಅಪರರಾತ್ರಿಯಲ್ಲಿ ಸಂಚರಿಸಿದರೆ, ಜನ ನನ್ನನ್ನು ಏನು ತಿಳಿದಾರು?.... ಜನೇಶ್ವರಾ! " ಎನ್ನುತ್ತಾ "ಆದರೂ ನೀವು ನನ್ನ ಪರಮ ಆಪ್ತರು! ನಿಮ್ಮ ವಾಕ್ಯವನ್ನು ಮೀರುವುದೆಂತು? ಈ ರಾತ್ರಿ ಮುಗಿಯುವಷ್ಟರಲ್ಲೇ ಈ

ಕೆಲಸವನ್ನು ಮುಗಿಸುವೆನು. ಹಗಲಾದ ಮೇಲೆ ಜನ ನನ್ನನ್ನು ತಪ್ಪು ತಿಳಿಯುವರು" ಎನ್ನುತ್ತಾ ತನ್ನ ಆಶ್ರಮದತ್ತ ಅವಳನ್ನು ಕರೆದೊಯ್ದ.

  

ಚಾಣಕ್ಯನು ನದಿಯಿಂದ ಬಂದು ಶಿಷ್ಯರೊಡನೆ. ಚಂದ್ರಗುಪ್ತನನ್ನು ಅಭಿನಂದಿಸಿ, ಆಶೀರ್ವದಿಸಿ ಮುಂದೇನು ಮಾಡಬೇಕೆಂಬುದನ್ನು ಚಿಂತಿಸುತ್ತಾ ಇರಲು ಬಾಗುರಾಯಣ, ಡಿಂಗಿರಾತ, ಬಲಗುಪ್ತ, ಭದ್ರಭಟ, ಪುರುಷದತ್ತಾದಿ ಸೇನಾನಾಯಕರೆಲ್ಲ ಬಂದು ಶರಣಾಗತರಾದರು. ಚಾಣಕ್ಯನು ಅವರನ್ನು ಹರಸಿ ''ಚಂದ್ರಗುಪ್ತನಿಗೆ ನಿಮ್ಮ ಮೇಲೆ ಹಗೆಯಿಲ್ಲ. ಅವನ ಹಗೆ ತೀರಿ ಯಾಗಿದೆ. ನೀವು ನಿಮ್ಮಧಿಕಾರಗಳಲ್ಲೇ ಮುಂದುವರೆಯಿರಿ. ನಷ್ಟವಾದ ಸೈನ್ಯ ಹೊರತು, ಉಳಿದ ಸೇನೆ, ಬೊಕ್ಕಸಗಳ ಅಂಕಿಸಂಖ್ಯೆ ಪರಿಮಾಣ ಗಳನ್ನು ಶೀಘ್ರವಾಗಿ ತಿಳಿಸಿ'' ಎಂದಪ್ಪಣೆ ಮಾಡಿದ.

ಪರ್ವತೇಶ, ಮಲಯಕೇತು, ಶಬರವರ್ಮ, ಶೇಖರ, ಮುಂತಾದ ಪರ್ವತನ ಪರಿವಾರವೆಲ್ಲ ಬಂದು ಚಾಣಕ್ಯನನ್ನು ಕಾಣಿಸಿಕೊಂಡರು. ಅವರಿ ಗೆಲ್ಲ ಕೃತಜ್ಞತೆಯ ಉಪಚಾರೋಕ್ತಿಗಳನ್ನಾಡುತ್ತಾ ಚಾಣಕ್ಯ ಮಿತ್ರಕಾರ್ಯ ವನ್ನು ಸಮರ್ಥವಾಗಿ ಮಾಡಿದ ಅವರನ್ನು ಅಭಿನಂದಿಸಿದ.

"ದೊರೆಯೆ ! ಸೂರ್ಯೋದಯವಾಗಲು ಇನ್ನೂ ಎರಡು ಮೂರು ತಾಸುಗಳುಂಟು! ಬೆಳಿಗ್ಗೆ ರಾಜಕಾರ್ಯವನ್ನು ಯೋಚಿಸೋಣ! ದಣಿದಿರುವ ನೀನು ಈಗ ಕೊಂಚ ವಿಶ್ರಾಂತಿ ಪಡೆ'' ಎಂದು ಹೇಳಿ ಕಳುಹಿದ.

ದುಃಖದಲ್ಲಿದ್ದ ನಂದಪತ್ನಿಯರನ್ನೂ ಅರಮನೆಯ ಬಂಧುಗಳನ್ನೂ ಸಂತೈಸಿ ಸಮಾಧಾನವನ್ನೂ ಹೇಳಿದ ಚಾಣಕ್ಯ ಅವರಿಗೆ ಸಹಗಮನವನ್ನು ನಿರ್ಷೇಧಿಸಿದ. ಆದರವರು ಒಪ್ಪದೆ, ಚಾಣಕ್ಯ ಹೊರಟ ಬಳಿಕ ಜಪಶಾಲೆಯ ಅಗ್ನಿಯಲ್ಲಿ ಬಿದ್ದು ಸತ್ತರು !

  

ಚಂದ್ರಗುಪ್ತನಿಗೆ ತಿಳಿಯದಂತೆ ಚಾಣಕ್ಯ ವಿದ್ಯುಲ್ಲೇಖೆಯನ್ನು ಕರೆಯ ಕಳುಹಿ: "ಮಗು, ಇದೀಗ ನೀನು ನನ್ನ ಘೋರ ಆಜ್ಞೆಯೊಂದನ್ನು ಪಾಲಿಸಿ, ನಿನ್ನ ಪತಿಗೆ ಉಪಕರಿಸಬೇಕಾಗಿದೆ." ಎನ್ನುತಾ ಅವಳ ಕೈಗೆ ಸುಗಂಧದಲ್ಲಿ ಮಿಶ್ರಿತವಾದ ಘೋರವಿಷಸೃಷ್ಟಲೇಪನವೊಂದನ್ನು ಕೈಗಿತ್ತು. "ಇದನ್ನು ನಿನ್ನ ಸರ್ವಾಂಗಕ್ಕೂ, ವಿಶೇಷವಾಗಿ ಗುಪ್ತಾಂಗಕ್ಕೂ ಲೇಪಿಸಿ ಕೊಂಡು, ಈಗಲೇ, ಬೆಳಗಾಗುವುದರೊಳಗೆ ಹೋಗಿ ಪರ್ವತೇಶನನ್ನು ಸಂಗ ಮಿಸಿ ಬಾ!" ಎನ್ನುತ್ತಾ ಆ ಭರಣಿಯನ್ನು ಅವಳ ಕೈಗಿತ್ತ. ಅವಳಿಗೆ ಆಶ್ಚರ್ಯವೂ, ಭಯವೂ, ಅನಿಶ್ಚಯ ಭಾವವೂ ಏಕಕಾಲಕ್ಕೇ ಉಂಟಾಗಿ, ತಲೆತಗ್ಗಿಸಿ ನಿಂತಳು! ಏನು ಮಾಡುವುದೆಂದು ತಿಳಿಯದ ಅವಳಿಗೆ ಚಾಣಕ್ಯ ಏನೋ ಹೇಳುವುದರಲ್ಲಿದ್ದ.

ಅಷ್ಟರಲ್ಲಿ ಜೀವಸಿದ್ಧಿಯು ಆಗಮಿಸ ತಿಳಿದು ಚಾಣಕ್ಯ ಅವನನ್ನು ಕರೆಸಿ, ವಿದ್ಯುಲ್ಲೇಖೆಯನ್ನು ಕೊಂಚಮರೆಯಾಗಿರುವಂತೆ ಹೇಳಿದ.

ಚಾಣಕ್ಯ ದಿಗಂಬರರನ್ನು ಆ ಸುಂದರ ವಿಷಕನ್ಯೆಯೊಡನೆ ಕಂಡು ನಗುತ್ತಾ "ನೀವಾರು ? ಬೆತ್ತಲೆಯಾದ ನಿಮಗೆ ಈ ಕನ್ಯೆ ಎಲ್ಲಿ ದೊರಕಿ ದಳು ? ಅವಳನ್ನೇಕೆ ಇಲ್ಲಿ ಕರೆತಂದಿರಿ ? ಈ ಅಪರರಾತ್ರಿಯಲ್ಲೇಕೆ ಇತ್ತ ಬಂದಿರಿ?" ಎಂದು ಕೇಳಿದ.

"ಅಯಾ ! ಚಾಣಕ್ಯ ಮಹಾಶಯರೇ! ನಾನು ಜೀವಸಿದ್ಧಿಯೆಂಬ ಮುನಿ ! ರಾಕ್ಷಸನ ಆಪ್ತ ಮಿತ್ರ. ನಂದವಧೆಯಿಂದ ರಾಜಕಾರ್ಯನಾಶ ವಾಗಲು ನನ್ನ ಮಿತ್ರ ದುಃಖತಪ್ತನಾಗಿ ದೇಶಭ್ರಷ್ಟನಾದ. ಇವಳು ಅವನ ಸಾಕಮಗಳಂತೆ ! ಯುದ್ಧದಲ್ಲಿ ಅನಾಥಳಾಗಿ ದೊರೆತ ರಾಜ ಶಿಶುವನ್ನು ರಾಕ್ಷಸ ಮುದ್ದಿನಿಂದ ಬೆಳೆಸಿ ನಂದರಿಗೆ ಪತ್ನಿಯಾಗಿಸಲು ಬಯಸಿದ್ದ. ನಂದರೇ ಸತ್ತ ಬಳಿಕ ಈಕೆ ಚಂದ್ರಗುಪ್ತನಿಗೆ ಅರ್ಹಳೆಂದು ಭಾವಿಸಿ, ತಾವೇ

ಕರೆತರಲು ಸಂಕೋಚವಿಂದ, ಮುಖ ತೋರಿಸಲಾಗದೆ ನನಗೆ ಒಪ್ಪಿಸಿ ಹೇಳಿ ಹೋದರು ಅಮಾತ್ಯರು ! ಯಾರೋ ಮಾಡಬೇಕಾದ ಕೆಲಸವನ್ನು ನಾನು ಮಿತ್ರಕಾರ್ಯವೆಂದು ಮಾಡುತ್ತಿರುವೆ. ಸ್ವರ್ಗಸುಖವನ್ನೇ ಕೊಡಬಲ್ಲ ಈಕೆಯನ್ನು ಸ್ವರ್ಗಸ್ಥರಾದ ನಂದರೇ ಕೂಡಿದ್ದರೂ ಅಷ್ಟೆ! ಇನ್ನು ಮೇಲೆ ಸ್ವರ್ಗಸುಖ ಪಡಲಿರುವ ಚಂದ್ರಗುಪ್ತನೇ ಕೂಡಿದರೂ ಅಷ್ಟೆ!! ವಿರಕ್ತರಾದ ನಮಗೆ ಭೋಗವೂ ಮೃತ್ಯುಸಮಾನ ! ಎಲ್ಲರೂ ಒಂದು ದಿನ ಸಾಯುವುದು ತಪ್ಪಲಾರದು! ಈ ಕನ್ಯೆಯನ್ನು ಮುಟ್ಟಿ ಈ ವರೆಗೆ ಬದುಕಿದವರಿಲ್ಲ!! ರಾಕ್ಷಸ ಅಷ್ಟು ಎಚ್ಚರಿಕೆಯಿಂದ ಈಕೆಯನ್ನು ಬೆಳೆಸಿರುವನು. ಇವಳು ಚಂದ್ರಗುಪ್ತನಿಗೆ ಸೇರುವಂತೆ ಮಾಡಿ, ನನ್ನ ಮಿತ್ರನ ಮನಕ್ಕೆ ನೆಮ್ಮದಿ ತರಬೇಕು....ಜಿನೇಶ್ವರಾ !" ಎನ್ನುತ್ತಾ ವಿಷ ಕನ್ಯೆಯನ್ನಲ್ಲಿ ಬಿಟ್ಟು, ಜೀವಸಿದ್ಧಿ ಹೊರಡುವುದರಲ್ಲಿದ್ದ. ಚಾಣಕ್ಯ ಅವನನ್ನು ಅಲ್ಲೇ ಇರೆಂದ.

ಚಾಣಕ್ಯ ಯೋಚಿಸಿ ! "ದೈವವೇ ತನ್ನತ್ತ ಇವಳನ್ನು ಕಳುಹಿತು!" ಎಂದಾನಂದ ಪಟ್ಟ! ರಹಸ್ಯದಲ್ಲಿ ವಿದ್ಯುಲ್ಲೇಖೆಯನ್ನು ನೋಡಿ "ನೀನು ಹೋಗಬಹುದು. ನೀನು ಮಾಡುವುದಿದ್ದ ಕೆಲಸವನ್ನು ಇವಳೇ ಮಾಡುವಳು" ಎಂದು ಹೇಳಿ ಆ ವಿಷದ ಭರಣಿಯನ್ನು ಅವಳಿಂದ ವಾಪಸ್ಸು ಪಡೆದು ಅವಳನ್ನು ಕಳುಹಿದ. ವಿಷಕನ್ಯೆಯನ್ನು ನೋಡಿ "ಎಲೈ ಪುತ್ರಿಯೇ ! ಚಿಂತಿಸದಿರು. ಇಕೋ ! ರಾತ್ರಿ ಇಷ್ಟದೇವತೆಗೆ ನೈವೇದ್ಯಕ್ಕೆಂದು ಮಾಡಿಸಿದ, ಯಜ್ಞಶೇಷವಾದ ಈ ಕ್ಷೀರಾನ್ನವನ್ನು ಭುಜಿಸು. ಯುದ್ಧದ ಗಡಿಬಿಡಿಯಲ್ಲಿ ನೀನು ಉಂಡು ಎಷ್ಟು ಹೊತ್ತಾಯಿತೋ !" ಎನ್ನುತ್ತಾ ಕ್ಷೀರಾನ್ನವನ್ನು ತರಿಸಿಕೊಟ್ಟ. ಅರ್ಧರಾತ್ರಿಯಲ್ಲಿ ಅವಳಿಗೆ ಅದು ಬಹಳ ಸೇರಲಿಲ್ಲ. ಕೊಂಚ ಉಂಡು ಉಳಿದುದನ್ನು ಹಾಗೇ ಇಟ್ಟಳು. ಶಿಷ್ಯನಿಗೆ ಚಾಣಕ್ಯ ಆ ಶೇಷವನ್ನು ಬೆಕ್ಕಿಗೆ ಹಾಕಿ ಏನಾಯಿತೆಂದು ತಿಳಿದು ಬರಲು ಹೇಳಿದ. ಅದು ಆ ಅನ್ನವನ್ನು ಮೂಸಿಯೇ ಸತ್ತು ಹೋಯಿತೆಂದು ಶಿಷ್ಯ ಬಂದು ತಿಳಿಸಿದ. ಚಾಣಕ್ಯನಿಗೆ ಸಂತೋಷವಾಯಿತು! ಜೀವಸಿದ್ಧಿಯ ಮುಖ ನೋಡಿದ. ಅವನು ಕಣ್ಣು ಮಿಟುಕದೇ ಚಾಣಕ್ಯನನ್ನೇ ನೋಡುತ್ತಿದ್ದ !

" ಅಯ್ಯೊ ! ಪರ್ವತರಾಜ್ಯದಿಂದ ಅಪೂರ್ವ ಗಿಣಿಯೊಂದನ್ನು ಪಂಜರದಲ್ಲಿಟ್ಟು ತಂದಿವಲ್ಲ ! ಅದನ್ನಿತ್ತತ್ತಾ ! ಅದು ಸರಿಯಾಗಿ ರಕ್ಷಿಸಲ್ಪಡುತ್ತಿದೆಯೋ ಇಲ್ಲವೋ ನೋಡುತ್ತೇನೆ" ಎಂದು ಶಿಷ್ಯನಿಗೆ ಹೇಳಿ ಚಾಣಕ್ಯ ಪಂಜರದ ಗಿಣಿಯನ್ನು ತರಿಸಿದ. ಆ ಕನ್ಯೆಯನ್ನು ಕಂಡೊಡನೆಯೇ ಅದು ರೆಕ್ಕೆ ಬಡಿದುಕೊಳ್ಳುತ್ತಾ ಕಿರುಚಿ ಸತ್ತು ಹೋಯಿತು ! ಚಾಣಕ್ಯನ ಊಹೆ ಸರಿಯಾಗಿತ್ತು !! ಸರಿಯಾಗಿ ನೋಡಿಕೊಳ್ಳಲಿಲ್ಲವೆಂದು ಶಿಷ್ಯರನ್ನು ಬೈದ ನಾಟಕವನ್ನು ಚಾಣಕ್ಯ ಆಡಿ, ದಿಗಂಬರನಿಗೆಂದ –

"ಅಯ್ಯಾ! ಕ್ಷಪಣಕರೆ! ರಾಕ್ಷಸನ ಅಭಿಪ್ರಾಯವನ್ನು ಮೆಚ್ಚುತ್ತೇವೆ. ನಿಮಗೆ ಎಲ್ಲ ಒಂದೇ ಎಂದಿರಿ. ಆದರೆ ಚಂದ್ರಗುಪ್ತ ಏಕಪತ್ನೀವ್ರತದಲ್ಲಿರುವವನು. ಈ ಕನ್ಯೆಗೆ ಸರಿಯಾದ ಬೇರೆ ಆಶ್ರಯವನ್ನು ತೋರಿಸುತ್ತೇನೆ. ನಮ್ಮ ಮಿತ್ರರಾದ ಪರ್ವತೇಶ್ವರರು ಈಗ ದಣಿದು ವಿಶ್ರಾಂತಿಯಲ್ಲಿರುವರು. ಇವಳನ್ನು ಅತ್ತ ಕರೆದು ಹೋಗಿ. ನಾವು ಸಮಾಚಾರ ಹೇಳಿ ಕಳುಹಿ, ವ್ಯವಸ್ಥೆ ಮಾಡುತ್ತೇವೆ" ಎಂದು, ಕ್ಷಪಣಕನನ್ನು ವಿಷಕನ್ಯೆಯೊಡನೆ ಅತ್ತ ಕಳುಹಿದ.

ವಿದ್ಯುಲ್ಲೇಖೆಯನ್ನು ಮತ್ತೆ ಕರೆಸಿ ಅವಳ ಕಿವಿಯಲ್ಲಿ ಏನನ್ನೋ ಉಸುರಿದ. ಅವಳೂ ವೇಗವಾಗಿ ಬೇರೊಂದು ದಾರಿಯಿಂದ ಪರ್ವತನ ಶಿಬಿರದತ್ತ ಆ ಕತ್ತಲೆಯಲ್ಲಿ ನಡೆದು, ಕ್ಷಪಣಕ ಅಲ್ಲಿ ಬರುವುದಕ್ಕೆ ಮುಂಚೆಯೇ ಸೇರಿದಳು, ಪರ್ವತನ ಶಿಬಿರದ ದ್ವಾರ ರಕ್ಷಕರಿಗೆ, "ತುರ್ತುಕಾರ್ಯವಿದೆ ! ವಿದ್ಯುಲ್ಲೇಖೆ ಬಾಗಿಲಲ್ಲಿ ಬಂದಿರುವಳು ಎಂದು ಹೇಳಿ. ದೊರೆಗಳು ಹಿಂದೆ ಬಯಸಿದ್ದ ಒಂದು ಮಹಾಕಾರ್ಯಕ್ಕೆ ಈಗ ಸಕಾಲ ಬಂದಿದೆಯೆಂದು ಹೇಳಿ. ನಾನೇ ಆ ಕಾಲ ಸೂಚಿಸುವೆ ಎಂದಿದ್ದೆ. ಅವರಿಗೆ ಈಗ ಸಕಾಲ ಎಂದು ಹೇಳಿ" ಎಂದಳು.

ಏನೋ ರಾಜ ಕಾರ್ಯವಿರಬೇಕೆಂದು ಕೊಂಡು ಒಳಗೆ ಹೋದ ಭಟನೊಬ್ಬ "ಯಾರೋ ವಿದ್ಯುಲ್ಲೇಖೆಯಂತೆ ! ತಾವು ಹೇಳಿದ್ದ ಯಾವುದೋ

ಕಾರ್ಯಕ್ಕೆ ಈಗ ಸಕಾಲವಂತೆ ! ಹೊರಗೆ ಕಾದು ನಿಂತಿದ್ದಾರೆ'' ಎಂದು ಬಿನ್ನವಿಸಿ, ಪರ್ವತನನ್ನೆಬ್ಬಿಸಿದ.

ದಿಗ್ಗನೆದ್ದ ಪರ್ವತ, ವಿದ್ಯುಲ್ಲೇಖೆಯ ಹೆಸರು ಕೇಳಿ, ಮೈಯೆಲ್ಲಾ ವಿದ್ಯುತ್ ಸಂಚಾರವಾಗಿ, ''ಸಕಾಲ" ಶಬ್ದವನ್ನು ಕೇಳಿ, ಹಿಂದಿನ ಸಂಭಾಷಣೆಯನ್ನು ನೆನೆಸಿಕೊಂಡು, ಯುದ್ಧದಲ್ಲಿ ವಿಜಯಿಯಾದ ತನಗೆ ಅವಳು ಒಲಿದುಬಂದು ಅಂಗಸೌಖ್ಯ ಕೊಡಲು ಬಂದಿರುವಳೆಂದು ಆನಂದಿಸಿ, ಈ ಅನಿರೀಕ್ಷಿತ ಸೌಖ್ಯದಾಯಿಯಾದ ಅವಳನ್ನು ತಾನೇ ಸ್ವಾಗತಿಸಲು ಶಿಬಿರದ ದ್ವಾರಕ್ಕೆ ಬಂದ. ಆವೇಳೆಗೆ ಜೀವಸಿದ್ಧಿಯು ವಿಷಕನ್ಯೆಯನ್ನು ಕರೆತಂದು ಆ ಬಾಗಿಲಲ್ಲಿ ನಿಲ್ಲಿಸಿದ್ದ. ವಿದ್ಯುಲ್ಲೇಖೆ, ಕೈಸನ್ನೆಯಿಂದ ಕ್ಷಪಣಕನಿಗೆ ಹೋಗಿ ಬಿಡುವಂತೆ ಸೂಚಿಸಿದಳು. ಅವನು ನಿರ್ಗಮಿಸಿದ. ಕತ್ತಲೆಯಲ್ಲಿ ಪರ್ವತನಿಗೆ ಏನೂ ಕಾಣಲಿಲ್ಲ ! ಮೆಲ್ಲನೆ ವಿದ್ಯುಲ್ಲೇಖೆ : ''ನಾನು, ಅರಸರೇ ! ತಾವು ಬಯಸಿದ ಭೋಗಕ್ಕೆ ಇದೇ ಕಾಲ. ತಡ ಮಾಡುವಂತಿಲ್ಲ !" ಎಂದು ಹೇಳಿ, ವಿಷ ಕನ್ಯೆಯನ್ನು ಸನ್ನೆಮಾಡಿ ಒಳಗೆ ಹೋಗುವಂತೆ ಸೂಚಿಸಿದಳು. ಬಾಗಿಲೊಳಗೆ ಬಂದ ವಿಷ ಕನ್ಯೆಯನ್ನು ಪರ್ವತ ಆನಂದದಿಂದ ಒಳಗೆ ಕರೆದುಕೊಂಡುಹೋಗಿ, ತನ್ನ ಶಯ್ಯೆಯಲ್ಲಿ ಅವಳನ್ನು ಎಳೆದುಕೊಂಡ ! ಅವಳೇ ವಿದ್ಯುಲ್ಲೇಖೆಯೆಂದು ಭ್ರಮಿಸಿ, ಹಿಗ್ಗಿದ !!

ಮರುಕ್ಷಣದಲ್ಲಿ ಸ್ವರ್ಗಸುಖ ಪಡುತ್ತಾ, ಸ್ವರ್ಗವಾಸಿಯೆ ಆದ!

  

ಚಾಣಕ್ಯ ಸಿದ್ಧಾರ್ಥಕನನ್ನು ಕರೆಸಿ ಅವನಿಗೆ ತುರ್ತಾಗಿ ಮಾಡ ಬೇಕಾದ ಕೆಲಸಗಳನ್ನೆಲ್ಲ ಹೇಳಿ ಕಳುಹಿದ. ಅವನು ಕೂಡಲೇ ಬಾಗು ರಾಯಣನನ್ನು ಕಂಡು ಆಚಾರ್ಯರ ಸೂಚನೆಗಳನ್ನು ಕಿವಿಯಲ್ಲಿ ಉಸುರಿದ. ಬಾಗುರಾಯಣ, ಭದ್ರಭಟಾದಿ ಸೇನಾನಾಯಕರನ್ನು ಕರೆಸಿ, ಅವರು ಮಾಡಬೇಕಾದುದನ್ನೆಲ್ಲ ತಿಳಿಸಿ, ಬೆತ್ತಲೆ ಕುದುರೆಯನ್ನೇರಿ ಮಲಯ ಕೇತುವಿನ ಶಿಬಿರ ದತ್ತ ವೇಗ ವೇಗವಾಗಿ ನಡೆದ !

ಸೂರ್ಯೋದಯಕ್ಕೆ ಕೊಂಚವೇ ಹೊತ್ತು ಉಳಿದಿದ್ದು ಅರುಣೋದಯದ ಲಕ್ಷಣಗಳು ಕಂಡು ಬರುತ್ತಿದ್ದವು. ಆ ವೇಳೆಯಲ್ಲಿ ಬಂದು ತನ್ನನ್ನೆಬ್ಬಿಸಿದ ಬಾಗುರಾಯಣನನ್ನು ಕಂಡು ಮಲಯಕೇತುವಿಗೆ ಅಚ್ಚರಿಯಾಯ್ತು! ಏನೆಂದು ಕೇಳಿದ. "ಕುಮಾರ! ನಡೆದುದೇನೆಂದೂ ತಿಳಿಯದೆ ನಿದ್ರಿಸುತ್ತಿರುವೆ! ಚಾಣಕ್ಯ ಕಪಟದಿಂದ ನಿನ್ನ ತಂದೆಯ ಕೊಲೆ ಮಾಡಿಸಿದ! ವಿಷಕನ್ಯೆಯನ್ನು ಉಪಯೋಗಿಸಿ ಇದೇ ಈಗ ನಿನ್ನ ತಂದೆಯನ್ನು ಆ ಕುಟಿಲ ಬ್ರಾಹ್ಮಣ ಕೊಂದ! ನಿನ್ನ ತಂದೆ ಮೋಸಹೋದ! ಇದು ಆಪತ್ಕಾಲ, ಏಳೇಳು!" ಎನ್ನುತ್ತಾ ಹಾಸಿಗೆಯಿಂದ ಬಾಗುರಾಯಣ ಮಲಯಕೇತುವನ್ನೆಳೆದ. ಮಲಯಕೇತುವಿಗೆ ಭಯ, ಆಶ್ಚರ್ಯ, ದುಃಖ, ಸೇಡಿನ ಭಾವ ಎಲ್ಲಾ ಏಕಕಾಲಕ್ಕೇ ಉಂಟಾದವು! "ಏನಂದೆ? ಚಾಣಕ್ಯರೇ? ನನ್ನ ತಂದೆಯ ಕೊಲೆಯೇ? ಶಿವ, ಶಿವ! ಈ ಕೊಲೆಯಿಂದ ಆ ಬ್ರಾಹ್ಮಣನಿಗೇನು ಲಾಭ? ಮೊದಲು ಆ ವಿಷಕನ್ಯೆಯನ್ನು ಸಂಹರಿಸಿ, ಸೇಡು ತೀರಿಸಿಕೊಂಡು ಆಮೇಲೆ ಚಾಣಕ್ಯರನ್ನು ವಿಚಾರಿಸಿಕೊಳ್ಳುವೆ'' ಎನ್ನುತ್ತಾ ಕತ್ತಿಯನ್ನು ಹೊರಸೆಳೆದು ಹೊರಡಲು ಸಿದ್ಧನಾದ.

"ಮಿತ್ರ! ಆ ಕೆಲಸವನ್ನು ನಿನ್ನ ತಂದೆಯ ಶಿಬಿರದ ಕಾವಲಿನವರು ಆಗಲೇ ಮಾಡಿಯಾಗಿದೆ. ನಿಮ್ಮ ಅಪಾರ ಸೈನ್ಯದೊಡನೆ ನಿನ್ನ ತಂದೆ ಪಾಟಲೀಪುತ್ರದಲ್ಲಿ ಹೀಗೇ ನಿಲ್ಲುವುದು ಚಂದ್ರಗುಪ್ತನ ರಾಜ್ಯಾಭಿಷೇಕಕ್ಕೆ ಉಪದ್ರವವೆಂದು ಬಗೆದು ಚಾಣಕ್ಯರು ಹಾಗೇ ಮಾಡಿಸಿರಬೇಕು. ನೀನಿಲ್ಲಿ ನಿಂತರೆ ನಿನ್ನ ಜೀವಕ್ಕೂ ಅಪಾಯ! ನಿನ್ನ ತಂದೆಗೆ ಸ್ತ್ರೀಚಾಪಲ್ಯವಿದ್ದುದರಿಂದ ಚಾಣಕ್ಯರ ವಿಷಕನ್ಯಾ ಪ್ರಯೋಗ ಯಶಸ್ವಿಯಾಯ್ತು! ಆ ಚಾಪಲ್ಯವಿಲ್ಲದವನಿಗೆ ಸಹಸ್ರ ವಿಷಕನ್ಯೆಯರೂ ಏನೂ ಮಾಡಲಾರರು!! ನಿನ್ನ ತಂದೆಯದೂ ತಪ್ಪಿಲ್ಲವೆನ್ನಬೇಡ. ಆದುದಾಯಿತು. ಈಗ ಸಂಪದ್ಭರಿತವಾದ ನಿನ್ನ ನಾಡನ್ನು ಆಳಲು ನೀನು ಈಗಿಂದೀಗಲೇ ಪುರುಷಪುರಕ್ಕೆ ಹೊರಡು. ನಿನ್ನ ಸೇನೆ ನಿನ್ನನ್ನನುಸರಿಸಿ ಬರುವಂತೆ ನಾನು ರಹಸ್ಯವಾಗಿ ಏರ್ಪಡಿಸಿದ್ದೇನೆ. ನಾನಿಲ್ಲಿ ಇನ್ನು ಉಳಿಯಲಾರೆ! ನಿನಗೆ ಈ ಸಹಾಯ ಮಾಡಿ, ನಿನ್ನ ಜೀವ ಉಳಿಸಿದ ತಪ್ಪಿಗಾಗಿ ಚಾಣಕ್ಯರು ನನ್ನನ್ನು ಚಿತ್ರ ವಧೆ ಮಾಡಿ

ಕೊಲ್ಲುವುದು ಖಂಡಿತ. ಮಿತ್ರ ಕರ್ತವ್ಯವನ್ನು ಮಾಡಿ ಆಯಿತು ! ನೀನು ಈ ಕುದುರೆಯನ್ನೇರಿ ಈಗಲೇ ಹೊರಡು. ನಾನೆಲ್ಲಾದರೂ ಹೋಗಿ ಮರೆ ಯಾಗುವೆ'' ಎನ್ನುತ್ತಾ ಬಾಗುರಾಯಣ ಮಲಯಕೇತುವನ್ನಾಲಂಗಿಸಿದ.

ಆಪತ್ಕಾಲದಲ್ಲಿ ಇಷ್ಟು ಉಪಕರಿಸಿದ ಮಿತ್ರನಿಗೆ ಕೃತಜ್ಞತೆ ಹೇಳಿ, ಮಲಯಕೇತುವು, "ಸ್ನೇಹಿತನೆ ! ಈ ಸಮಯದಲ್ಲಿ ನೀನಲ್ಲದೆ ನನಗೆ ಬೇರ್ಯಾರು ? ನೀನೂ ನನ್ನೊಡನೆಯೇ ಬಾ! ನನಗೆ ಸಮರ್ಥಮಂತ್ರಿಗಳೂ ಇಲ್ಲ; ನಮ್ಮ ಸೇನಾಪತಿಗಳೂ ಯುದ್ಧದಲ್ಲಿ ಏನಾದರೋ? ಯಾರು ಉಳಿ ದರೊ? ಎಷ್ಟು ಸೈನ್ಯವಿದೆಯೋ ? ಏನೂ ಗೊತ್ತಿಲ್ಲ. ನನ್ನ ತಂದೆ ಸತ್ತ ವಿಷಯ ಕೇಳಿ ಸೈನ್ಯ ತಾನೇ ಓಡಿ ಬರುತ್ತದೆ" ಎಂದವನೇ, ಬಾಗುರಾಯಣ ನನ್ನು ಅವನು ತಂದಿದ್ದ ಬೆತ್ತಲೆ ಕುದುರೆ ಏರಲು ಬಿಟ್ಟು, ತಾನು ತನ್ನ ಕುದುರೆಯನ್ನೇರಿ ಪಶ್ಚಿಮಾಭಿಮುಖನಾಗಿ ಒಂದೇ ಉಸಿರಿಗೆ ಕುದುರೆಯ ಮೇಲೇರಿ ನಾಗಾಲೋಟದಲ್ಲಿ ಓಡಿದ. ಸೈನ್ಯ ಅರಸನ ಮರಣ ವಾರ್ತೆಕೇಳಿ, ಅತ್ತ ಮೊದಲೇ ಓಡತೊಡಗಿತ್ತು.

  

ವಸಂತ ನವರಾತ್ರಿಯ ಉದಯದ ಆ ಮೊದಲದಿನ ಸೂರ್ಯದೇವ ಪಾಟಲೀಪುತ್ರಕ್ಕೆ ಅಪೂರ್ವ ಕಾಂತಿಯಿಂದ ಅನುಗ್ರಹ ಮಾಡುತ್ತಾ, ಹೊಂ ಬೆಳಗಿನ ಕಿರಣಗಳಿಂದೊಡಗೂಡಿ, ಉದಯಾಚಲದ ಮೇಲೆ ಏರಿ ಬರುತ್ತಿದ್ದ.

ನಂದ ನಿಗ್ರಹವಾಗಿ, ಗೋಬ್ರಾಹ್ಮಣ ಕಂಟಕ ನಿವಾರಣೆ ಆ ಹಿಂದಿನ ಅಮಾವ್ಯಾಸೆಯ ರಾತ್ರಿಯೇ ಮುಗಿದು, ಹೊಸ ಯುಗಾದಿಯ ಆ ದಿನ ನಿಜವಾಗಿಯೂ ಬೇರೆಯ ಯುಗವನ್ನು ಹೀಗೆ ತಂದೀತೆಂದು ಪಾಟಲೀಪುರದ ಸಾಮಾನ್ಯ ಪ್ರಜೆಗಳು ನಿರೀಕ್ಷಿಸಿರಲಿಲ್ಲ! ಮಗಧದ ಅಳಿದುಳಿದ ಸೈನ್ಯ ಗಳನ್ನು ಸೈನಿಕರು ಲೆಕ್ಕಹಾಕಿ, ಒಗ್ಗೂಡಿಸಲು ಯತ್ನಿಸುತ್ತಿದ್ದರು.

ಪರ್ವತಸೇನೆ ಓಡಿ ಹೋಯಿತೆಂಬ ಸಮಾಚಾರವನ್ನು ದೂತರು ಚಾಣಕ್ಯನಿಗೆ ಬಿನ್ನೈಸಿದರು. ಚಂದ್ರಗುಪ್ತ ವಿದ್ಯುಲ್ಲೇಖೆಯರೂ ಆಚಾರ್ಯನ ಪಕ್ಕದಲ್ಲಿ ಶಿಬಿರದಲ್ಲಿ ಆಸೀನರಾಗಿದ್ದರು. ಚಂದ್ರಗುಪ್ತನ ಮುಖ ಶತ್ರು ವಿಜಯದಿಂದ ಪ್ರಸನ್ನವಾಗಿದ್ದರೂ ಏಕೋ ಕೊಂಚ ವ್ಯಗ್ರವಾಗಿದ್ದಿತು.

"ಆಚಾರ್ಯರೇ! ತಾವು ಅತಿಮಾನುಷ ಕಾರ್ಯಗಳನ್ನು ನಡೆಸಿ ನನ್ನ ಹಗೆಗಳು ನಿರ್ನಾಮವಾಗುವಂತೆ ಅಪೂರ್ವ ವ್ಯಾಪಾರಗಳನ್ನು ನಡೆಸಿದ್ದೀರಿ. ತಾವಾಗಲೀ ನಾನಾಗಲೀ ಶಸ್ತ್ರವೆತ್ತದಂತೆ ನೋಡಿಕೊಂಡು, ಲಘುಪ್ರಯತ್ನ ಸಾಧ್ಯವಲ್ಲದ ಈ ಗುರುತರ ಕಾರ್ಯವನ್ನು ಕೇವಲ ತಂತ್ರಗಳಿಂದಲೇ ಸಾಧಿಸಿ, ನಿಮ್ಮ ಪ್ರತಿಜ್ಞೆಯನ್ನು ತೀರಿಸಿಕೊಂಡು, ನನ್ನನ್ನೂ ತೀರ್ಣ ಪ್ರತಿಜ್ಞನನ್ನಾಗಿಸಿದ್ದೀರಿ. ಆದರೆ ಒಂದು ವಿಷಯವನ್ನು ಮುಚ್ಚಿಡಲಾರೆ. ತಾವು ಪರ್ವತನ ಮರಣಕ್ಕೆ ವಿದ್ಯುಲ್ಲೇಖಯನ್ನೇ ಏಕೆ ಮತ್ತೆ ಆರಿಸಿದ್ದಿರಿ ? ಆಕೆ ನಿಮ್ಮ ಹೆಂಡತಿಯೋ, ನನ್ನ ಹೆಂಡತಿಯೋ ? ಆದೂ ಈ ಸಲ ವಿಷ ವನ್ನು ಗುಪ್ತಾಂಗಕ್ಕೆ ಬಳಿಸಿ ಕಳುಹಿದ್ದಿರಿ! ನಿಮ್ಮ ಉದ್ದೇಶ್ಯ ಪರ್ವತ ಅವಳನ್ನು..." ಎನ್ನುವಷ್ಟರಲ್ಲೇ, ಚಾಣಕ್ಯ ಅವನನ್ನು ತಡೆದು :

"ವೃಷಲ! ಅವಳು ನಿನ್ನ ಹೆಂಡತಿಯೇ ಆಗಿರಲಿ, ಬೇರಾರ ಹೆಂಡತಿಯೇ ಆಗಿರಲಿ. ನಿನ್ನ ಹಿತಕ್ಕಲ್ಲವೇ ನಾನವಳನ್ನು ಉಪಯೋಗಿ ಸಿದ್ದು! ಪರ್ವತನಿಗೆ ಎಲ್ಲಿ ವ್ಯಾಮೋಹವೋ ಅಲ್ಲಿಗೆ ವಿಷ ಬಳಸಬೇಕಾ ಯಿತು!! ಅವನು ಅವಳನ್ನೇ ಕಾಮಿಸಿದ್ದರಿಂದ ಅವಳನ್ನೇ ಬಳಸಬೇಕಾ ಯಿತು! ಪರ್ವತ ಇಲ್ಲೇ ಉಳಿದಿದ್ದರೆ, ಅವನನ್ನು ಆಮೇಲೆ ವಾಪಸ್ಸು ಹೊರಡಿಸುವುದು ಕಷ್ಟವಾಗುತ್ತಿತ್ತು! ಮತ್ತೊಂದು ಯುದ್ಧಕ್ಕೆ ನಿನಗೆ ಸೈನಿಕರೆಲ್ಲಿದ್ದರು ? ಬೇರಾವ ಉಪಾಯ ಉಳಿದಿತ್ತು ? ನೀನು ನನ್ನನ್ನು ಪ್ರಶ್ನಿಸಬಾರದೆಂಬ ನನ್ನ ನಿಯಮವನ್ನು ಮರೆತೆಯಾ ?" ಎಂದ.

ಚಂದ್ರಗುಪ್ತ : "ನಿಮ್ಮ ತರ್ಕ ನನ್ನ ಮನಸ್ಸಿಗೆ ಹಿಡಿಸಲಾರದು ಆಚಾರ್ಯರೆ! ನಿರಪರಾಧಿಯಾದ ಒಬ್ಬ ಸ್ತ್ರೀಯನ್ನು, ಯಾರದೋ

ಹೆಂಡತಿಯನ್ನು, ಚಕ್ರವರ್ತಿಯಾಗಲಿರುವವನ ಮಡದಿಯನ್ನು. ಹೀಗೆ ನೀವೇ ಮಾನಗೆಡುವ ಪ್ರಸಂಗಕ್ಕೆ ಒಡಂಬಡಿಸಿದ್ದು ಹೇಗೂ ಸಭ್ಯರಾಜ ಕಾರಣ ರೀತಿಯಾಗಲಾರದು ! ಮುಂದೆ ನಾನು ಸಿಂಹಾಸನವನ್ನೇರಿದ ಮೇಲೂ ಹೀಗೇ ಮಾಡುತ್ತಾ ಹೋದರೆ ಏನು ಗತಿ ? ಯಾರಿಗೆ ಮಾನ ಉಳಿಯುವುದು ?"

ಚಾಣಕ್ಯ : ''ಯಾರು ಅಪರಾಧಿಯೋ, ಯಾರು ನಿರಪರಾಧಿಯೋ ಅದನ್ನು ರಾಜಕಾರಣ ವಿಚಾರಿಸುತ್ತ ನಿಲ್ಲಲಾರದು. ಸಮುದ್ರದಲ್ಲಿ ಮುಳು ಗುತ್ತಿರುವವನಿಗೆ ಚಂಡಾಳ ಸ್ತ್ರೀಯ ಹೆಣವೂ ಆಶ್ರಯವಾಗಿ ಬದುಕು ನೀಡ ಬಲ್ಲದು ! ಸಾಯಬೇಕೆನ್ನುವವನಿಗೆ ಕೈ ಬೆರಳಿನ ಉಂಗುರದ ವಜ್ರವೂ ವಿಷೋಪಾಯವಾಗಬಲ್ಲದು ! ದೊಡ್ಡ ಕಾರ್ಯ ಸಾಧನೆಗೆ ಸಣ್ಣ ತ್ಯಾಗ ಮಾಡಬೇಕಾಗುತ್ತದೆ. ರಾಜಕಾರಣ ಸಾಧನೆಗೆ ಹೀಗೆ ಸ್ತ್ರೀಯರನ್ನು ಉಪಯೋಗಿಸಿದವರಲ್ಲಿ ನಾನೇ ಮೊದಲಿಗನೂ ಅಲ್ಲ. ರಾಜರಿಗೆ ಅನೇಕ ಹೆಂಡತಿಯರಿರಬೇಕೆಂಬುದೂ ಈ ನಿಯಮದಿಂದಲೇ ! ಎಲ್ಲ ಪತ್ನಿಯರೂ ಉತ್ತರಾಧಿಕಾರಿಗಳಾದ ಪುತ್ರರನ್ನು ಹಡೆಯುವುದಿಲ್ಲ ! ಒಬ್ಬಿಬ್ಬರು ಇಂಥ ಕೃತ್ಯಗಳಿಗೇ ತಯಾರಾಗಿರಬೇಕಾಗುತ್ತದೆ. ರಾಯಭಾರಿಯರ ಪತ್ನಿಗಳಲ್ಲೂ ಕೆಲವರು ಹೀಗೆ ಇರಬೇಕಾಗುತ್ತದೆ. ಅಲ್ಲದೆ ರಾಜನಿಗೆ ಜನ ಹಿತದಲ್ಲಿ ಹೊರತು ಸ್ವಸುಖದಲ್ಲಿ, ಯಾವ ಹತ್ತಿರದ ಪ್ರಿಯ ವ್ಯಕ್ತಿಯಲ್ಲೂ ಗಾಢ ಪ್ರೀತಿ ಇರಬಾರದು ಎಂದು ನಾನು ಹೇಳುತ್ತಿದ್ದುದನ್ನು ನೀನು ಮರೆತೆಯಾ? ಈ ಮೋಹ ರಾಜನಿಗೆ ಸಲ್ಲದು. ನಾನೂ ಒಪ್ಪಿಸಿದ್ದ ಕೆಲಸವನ್ನು ಅವಳು ಹಾಗೆ ಮಾಡಿದ್ದರೆ, ಅವಳಿಗೆ ಪರಪುರುಷ ಸಂಗ ಹಿಡಿಸಿತ್ತೆಂದು ಆಗಿ ಅವಳನ್ನು ಬೇರೊಂದು ರೀತಿಯಲ್ಲಿ ನೋಡಿಕೊಳ್ಳುತ್ತಿದ್ದೆ. ಅವಳಿಗೆ ಹಿಡಿಸಿರಲಿಲ್ಲ ವಾದರೆ ಅವಳೇ ಏನು ಮಾಡುತ್ತಿದ್ದಳೆಂದು ಅವಳನ್ನೇ ಕೇಳು.''

ಚಂದ್ರಗುಪ್ತ ವಿದ್ಯುಲ್ಲೇಖೆಯ ಮುಖ ನೋಡಿದ. ಅವಳು ತಗ್ಗಿ ಸಿದ ತಲೆಯನ್ನು ಮೇಲೆತ್ತಿ "ಆಚಾರ್ಯರು ಮೊದಲ ಸಲ ಈ ಕೆಲಸವನ್ನು ನನಗೊಪ್ಪಿಸಿದಾಗಲೇ ನಾನು ಅಳುಕಿದೆ. ಆದರೆ ಅವರ ಮಾತನ್ನೂ ಮೀರಿ

ವಂತಿರಲಿಲ್ಲ. ಈ ದೇಶದ ಸಂಸ್ಕೃತಿಯನ್ನೂ, ಆಚಾರ್ಯರನ್ನೂ, ಅವರ ಶಿಷ್ಯನನ್ನೂ ಪ್ರೇಮಿಸಿ, ಇವರ್ಕ್ಕಾಗಿ ಯಾವ ತ್ಯಾಗಕ್ಕೂ ನಾನು ಅಂದೇ ಸಿದ್ಧಳಿದ್ದೆ. ಆದರೆ ಆಚಾರ್ಯರ ಹೃದಯ ಅವರ ಕಾರ್ಯ ವೈಖರಿಯನ್ನು ಗಮನಿಸುತ್ತಾ ಕೊಂಚ ಕೊಂಚವಾಗಿ ತಿಳಿಯುತ್ತ ಬಂದದ್ದರಿಂದ, ಆ ಹಿಂದಿನ ಒಂದು ಸಂದರ್ಭದಲ್ಲೂ, ಪರ್ವತೇಶ ಗುಪ್ತಸ್ಥಾನಕ್ಕೆ ಕೈ ಹಾಕಿದ್ದರೆ ಆಪತ್ಕಾಲಕ್ಕೆ ಇರಲೆಂದು ಈ ಸಣ್ಣ ಶಸ್ತ್ರವನ್ನು ನನ್ನ ಸೊಂಟ ಪಟ್ಟಿಯಲ್ಲಿ ಬಚ್ಚಿಟ್ಟುಕೊಂಡಿದ್ದೆ! (ಅದನ್ನು ತೋರಿಸಿದಳು.) ಆದರೂ ಪರ್ವತನ ಸಹಾಯ ಇನ್ನೂ ಆಚಾರ್ಯರ ಕೆಲಸಕ್ಕೆ ಬೇಕಿದ್ದದ್ದರಿಂದ ಅವನನ್ನು ಬಿಟ್ಟೆ! ಅವನು ಅಲ್ಲಿಯ ತನಕ ಕೈ ಹಾಕಲೂ ಇಲ್ಲ.'' ಎಂದಳು.

ಚಾಣಕ್ಯ ಮೆಚ್ಚಿದ. ಚಂದ್ರಗುಪ್ತ ಬೆಚ್ಚಿದ! ''ಎಲ ಎಲಾ! ಈ ಯವನಳೂ ಸಾಮಾನ್ಯವಲ್ಲ! ಮೊದಲ ದಿನದ ಅವಳ ಸಂಗಮದಲ್ಲೇ, ತಂದೆ ಸತ್ತ ದುಃಖ ಕೋಪ ಪ್ರಸಂಗದಲ್ಲಿ, ಆಚಾರ್ಯ ಸರಿಯಾಗಿ ಊಹಿಸಿದ್ದಂತೆ, ನನ್ನನ್ನೇ ಇವಳು....ನನ್ನನ್ನು ಮುಗಿಸಿದ್ದರೆ!!!" ಎಂದೆಂದುಕೊಳ್ಳುತ್ತಾ ಆಚಾರ್ಯನ ಮುಖ ನೋಡಿ, ಸೂಕ್ಷ್ಮದಲ್ಲೇ ಕೃತಜ್ಞತೆಯನ್ನು ಕಂಗಳಿಂದಲೇ ಅರ್ಪಿಸಿದ. ವಿದ್ಯುಲ್ಲೇಖೆ ಈಗ ಅವನ ಮನಸ್ಸಿನ ಆಯಸ್ಕಾಂತದಿಂದ ಕೊಂಚ ಹಿಂದೆ ಸರಿದ ಕಬ್ಬಿಣದ ವಸ್ತುವಿನಂತೆ ಕಂಡಳು.

ಆಚಾರ್ಯ ಕೇಳಿದ : "ಅಂದೇ ಪರ್ವತ ನಿನ್ನನ್ನು ಬಲಾತ್ಕಾರವಾಗಿ ಉಪಭೋಗಿಸಿದ್ದರೆ ಏನು ಮಾಡುತ್ತಿದ್ದೆ? ಆಚಾರ್ಯನ ಕೆಲಸ ಕೆಡುತ್ತಿತ್ತೆಂದು ನೀನೇ ಹೇಳಿದೆಯಲ್ಲ?"

ವಿದ್ಯುಲ್ಲೇಖೆ : "ಆ ಉಪಭೋಗದ ಸಮೀಪ ಸಮೀಪದಲ್ಲೇ ಈ ಸಣ್ಣ ಶಸ್ತ್ರವನ್ನು (ಸೂಜಿಯಂಥ ಸಣ್ಣ ಲೋಹನಳಿಕೆಯನ್ನು) ಅವನ

ಗುಪ್ತಾಂಗಕ್ಕೆ ವಿಷಲೇಪಿಸಿ ಚುಚ್ಚಿ, ಅಲ್ಲೇ ಖಂಡಿತ ಅವನನ್ನು ಮುಗಿಸಿ ಬರುತ್ತಿದ್ದೆ. ಇಂಥ ಪ್ರಯೋಗಗಳು ನಮ್ಮ ದೇಶದಲ್ಲೂ ಉಂಟು! ಆಚಾರ್ಯರು ಇದನ್ನು ಬಲ್ಲವರಿರಬೇಕು! ಆಚಾರ್ಯರು ಹೇಗೂ ಕೈ ಹಿಡಿದ ಕೆಲಸವನ್ನು ಉಪಾಯಾಂತರದಿಂದ ಸಾಧಿಸುತ್ತಿದ್ದರು ಎಂಬ ವಿಶ್ವಾಸ ಆಗಲೂ ಇತ್ತು, ಈಗಲೂ ಉಂಟು.''

ಆಚಾರ್ಯ : ''ಎಲೆ ಹುಚ್ಚಿ! ಪರ್ವತನ ಸೈನಿಕರು ಆಗ ನಿನ್ನನ್ನು ಕೊಲ್ಲದೆ ಬಿಡುತ್ತಿದ್ದರೆ ?" ಅವಳು : "ಇಂಥ ಆಪತ್ತು ಸಂನ್ನಿಹಿತವಾದ ಕಾರ್ಯಕ್ಕೆ ಆಚಾರ್ಯರು ಎಂದು ನನ್ನನ್ನು ಹಚ್ಚಿದರೋ, ಅಂದೆ ಅದರ ನಿರ್ವ ಹಣೆಗೆ ನನ್ನ ಬೆನ್ನ ಹಿಂದೆ ಗೂಢಚಾರರನ್ನಿಟ್ಟಿರುವರೆಂದೂ ತಿಳಿದುಕೊಂಡೆ! ಅಂದಿನ ಬೆಳದಿಂಗಳ ರಾತ್ರಿ, ಶಿಬಿರದ ಹೊರಗೆ ನಿಂತಿದ್ದ ತಮ್ಮ ಶಿಷ್ಯರನ್ನು ನಾನು ಗಮನಿಸಿಯೇ ಅದನ್ನರಿತೆ.''

ಚಂದ್ರಗುಪ್ತ : ''ಹಾಗಾದರೆ, ನಾವಿಬ್ಬರೂ ಮೊದಲ ರಾತ್ರಿ ಕೂಡಿದಾಗಲೂ ತಾವು ಹೀಗೆ ಗೂಢಚಾರರನ್ನಿಟ್ಟಿದ್ದಿರಾ ? ನಾಯಿಗಳು ಸತತವಾಗಿ ಬೊಗಳುತ್ತಿದ್ದುದಕ್ಕೂ!....... ಹೋ! ಈಗ ತಿಳಿಯಿತು, ಬಿಡಿ" ಎನ್ನುತ್ತಾ ನಗೆ ಮುಖದಲ್ಲಿ ಮೂಡಿತು. ವಿದ್ಯುಲ್ಲೇಖೆ ನಗಲಿಲ್ಲ. ಅವಳ ಮುಖ ಇನ್ನೂ ಗಂಭೀರವೇ ಆಯಿತು! ಚಂದ್ರಗುಪ್ತನೇ ಮುಂದುವರೆದ : "ಆಚಾರ್ಯರೇ ಇಂದು ವಿದ್ಯುಲ್ಲೇಖೆ ಪರ್ವತೇಶನ ಬಳಿ ಹೋಗಿದ್ದಾಗ, ಅವನನ್ನು ಮುಗಿಸಿದ್ದರೆ, ಆಗೇನು ಮಾಡುತ್ತಿದ್ದಿರಿ ?''

ಆಚಾರ್ಯ : ''ಎಲವೋ ಶೂದ್ರ! ಕಾರ್ಯಾಂಶದಲ್ಲಿ ಮಾತ್ರ ಚಾಣಕ್ಯನ ತಂತ್ರ ವಿಚುರ್ಷ ಎಂಬ ನನ್ನ ಖ್ಯಾತಿಯನ್ನು ಮರೆತೆಯಾ ? ಏನು ಮಾಡುತ್ತಿದ್ದೆನೋ ಮಾಡುತ್ತಿದ್ದೆ! ನಿನಗೇನು, ಅದರಿಂದ ? ಇಷ್ಟಕ್ಕೂ ವಿಷ ಕನ್ಯೆ ದೊರೆತು ಕೆಲಸ ಸುಲಭವೇ ಆಯಿತಲ್ಲ!''

ಎನ್ನುತ್ತಾ ನಗಲಾರಂಭಿಸಿದ; ಚಂದ್ರಗುಪ್ತನಿಗೆ ತಿಳಿಯಲಿಲ್ಲ. ಚಾಣಕ್ಯನೆಂದ: "ಎಲೋ! ಮಂದಮತಿಯೇ! ಈಗ ತಿಳಿಯಿತೇ ಸ್ತ್ರೀ ಸ್ವಭಾವ? ಅದಕ್ಕೇ ಎಂದದ್ದು–ಇವಳ ಮೈಮೇಲಿನ ಲಕ್ಷಣಗಳನ್ನು ಪರೀಕ್ಷಿಸಿ ಹೇಳು ಎಂದು. ಮುಂದಾದರೂ ಇವಳು ಹಾಸಿಗೆಯಲ್ಲಿರುವಾಗ ಅವಳ ಮೇಲಿ ವಸ್ತ್ರಭೂಷಣಗಳನ್ನಿರಗೊಡಬೇಡ! ಎಲ್ಲಿ ಯಾವ ಶಸ್ತ್ರ, ವಿಷಗಳನಿಟ್ಟಿರುವಳೋ!" ಚಂದ್ರಗುಪ್ತನಿಗೆ ನಗು ತಡೆಯಲಾಗಲಿಲ್ಲ! ಮುಖ ಪ್ರಸನ್ನವಾಯಿತು. ವಿದ್ಯುಲ್ಲೇಖೆಯೂ ದುಗುಡವನ್ನು ಮರೆತು ಆಚಾರ್ಯನ ವಾತ್ಸಲ್ಯಕ್ಕೆ, ಕೌಶಲಕ್ಕೆ, ಬುದ್ಧಿಗೆ ಕಣ್ಣಲ್ಲೇ ವಂದಿಸಿದಳು.



## ಹದಿನೇಳನೆಯ ಅಧ್ಯಾಯ

# ರಾಕ್ಷಸನ ಮುಂದಿನ ತಂತ್ರಗಳ ಭಂಗ

ತಾನೆಷ್ಟು ಎಚ್ಚರಿಕೆಯಿಂದಿದ್ದೂ ನಂದರನ್ನು ರಕ್ಷಿಸಲಾಗದುದಕ್ಕೆ ರಾಕ್ಷಸನಿಗೆ ಅಪಾರ ದುಃಖವೂ, ಆತ್ಮನಿಂದೆಯೂ, ತನ್ನ ಬುದ್ಧಿಶಕ್ತಿಯಲ್ಲಿ ಅವಿಶ್ವಾಸವೂ, ಕೊಂಚ ಕಾಲ ನಿರಾಸೆಯೂ ಆದವು ! ತನ್ನ ಇಡೀ ಜೀವನವೇ ವ್ಯರ್ಥವಾದ ಭಾವನೆ ಉಂಟಾಯಿತು. ಚಾಣಕ್ಯನ ವಿಷಯ ದಲ್ಲಿ ತನಗರಿವಿಲ್ಲದೆಯೇ ಒಂದು ಗೌರವ ಭಾವವೂ, ಅವನ ದುರೂಹ್ಯ ತಂತ್ರ ಸಾಮರ್ಥ್ಯದ ಬಗೆಗೆ ಮೆಚ್ಚಿಗೆಯೂ ಮೂಡುತ್ತ ಬಂದವು. ನಂದರು ಜನ ವಿಶ್ವಾಸವನ್ನೂ ದೈವಬಲವನ್ನೂ ಕಳೆದುಕೊಂಡದ್ದು ಅವನಿಗೆ ಎಂದೋ ವಿದಿತವಿತ್ತು. ಭೃತ್ಯ ಸ್ವಾಮಿಯ ಗುಣದೋಷಗಳನ್ನು ಎಣಿಸಬಾರದು ! ನಿಷ್ಠೆಯಿಂದ ಬದುಕಿರುವವರೆಗೆ ಅವನಿಗೆ ಸೇವೆ ಮಾಡಿ, ಅವನಿಗಾಗಿ ಪ್ರಾಣ

ಬಿಡಬೇಕು.-ಇಷ್ಟು ಮಾತ್ರ, ರಾಕ್ಷಸನ ದೃಢ ನಂಬಿಕೆ ಇತ್ತು. ನಂದರು ಸತ್ತರೆ ಏನಾಯ್ತು? ಅವರ ಆತ್ಮಕ್ಕೆ ತೃಪ್ತಿತರುವಂಥ ಕಾರ್ಯಗಳು ಇನ್ನೂ ಇವೆ! ಅವನ್ನು ಮಾಡಿ ಮುಗಿಸಿ, ಚಂದ್ರಗುಪ್ತನ ಮೇಲೆ ಸೇಡು ತೀರಿಸಿಕೊಂಡರೆ ಕೊಂಚವಾದರೂ ತನಗೆ ತೃಪ್ತಿ!! ನಂದರು ತನ್ನನ್ನೇ ನಂಬಿದ್ದರು! ಅವರನ್ನು ಕೈ ಬಿಟ್ಟ ಭಾವ ತನ್ನನ್ನು ಚುಚ್ಚುತ್ತಿತ್ತು. ಆ ಚುಚ್ಚು ಹೃದಯಕ್ಕೆ ಅದೊಂದೇ ಮದ್ದು-ನಂದರು ಸತ್ತರೂ ನಂದರಾಜ ಕಾರ್ಯವನ್ನು ಮುಂದುವರಿಸುವುದು! ನಂದರ ಗುಪ್ತನಿಧಿ ಎಲ್ಲಿತ್ತೆಂಬುದೂ, ಎಷ್ಟಿತ್ತೆಂಬುದೂ ರಾಕ್ಷಸನಿಗೆ ತಿಳಿದಿತ್ತು. ಹಣದ ಕೊರತೆ ಈ ರಾಜಕಾರ್ಯಕ್ಕಿರಲಿಲ್ಲ. ನಂದರಲ್ಲಿ ಅನುರಕ್ತರಾಗಿ, ಅವರಿಗಿನ್ನೂ ನಿಷ್ಠೆಯಿಂದಿದ್ದ ಅರಮನೆಯ ಒಳಗಿನವರೂ ಇದ್ದರು. ತನಗೆ ಆಪ್ತಸೇವಕರೂ, ಅನುಚರರೂ ಇದ್ದರು.

ರಾಕ್ಷಸ, ದಾರುವರ್ಮನೆಂಬ ರಾಜಶಿಲ್ಪಿಯನ್ನು ರಹಸ್ಯದಲ್ಲಿ ಕರೆಸಿ, "ಅಯ್ಯಾ! ಇಂದೋ ನಾಳೆಯೋ ಚಂದ್ರಗುಪ್ತನಿಗೆ ಊರಿನಲ್ಲಿ ರಾಜಸ್ವಾಗತವಾಗಲಿದೆ. ಅರಮನೆಯ ಮಹಾದ್ವಾರದ ಶೃಂಗಾರ, ದಿವ್ಯ ತೋರಣ ನಿರ್ಮಾಣ, ಮುಂತಾದ ಕೆಲಸಗಳು ಮಾಮೂಲಾಗಿ ನಿನ್ನ ಸೇವೆ ಆಗುತ್ತವೆ. ಚಂದ್ರಗುಪ್ತ ಆ ದ್ವಾರದತ್ತ ಬರುವಾಗ ನೀನು ಹೀಗೆ ಮಾಡಿ ಅವನನ್ನು ಕೊಂದು ಜನಸಂದಣಿಯಲ್ಲಿ ತಲೆ ತಪ್ಪಿಸಿಕೋ" ಎಂದು ಉಪಾಯ ಹೇಳಿ, ಬೇಕಾದ ಬಂಗಾರದ ನಾಣ್ಯಗಳನ್ನೂ ಒಡವೆ ವಸ್ತ್ರಗಳನ್ನೂ ಅವನಿಗೆ ಬಹುಮಾನವನ್ನಾಗಿತ್ತು ಕಳುಹಿದ. ದಾರುವರ್ಮ ಹಿಗ್ಗಿ ಹೊರಟ!

ರಾಜವೈದ್ಯನಾದ ಶಶಾಂಕಪಂಡಿತನನ್ನು ಕರೆಸಿ ರಾಕ್ಷಸ ಹೇಳಿದ: "ವೈದ್ಯರೇ! ನಿಮ್ಮ ಸ್ವಾಮಿಭಕ್ತಿಯನ್ನು ಮೆಚ್ಚಿದವನು ನಾನು. ಯಾವುದಾದರೊಂದು ಸಂದರ್ಭ ನಿಮಗೆ ಬಂದೇ ಬರುತ್ತದೆ." ಎನ್ನುತ್ತಾ, ವಿಷಪ್ರಹರ ಉಪಾಯವನ್ನು ಸೂಚಿಸಿ, ಅವನನ್ನೂ ಬೇಕಾದ ಹೊನ್ನು, ಭೂಷಣಗಳಿಂದ ತೃಪ್ತಿಪಡಿಸಿ ಕಳುಹಿದ.

ಸೆಜ್ಜೆ ಮನೆಯ ಕಾವಲುಗಾರ, ದೊರೆಯ ಆ ಕೋಣೆಯನ್ನು ದಿನವೂ ಶೃಂಗರಿಸಿ ಓರಣವಾಗಿಡುವ ವಲಾಹಕನೆಂಬ ಸೇವಕನನ್ನು ಕರೆಸಿ; "ಎಲೋ! ನೆಚ್ಚಿನ ಸೇವಕನೇ ! ಶಯ್ಯಾಗೃಹದ ಗೋಡೆಯ ಒಳಗೆ ಗುಪ್ತಸುರಂಗ ವಿರುವುದನ್ನು ನೀನು ಬಲ್ಲೆಯಷ್ಟೆ! ಅದು ಊರಾಚೆಯ ತೋಟದ ಸೋಮೇಶ್ವರಾಲಯದ ಬಳಿಗೆ ಮುರುಕು ಕಲ್ಲುಮಂಟಪದ ಬಳಿ ಬಂದು ಸೇರುವುದು. ರಹಸ್ಯವಾಗಿ ಒಳಗಡಗಿಕೊಂಡು ಚಂದ್ರಗುಪ್ತನನ್ನು ಮುಗಿಸಿ ಬಿಡು. ಇಗೋ ಈ ಬಂಗಾರ, ಒಡವೆಗಳು ನಿನಗೆ ಮುಂಗಡ ಬಹುಮಾನ ಗಳು. ಇನ್ನೂ ಇವೆ. ಎಚ್ಚರಿಕೆ" ಎಂದು ಕಳುಹಿದ.

ಅಗಸನಾದ ರಾಜಸೇನನನ್ನು ಕರೆಸಿ "ಅಯ್ಯಾ ಆಪ್ತ ಮಡಿವಾಳನೇ! ನಂದರಿಗೆ ನಿನ್ನ ನಿಷ್ಠೆಯನ್ನು ನಾನು ಬಲ್ಲೆ. ಚಂದ್ರಗುಪ್ತ ದೊರೆಯಾ ದಾಗ ಸಮಯ ನೋಡಿ, ಮಡಿ ಒಟ್ಟಿಗಳಲ್ಲಿ, ಮೈ ಹೊತ್ತಿ ಉರಿಯುವ ಈ ರಾಸಾಯನಿಕಗಳನ್ನು ಬೆರೆಸಿ ಮಡಿ ಮಾಡಿ ಕೊಡು. ತಲೆಯಲ್ಲಿ ಧರಿ ಸುವ ಮುಂಡಾಸಿನಲ್ಲಿ ಎಳೆ ನಾಗರವನ್ನು ಸೇರಿಸಿ ಸುತ್ತಿಕೊಟ್ಟರೂ ಸರಿಯೇ! ಈ ಬಹುಮಾನಗಳು ಮುಂಗಡವಾಗಿ ನಿನಗೆ ಉತ್ಸಾಹ ವರ್ಧನೆಗೆಂದಷ್ಟೇ ಕೊಡಲ್ಪಡುವುವು. ಇನ್ನೂ ಇದೆ. ಕೆಲಸ ಮುಗಿಸಿ ಬಂದು ಹೇಳು" ಎನ್ನುತ್ತಾ ಅವನನ್ನು ಬೀಳ್ಕೊಂಡ.

ಹೀಗೆ ಅಡಿಗೆಯವನಿಗೆ, ವಿಳ್ಯೆಯದೆಲೆ ಮಡಿಚಿಕೊಡುವವನಿಗೆ, (ಹಡಪದವನಿಗೆ) ಮುಂತಾದ ನಾನಾ ಪರಿವಾರ ವರ್ಗಕ್ಕೂ ಆಣತಿಯಿತ್ತು, ಇನ್ನೇನುಳಿಯಿತೆಂದು ಚಿಂತಿಸುತ್ತಾ ರಾಕ್ಷಸ ತನ್ನ ಆಪ್ತಸ್ನೇಹಿತನಾದ ಚಂದನದಾಸನ ಮನೆಯ ನೆಲಮಾಳಿಗೆಯಲ್ಲಿ ಬಹುಕಾಲ ಕುಳಿತಿದ್ದ.

ಚಂದ್ರಗುಪ್ತಸಂಹಾರಕ್ಕೆಂದು ತಾನು ಕಳುಹಿದ್ದ ವಿಷಕನ್ಯೆಯನ್ನು ಚಾಣಕ್ಯ ಪರ್ವತನ ಮೇಲೆ ಪ್ರಯೋಗಿಸಿ ಅವನನ್ನು ಕೊಂದು ಕಂಟಕ ಪರಿ ಹರಿಸಿಕೊಂಡ ವಿಷಯವನ್ನು ಚಾರರು ಆಗಲೇ ರಾಕ್ಷಸನಿಗೆ ಹೇಳಿಯಾಗಿತ್ತು. ಮಲಯಕೇತುವು ಓಡಿ ಹೋಗಿದ್ದ ವಿಷಯವೂ ಅವನಿಗೆ ತಿಳಿದಿತ್ತು.

ಸ್ವಾಮಿಭಕ್ತನಾದ ಬಾಗುರಾಯಣ ನೀಚಚಂದ್ರಗುಪ್ತನನ್ನು ಸೇವಿಸಲೊಲ್ಲದೆ ಮಲಯ ಕೇತುವಿನೊಡನೆಯೇ ಹೊರಟ ಸಮಾಚಾರವೂ ತಿಳಿದು, ಒಂದು ರೀತಿಯಲ್ಲಿ ಅದನ್ನು ಅವನ ಹೃದಯ ಮೆಚ್ಚಿತು ! ತನಗೀಗ ಅಂಥ ಪರ ರಾಜರ ಸೈನ್ಯಾಶ್ರಯ ದೊರೆಯುವುದೇ ! ಎಂದು ಚಿಂತಿಸಿದ. ಮಗಧದ ಸುತ್ತ ಶತ್ರುರಾಜರೇ ಆಗಿ ಹೋಗಿದ್ದರು. ಮಲಯಕೇತುವಿನ ತಂದೆ ಯನ್ನು ಚಾಣಕ್ಯ ಕೊಂದುದು ಈಗ ಅವನನ್ನು ಚಂದ್ರಗುಪ್ತನ ವಿರುದ್ಧ ಕೆರಳಿಸಿದೆಯಷ್ಟೆ! ಅವನನ್ನೇಕೆ ತಾನು ಆಶ್ರಯಿಸಬಾರದು ? ಯಾವ ಬಲವನ್ನು ನಂಬಿ ಚಾಣಕ್ಯ ಇಷ್ಟೆಲ್ಲ ತಂತ್ರ ಮಾಡಿದನೋ, ಆ ಬಲವನ್ನೇ ಉಪಯೋಗಿಸಿ ಅವನ ಕಾರ್ಯಸಿದ್ಧಿಯನ್ನು ಕೆಡಿಸುವುದೇ ಸರಿ ಎಂದು ಮನಸ್ಸು ಹೇಳಿತು. ಆದರೆ ಅದು ಗುರೂಪಾಯ. ಲಘೂಪಾಯದಿಂದ ಆಗು ವುದಿದ್ದರೆ ಅದನ್ನೇ ಮೊದಲು ಮಾಡಿ ನೋಡಿ, ಆಮೇಲೆ ಆ ಕಷ್ಟದ ದಾರಿ ಯನ್ನು ಹಿಡಿಯುವುದೆಂದು ಯೋಚಿಸಿದ.

ಹೊಸದೊರೆ ಅಧಿಕಾರಕ್ಕೆ ಹೊಂದಿಕೊಳ್ಳುವುದಕ್ಕೆ ಕಾಲಬೇಕೆಂಬು ದನ್ನು ಅವನು ಬಲ್ಲ. ಸರ್ವಾರ್ಥಸಿದ್ಧಿರಾಯನೇನಾದನೋ ? ಎಲ್ಲ ಮಕ್ಕಳನ್ನೂ ಕಳೆದುಕೊಂಡು ಅವನ ಹೃದಯವೆಷ್ಟು ನೊಂದಿದೆಯೋ ? ನೋಡಿಬರಬೇಕು. ಆಮೇಲೆ ಮುಂದಿನ ಮಾತು. ಎಂದಾಲೋಚಿಸಿ, ಸಾಮಾನ್ಯ ನಾಗರಿಕನ ವೇಷದಲ್ಲಿ ಗುಪ್ತಮಾರ್ಗದಲ್ಲಿ ಹಳೆಯ ದೊರೆಯ ಆಶ್ರಮವನ್ನು ಹುಡುಕಿಕೊಂಡು ಹೊರಟ.

ಅದೊಂದು ಅಡವಿ. ಪಾಟಲೀಪುರಕ್ಕೆ ಹಲವು ಹರಿದಾರಿಗಳ ದೂರ ದಲ್ಲಿತ್ತು. ಅದರ ಮಧ್ಯೆ ಪುಟ್ಟದೊಂದು ಆಶ್ರಮ. ಮಹಾಪದ್ಮ ಈಗ ವಾನಪ್ರಸ್ಥನಾಗಿ ಅಲ್ಲಿ ನಾಲ್ಕೆಂಟು ಸೇವಕರ ಜೊತೆಯಲ್ಲಿ ಕಾಲಸವೆಸುತ್ತ, ತನ್ನ ಅಂತ್ಯಕಾಲವನ್ನು ನಿರೀಕ್ಷಿಸುತ್ತಿದ್ದ. ಒಬ್ಬಿಬ್ಬರು ಚೇಟಿಯರೂ, ಬೀಸಣಿಗೆ ಬೀಸುವವರೂ, ಹಾಸಿಗೆ ಹಾಸುವರೂ, ಪಾರ್ಶ್ವವಾಯು ಬಡಿದ ಅವನ ಮೈಯ್ಯನ್ನು ಎಣ್ಣೆಯಿಂದ ತಿಕ್ಕುವವರೂ, ಒಬ್ಬ ವೈದ್ಯ, ಒಬ್ಬ

ಅಡಿಗೆಯುವ, ಕರಣಿಕ, ಸಮಾಚಾರ ಹೊತ್ತೊಯ್ದು ತರುವವ, ಹೀಗೆ ಪುಟ್ಟ ರಕ್ಷಕ ಸೇವಕ ಬಲ ಅವನ ಸುತ್ತ ಇತ್ತು. ಹಳೆಯ ದೊರೆಯನ್ನು ಯಾರೂ ಭೇಟಿ ಮಾಡುವಂತಿರಲಿಲ್ಲ.

ರಾಕ್ಷಸ ಕತ್ತಲೆಯಲ್ಲಿ ಅಲ್ಲಿ ಕಾಣಿಸಿಕೊಂಡ. ಕಾವಲಿನವರು ರಾಕ್ಷಸನ್ನು ಗುರುತಿಸಿ, ಗೌರವದಿಂದ ಒಳಗೆ ಬಿಟ್ಟರು. ದೊರೆಯ ಆಪ್ತಪರಿಚಾರಕನನ್ನೂ ಹೊರಗಿರಿಸಿ, ರಾಕ್ಷಸನೊಬ್ಬನೇ ಮುದುಕನನ್ನು ಭೇಟಿಯಾಗಿ ನಡೆದುದೆಲ್ಲವನ್ನೂ ತಿಳಿಸಿದ. ದೊರೆ ಆಗಲೇ ಸಮಾಚಾರ ಕೇಳಿ, ಹೃದಯ ಒಡೆದಿತ್ತು. ಅವರವರು ಅನುಸರಿಸಿದ ದಾರಿಯಿಂದಲೇ ವಿಧಿ ಅವರವರನ್ನು ಶಿಕ್ಷಿಸುತ್ತದೆ ಎಂಬ ಕರ್ಮಸಿದ್ಧಾಂತದಿಂದ ಹಳೆಯ ರಾಯ ಮನಸ್ಸನ್ನು ನೆಮ್ಮದಿಗೆ ತಂದುಕೊಳ್ಳುತ್ತಿದ್ದ. ಮುದುಕನಿಂದ ಅವನಿಗೆ ಸಮಾಧಾನ ಹೇಳಬಲ್ಲವರಾರೂ ಆ ಶಿಬಿರದಲ್ಲಿರಲಿಲ್ಲ. ರಾಕ್ಷಸನ ಬರುವು ಮುದುಕನಿಗೆ ನೆಮ್ಮದಿಯನ್ನು ತಂದಿತು. ಅವನ ಮಾತೆಲ್ಲವನ್ನೂ ಶಾಂತವಾಗಿ ಕೇಳಿದ. ಸಮಾಧಾನಿಸಿ ಹೋಗಲೆಂದು ರಾಕ್ಷಸ ಬಂದಿರುವನೆಂದು ಕೊಂಡಿದ್ದ ಅವನಿಗೆ ಅಚ್ಚರಿಯೊಂದು ಕಾದಿತ್ತು!

''ಪ್ರಭು! ತಾವು ಮನಸ್ಸುಗಟ್ಟಿ ಮಾಡಿಕೊಂಡು ಒಂದು ವಿಷಯಕ್ಕೆ ಈಗ ಸಂಮ್ಮತಿ ನೀಡಬೇಕು. ಅದೊಂದೇ ಈಗ ಉಳಿದಿರುವ ಮಾರ್ಗ'' ಎನ್ನುತ್ತಾ, ಸುತ್ತ ನೋಡಿದ, ರಾಕ್ಷಸ; ಯಾರೂ ಕೇಳುತ್ತಿಲ್ಲವೆಂದು ಖಚಿತ ಪಡಿಸಿಕೊಂಡು ಮುಂದುವರೆದ. "ತಾವು ತಮ್ಮ ಮೆಚ್ಚಿನ ಯುವಕನೊಬ್ಬನನ್ನು ದತ್ತಕ ಮಾಡಿಕೊಳ್ಳಬೇಕು. ಜ್ಯೇಷ್ಠನಂದರಿಗೆ ಪ್ರಿಯನಾದ ಅವರ ಅಂಗರಕ್ಷಕ ಸಿಂಹವರ್ಮನಾದರೂ ಸರಿ; ಯಾರಾದರೂ ಸರಿ. ತಮ್ಮ ಚಿತ್ತ. ಹೆಸರಿಗೆ ಅವನನ್ನು ದೊರೆ ಎಂದು ಅಭಿಷೇಕ ಮಾಡಿ ನಾನು ನಂದರ ಪರವಾಗಿ ಈ ಯುದ್ಧವನ್ನು ಮುಂದುವರೆಸುತ್ತೇನೆ. ಚಂದ್ರಗುಪ್ತನ ಮರಣನಾಗಿ ಆ ದ್ರೋಹಿ ಬ್ರಾಹ್ಮಣನನ್ನು ಹೊರಗೆ ಹಾಕುವ ತನಕ ನನಗೆ ನೆಮ್ಮದಿಯಿಲ್ಲ; ನಾನು ತಿಂದ ನಿಮ್ಮ ಋಣ ವ್ಯರ್ಥವಾಯಿತೆನಿಸುತ್ತಿದೆ. ದಯಮಾಡಿ ಈ ಅವಕಾಶವನ್ನು ಕೊಟ್ಟು ತಾವು ನನಗೂ, ದಿವಂಗತರಾದ

ತಮ್ಮ ಪುತ್ರರಿಗೂ ನೆಮ್ಮದಿ ನೀಡಬೇಕು," ಎಂದು ರಾಕ್ಷಸ ದೀನನಾಗಿ ಪ್ರಾರ್ಥಿಸಿದ. ದೊರೆಗೆ ಕಂಠ ಬಿಗಿದು ಬಂದಿತು! ಇಂಥ ಪ್ರಾಮಾಣಿಕ ಅಮಾತ್ಯನನ್ನು ಪಡೆದ ಭಾಗ್ಯಕ್ಕೆ ಅಂತರಾತ್ಮ ಮೆಚ್ಚಿತಾದರೂ, ಈ ವಯಸ್ಸಿನಲ್ಲಿ, ಈ ಅವಸ್ಥೆಯಲ್ಲಿ, ದತ್ತಕದ ವಿಚಾರ, ಮತ್ತೆ ಯುದ್ಧ ಮುಂದುವರೆಸುವ ವಿಚಾರ ಅವನಿಗೆ ಮನಸ್ಸಿಗೆ ಬರಲಿಲ್ಲ. ತಲೆಯಾಡಿಸಿದ. ರಾಕ್ಷಸ ಬಿಡಲಿಲ್ಲ; ಮಹಾಪದ್ಮನ ಪಾದಗಳನ್ನು ಹಿಡಿದು, ಅವುಗಳ ಮೇಲೆ ತಲೆಯಿಟ್ಟು ಕಣ್ಣೀರು ಹಾಕಿದ. ಕ್ಷಣ ಕಾಲ ಮುದುಕ ಕಣ್ಣುಮುಚ್ಚಿ ಧ್ಯಾನಾಸಕ್ತನಾದ. ರಾಕ್ಷಸ ಅವನ ಮುಖವನ್ನೇ ನೋಡುತ್ತಾ ಏನು ಸನ್ನೆ ಮಾಡಿ ಹೇಳುವನೋ ! ಎಂದು ಕುತೂಹಲದಿಂದ ನಿರೀಕ್ಷಿಸುತ್ತಿದ್ದ.....ದೊರೆ ಕಣ್ದೆರೆದು ತನ್ನ ಭಾರವಾದ ಬಲಗೈಯನ್ನು ಕೊಂಚ ಎತ್ತಿ ಎರಡು ಬೆರಳುಗಳನ್ನು ತೋರಿದ ! "ಇನ್ನೆರಡು ದಿನಗಳಲ್ಲಿ ನಿಶ್ಚಯಿಸಿ ಹೇಳುವಿರಾ?" ಎನ್ನುತ್ತಾ ತನ್ನ ಆನಂದ ಪ್ರಕಟಿಸುತ್ತಾ ರಾಕ್ಷಸ ಮತ್ತೆ ಕೇಳಿದ. ಹೌದೆಂಬಂತೆ ಮುದುಕ ತಲೆಯಳ್ಳಾಡಿಸಲು, ರಾಕ್ಷಸ "ಹಾಯ್ !" ಎಂದು ನಿಟ್ಟುಸಿರಿಟ್ಟ !!

ಆಶ್ರಮದ ಕಿಟಕಿಯ ಹೊರಗಿನ ತೋಟದ ಬಾಳೇ ಗಿಡದ ಎಲೆಯೊಂದು ಗಾಳಿಯಿಲ್ಲದೆ ಅಲುಗಾಡಿದ ಸಪ್ಪಳವಾಗಿ ರಾಕ್ಷಸ ಬೆಚ್ಚಿದ! ಕಿಟಕಿಯವರೆಗೆ ಹೋಗಿ ನೋಡಿದ. ಕಾವಲಿನವನೊಬ್ಬ ಆ ಬಾಳೇ ಗಿಡದ ಪಾತಿಯನ್ನು ಸರಿಪಡಿಸುತ್ತ, ಕಸಕಳೆ ಕೀಳುತ್ತಿದ್ದ! ರಾಕ್ಷಸನ ಅನುಮಾನ ತಾತ್ಕಾಲಿಕನಾಗಿ ಪರಿಹಾರವಾಯಿತು. ದೊರೆಗೆ ಮತ್ತೆ ವಂದಿಸಿ, ಆ ದಿನದಿಂದ ಮೂರನೇ ದಿನ ಸಂಜೆಗೆ ಬಂದು ಭೇಟಿಯಾಗುವುದಾಗಿ ಹೇಳಿ ಹೊರಟ.

ಹೊರಬರುತ್ತಾ, ರಾಕ್ಷಸ ಚೇಟಿಯೊಬ್ಬಳನ್ನು ಕುರಿತು, ಬಾಳೇ ಗಿಡದ ಬಳಿ ಕೆಲಸ ಮಾಡುತ್ತಿದ್ದ ಯುವ ಕೆಲಸಗಾರನನ್ನು ತೋರಿಸಿ "ಅವನಾರು?" ಎಂದು ಕೇಳಿದ. "ಯುದ್ಧದ ಗಲಾಟೆಯಲ್ಲಿ ಅರಮನೆಯ ಎಷ್ಟೋ ಕೆಲಸಗಾರರು ಭಯಭೀತರಾಗಿ ಓಡಿ ಹೋದರು. ಹಾಗೆ ಬಂದು ನೆನ್ನೆಯಷ್ಟೇ ಇಲ್ಲಿ ಆಶ್ರಯ ಪಡೆದವನಿವನು ನಂದರ ಆಪ್ತ ವರ್ಗದವನು– ಅಜತಪಾಲ

ನಂತೆ. ಒಳ್ಳೆಯ ಕೆಲಸಗಾರ" ಎಂದು ಅವಳು ಹೇಳಿದಳು. "ಅವನ ಚಲನ ವಲನಗಳನ್ನು ಪರೀಕ್ಷಿಸುತ್ತ ನನಗರುಹು'' ಎಂದು ಅಪ್ಪಣೆಯಿತ್ತ ರಾಕ್ಷಸ! ಅವಳಿಗೊಂದು ರತ್ನಹಾರವನ್ನು ಬಹುಮಾನವನ್ನಾಗಿತ್ತು ಹೊರ ಹೊರಟು ಚಂದನ ದಾಸನ ಮನೆಗೆ ಸೇರಿ ನಂದರ ಆಪ್ತ ಅಂಗರಕ್ಷಕನಾಗಿದ್ದ ಸಿಂಹ ವರ್ಮನನ್ನು ಶೀಘ್ರವಾಗಿ ಕರೆತರುವಂತೆ ತನ್ನ ಆಪ್ತಗೂಢಚಾರನಾದ ವಿರಾಧಗುಪ್ತನಿಗೆ ಹೇಳಿ ಕಳುಹಿದ.

  

ಚಾಣಕ್ಯ ಬಿಡಾರದಲ್ಲಿ ಪದ್ಮಾಸನದಲ್ಲಿ ಕುಳಿತಿದ್ದು ಏನನ್ನೋ ಚಿಂತಿಸುತ್ತಿದ್ದ. ಬಳಿಯಲ್ಲಿ ಪರ್ವತೇಶನ ತಮ್ಮ ವಿರೋಚಕ ಕುಳಿತಿದ್ದ. ಅತ್ತ ಚಂದ್ರಗುಪ್ತನೂ, ವಿದ್ಯುಲ್ಲೇಖೆಯೂ ಆಚಾರ್ಯನ ಎಡಬದಿಗೆ ಕುಳಿತು ಆಚಾರ್ಯ ಬಹಿರ್ಮುಖನಾಗುವುದನ್ನು ಎಲ್ಲರೂ ನಿರೀಕ್ಷಿಸುತ್ತಿದ್ದರು.

ಆಚಾರ್ಯ ಕಣ್ಣು ಬಿಟ್ಟು ನೋಡಿ ವಿರೋಚಕನಿಗೆ ಹೀಗೆಂದ : "ದೊರೆಯೇ ! ವಿಜಯ ಶ್ರೀ ನಮಗೊಲಿದ ಬಳಿಕ ನಡೆದ ಈ ಅನಿರೀಕ್ಷಿತ, ಅಕಾಲಿಕ ಕೆಟ್ಟ ಸಮಾಚಾರ ನಮ್ಮ ಮನಸ್ಸನ್ನು ಕದಡಿ ಹಾಕಿದೆ. ಚಾಣಕ್ಯನ ಉದ್ದಿಷ್ಟ ಕಾರ್ಯಗಳಾವುವೂ ಈ ರೀತಿ ಕೆಟ್ಟು ಹೋದುದಿಲ್ಲ. ನಿನ್ನ ಅಣ್ಣ ಪರ್ವತೇಶನ ಎದುರು ಚಂದ್ರಗುಪ್ತನಿಗೆ ಪಟ್ಟಗಟ್ಟಿ, ಬಹುಮಾನಾರ್ಥವಾಗಿ ಮಗಧದ ಪಶ್ಚಿಮಗಡಿಯ ಕೆಲವು ಪ್ರಾಂತಗಳನ್ನು ಅವನಿಗೆ ಕೊಡಬೇಕೆಂದಿದ್ದೆ. ಯಾವ ನಿಬಂಧನೆಯೂ ಇಲ್ಲದೆ ಪರ್ವತೇಶ ನಮಗೆ ಇಷ್ಟು ಸಹಾಯ ಮಾಡಿದ ಉಪಕಾರಕ್ಕೆ ಇಡೀ ಮಗಧವನ್ನೇ ಕೊಟ್ಟಿದ್ದರೂ ಕಡಿಮೆ ಎನಿಸುತ್ತಿತು! ಅವನ ದಾಸ್ಯವನ್ನು ನೀಗಿ ಪಂಚನದ ಪ್ರಾಂತವನ್ನು ಒಗ್ಗೂಡಿಸಿ ಅವನ ವಶಮಾಡಿದ ನಮ್ಮ ಬುದ್ಧಿ ಕೌಶಲಕ್ಕೆ ಆತ ಮೆಚ್ಚಿ ತನ್ನನ್ನೇ ನಮಗರ್ಪಿಸಿಕೊಂಡಿದ್ದ! ರಾಕ್ಷಸನ ಕುಟಿಲ ಯುಕ್ತಿಗೆ ಮರುಳಾಗಿ ಈ ಅಮಾವಾಸ್ಯೆಯ ಪರ್ವಕಾಲದಲ್ಲಿ ವಿಷಕನ್ಯೆಯನ್ನು ಸಂಗಮಿಸಿ ಸಾಯುವುದೆಂದರೆ, ಎಂಥ ದುರ್ದೈವ ! ಎಂಥ ವಿಡಂಬನೆ !!... ಇರಲಿ.

ನಿಮ್ಮ ಅಣ್ಣನ ಪುತ್ರ ಮಲಯ ಕೇತುವು ಈ ಘಟನೆಯಿಂದ ಭೀತನಾಗಿ ಓಡಿ ಹೋದ ವಾರ್ತೆ ಬಂದಿದೆ! ಹುಚ್ಚು ಹುಡುಗ! ಓಡಿ ಹೋಗುವುದಕ್ಕೇ ನಾಗಿತ್ತು? ನಾವಿರಲಿಲ್ಲವೆ ? ಒಂದು ಮಾತನ್ನೂ ಕೇಳಲಿಲ್ಲ. ಅವಿವೇಕಿ! ಇರಲಿ. ಈಗ ಚಂದ್ರಗುಪ್ತನ ಅಧಿಕಾರಗ್ರಹಣ ಸಂದರ್ಭದಲ್ಲಿ ಮಗಧದ ಪ್ರಾಂತಕ್ಕೆ ನಿಮ್ಮನ್ನೇ ಅಧಿಪತಿಯನ್ನಾಗಿ ಮಾಡಲಾಗುವುದು. ಇಂದು ಸಂಜೆ ಸೂರ್ಯಾಸ್ತವಾದ ಬಳಿಕ, ಗೋಧೂಳಿ ಲಗ್ನದಲ್ಲಿ ನಗರ ಪ್ರವೇಶ; ಬ್ರಾಹ್ಮಣಾಶೀರ್ವಾದ; ಕೊತ್ವಾಲನಿಂದ, ಅರಮನೆಯ ಅಧಿಕಾರಿಗಳಿಂದ, ನಗರದ ಬೀಗ ಮುದ್ರೆಯ ಸಮರ್ಪಣೆ, ಚಂದ್ರಗುಪ್ತನಿಗೂ ನಿನಗೂ ಮಂಗಳ ಸ್ನಾನ ಆದಮೇಲೆ, ರಾತ್ರಿ ಸುಲಗ್ನದಲ್ಲಿ ಪಟ್ಟಾಭಿಷೇಕ. ಆಮೇಲೆ ಇದೇ ರಾತ್ರಿಯೇ ದೊರೆಗಳ ಉತ್ಸವ ಬೀದಿಗಳಲ್ಲಿ; ನಂತರ ಅಧಿಕಾರಿಗಳ ನೇಮಕ, ಇತ್ಯಾದಿ ಕಾರ್ಯಕ್ರಮವುಂಟು. ಬಹಳ ವೇಳೆ ಹಿಡಿಯುವ ಈ ಕಾರ್ಯ ಕ್ರಮಕ್ಕೆ ಸಿದ್ಧವಿರಬೇಕು'' ಎನ್ನುತ್ತಾ ಚಂದ್ರಗುಪ್ತನ ಮುಖ ನೋಡಿ, ವಿರೋಚಕನನ್ನು ಹರಸಿ, ಜಾಗ್ರತೆಯಾಗಿರುವಂತೆ ಎಚ್ಚರಿಸಿ, ಬಿಡಾರಕ್ಕೆ ಕಳುಹಿದ. ವಿರೋಚಕ ಎದ್ದು ಬಿಡಾರದ ಬಾಗಿಲಿಗೆ ಬರುವಷ್ಟರಲ್ಲಿ ಶಿಷ್ಯ ನೊಬ್ಬ ಬಂದು "ಗುರುಗಳೇ ಬಾಗುರಾಯಣರನ್ನು ಕರೆತರುವಂತೆ ತಾವು ಹೇಳಿ ಕಳುಹಿದ್ದಿರಷ್ಟೆ! ಎಲ್ಲಿ ಹುಡುಕಿದರೂ ಸುಳಿವಿಲ್ಲ. ಬೆಳಗ್ಗೆ ಓಡಿ ಹೋದ ಮಲಯ ಕೇತುವಿನೊಡನೆಯೇ ಅವರೂ ಓಡಿ ಹೋದರೆಂದು ಎಲ್ಲೆಲ್ಲೂ ಜನ ಮಾತಾಡುತ್ತಿದ್ದಾರೆ" ಎಂದ. ವಿರೋಚಕ ಅಲ್ಲೇ ನಿಂತು, ಹಿಂದಿರುಗಿ, ಆಚಾರ್ಯನ ಮುಖ ನೋಡಿದ ! ಆಚಾರ್ಯ ಕಪಟದ ಸಿಟ್ಟು ಸಿರು ತೋರಿ "ಆ ಮೂರ್ಖನಿಗೂ ಬುದ್ಧಿ ಕೆಟ್ಟುಹೋಯಿತೊ? ಅವನಿಲ್ಲದಿದ್ದರೆ ರಾಜಕಾರ್ಯ ನಡೆಯುವುದಿಲ್ಲವೋ ? ಆ ಬಲಗುಪ್ತನನ್ನೇ ಕರೆ, ಭದ್ರ ಭಟ, ಡಿಂಗಿರಾತ, ಪುರುಷದತ್ತ, ಸಿಂಹಗುಪ್ತ, ಮೊದಲಾದವರನ್ನೂ ಕರೆಸು. ಸಂಜೆಯ ಉತ್ಸವಕ್ಕೆ ಏರ್ಪಾಡುಗಳಾಗಬೇಕು. ...ಅಮಾತ್ಯ ರಾಕ್ಷಸನೆಲ್ಲಿ? ತಾನಾಗಿಯೇ ಬಂದು ಶರಣಾಗಬೇಡವೆ ? ಇಷ್ಟು ಸೊಕ್ಕೋ ! ನೋಡು ತ್ತೇನೆ. ಅರಸರು ಬಡಿದಾಡಿದರೆ ಅವನಿಗೂ ನನಗೂ ಎಂಥ ವೈರ ? ಇಬ್ಬರೂ ಬ್ರಾಹ್ಮಣರಾಗಿದ್ದು ಮುಂದಿನ ರಾಜಕಾರ್ಯಗಳಲ್ಲಿ ಎಂದಿನ ರಾಜ ಭಕ್ತಿಯಿಂದ ಅವನು ನಡೆದುಕೊಳ್ಳಬೇಕಾಗಿತ್ತಲ್ಲವೆ? ಎಲ್ಲಿದ್ದರೂ ಅವನನ್ನು

ಕರೆತರುವಂತೆ ಬಲಗುಪ್ತನಿಗೆ ನಾನು ಹೇಳಿ ಕಳುಹಿದೆನೆಂದು ತಿಳಿಸು'' ಎನ್ನುತ್ತಾ, ಚಾಣಕ್ಯ ವಿರೋಚಕನಿಗೆ ಹೋಗಬಹುದೆಂಬ ಸೂಚನೆಯನ್ನಿತ್ತ.

ಬಿಡಾರದ ಹೊರಗೆ ಆ ಮುಂದಿನ ಗಳಿಗೆಯಲ್ಲಿ ಭಿಕ್ಷುಕನೊಬ್ಬ ಬಂದು ನಿಂತು "ನನ್ನ ಸರ್ವಾರ್ಥವೂ ನಾಶವಾಯಿತು ! ಪದ್ಮಗಳನ್ನು ಯಾರಾರೋ ಕಿತ್ತುಕೊಂಡು ಹೋಗುತ್ತಿರುವರು ! ದೊರೆಗಳು ಸತ್ತ ಮೇಲೆ ಯಾರೂ ಹೇಳುವ ಕೇಳುವರಿಲ್ಲವಾಯಿತು!" ಎನ್ನುತ್ತ ಗೊಗ್ಗೊರಲಲ್ಲಿ ಅಳಹತ್ತಿದ. ಚಾಣಕ್ಯ ಆ ಧ್ವನಿಯನ್ನು ಗುರುತಿಸಿ "ಯಾರವನು ಹುಚ್ಚ! ಯಾವುವೋ ಕೊಳದಲ್ಲಿ ಯಾವುದೋ ಪದ್ಮಗಳನ್ನು ಯಾರೋ ಕಿತ್ತುಕೊಂಡು ಹೋದರೆ, ಇವನ ಸರ್ವಾರ್ಥವೇಕೆ ನಾಶವಾಗಬೇಕು? ಪಾಟಲಿಪುತ್ರದಲ್ಲಿ ಎಲ್ಲರೂ ಹೀಗೆ ಹುಚ್ಚಾಗಿರುವರೋ ಹೇಗೆ? ಅವನನ್ನಿಲ್ಲಿ ಕರೆದು ತಾ ! ಹುಚ್ಚು ಬಿಡಿಸುತ್ತೇನೆ-'' ಎಂದು ಶಿಷ್ಯನಿಗೆ ಶಾಸನ ಮಾಡಿದ.

''ಪದ್ಮ", "ಸರ್ವಾರ್ಥ'' ಶಬ್ದಗಳ ಬಳಕೆಯಿಂದ, ಇದು ಮಹಾಪದ್ಮನೆನಿಸಿದ್ದ ಸರ್ವಾರ್ಥಸಿದ್ಧಿರಾಯನ ವಿಷಯಕವಾಗಿ ಯಾರೋ ತಂದ ಗೂಢ ವಾರ್ತೆಯಿರಬೇಕೆಂದು ಚಂದ್ರಗುಪ್ತನೆಂದುಕೊಂಡ! "ಯಾರೋ ಪದ್ಮಗಳನ್ನು ಕೀಳುವುದೆಂದರೇನು ?" ಎಂಬುದು ತಿಳಿಯಲಿಲ್ಲ ! ಚಾಣಕ್ಯ ಅವನನ್ನು ಬರಮಾಡಿಕೊಂಡು ಚಂದ್ರಗುಪ್ತನ ಮುಖ ನೋಡಿದ. ಅರ್ಥ ಮಾಡಿಕೊಂಡ ಕುಮಾರ ವಿದ್ಯುಲ್ಲೇಖೆಯೊಡನೆ ಆಚಾರ್ಯನಿಗೆ ವಂದಿಸಿ "ಬಲಗುಪ್ತ ಬಂದನೇ, ನೋಡುತ್ತೇನೆ; ಈಗ ಬರುತ್ತೇನೆ" ಎಂದು ಹೇಳಿ ಶಿಬಿರದಿಂದ ಹೊರ ಹೊರಟ.

''ಅಜಿತಪಾಲ''ನಿಂದ ವಾರ್ತೆ ತಿಳಿದ ಚಾಣಕ್ಯ ಕ್ರುದ್ಧನಾದ ! "ನಾನು ನಿರೀಕ್ಷಿಸಿದಂತೆಯೇ ರಾಕ್ಷಸ ಮಾಡಿದ" ಎನ್ನುತ್ತಾ, ಅವನ ಕಿವಿಯಲ್ಲಿ ಏನನ್ನೋ ಉಸುರಿದ. ಅಜಿತಪಾಲ ಒಂದು ಕ್ಷಣ ಗಂಭೀರ ಮುದ್ರೆಯಿಂದ ತಲೆತಗ್ಗಿಸಿ, ಚಾಣಕ್ಯನನ್ನು ದಿಟ್ಟಿಸಿ ನೋಡಿದ! ಆಚಾರ್ಯನ

ಕಂಗಳಲ್ಲಿ ಸಿಂಹದ ಅಚಲ ನಿರ್ಧಾರದ ಮುದ್ರೆಯಿರುವುದನ್ನು ಕಂಡು "ಅಪ್ಪಣೆ" ಎನ್ನುತ್ತಾ ಹೊರಗೇ ಹೋದ.

  

ಗೋಧೂಳೀ ಲಗ್ನದಲ್ಲಿ ಚಂದ್ರಗುಪ್ತನಿಗೆ ಆಚಾರ್ಯನೊಡನೆ ಸಮಸ್ತ ರಾಜ ವೈಭವಯುಕ್ತವಾದ ನಗರ ಪ್ರವೇಶೋತ್ಸವವಾಯಿತು ! ಚಂದ್ರ ಗುಪ್ತ ಮದ್ದಾನೆಯ ಮೇಲೆ ಕುಳಿತು ಊರೊಳಗೆ ಪ್ರವೇಶಿಸಿದ. ಚಾಣಕ್ಯ ಬಂಗಾರದ ಪಲ್ಲಕ್ಕಿಯಲ್ಲಿ ಕುಳಿತಿದ್ದ ! ವಿರೋಚಕ, ಚಂದ್ರಗುಪ್ತನ ಹಿಂದೆ ಮತ್ತೊಂದು ಮದ್ದಾನೆಯ ಮೇಲೆ, ವಿದ್ಯುಲ್ಲೇಖೆ, ಆಚಾರ್ಯ ಶಿಷ್ಯರ ಕಾವಲಿನಲ್ಲಿ ಮೇನೆಯೊಂದರಲ್ಲಿ, ವಿರೋಚಕನ ಸೈನ್ಯ, ನೇಪಾಳೀ ಸೈನ್ಯ, ಇಂದ್ರಪ್ರಸ್ಥ ಸೈನ್ಯ, ವಿರೋಚಕನೊಡನೆ ಉಳಿದ ಪಂಚನದ ಪ್ರಾಂತೇಶ್ವರರು, ಅವರ ಸೈನ್ಯ ವಿವಿಧ ಉಡುಪುಗಳಲ್ಲಿ ನಡೆಯುತ್ತಾ ಮೆರವಣಿಗೆ ಒಂದೊಂದು ಮನೆಯ ಮುಂದೆಯೂ ಹಾಯುತ್ತ, ಗಣ್ಯರಿಂದ, ಮುಖಂಡ ರಿಂದ ಹಾರ, ತುರಾಯಿಗಳನ್ನು ಸ್ವೀಕರಿಸುತ್ತಾ, ಸುವಾಸಿನಿಯರು ಅಡಿಗಡಿಗೆ ಆರತಿ ಬೆಳಗುತ್ತಾ ಅರಮನೆ ಸೇರುವ ವೇಳೆಗೆ ತುಂಬ ಹೊತ್ತಾಯಿತು. ಇಷ್ಟು ಬೇಗ ಉತ್ಸವ ಬರುವುದೆಂದು ನಿರೀಕ್ಷಿಸಿರದ ದಾರುವರ್ಮ ಚಂದ್ರ ಗುಪ್ತವಧೆಗೆ ಸಂನ್ನದ್ಧನಾಗಿರಲಿಲ್ಲ. ಬೇಗ ಉತ್ಸವದ ಎಲ್ಲ ಏರ್ಪಾಡು ಗಳನ್ನೆಲ್ಲ ಚೆನ್ನಾಗಿ ಮಾಡಿದ್ದ. ಹೆಣಗಳನ್ನೂ, ಆನೆ ಕುದುರೆಗಳ ಸತ್ತ ಶರೀರವನ್ನೂ ಎತ್ತಿ ಕೋಟೆಯಾಚೆ ಸಂಸ್ಕಾರ ನಡೆಸಲು ಏರ್ಪಾಡಾಗಿತ್ತು. ನಗರ ಬೀದಿಗಳು ಸ್ವಚ್ಛವಾಗಿದ್ದವು. ದಿಢೀರ್ ಉತ್ಸವಕ್ಕೆ ಸಂಭ್ರಮದ ಸಿದ್ಧತೆ ಇಲ್ಲವಾಗಿದ್ದರೂ, ಸರಳ, ಗಂಭೀರ, ಸ್ವಾಭಾವಿಕ ಉತ್ಸವ ಆದಾಗಿತ್ತು. ಚಾಣಕ್ಯ ಕಂಗಳಿಂದಲೇ ಊರ ಜನರ ಗುಪ್ತ ಮನೋಭಾವವನ್ನರಿತು ಅಭಿನಂದಿಸಿದ. ಸಹಸ್ರಗಟ್ಟಳೆ ಬ್ರಾಹ್ಮಣರು ಸೇರಿ ಚಂದ್ರಗುಪ್ತನ ಮತ್ತು ಚಾಣಕ್ಯನ ನಡುವಿನ ಉತ್ಸವ ಪಥದ ಮಧ್ಯೆ, ಒಬ್ಬೊಬ್ಬರೂ ಸಾಲಾಗಿ ಕೈಗೂಡಿಸಿಕೊಂಡು ನಡೆಯುತ್ತಾ ಗಟ್ಟಿಯಾಗಿ ವೇದ ಘೋಷ ಮಾಡುತ್ತಿದ್ದರು:

"ಆಶುಶ್ಶಿಶಾನೋ ವೃಷಭೋ ನ ಯುಧ್ಮೋ ಘನಾಘನಃ ಕ್ಷೋಭಣಃ ಚರ್ಷಣೀನಾಂ."........

ಎಂಬ ಯಜುಸ್ಸಂಹಿತಾ ವಾಕ್ಯಗಳನ್ನು ವಿದ್ವಾಂಸರು ಮುಗಿಲಿಗೆ ಮುಟ್ಟು ವಂತೆ ಘೋಷಿಸುತ್ತಿದ್ದರು !

ದಾರಿಯ ಪಕ್ಕದ ಮನೆಯೊಂದರ ಮುಂದೆ ನಡನಡುಗುವ ತಲೆಯ ವೃದ್ಧ ಬ್ರಾಹ್ಮಣನೊಬ್ಬ, ದ್ವಾದಶ ಪುಂಡ್ರಗಳನ್ನೂ ಧರಿಸಿ, ಸೊಂಟಕ್ಕೆ ಉತ್ತರೀಯ ಬಿಗಿದು ನಿಂತಿದ್ದು ಕೈಯ್ಯ ತಟ್ಟೆಯೊಂದರಲ್ಲಿ ಎರಡು ನಾರಿ ಕೇಳ ಫಲಗಳನ್ನೂ, ನಿಂಬೇ ಹಣ್ಣುಗಳನ್ನೂ, ಎಲೆಯಡಿಕೆಯನ್ನೂ ಇಟ್ಟು ಕೊಂಡು, ಉತ್ಸವ ತನ್ನ ಮನೆಯ ಬಾಗಿಲಿಗೆ ಬರುವುದನ್ನೇ ಕಾಯುತ್ತಿದ್ದ. ಸೇನೆಯ ವಿವಿಧ ತುಕಡಿಗಳು ಅಲ್ಲಿ ಹಾದು ಹೋಗಿ ಚಾಣಕ್ಯನ ಪಲ್ಲಕ್ಕಿ ಅಲ್ಲಿ ಬರುವಷ್ಟರಲ್ಲಿ ಒಂದು ಗಂಟೆಗೂ ಮೀರಿ ವೇಳೆಯಾಗಿತ್ತು. ಆಯಾಸ ವಾದರೂ ಮುದುಕ ಬ್ರಾಹ್ಮಣ ನಿಂತೇ ಇದ್ದ. ವೇದ ಘೋಷವನ್ನು ಕೇಳುತ್ತ ಅವನ ಆನಂದ ಸಮುದ್ರದಲೆಯಂತೆ ಉಕ್ಕಿತು! ಕಾವಲು ಭಟರನ್ನೂ ಅತಿಕ್ರಮಿಸಿ, ಚಾಣಕ್ಯನ ಪಲ್ಲಕ್ಕಿಯ ಬಳಿ ಬಂದು ಫಲಸಮರ್ಪಿಸಿ "ಮಹಾ ನುಭಾವ! ವೈದಿಕ ಧರ್ಮವನ್ನುದ್ಧರಿಸಿದೆ !! ಈ ಬಗೆಯ ಘೋಷ ಕೇಳಿ ಎಷ್ಟು ವರ್ಷವಾಗಿತ್ತೋ!" ಎನ್ನುತ್ತಾ ಸಾಷ್ಟಾಂಗ ಪ್ರಣಾಮ ಮಾಡಿದ. ಆಚಾರ್ಯ ಪಲ್ಲಕ್ಕಿಯಿಂದಿಳಿದು ಪ್ರತ್ಯಭಿವಂದನ ಮಾಡಿ "ನೀವು ಹಿರಿಯರು. ಬ್ರಹ್ಮಣ್ಯದ ಸಾಕಾರ ಮೂರ್ತಿಗಳು. ನಿಮ್ಮಂಥವರ ತಪಃಫಲದಿಂದ ಚಂದ್ರಗುಪ್ತ ಪಟ್ಟಕ್ಕೆ ಬರುತ್ತಿದ್ದಾನೆ. ಆ ತಪಃಫಲಕ್ಕೆ ಚಾಣಕ್ಯ ಸಂಕೇತ ಮಾತ್ರ!" ಎನ್ನುತ್ತಾ ವಿನಯದಿಂದ ಮಾತಾಡಿಸಿ, ಪಲ್ಲಕ್ಕಿಯನ್ನೇರಿದ. ಜನ ಚಾಣಕ್ಯನನ್ನು ಇಷ್ಟು ವಿನಯದ ಸರಳ ವ್ಯಕ್ತಿ ಎಂದೆಣಿಸಿರಲಿಲ್ಲ! ಬಡಕಲು ಶರೀರದ, ಕೋಳಕಾಲಿನ, ಕಪ್ಪುಬಣ್ಣದ ಬ್ರಾಹ್ಮಣ-ರಾಜನಿಗೆ ಪ್ರಧಾನ ಮಂತ್ರಿ ಬೇರೆ- ಅವನಿಗೊಂದು ಜರತಾರಿ ಶಾಲುವೂ ಇಲ್ಲವೆ? -ಎಂದು ಆಶ್ಚರ್ಯ ಪಟ್ಟರು. ಅವನಃ ಕುಟಿಲನೆಂದೂ ಕೊಲೆಗಡುಕನೆಂದೂ, ಮಾಟ ಮಂತ್ರದವನೆಂದೂ, ಸಿಡುಕಿನವನೆಂದೂ,

ಕೇಳಿ ಬೆದರಿದ್ದ ಊರಿನವರಿಗೆ ಚಾಣಕ್ಯನ ಈ ಸರಳತೆ, ವಿನಯ, ವಿದ್ಯಾ ಸಂಪನ್ನರ ಬಗ್ಗೆ ಅಭಿಮಾನಗಳು ಅಚ್ಚರಿ ತಂದವು. ಪಲ್ಲಕ್ಕಿಯಲ್ಲಿ ಕುಳಿತ ಚಾಣಕ್ಯ, ಪಕ್ಕದಲ್ಲಿ ನಡೆದು ಬರುತ್ತಿದ್ದ ಶಿಷ್ಯನೊಬ್ಬನಿಗೆ ಕೇಳಿದ; "ವತ್ಸ! ಈ ಊರಿನ ನಂದಪ್ರಿಯರೆಲ್ಲ ಎತ್ತ ಹೋದರೊ? ಒಬ್ಬರೂ ಕಾಣುತ್ತಿಲ್ಲ!'' ಶಿಷ್ಯನೆಂದ; ''ಗುರುವರ್ಯ! ಕರ್ಪೂರವನ್ನು ಸುಟ್ಟರೆ, ಉರಿದ ಬೀಪದಬತ್ತಿಯಂತೆ, ಅಲ್ಲೇನೂ ಉಳಿಯಲಾರದು! ಉಳಿದರೆ ಅದು ನಿಜ ಕರ್ಪೂರವಲ್ಲ!!" ಚಾಣಕ್ಯ ಅವನನ್ನು "ನೀನೊಂದು ದಿನ ಮಂತ್ರಿಯಾಗಲು ಅರ್ಹನಾಗಿರುವೆ" ಎಂದು ಆಶೀರ್ವದಿಸಿದ.... ಉತ್ಸವ ಅರಮನೆ ಸೇರಿತು.

  

ಅದ್ದೂರಿಯ ಪಟ್ಟಾಭಿಷೇಕ ನಡೆಯಿತು. ಇದೇನು ಶ್ರೀ ರಾಮಚಂದ್ರನ ಪಟ್ಟಾಭಿಷೇಕವೊ ! ಧರ್ಮರಾಜನ ಪಟ್ಟಾಭಿಷೇಕವೋ ! ಎನ್ನುತ್ತಾ ಜನಸಂದಣಿ ಆಶ್ಚರ್ಯಪಟ್ಟು ಆನಂದ ಹೊಂದಿತು. ನಂದರ ಅಪ್ರಿಯತೆ, ಚಂದ್ರಗುಪ್ತನ ಜನಪ್ರಿಯತೆಗೆ ಇದು ಸಾಕ್ಷಿಯಾಗಿ, ಅವನ ರಕ್ಷಣೆಯ ಅಸ್ತಿವಾರ ಭದ್ರವಾಗಿದೆಯೆಂದು ತಿಳಿದು ಚಾಣಕ್ಯ ನೆಮ್ಮದಿಯ ನಿಟ್ಟುಸಿರಿಟ್ಟ. ಉತ್ಸವವನ್ನು ಇನ್ನಷ್ಟು ನಿಧಾನವಾಗಿ ವೈಭವದಿಂದ ಆಚರಿಸಲು ವೇಳೆಯಿರಲಿಲ್ಲ. ಜನರಿಗೆ ಶಾಂತಿಯ, ಅಭಯದ, ಸಂದೇಶ ಮುಟ್ಟಿಸುವ ಜೆಟ್ಟಿನ ಕೆಲಸ ಕಾದಿತ್ತು. ಚಾಣಕ್ಯ ಉತ್ಸವ ಪ್ರಿಯನಿರಲಿಲ್ಲ! ಸಂನ್ಯಾಸಿಯಂತೆ ಸ್ವಭಾವದ ಅವನಿಗೆ ಎಲ್ಲವೂ ಶಾಂತವಾಗಿ, ಅರ್ಥಪೂರ್ಣವಾಗಿ ನಡೆದರೆ ಸಾಕಿತ್ತು.

ಉತ್ಸವದ ಅಧ್ಯಕ್ಷನಾದ ಶೃಂಗಾರವರ್ಮ ಬಂದು ಚಾಣಕ್ಯನಿಗೆ ಕಾಣಿಸಿಕೊಂಡು "ಬುದ್ಧಿ! ಈ ರಾತ್ರಿ ಹೊಸದೊರೆಗಳ ಉತ್ಸವ ಎಷ್ಟು ಹೊತ್ತಿಗೆ?. ಊರಲ್ಲಿ ಸಾರಬೇಕಾಗುತ್ತದೆ. ಜನ ಬೀದಿಯಲ್ಲಿ ಶೃಂಗರಿಸಿ, ಮನೆಮನೆಗಳ ಮೇಲೆ ಧ್ವಜ ಪತಾಕೆಗಳನ್ನು ಹಾರಿಸಿ, ದೊರೆಯನ್ನು ಬೆಳ್ಳಂಬೆಳಗೂ ಅಭಿನಂದಿಸುವ ಪರಿಪಾಠ ಊರಲ್ಲುಂಟು. ಮಹಾದ್ವಾರವನ್ನು

ಉತ್ಸವ ಎಷ್ಟು ಹೊತ್ತಿಗೆ ಬಿಡುವುದೆಂದು ಅಪ್ಪಣೆಯಾದರೆ, ಈಗಲೇ ಡಂಗುರ ಸಾರಿಸಿ, ಜನರಿಗೆ, ಸಿದ್ಧನಾಗಿರಲು ಹೇಳಬಹುದು" ಎಂದು ಬಿನ್ನೈಸಿದ.

ಚಾಣಕ್ಯನಿಗೆ ಅನುಮಾನ ಬಂದಿತು. "ಆಗಲೇ ಒಂದು ಉತ್ಸವ ಆಯಿತಲ್ಲ? ಮತ್ತೊಂದೇಕೆ ?" ಎಂದು ಪ್ರಶ್ನಿಸಿದ.

ಅವನು ಪದ್ಧತಿಯನ್ನು ವಿವರಿಸಿ ಜನರಿಗೆ ನಿರಾಸೆ ಮಾಡಬಾರದೆಂದೂ, ಹೊಸ ದೊರೆ ಜನಪ್ರಿಯತೆಯನ್ನು ಮೊದಲಲ್ಲೇ ಗಳಿಸುವ ಉಪಾಯವಿದೆಂದೂ ಹೇಳಿದ.

ಚಾಣಕ್ಯ "ಎಷ್ಟು ಬುದ್ಧಿವಂತರಾದರೂ, ಕಲಿಯುವುದು ಇನ್ನೂ ಇರುತ್ತದೆ! ನೋಡಿದೆಯ? ನೀನು ಹೇಳುವುದೂ ಸರಿ. ಈಗ ಸುಮಾರು ಏಳು ಗಂಟೆ ಇರಬಹುದು. ಒಂಭತ್ತುವರೆ ಗಂಟೆಗೆ ಸಲ್ಲುವ ಶುಭಲಗ್ನದಲ್ಲಿ ಉತ್ಸವಾರಂಭ ಎಂದು ಡಂಗುರ ಸಾರಿಸು" ಎಂದು ಹೇಳಿ, ಅವನಿಗೆ ಬಹುಮಾನ ಕೊಡಿಸಿ ಕಳುಹಿದ. "ಮಹಾದ್ವಾರದ" ಪ್ರಸ್ತಾಪವನ್ನು ಅವನು ಮಾಡಿದ್ದರಿಂದ ಅಲ್ಲೇನೋ ಇದೆ! ಎಂದು ಅನುಮಾನ ಪಟ್ಟು ರಾಜಶಿಲ್ಪಿ ದಾರುವರ್ಮನನ್ನು ಕರಸಿ ಏರ್ಪಾಡು ಹೇಗಿರುವುದೆಂದು ಕೇಳಿದ. ದಾರುವರ್ಮ ಕಳಕಳಿಟ್ಟ ತನ್ನ ಕೌಶಲವನ್ನೆಲ್ಲ ತೋರಿ ಇಂದ್ರನ ಅಮರಾವತಿಯ ಹೆಬ್ಬಾಗಿಲಿನ ಸೌಂದರ್ಯವನ್ನು ಮೀರುವಂತೆ ಅದನ್ನು ಸಿಂಗರಿಸುವುದಾಗಿಯೂ, ತನ್ನ ಜಾಣ್ಮೆಯನ್ನು ಆಚಾರ್ಯರು ತೋರಲು ಅವಕಾಶ ಕೊಟ್ಟರೆ ಸಾಕೆಂದೂ ಕೇಳಿಕೊಂಡ ! ಈ ಅತಿವಿನಯದಿಂದಲೂ, ಅವನ ಅನಿರೀಕ್ಷಿತ ಪ್ರಮಾಣದ ಉತ್ಸಾಹದಿಂದಲೂ ಚಾಣಕ್ಯ ಚಕಿತನಾಗಿ "ನಿನ್ನ ಶಕ್ತಿ ಮೀರಿ ಸಿಂಗರಿಸು" ಎಂದು ಹೇಳಿ, ಅವನಿಗೆ ರತ್ನ ಕಂಕಣವೊಂದನ್ನು ಬಹುಮಾನ ಕೊಡಿಸಿ ಕಳುಹಿದ.

ಎಂಟು ಗಂಟೆಯ ವೇಳೆಗೆ ಮಹಾದ್ವಾರ ಸರ್ವಾಲಂಕೃತವಾಗಿ, ಪತಿಯ ಪ್ರಥಮಾಗಮನನನ್ನು ಅಲಂಕೃತಶಯ್ಯೆಯಲ್ಲಿ ನಿರೀಕ್ಷಿಸುವ ನವವಧು

ವಿನಂತೆ ಸಿದ್ಧವಾಗಿ ನಿಂತಿತ್ತು! ಮಲ್ಲಿಗೆಯ ಪರಿಮಳ ಮೂಗು ಬಿರಿಸು ವಂತಿತ್ತು. ಬಣ್ಣ ಬಣ್ಣದ ಹೂಗಳಿಂದ ಅಲಂಕೃತವಾಗಿ, ದಿವ್ಯ ಗೋಪುರಾ ಕೃತಿಯಲ್ಲಿದ್ದ ಆ ಮಹಾದ್ವಾರದ ವಿಮಾನ, ಯಾರ ಮನಸ್ಸನ್ನೂ ಅಪಹರಿ ಸುವಂತಿತ್ತು. ರತ್ನಹಾರಗಳಿಂದಲೂ, ನವಮಣಿಗಳಿಂದಲೂ, ಬಂಗಾರದ ಎಳೆಗಳಿಂದಲೂ ಆ ದ್ವಾರಶಿಖರ, ಪಂಜು ದೀಪಗಳ ಬೆಳಗಿನಲ್ಲಿ ಥಳಗ ಥಳಗಿ ಸುತ್ತಿತ್ತು.

ಇದ್ದಕ್ಕಿದ್ದಂತೆಯೇ "ಉತ್ಸವ ಹತ್ತುವರೆ ಗಂಟೆಗೆ ಹೊರಡುವುದು" ಎಂಬ ಘೋಷಣೆಯನ್ನು ಊರಲ್ಲಿ ಸಾರಲಾಯಿತು! ಉತ್ಸವ ಪ್ರಿಯರಿಗೆ ಬೇಸರವಾದರೂ, ಬೀದಿಗಳಲ್ಲಿ ಸಂದಣಿಸಿಯೇ ನಿಂತರು. ಮತ್ತೆ "ಹನ್ನೊಂದು ಗಂಟೆಗೆ," "ಹನ್ನೆರಡು ಗಂಟೆಗೆ" ಎನ್ನುತ್ತಾ ವೇಳೆ ಮೂರು ನಾಲ್ಕು ಸಲ ಬದಲಾಯ್ತು. ಗೋಪುರದ ಮೇಲೆ ರಹಸ್ಯದಲ್ಲಿ ಅಡಗಿ ಕುಳಿತಿದ್ದ ದಾರು ವರ್ಮನಿಗೆ ತೂಕಡಿಕೆ ಬರುತ್ತಿತ್ತು! ಹಸಿವೊಂದು ಕಡೆ! ಮೂತ್ರ ಬಾಧೆ ಯಿಂದ ಹೊಟ್ಟೆಯುಬ್ಬಿ, ಕಿರಿಕಿರಿಯಾಗಿತ್ತು. ''ಈ ದುಷ್ಟ ಬ್ರಾಹ್ಮಣ ಉತ್ಸವವನ್ನೇಕೆ ವಿನಾ ಕಾರಣ ಹೀಗೆ ಮುಂದೂಡಿದ?'' ಎಂದು ಶಪಿ ಸುತ್ತಾ, ದ್ವಾರದ ಬಾಳೆಕಂಬದ ಎಲೆಯ ಮರೆಯಲ್ಲಿ, ಬಾಳೆ ತೋಟದ ಮಂಗನಂತೆ ಅಡಗಿ ಕುಳಿತು ತೂಕಡಿಸುತ್ತಿದ್ದ!

ಅಲ್ಲೇನೋ ಕಪಟವಿದೆಯೆಂದು ಅರಿತ ಚಾಣಕ್ಯ, ಚಂದ್ರಗುಪ್ತನ, ವಿರೋಚಕನ ಆನೆಗಳನ್ನು ಅದಲು ಬದಲು ವ್ಯವಸ್ಥೆ ಮಾಡಿದ್ದ! ಹೆಚ್ಚು ಚೆನ್ನಾಗಿ ಅಲಂಕೃತವಾದ ಆನೆ ವಿರೋಚಕನಿಗೆ ದೊರೆಯಿತು!! ''ಕುಮಾರ! ಈ ವೀರನ ಉಪಕಾರಕ್ಕಾಗಿ ಇಂದು ನಿನ್ನ ರಾಜಾಭರಣಗಳನ್ನು ಅವನಿಗೇ ತೊಡಿಸಿ ನೋಡಿ ಆನಂದ ಪಡೋಣ! ಸ್ನೇಹ ಬೆಳೆಯಲೆಂದು ನೀನು ಅವನ ಪರ್ವತ ಪ್ರಾಂತದ ಉಡುಗೆಗಳನ್ನೂ ತೊಡುಗೆಗಳನ್ನೂ ಧರಿಸು" ಎಂದು ಆಚಾರ್ಯ ಚಂದ್ರಗುಪ್ತನಿಗೆ ಆಣತಿಯಿತ್ತ. ''ಇಲ್ಲೇನೋ ಮರ್ಮವಿದೆ!'' ಎಂದರಿತ ಕುಮಾರ ಹಾಗೇ ಮಾಡಿದ. ವಿರೋಚಕ, ಕುಮಾರರಿಬ್ಬರ ಮೈ ಕಟ್ಟೂ, ಎತ್ತರವೂ, ಬಣ್ಣವೂ ಹೆಚ್ಚು ಕಮ್ಮಿ ಹೋಲುತ್ತಿದ್ದವು. ಮೊದಲು

ವಿರೋಚಕನ ಆನೆಯೇ ಹೊರಟು, ಚಂದ್ರಗುಪ್ತನ ಆನೆ ಮೆಲ್ಲನೆ ಹಿಂಬಾಲಿಸಿತು. ಅನಿರೀಕ್ಷಿತವಾದ ಈ ಪ್ರೀತಿಯು, ಅದಲು ಬದಲಿನ ಉಡುಗೆ ತೊಡುಗೆಗಳ ಹಿಗ್ಗಿನಿಂದ ವಿರೋಚಕ ಮೈಮರೆತಿದ್ದ. ಪಾನೀಯದ ಪ್ರಭಾವವೂ ಇತ್ತು. ಅರಮನೆಯ ದರ್ಬಾರು ಅಂಕಣದ ಮುಂದಿನ ವಿಶಾಲ ಭೂಮಿಯಲ್ಲಿ ಕುಮಾರನೂ, ವಿರೋಚಕನೂ ಆನೆ ಹತ್ತಿದರು. ಮಹಾದ್ವಾರದತ್ತ ಉತ್ಸವ ಸಮೀಪಿಸುತ್ತಾ, ಮಂದ ಬೆಳಕಿನಲ್ಲಿ ಬಹು ಜನರಿಗೆ ಯಾರು ಯಾವ ಆನೆಯ ಮೇಲೆ ಕುಳಿತಿರುವರೆಂಬುದೇ ತಿಳಿಯಲಿಲ್ಲ! ದಾರು ವರ್ಮ ಭ್ರಮಿಸಿದ! ಮೊದಲ ಆನೆಯು ಶೃಂಗಾರ, ವೈಭವ, ಮೇಲಿದ್ದವನ ಉಡುಗೆ ತೊಡುಗೆಯಿಂದ ವಿರೋಚಕನನ್ನೇ ಕುಮಾರನೆಂದು ಬಗೆದು, ಆನೆ ಹತ್ತಿರ ಬರುತ್ತಾ ಅವಸರದಲ್ಲಿ ಸರಿಯಾದ ಸಂದರ್ಭ ಕಾಯದೆಯೇ ಗೋಪುರದ ಕೀಲನ್ನು ಕೊಂಚ ಮುಂಚೆಯೇ ಸಡಿಲಿಸಿ, ಕಳಚಿಬಿಟ್ಟ. ಯಮ ಭಾರವಾದ ಅದು ಆನೆಯ ತಲೆಯ ಮೇಲೆ ಬಿದ್ದು ಅದರ ಮಾವುತನನ್ನು ಕೂಡಲೇ ಕೊಂದಿತು! ಕೆಲಸಕೆಟ್ಟಿತೆಂದು ಭಾವಿಸಿ, ದಾರುವರ್ಮ ಮೇಲಿಂದ ಜಿಗಿದು ಕೈಯ್ಯಲ್ಲಿದ್ದ ಕಬ್ಬಿಣದ ಕೊಡತಿಯಿಂದ ತಾನೇ ವಿರೋಚಕನ ತಲೆಗೆ ಬಲವಾದ ಪೆಟ್ಟು ಹಾಕಿ ಅವನನ್ನು ಕೊಂದ!! ಕುಡಿತದ ಅಮಲಲ್ಲಿದ್ದ ಅವನಿಗೆ ತಾನು ಸತ್ತದ್ದೂ ತಿಳಿಯಲಿಲ್ಲ! ಅರಮನೆಯ ಅಂಗರಕ್ಷಕರು ಈಟಿಗಳಿಂದ ದಾರುವರ್ಮನನ್ನು ತಿವಿದು ಕೊಂದರು. ಕೆಲವೇ ನಿಮಿಷಗಳಲ್ಲಿ ನಡೆದು ಹೋದ ಅನಾಹುತ, ಮೆರವಣಿಗೆಯ ಮುಂದೆ ಇದ್ದವರಿಗೆ ತಿಳಿಯಲೇ ಇಲ್ಲ. ಜನಜಂಗುಳಿ, ಹತ್ತಿರವಿದ್ದವರನ್ನು ಬಿಟ್ಟರೆ, ದೂರದವರು ಇತ್ತ ಗಮನಿಸಲೂ ಇಲ್ಲ. ಏನೋ ಆಕಸ್ಮಿಕವೆಂದು ಭಾವಿಸಿದರು. ಚಂದ್ರಗುಪ್ತನ ಆನೆ, ಬಳಸಿಕೊಂಡು ದ್ವಾರ ದಾಟಿ, ಉತ್ಸವ ನಿರಾಬಾಧವಾಗಿ ನಡೆಯಿತು.

  

ಬೆಳಗಾಗುವುದರೊಳಗೆ 'ಅಜಿತಪಾಲ' ಬಂದು ಚಾಣಕ್ಯನಿಗೆ ಕಾಣಿಸಿಕೊಂಡು "ಪದ್ಮಗಳನ್ನು ಇನ್ನಾರೂ ಕಿತ್ತುಕೊಂಡು ಹೋಗಲಾರರು !

ಬೇರು ಸಹಿತ ನಾನೇ ಕಿತ್ತು ಹಾಕಿದ್ದೇನೆ. ಕೊಳ ಪುಷ್ಪ ಹೀನವಾಗಿದೆ. ದುಂಬಿಗಳಿಗೂ ಅವಕಾಶವಿಲ್ಲ'' ಎಂದು ವರದಿಯನ್ನೊಪ್ಪಿಸಿ, ತಾನು ಕೊಂದ ಸರ್ವಾರ್ಥಸಿದ್ಧಿಯ ಕೈಯ್ಯಲ್ಲಿನ ಅರಸಮುದ್ರಿಕೆಯನ್ನೂ, ಕೊರಳಿನ ಚಂದ್ರಹಾರವನ್ನೂ ಕಾಲುಗಳ ಕಡಗವನ್ನೂ ಸಮರ್ಪಿಸಿದ! ಚಾಣಕ್ಯ ಅವನ ಸಾಹಸಕ್ಕೆ ಮೆಚ್ಚಿ ಬಹುಮಾನಗಳನ್ನಿತ್ತು, "ವತ್ಸ, ನನ್ನ ಆಜ್ಞೆಯಂತೆ, ಬೆಳಗಾದೊಡನೆಯೇ ಊರಲ್ಲಿ ಹೀಗೆ ಡಂಗುರ ಸಾರತಕ್ಕದ್ದೆಂದು ರಾಜಘೋಷಣಾ ವಿಭಾಗಾಧಿಕಾರಿಗೆ ತಿಳಿಸತಕ್ಕದೆಂದು ಚಂದ್ರಗುಪ್ತನ ಮೂಲಕ ದೊರೆಗಳಿಗೆ ತಿಳಿಸು – 'ಮಹಾರಾಜ ಮಹಾಪದ್ಮರನ್ನು, ಈಗ ವಾನಪ್ರಸ್ಥರಾಗಿದ್ದ ಸರ್ವಾರ್ಥಸಿದ್ಧಿ ದೊರೆಯನ್ನು, ಒಡನೆಯೇ ಆಸೆಯಿಂದ ಯಾರೋ ಕಳ್ಳರು ಕೊಂದು ಹಾಕಿರುವರೆಂದು ತಿಳಿದು ಚಾಣಕ್ಯರು ಊರಲ್ಲಿನ ಕಳ್ಳರನ್ನು ಶೋಧಿಸಲು ವಿಶೇಷಾಜ್ಞೆ ಮಾಡಿರುವರು.' ಎಂದು.''

ಹೀಗೆ ಸಾರಿದ ಡಂಗುರವನ್ನು ಕೇಳಿದ ರಾಕ್ಷಸನ ಎದೆ ಒಡೆಯಿತು.

ಚಾಣಕ್ಯ ಸಕಲ ರಾಜ ಮರ್ಯಾದೆಗಳೊಡನೆ ಹಳೆಯ ದೊರೆಯ ಅಂತ್ಯಕ್ರಿಯೆಗಳನ್ನು ಚಂದ್ರಗುಪ್ತನ ಕೈಲಿ ಮಾಡಿಸಿದ !

"ಆಚಾರ್ಯರೇ ! ಮೇಲೆ ಮೇಲೆ ಹೀಗೆ ನಿರಪರಾಧಿಗಳ ಕೊಲೆಯಿಂದ ನನ್ನ ಮನ ಬೇಸತ್ತಿದೆ ! ಯಾಕಾದರೂ ಈ ರಾಜ್ಯವನ್ನಾಳಬೇಕೋ ! ಎನ್ನಿಸುತ್ತಿದೆ. ಹಳೆಯ ಈ ದೊರೆ ನಮಗೇನಪರಾಧ ಮಾಡಿದ್ದ ?'' ಎಂದು ಕುಮಾರ ಚಾಣಕ್ಯನನ್ನು ಏಕಾಂತದಲ್ಲಿ ಕೇಳಿದ.

''ನಿನ್ನಂಥ ಮೂರ್ಖನಿಗೆ ಪ್ರಧಾನಿಯ ಪದವಿ ವಹಿಸುತ್ತಿರುವುದಕ್ಕಾಗಿ ನನಗೂ ಬೇಸರವಾಗುತ್ತಿದೆ.'' ಎಂದು ಹೇಳಿ ಚಾಣಕ್ಯ ಕುದ್ಧನಾದ. "ವೃಷಲ! ಅಂದು ನನ್ನ ಕಾಲಿಗೆ ಸಿಕ್ಕಿ ನನ್ನನ್ನು ಬೀಳಿಸಿದ ಹುಲ್ಲುಬಳ್ಳಿಯನ್ನು ಬೇರು ಸಮೇತ ಕಿತ್ತೆಸೆದು, ಅದು ಬೆಳೆದೆಡೆ ಹುಳಿಮಜ್ಜಿಗೆ ಹಾಕಿದ ನೆನಪಿದೆಯೇ, ನಿನಗೆ ? ನಂದರು ಆ ಬಳ್ಳಿಯ ಎಲೆಗಳು! ಮಹಾಪದ್ಮ ಅದರ ಬೇರು ! ಹಳೆಯ ದೊರೆಗೆ ದತ್ತ ಪುತ್ರನನ್ನು ತಂದು ರಾಕ್ಷಸ ನಿನ್ನ

ನಿರ್ಮೂಲನಕ್ಕಾಗಿ ಯತ್ನಿಸುತ್ತಿದ್ದಾನೆ! ತಿಳಿಯಿತೆ? ಚಾಣಕ್ಯನೆಂದೂ ನಿರಪರಾಧಿಗಳ ತಂಟೆಗೆ ಬರಲಾರ! ಸಾಪರಾಧರ ನೆರಳನ್ನೂ ಸಹಿಸಲಾರ!!" ಎಂದು ತಿಳಿಸಿ ಹೇಳಿದ.

ರಾತ್ರಿ ಚಂದ್ರಗುಪ್ತನ ಶಯ್ಯಾಗೃಹವಾವುದೆಂಬುದನ್ನು ಚಾಣಕ್ಯನೇ ಸ್ವಯಂ ಪರೀಕ್ಷಿಸಿದ! ಏನೋ ಅನುಮಾನ ಬಂದಿತು. ದೊರೆ ಮಲಗುವ ಮಂಚವನ್ನು ಸರಿಸಾಡಿ, ಕೋಠಡಿಯ ಮಧ್ಯಕ್ಕಿಡಿಸಿ, ತಾನೊಬ್ಬನೇ ನಾಲ್ಕೂ ಗೋಡೆಗಳನ್ನು ಪರೀಕ್ಷಿಸಿದ! ಒಂದು ಗೋಡೆಯ ಮಧ್ಯೆ ಒಂದು ಬಿರುಕಿದ್ದಿತು! ಅದರೊಳಗಿಂದ ಇರುವೆಗಳು ಸಾಲಾಗಿ ಏನನ್ನೋ ಹೊರ ತರುತ್ತಿದ್ದುವು! ಹತ್ತಿರ ಹೋಗಿ ನೋಡಿದಾಗ ಅವು ಅನ್ನದ ಅಗುಳುಗಳೆಂದ್ಯ ತಿಳಿಯಿತು! ಗೋಡೆಯನ್ನು ಕೈ ತಡವಿದಾಗ ಒಂದು ಮೊಳೆ ಕೈಗೆ ಹತ್ತಿತು! ಥಟ್ಟನೆ ಅರ್ಥಮಾಡಿಕೊಂಡ ಚಾಣಕ್ಯ ಚಂದ್ರಗುಪ್ತನ ನೇಪಾಳೀ ಅಂಗ ರಕ್ಷಕರನ್ನು ಕರೆಸಿ, ಅವರು ಸಶಸ್ತ್ರರಾಗಿ ಇಪ್ಪತ್ತು ಜನರು ಬರುವಂತೆ ಏರ್ಪಡಿಸಿದ! "ಇವರೆಲ್ಲ ಇಂದು ರಾತ್ರಿ ನಾನೂ ವಿದ್ಯುಲ್ಲೇಖೆಯೂ ಕೂಡಿ ಮಲಗುವುದನ್ನು ನೋಡಿ ನಿಮಗೆ ವರದಿ ಮಾಡುವವರೋ?" ಎಂದು ಚಂದ್ರ ಗುಪ್ತ ಜಗುಪ್ಸೆಯಿಂದ ಕೇಳಿದ. ಚಾಣಕ್ಯ ಉತ್ತರಿಸದೆ, "ನೋಡು" ಎನ್ನುವಂತೆ ಕಣ್ಸನ್ನೆ ಮಾಡಿ, ಆ ಮೊಳೆಯನ್ನು ಹಿಂದೆ ಮುಂದೆ ಸರಿಸುವಂತೆ ಅಂಗರಕ್ಷಕರಿಗೆ ಹೇಳಿದ. ಹಾಗೆ ಅವರು ಮಾಡಿದಾಗ ಅಲ್ಲಿ ಸುರಂಗ ಮಾರ್ಗ ವಿರುವುದನ್ನು ಕಂಡು ಚಂದ್ರಗುಪ್ತ ವಿಸ್ಮಿತನಾದ!! ತಪ್ಪಾಯಿತೆಂಬಂತೆ, ಕಣ್ಣುಗಳಲ್ಲೇ ವಂದಿಸಿ ತಲೆ ತಗ್ಗಿಸಿದ! ಅಂಗರಕ್ಷಕರಿಗೆ ಚಾಣಕ್ಯ, ಒಳ ನುಗ್ಗಿ, ಅಲ್ಲಿ ಬಚ್ಚಿಟ್ಟುಕೊಂಡವರನ್ನು ಚೂರು ಚೂರಾಗಿ ಕತ್ತರಿಸಿ ಹಾಕಿ, ಸುರಂಗದ ಆ ಕಡೆಯ ತುದಿಯನ್ನು, ಸುರಂಗ ಕುಸಿಯುವಂತೆ ಮಾಡಿ ಮುಚ್ಚಬೇಕೆಂದು ಆಜ್ಞಾಪಿಸಿದ! ತಾನು ಹೇಳುವವರೆಗೆ ವಿದ್ಯುಲ್ಲೇಖೆ ಯೊಡನೆ ಅವನು ಮಲಗಬಾರದೆಂದೂ, ಅವಳಾರೆಂಬುದೂ ಸಹ ಮಗಧದ ಪ್ರಜೆಗಳಿಗೆ ತಿಳಿಯಬಾರದೆಂದೂ ಆಜ್ಞಾಪಿಸಿದ. ದಿನಕ್ಕೊಂದು ಬೇರೆ ಕೋಠಡಿಯಲ್ಲಿ ಮಲಗಬೇಕೆಂದೂ, ಅಂದಂದಿನ ಶಯ್ಯಾಗೃಹವಾವುದೆಂಬು

ದನ್ನು ಅರ್ಧ ಗಂಟೆ ಮುಂಚೆ ತಾನೇ ಹೇಳುವುದಾಗಿಯೂ ಅಪ್ಪಣೆ ಮಾಡಿದ.

ದೊರೆಯ ದೈನಂದಿನ ಕಾರ್ಯಕ್ರಮದ ಕೊನೆಯ ಅಂಶ! ಮಲಗುವ ಮುನ್ನ ಚೇಟಿಯೊಬ್ಬಳು ಬೆಳ್ಳಿಯ ಬಟ್ಟಲಲ್ಲಿ ಕೇಸರೀ ಪಚ್ಚಕರ್ಪೂರಾದಿ ಪರಿಮಳ ದ್ರವ್ಯದಿಂದ ಕೂಡಿದ ದಿವ್ಯ ಕ್ಷೀರವನ್ನು ದೊರೆಯ ಪಾನಾರ್ಥ ವಾಗಿ ತಂದಿಟ್ಟು ಹೋಗುವುದರಲ್ಲಿದ್ದಳು. ಚಾಣಕ್ಯನಿನ್ನೂ ದೊರೆಯೊಡ ನೆಯೇ ಅಲ್ಲಿದ್ದ. ಚೇಟಿಯನ್ನು ಬೈದ! "ಈ ಅರಮನೆಯಲ್ಲಿ ದೊರೆಗೆ ಕುಡಿಯುವುದಕ್ಕೆ ಒಂದು ಬಂಗಾರದ ಬಟ್ಟಲಿಗೂ ಗತಿಯಿಲ್ಲವೆ? ನೀವೆಲ್ಲ ಮೆರೆಯುವುದಕ್ಕೆ ಬಂಗಾರ ಮಣಗಟ್ಟಳೆ ಇರುತ್ತದೆ, ಅಲ್ಲವೆ?" ಚೇಟಿಗೆ ಭಯವಾಯಿತು ! "ಹೀಗೆ ಕೊಡೆಂದು ಹೇಳಿದವರಾರು ?" ಎಂದು ಚಾಣಕ್ಯ ಗರ್ಜಿಸಿದ !

ಭಯದಿಂದ ಅವಳು ಬಾಯಿ ಬಿಟ್ಟಳು. "ಅರಮನೆಯ ವೈದ್ಯ ಶಶಾಂಕ ಪಂಡಿತರು ಇದರ ಮೇಲ್ವಿಚಾರಕರು" ಎಂದುಸುರಿ ಮೂರ್ಛಿತಳಾ ದಳು ! ಚಾಣಕ್ಯ ಅವಳಿಗೆ ಶೀತೋಪಚಾರ ಮಾಡಿಸಿ, "ಏನೆಂದೆ ! ವೈದ್ಯನೆ ? ಅವನಿಗೇನು ಸಂಬಂಧ ಇದು ? ರಾಜನಿಗೆ ರೋಗವಿದ್ದರಲ್ಲವೆ ವೈದ್ಯನ ಕೆಲಸ ?" ಎನ್ನುತ್ತಾ "ಇವನು ವಿಲಕ್ಷಣ ವೈದ್ಯನಯ್ಯಾ ! ನೋಡೋಣ, ಕರೆಸಿ" ಎಂದಪ್ಪಣೆ ಮಾಡಿದ.

ವೈದ್ಯ ಕರೆಯನ್ನು ಕೇಳಿಯೇ ಸಾಯುವುದರಲ್ಲಿದ್ದ. ರಾಜದೂತರು ಎಳೆತಂದರು.

ಚಾಣಕ್ಯ ; "ವೈದ್ಯರೇ ? ಈ ಹಾಲನ್ನು ದೊರೆಗೆ ಬೆಳ್ಳಿಯ ಬಟ್ಟ ಲಲ್ಲೇ ಹಾಕಿಕೊಡೆಂದು ಏಕೆ ಹೇಳಿದಿರಿ ? ಹಳೆಯ ದೊರೆಗಳ ಪದ್ಧತಿಯೋ? ದಿನಾ ರಾಜರ ಕ್ಷೀರಪಾನದ ಯೋಗಕ್ಷೇಮ ವೈದ್ಯರಿಗೆ ವಹಿಸಲ್ಪಟ್ಟು ಎಷ್ಟು ದಿನಗಳಾದವು ?"

ವೈದ್ಯ : "ಬೆಳ್ಳಿಯ ಪಾತ್ರೆಯಾದರೇನು, ಬಂಗಾರದ್ದಾದರೇನು? ಕುಡಿಯುವ ವಸ್ತು ಅದೇ ತಾನೇ ?"

ಚಾಣಕ್ಯ : (ಕೋಪದಿಂದ) "ಎಲೋ ಮೂರ್ಖ! ಅದನ್ನು ಚಕ್ರವರ್ತಿ ಹೇಳಬೇಕೊ ? ನೀನೊ? ವಸ್ತು ಅದೇಯೋ, ಬೇರೆಯೋ ನೋಡೋಣವೆ ?" ಎನ್ನುತ್ತಾ ಬಂಗಾರದ ಬಟ್ಟಲನ್ನು ತರಿಸಿ, ಅದರಲ್ಲಿ ಆ ಹಾಲನ್ನು ಹಾಕಿಸಿದಾಗ, ಬಟ್ಟಲೊಳಗಣ ಬಂಗಾರದ ಬಣ್ಣ ಕಪ್ಪಾಯಿತು ! ವೈದ್ಯನ ಮುಖವೂ ಸಹ!! ಚಾಣಕ್ಯ ಕಿಡಿಗಾರುತ್ತಾ, ಭಯಂಕರ ಧ್ವನಿಯಿಂದ "ನೀನೇ ಈ ವಿಷವನ್ನು ಕುಡಿವೆಯೋ, ಸಮ. ಇಲ್ಲವಾದರೆ ರಾಜದ್ರೋಹಿಯೆಂದು ನಿನ್ನನ್ನು ಕತ್ತೆಯ ಮೇಲೆ ಕೂಡಿಸಿ ಮೆರವಣಿಗೆ ಮಾಡಿ, ಆಮೇಲೆ ಆನೆಯ ಕಾಲಿಗೆ ಕಟ್ಟಿಸಿ, ತುಳಿಸಿ ಕೊಲ್ಲಬೇಕಾಗುತ್ತದೆ ! ಹೇಗೆ ಸಾಯುವೆ ? ನೀನೇ ಹೇಳು ?" ಎಂದ.

ವೈದ್ಯ ಮರುಮಾತಾಡದೆ ಹಾಲನ್ನು ಕುಡಿದು ವಿಲವಿಲನೆ ಒದ್ದಾಡಿ ಭಯಂಕರ ಮುಖದೊಡನೆ ಸತ್ತು ಹೋದ. ಆ ಹೆಣಕ್ಕೆ ಗುಟ್ಟಾಗಿ ಸಂಸ್ಕಾರ ನಡೆಯಿತು.

"ನೋಡಿದೆಯಾ, ಅರಸ? ಹೆಜ್ಜೆ ಹೆಜ್ಜೆಗೆ ನಿನಗೆ ಆಪತ್ತು! ಕೂತರೆ, ಎದ್ದರೆ, ಉಂಡರೆ, ಮಲಗಿದ್ದರೆ, ಆಸನ ಏರಿದರೆ, ಕುದುರೆ ಹತ್ತಿದರೆ, ಹೊರಗೆ ಹೊರಟರೆ ಎಲ್ಲೆಲ್ಲೂ ಶತ್ರುಗಳೇ ! ಆದುದರಿಂದಲೇ ಎಲ್ಲವನ್ನೂ ಪರೀಕ್ಷಿಸುತ್ತಿರುವೆ. ನಿನಗೆ ಪೂರ್ಣ ಸ್ವಾತಂತ್ರ್ಯ ಹೇಗೆ ದೊರಕಬೇಕು ? ರಾಜನ ಜೀವನವನ್ನವಲಂಬಿಸಿ ರಾಷ್ಟ್ರ ಬದುಕಿರುತ್ತದೆ. ರಾಷ್ಟ್ರದ ಅಷ್ಟು ಜನರ ರಕ್ಷಣೆಯ ಭಾರ ಹೊತ್ತ ಅರಸನಿಗೆ, ಅಷ್ಟು ಜನರ ರಕ್ಷೆಯೂ ಬೇಕಷ್ಟೆ! ಇನ್ನು ಮೇಲೆ ನಾನು ಸಾಕೆನ್ನುವ ತನಕ ನನ್ನ ಶಿಷ್ಯರೂ ನಿನ್ನ ಶಯ್ಯಾಗೃಹದಲ್ಲಿರುವರು" ಎನ್ನುತ್ತಾ ದೊರೆಗೆ ಆಶೀರ್ವಾದ ಮಾಡಿ ಹೊರ ಬರುವುದರಲ್ಲಿದ್ದಾಗ, ಚಂದ್ರಗುಪ್ತ ಆಗ ತಾನೇ ಕಳಚಿಟ್ಟ ಮುಂಡಾಸಿನಿಂದ (ಪೇಟದಿಂದ) ಕರಿಯ ಎಳೆಯ ನಾಗರ ಹಾವೊಂದು ಹೊರ ಬರುತ್ತಿದ್ದು

ದನ್ನು ಕಂಡ!! ಸುಂದರವಾಗಿ ಮಡಿಕೆ ಮಡಿಕೆಯಾಗಿ ಸುತ್ತಿ, ಬಂಗಾರದ ರೇಕುಗಳಿಂದಲೂ ಮುತ್ತಿನ ಹಾರಗಳಿಂದಲೂ, ತುರಾಯಿಯಿಂದಲೂ ಅಲಂ ಕೃತವಾದ ಆ ರಾಜಾರ್ಹ ಕಿರೀಟದಲ್ಲಿ ಹಾವು ಹೇಗೆ ಸೇರಿತೆಂಬುದು ಚಾಣಕ್ಯ ನಿಗೆ ತಟ್ಟನೆ ಹೊಳೆಯಿತು! ಸೇವಕರು ಅದನ್ನು ಕೊಂದು ಹಾಕಿದ್ದರು. "ಹಾವು ಹೊಡೆದು ಪ್ರಯೋಜನವಿಲ್ಲ; ಅದರ ಕೆಲಸ ಅದು ಮಾಡುತ್ತದೆ. ಅದನ್ನು ಅಲ್ಲಿ ಸೇರಿಸಿಟ್ಟವನನ್ನು ಹೊಡೆದರೆ ಬಾಯಿ ಬಿಡುತ್ತಾನೆ. ಅರಮನೆಯ ಮಡಿ ವಾಳ ರಾಜಸೇನನನ್ನು ಕರೆಸಿ'' ಎನ್ನುತ್ತಾ ಅಪ್ಪಣೆ ಮಾಡಿ, ಶಿಷ್ಯರಿಗೆ ಚಂದ್ರ ಗುಪ್ತನ ಯೋಗಕ್ಷೇಮದ ಬಗೆಗೆ ಆ ರಾತ್ರಿಗೆ ಅವಶ್ಯವಾದ ಎಚ್ಚರಿಕೆ ಯನ್ನಿತ್ತು, ಚಾಣಕ್ಯ ತನ್ನ ವಿಶ್ರಾಂತಿಸ್ಥಾನಕ್ಕೆ ಬರುವ ವೇಳೆಗೆ ರಾತ್ರಿಯ ಅರ್ಧಭಾಗ ಮುಗಿದಿತ್ತು!

ಇತ್ತ ಚಂದ್ರಗುಪ್ತನಿಗೂ ನಿದ್ರೆ ಹತ್ತಲಿಲ್ಲ. ಆಚಾರ್ಯಗುಣಾನು ನುಭವದಿಂದ ಒಂದೆರಡು ಗಂಟೆ ಹೇಗೋ ನಿದ್ರೆ ಹತ್ತುವುದರಲ್ಲಿ ಬೆಳ ಗಾಯಿತು.

ಪ್ರಾತರಾಹ್ನಿಕಗಳನ್ನು ಮುಗಿಸಿ ದೊರೆ ಓಲಗದಲ್ಲಿ ಸಿಂಹಾಸನಾರೂಢ ನಾಗಿ ಕುಳಿತ. ಅವನನ್ನಾಶೀರ್ವದಿಸಿ ಆಚಾರ್ಯ ಪ್ರಧಾನಿಯ ಆಸನದಲ್ಲಿ ವಿಚಾರಣೆಗೆ ಸಂನ್ನದ್ಧನಾಗಿ ಕುಳಿತ. ಸೇವಕರು ಅಗಸ ರಾಜಸೇನನನ್ನು ಬಂಧಿಸಿ ಎಳೆತಂದು ನಿಲ್ಲಿಸಿದರು!

ಙಙ

ಹದಿನೆಂಟನೆಯ ಅಧ್ಯಾಯ

# ಪರ್ವತರಾಜ್ಯದತ್ತ ರಾಕ್ಷಸ

ನಿದ್ರೆಯಲ್ಲಿದ್ದ ಮಡಿವಾಳನನ್ನು ರಾಜದೂತರ ಎಬ್ಬಿಸಿ, ಬಂಧಿಸಿ, ಬೆಳಗಾಗುವವರೆಗೆ ಕಾದಿದ್ದು, ಹೇಗಿದ್ದನೋ ಹಾಗೇ ರಾಜಸಭೆಗೆ ಕರೆತಂದಿದ್ದರು. ಆವನುಟ್ಟ ಬಟ್ಟೆಬರೆಗಳನ್ನು ಚಾಣಕ್ಯ ಸೂಕ್ಷ್ಮವಾಗಿ ಅವಲೋಕಿಸಿದ. ಅಗಸ ಗಡಗಡ ನಡುಗುತ್ತಿದ್ದ. ವಿಚಾರಣೆ ಆರಂಭವಾಯಿತ.

ಚಾಣಕ್ಯ : "ಎಲವೋ, ಎಷ್ಟು ದಿನದಿಂದ ಬಟ್ಟೆ ಮಡಿಮಾಡುವ ವೃತ್ತಿಯಲ್ಲಿರುವೆ ?"

ಅಗಸ : "ತಲೆತಲಾಂತರಗಳಿಂದಲೂ ಇದೇ ವೃತ್ತಿಯವರು ನನ್ನ ಪೂರ್ವಿಕರು.''

ಚಾಣಕ್ಯ : "ಅರಮನೆಯ ಕೆಲಸ ದೊರೆತು ಎಷ್ಟು ದಿನಗಳಾದವು?"

ಅಗಸ : "ಇದೂ ವಂಶಪಾರಂಪರ್ಯವೇ, ಬುದ್ಧಿ!"

ಚಾಣಕ್ಯ : "ಈಗ ನೀನು ಧರಿಸಿರುವ ಬಟ್ಟೆ ಯಾರದ್ದು?"

ಅಗಸ : "ನನ್ನವೇ ಬುದ್ಧಿ !"

ಚಾಣಕ್ಯ ರಾಜಸೇವಕನಿಗೆ ಅವನ ಬಟ್ಟೆಯನ್ನು ಎಲ್ಲ ಕಡೆ ಶೋಧಿಸಿ, ಉಟ್ಟ, ತೊಟ್ಟ, ತಲೆಯ ಮುಸುಕಿನ ಎಲ್ಲ ಬಟ್ಟೆಗಳಲ್ಲಿ ಎಲ್ಲಾದರೂ ಮುದ್ರಾರಾಯುಧದ ಗುರುತಿದೆಯೇ ? ಎಂದು ನೋಡಿ ಹೇಳಲು ಅಪ್ಪಣೆ ಮಾಡಿದನು. ಆ ಗುರುತು ಎಲ್ಲೂ ಇಲ್ಲದುದನ್ನು ನೋಡಿ, ಭಟರು ಚಾಣಕ್ಯನಿಗೆ ಅರುಹಿದರು. ಅಲ್ಲಿ ರಾಜಚಿಹ್ನೆ ಇದ್ದುದನ್ನೂ ಸಹ !

ಚಾಣಕ್ಯ : "ತಲೆ ತಲಾಂತರದಿಂದ ಬಟ್ಟೆ ಮಡಿ ಮಾಡುವವನಿಗೆ, ತನ್ನ ಬಟ್ಟೆಯ ಮತ್ತು ಇತರರ ಬಟ್ಟೆಯ ಗುರುತು ತಿಳಿಯಲು ಏನೇನು ಚಿಹ್ನೆ ಹಾಕಬೇಕೋ ಅದು ತಿಳಿಯದುದು ಹೇಗೆ ?"

ಅಗಸ : "ಮರೆತು ಹೋಯಿತು ಸ್ವಾಮಿ, ಕ್ಷಮಿಸಬೇಕು."

ಚಾಣಕ್ಯ : "ಚಂದ್ರಗುಪ್ತ ರಾಜ್ಯದಲ್ಲಿ ಯಾವನೂ ತನ್ನ ವೃತ್ತಿಯ ಲಕ್ಷಣ, ರೀತಿ, ನೀತಿಗಳನ್ನು ಮರೆಯಬಾರದು ! ಸುಳ್ಳು ಹೇಳಿದವನಿಗೆ ನಾಲಗೆ ಕತ್ತರಿಸಲಾಗುವುದು ! ಇದು ನಂದರಾಜ್ಯವಲ್ಲ !! ತಿಳಿಯಿತೆ ?"

ಅಗಸ ; "ತಿಳಿಯಿತು, ಬುದ್ಧಿ !"

ಚಾಣಕ್ಯ : "ಏನು ತಿಳಿಯಿತು ? ರಾಜರು ಉಡುವ ಪಂಚೆ, ಹೊದೆಯುವ ಧೋತರ, ಇವು ನಿನ್ನ ಬಳಿ ಬಂದವು ಹೇಗೆ ?"

ಅಗಸ : "(ಯೋಚಿಸಿ), ಇವು ದಾನವಾಗಿ ಬಂದದ್ದು, ಬುದ್ಧಿ!"

ಚಾಣಕ್ಯ ; "ಎಲವೋ ! ನಂದರಾಜ್ಯದಲ್ಲಿ ಅಗಸರಿಗೂ ದಾನ ಕೊಡುತ್ತಿದ್ದವರುಂಟೋ ? ನೆನ್ನೆ ದೊರೆ ಧರಿಸಿದ್ದ ಮುಂಡಾಸವನ್ನು ಮಡಿ ಮಾಡಿ, ಸುತ್ತಿ ಅಲಂಕರಿಸಿ ತರಲು ನಿನಗೆಷ್ಟು ಹಣ ಕೊಡಲಾಗಿತ್ತೊ? ಕೊಟ್ಟವರಾರು ?''

ಅಗಸ ; "( ಮೈ ಬೆವರಿ, ನಾಲಗೆಯೊಣಗಿ, ತತ್ತರಿಸುತ್ತಾ ) ಮಾಮೂಲು....ಕೊಟ್ಟರು ಬುದ್ಧಿ !''

ಚಾಣಕ್ಯ ; ''ಯಾರೆಂದು ಹೇಳಲಿಲ್ಲವಲ್ಲ ! ಅದರಲ್ಲಿ ಎಳೆನಾಗರ ಹಾವನ್ನು ಸೇರಿಸಿ ಕಟ್ಟಿಕೊಡಲು ಹೇಳಿದ್ದವರಾರು ? ಸುಳ್ಳು ಬೊಗಳಿದರೆ ಶಿರಚ್ಛೇದ ಮಾಡಿಸುತ್ತೇನೆ ! ಬಟ್ಟೆಗಳನ್ನು ನಯವಾದ ಕಲ್ಲ ಮೇಲೆಯೋ, ಮರದ ಹಲಗೆಯ ಮೇಲೆಯೋ ಒಗೆಯದೆ ಕಾಡು ಕಲ್ಲಿನ ಮೇಲೆ ಒಗೆಯು ತ್ತಿರುವೆಯೆಂದು ಮೊದಲೇ ದೂರು ಬಂದಿದೆ ! ನಿಜ ಹೇಳು ! ಅಮಾತ್ಯ ರಾಕ್ಷಸನೆಲ್ಲಿರುವನು ?''

ಅಗಸ : (ಬಾಯಿತಪ್ಪಿ) ''ನೆನ್ನೆ ತಾನೇ ಊರು ಬಿಟ್ಟು ಹೊರ ಟರು !" (ಎಂದು ಹೇಳಿ ನಾಲಗೆ ಕಚ್ಚಿಕೊಂಡ!).

ಚಾಣಕ್ಯ ; ''ಅಂದ ಮೇಲೆ ನೀನು ಅವನ ಪ್ರಚೋದನೆಯಿಂದ ಈ ಈ ದುಷ್ಕೃತ್ಯ ಮಾಡಿ, ಅವನಿಂದ ಪಡೆದ ರಾಜಾರ್ಹವಾದ ಉಡುಪನ್ನು ಧರಿಸಿರುವೆ. ಹೌದೋ, ಅಲ್ಲವೊ?"

ಅಗಸ : ''ನಾನಾಗಿ ಕೇಳಲಿಲ್ಲ ಸ್ವಾಮಿ ! ಅವರೇ ಕೊಟ್ಟರು!

ಚಾಣಕ್ಯ ; ''ಮೊದಲು ನಿನ್ನವೇ ಬಟ್ಟೆಗಳೆಂದೆ ! ಆ ಮೇಲೆ ಗುರುತು ಹಾಕಲು ಮರೆಯಿತೆಂದು ಹೇಳಿದೆ ! ನಂತರ ದಾನವಾಗಿ ಬಂದುದ್ದು ಎಂದೆ ! ಈಗ ಲಂಚ ಎಂದೊಪ್ಪುವೆ ! ಒಂದಕ್ಕೆ ನಾಲ್ಕು ಸುಳ್ಳಾಡವು! ಬೊಗಳು ! ಆ ಹಾವನ್ನು ತರಿಸಿ ಕೊಟ್ಟವರಾರು ? ಪೇಟದಲ್ಲಿ ಸೇರಿಸಿ ಸುತ್ತಿದವರಾರು ?

ಅಗಸ : ''ದೇವರಾಣೆಗೂ ತಿಳಿಯದು, ಪ್ರಭು ! ನಾನು ಒಡಪಾಯಿ ! ಯಾರು ಹೇಗೆ ಹೇಳಿದರೆ ಹಾಗೆ ನಡೆದು ಹೊಟ್ಟೆ ಹೊರೆದುಕೊಳ್ಳುವವ ! ನನ್ನನ್ನೇಕೆ ದಂಡಿಸುವಿರಿ ? ಬೇಕಾದರೆ ಆ ರಾಕ್ಷಸನನ್ನೇ ದಂಡಿಸಿರಿ. ಅವರೇ ಹಾವು ತಂಸಿಕೊಟ್ಟರು ! ನಾನು ಬಟ್ಟೆಯಲ್ಲಿ ಸುತ್ತಿದೆ, ಮಾತ್ರ !!'' (ಅಳುವನು !)

ಚಾಣಕ್ಯ : (ನಗುತ್ತ) "ಮತ್ತೆ ಸುಳ್ಳಿನ ಸರಮಾಲೆ ! ಹಾವು ತಂಸಿಕೊಟ್ಟವರಾರೋ ತಿಳಿಯದೆಂದು ಹೇಳಿ, ರಾಕ್ಷಸನ ಹೆಸರು ಹೇಳುವೆ ! ಸುತ್ತಿದವರಾರೆಂದರೆ ದೇವರಾಣೆಹಾಕಿ ತಿಳಿಯದೆನ್ನುವೆ ! ಮತ್ತೆ 'ನಾನೇ' ಎನ್ನುವೆ ? ರಾಜರನ್ನು ಕೊಲ್ಲಲು ಮಾಡಿಸಿದ ಈ ಘೋರಾಪರಾಧವನ್ನು 'ಯಾರು ಹೇಗೆ ಹೇಳಿದರೆ ಹಾಗೆ ನಡೆಯುವ' ನೀನು ಒಪ್ಪಿದಂತಾಯ್ತು ! ರಾಜದ್ರೋಹದ ಪರಮಾವಧಿ ಇದು ! ನೀನು ಮಡಿಮಾಡಿ ಸುತ್ತಿ ತಂದ ಈ ಮುಂಡಾಸವನ್ನು ಯಾರ ಕೈಗಿತ್ತೆ?''

ಅಗಸ ಬಡಬಡಿಸಿ ಏನೇನೋ ಮಾತನಾಡಲಾರಂಭಿಸಿದ. ಚಾಣಕ್ಯ ಅಂತರ್ವಂಶಿಕನೆಂಬ ಅಂತಃಪುರದ ಕಂಚುಕಿಯನ್ನು ಕರೆಸುವಂತೆ ಹೇಳಿದ ! ನಡಗುತ್ತಾ ಬಂದ ಕಂಚುಕಿಯನ್ನು ಚಾಣಕ್ಯ ಪ್ರಶ್ನಿಸಿದ:

"ಇವನು ಈ ಪೇಟವನ್ನು ಹಾಗೇ ಕೊಟ್ಟನೊ ? ಪೆಟ್ಟಿಗೆಯಲ್ಲಿಟ್ಟು ಕೊಟ್ಟನೊ ?"

ಕಂಚುಕಿ ; "ಹಾಗೇ ಕೊಟ್ಟ, ಪ್ರಭು !"

ಚಾಣಕ್ಯ ; "ಅಂದರೆ ಪೆಟ್ಟಿಗೆಯಲ್ಲಿಟ್ಟು ಮುದ್ರಿಸಿರಲಿಲ್ಲ ಎಂದಾಯ್ತು !"

ಕಂಚುಕಿ ; "ಹೌದು ಮಹಾಸ್ವಾಮಿ !"

ಚಾಣಕ್ಯ ; "ಏನು 'ಮಹಾಸ್ವಾಮಿ !' ಅವನೇ ಪೆಟ್ಟಿಗೆಯಲ್ಲಿಟ್ಟು ಕೊಟ್ಟಿದ್ದರೆ, ಪರೀಕ್ಷಿಸಿ, ಅದರಲ್ಲಿ ವಿಷಜಂತುಗಳಿಲ್ಲವೆಂದು ಕಂಡು ಬಂದಲ್ಲಿ,

ಅದನ್ನು ಹಾಗೇ ಮೊಹರು ಮಾಡಿ, ರಾಜರು ಧರಿಸುವಾಗ ಮೊಹರರಿನೊಡನೆ ತಂದು ತೋರಿಸಿ ಅರಸರ ಕೈಲಿ ಮುದ್ರೆ ಕೊಡುವುದು ಯಾರ ಕರ್ತವ್ಯವೊ ? ಅಗಸ ಪೆಟ್ಟಿಗೆಯಲ್ಲಿಟ್ಟು ತಾರದಿದ್ದರೆ, ಅರಮನೆಯಲ್ಲಿ ಪೆಟ್ಟಿಗೆಗಳಿಗೆ ದಾರಿದ್ರ್ಯವಿತ್ತೆ? ಅವನು ಹಾಗೇ ತಂದದ್ದೂ, ನೀನು ಪರೀಕ್ಷಿಸದೇ, ಹಾಗೇ ದೊರೆಗೆ ತಂದದ್ದೂ ಎರಡೂ ಅಪರಾಧ ! ಮಾಲಾಕಾರರೂ, ಅಗಸರೂ, ಮಾಲೆಗಳನ್ನು ವಸ್ತ್ರಗಳನ್ನೂ ಕಣ್ಣಿಗೊತ್ತಿ ತಲೆಯ ಮೇಲಿಟ್ಟುಕೊಂಡು ಭಕ್ತಿಯಿಂದ ರಾಜರಿಗೆ ಸಮರ್ಪಿಸಬೇಕೆಂಬ ನಿಯಮ ತಿಳಿದಿರಲಿಲ್ಲವೆ ? ಬೇಕೆಂದೇ ಬಿಟ್ಟಿರಿ, ಅಲ್ಲವೆ ? ರಾಕ್ಷಸ ನಿನಗೆಷ್ಟು ಹಣಕೊಟ್ಟ? ಬೊಗಳು !"

ಅವನು ಬಾಯಿ ಬಿಡಲಿಲ್ಲ. ಚಾಣಕ್ಯನ ಅಪ್ಪಣೆಯಂತೆ ಭಟರು ಇಬ್ಬರನ್ನೂ ಚೆನ್ನಾಗಿ ಥಳಿಸಿ, ತಂದರು. ಕಂಚುಕಿ ನಡೆದುದೆಲ್ಲವನ್ನೂ ಬಾಯಿ ಬಿಟ್ಟು ಹೇಳಿದ. ರಾಕ್ಷಸನ ಪ್ರಲೋಭನೆಯಂತೆ ತಾವು ನಡೆದುದಾಗಿ ಒಪ್ಪಿದ. ಕಂಚುಕಿಯನ್ನು ಶೂಲಕ್ಕೆ ಹಾಕುವಂತೆ ಚಾಣಕ್ಯ ಆಜ್ಞಾಪಿಸಿ, ಹಿಂದಿನ ದಿನದ ಆ ರಾಜಮುಕುಟವನ್ನು ಆ ರೀತಿಯ ಬೇರೆ ಹಾವಿನೊಡನೆ ಹಾಗೇ ತಂದು ಅಗಸನ ತಲೆಯಲ್ಲಿಟ್ಟು, ಕೋಲಿನಿಂದ ಅದನ್ನು ತಿವಿಯುವಂತೆ ಹೇಳಿದ. "ಎಲೋ ! ರಾಜಸೇನ ! ರಾಜರಂತೆ ಹೆಸರಿಟ್ಟು ಕೊಂಡ ತಪ್ಪಿಗೆ ನೀನೂ ಒಂದು ಕ್ಷಣ ಈ ರಾಜ ಮುಕುಟವನ್ನು ಧರಿಸಿ ಸುಖಪಡು" ಎಂದು ವ್ಯಂಗವಾಗಿ, ಉಗ್ರವಾಗಿ ಅವನನ್ನು ವೀಕ್ಷಿಸಿದ. ಪೇಟದಲ್ಲಿದ್ದ ಹಾವು ಕೋಲಿನ ತಿವಿತಕ್ಕೆ ಸಿಟ್ಟಾಗಿ ಅಗಸನ ತಲೆಯನ್ನು ಬಲವಾಗಿ ಕಚ್ಚಿತು. ಅಗಸ, ತಲೆ ತಿರುಗಿ, ಬಾಯಲ್ಲಿ ನೊರೆ ಬರುತ್ತಾ, ವಿಲವಿಲನೆ ಒದ್ದಾಡಿ ಬಿದ್ದು ಕಣ್ಣು ಮುಚ್ಚಿ ಸತ್ತ! "ದೊರೆಯೇ ! ಇನ್ನು ಮೇಲೆ ಮುಂಡಾಸಿನ ಮುಕುಟವನ್ನು ಧರಿಸತಕ್ಕದ್ದಲ್ಲ. ಬಂಗಾರದ ಕಿರೀಟವನ್ನು ಧರಿಸಿ ಸಾಮ್ರಾಟರಾಗಬೇಕು'' ಎನ್ನುತ್ತಾ ಅಂದೇ ಹೊಸ ಕಿರೀಟವನ್ನು ಲಕ್ಷಣಯುಕ್ತವನ್ನಾಗಿ ಮಾಡಿಸಿ, ಅರಸ ಧರಿಸುವ ವೇಳೆ ಬಿಟ್ಟು ಅದು ಖಜಾಂಚಿಯ ಬೀಗ ಮುದ್ರೆಯಲ್ಲಿರಬೇಕೆಂದು ಆಜ್ಞಾಪಿಸಿದ.

  

ಮಲಯ ಕೇತುವು ಬಾಗುರಾಯಣನೊಡನೆ ಪುರುಷಪುರವನ್ನು ತಲು ಪಲು ಒಂದು ವಾರವೇ ಬೇಕಾಯಿತು. ಮಾರ್ಗ ಮಧ್ಯದ ಆಯಾಸ, ಮಗಧದವರು ಬೆನ್ನಟ್ಟಿ ಬರುವ ಭಯ, ವೇಗಪ್ರಮಾಣದ ಶ್ರಮಗಳಿಂದ ಎಷ್ಟೋ ಸೈನಿಕರು ದಾರಿಯಲ್ಲೇ ಸತ್ತಿದ್ದರು ! ಶಬರವರ್ಮ ಆಗಲೇ ತೀರಿ ಕೊಂಡಿದ್ದ. ಇತ್ತ ವಿರೋಚಕನೂ ಚಾಣಕ್ಯನ ಕಪಟಕ್ಕೆ ಬಲಿಯಾದ ಸಮಾಚಾರವೂ ಬಂದಿತು. ರಾಜ ವೈದ್ಯ, ಶಯ್ಯಾಗೃಹದ ರಕ್ಷಕ, ಅಗಸ ಮೊದಲಾದವರೂ ದಿನಕ್ಕೊಬ್ಬರು ಚಿತ್ರವಧೆ ಗೀಡಾಗಿ ಸಾಯುತ್ತಿದ್ದುದನ್ನೂ ಚಾರರು ಬಂದು ಹೇಳಿದರು. "ನನ್ನ ತಂದೆ ಆ ದುಷ್ಟಬ್ರಾಹ್ಮಣನ ಮಾತು ಕೇಳಿ ಮಗಧದ ವರೆಗೆ ಹೋದದ್ದೇ ತಪ್ಪಾಯಿತು! ಯಂತ್ರ, ತಂತ್ರ, ಮಂತ್ರ, ರಾಜನೀತಿ, ದಂಡನೀತಿ ಎಲ್ಲ ಶಾಸ್ತ್ರ ತಿಳಿದ ಆ ಬ್ರಾಹ್ಮಣ ಯಾವ ಕ್ಷಣಕ್ಕೆ ಏನು ಮಾಡುವನೆಂಬುದೇ ತಿಳಿಯದೆ, ಅವನ ಕೈಲಿ ಸಿಕ್ಕಿಕೊಂಡದ್ದು ತಪ್ಪಾಯಿತು!" ಎನ್ನುತ್ತಾ ಮಲಯಕೇತು ಚಾಣಕ್ಯನನ್ನು ದೂಷಿಸಿದ.

ಬಾಗುರಾಯಣ ; "ಕುಮಾರ, ಯೋಚಿಸು; ಆ ಬ್ರಾಹ್ಮಣನ ಸಹಾಯವಿರದಿದ್ದರೆ ಪರಕೀಯ ಯವನರು ನಿನ್ನ ತಂದೆಯ ಹೆಗಲ ಮೇಲೆ ಹೊರಿಸಿದ್ದ ಆ ದಾಸ್ಯದ ನೊಗವನ್ನು ಬೇರಾರು ಕಿತ್ತೊಗೆಯಲಾಗುತ್ತಿತ್ತು? 'ತ್ಯಾಗದ ಕೆಲಸಕ್ಕೆಲ್ಲ ಬ್ರಾಹ್ಮಣ, ಭೋಗದ ಕೆಲಸಕ್ಕೆಲ್ಲ ಶೂದ್ರರು' ಎಂಬ ನಮ್ಮ ದೇಶದ ಹಾಸ್ಯದ ಗಾದೆಯನ್ನು ನೀನು ಬಲ್ಲೆಯಷ್ಟೆ! ಆ ಬ್ರಾಹ್ಮಣ ಅಸಾಮಾನ್ಯ ತೇಜಸ್ವಿ. ನಿಷ್ಕಾರಣವಾಗಿ ಏನೂ ಮಾಡಲಾರ. ಸಕಾರಣವಾಗಿ ಮಾಡುವುದರಲ್ಲಿ ಎಷ್ಟೂ ಕರುಣೆ ತೋರಲಾರ. ಜನ ಇದನ್ನು ಕ್ರೌರ್ಯ ಎನ್ನುವುದು ! ನಿನ್ನ ತಂದೆ ಆ ಬ್ರಾಹ್ಮಣನಿಗೆ ಸಿಟ್ಟು ಬರುವಂತೆ ಏನು ಮಾಡಿದನೋ, ಏನೋ ! ಅಂತೂ ಉಪಕಾರ ಮಾಡಿದ ನಿನ್ನ ತಂದೆಗೆ ಈ ದುರ್ಗತಿ ಆ ಬ್ರಾಹ್ಮಣನಿಂದ ಬರಬಾರದಿತ್ತು !" ಎನ್ನುತ್ತಾ ಚಾಣಕ್ಯನ ಗುಣಗಳನ್ನು ಕೊಂಡಾಡುತ್ತಲೂ, ದೋಷಗಳಂತೆ ಕಂಡವನ್ನು ಸಣ್ಣಗೆ ವಿಮರ್ಶಿಸುತ್ತಲೂ ಹೀಗೆ ಹದಿನೈದು ದಿನ ಕಳೆದವು. ರಾಜ್ಯ ವ್ಯವಹಾರ ವನ್ನರಿಯದ ಮಲಯಕೇತುವು ಬಾಗುರಾಯಣನನ್ನು ಪೂರ್ಣನಂಬಿದ್ದನು.

  

"ಬುದ್ಧಿ! ಅಮಾತ್ಯ ರಾಕ್ಷಸರಂತೆ! ಊರ ಉದ್ಯಾನದಲ್ಲಿ ಇಬ್ಬರು ಅನುಚರರೊಡನೆ ಬಂದು ವಿಶ್ರಾಂತರಾಗಿರುವರು. ದೊರೆಗಳನ್ನು ನೋಡ ಬೇಕೆಂದು ಬಯಸುತ್ತಾರಂತೆ" ಎಂದು ಚಾರನೊಬ್ಬ ಸಮಾಚಾರ ತಂದ.

ಮಲಯಕೇತುವಿಗೆ ದಿಗಿಲಾಯ್ತು. ಬಾಗುರಾಯಣನನ್ನು ಕರೆಸಿ "ಏನಿದು, ಮಿತ್ರ! ಈ ಸುಡುಗಾಡು ಅಮಾತ್ಯ ಈಗ ಇಲ್ಲೇಕೆ ಬಂದಿರು ವನು? ಪರಂಪರೆಯಿಂದ ಮಗಧದ ಅರಸರಿಗೆ ಮಂತ್ರಿಯಾಗಿರುತ್ತಾ ಈಗ ಚಂದ್ರಗುಪ್ತನ ಸೇವೆಯಲ್ಲಿರಬೇಕಾದವನು ಇಲ್ಲೇಕೆ ಬಂದ? ಇವನೂ ಚಾಣಕ್ಯನ ಗೂಢಚಾರನೊ? ನನ್ನ ತಂದೆಯನ್ನು ಕೊಂದುದಲ್ಲದೆ, ಈಗ ನನ್ನನ್ನೂ ಸಜೀವ ಸೆರೆ ಹಿಡಿಸಲು ಚಾಣಕ್ಯನೇ ಕಳುಹಿರಬೇಕು! ಚಾಣಕ್ಯನ ಹೃದಯವೇ ತಿಳಿಯುವುದಿಲ್ಲ! ಈಗ ರಾಕ್ಷಸನನ್ನು ಇಲ್ಲೇ ಕೊಲ್ಲಿಸಿ ಬಿಡು ವುದು ಯುಕ್ತವಲ್ಲವೆ? ಸರಿಯಾಗಿ ನನಗೆ ಸಲಹೆ ನೀಡು." ಎಂದು ಕೇಳಿದ.

ಬಾಗುರಾಯಣ: "ಮಿತ್ರ! ರಾಕ್ಷಸನಿಗೂ ಚಾಣಕ್ಯನಿಗೂ ಏನೂ ಸಂಬಂಧವಿಲ್ಲ. ಅಂಥ ಸ್ವಾಮಿನಿಷ್ಠನನ್ನು ಜಗತ್ತು ಈವರೆಗೆ ಕಂಡಿರ ಲಾರದು. ನಂದರು ವಧೆಯಾದ ಮೇಲೂ ಅವರ ಕಾರ್ಯ ಎತ್ತಿ ಹಿಡಿದು ಚಂದ್ರಗುಪ್ತನ ವಧೆಗೆ ಏನೇನು ಪ್ರಯತ್ನ ಮಾಡಿದನೆಂದು ದಿನ ದಿನವೂ ಕೇಳುತ್ತಿರುವೆವಷ್ಟೆ! ಬರಿಯ ಸಂಬಳಕ್ಕಾಗಿ ದುಡಿಯುವವನ ದುರ್ಲಕ್ಷಣ ವಿದಲ್ಲ. ಸರ್ವಾರ್ಥಸಿದ್ಧಿರಾಯರು ಸತ್ತ ಸುದ್ದಿ ನಿನಗೆ ತಿಳಿದಿರುವುದಷ್ಟೆ? ಒಡೆಯರ ಆಸೆಗಾಗಿ ಯಾರೋ ಮಾಡಿದ ಕೊಲೆ ಅದಲ್ಲ! ಮುದುಕನಿಗೆ ದತ್ತುಪುತ್ರನನ್ನು ತಂದು ನಂದರ ಜಾಗೆಯಲ್ಲಿ ಪ್ರತಿಷ್ಠಿಸಿ ಚಂದ್ರಗುಪ್ತನ ವಿರುದ್ಧ ಯುದ್ಧವನ್ನೂ ತಂತ್ರನನ್ನೂ ರಾಕ್ಷಸ ಮುಂದುವರೆಸಲು ಯೋಚಿ ಸಿದ್ದ. ಇದನ್ನು ತಿಳಿದ ಚಾಣಕ್ಯ ಆ ವೃದ್ಧ ದೊರೆಯನ್ನು ಕಪಟದಿಂದ ಕೊಲ್ಲಿಸಿದ! ಇದು ಗೂಢ ಸಮಾಚಾರ! ಇತ್ತ ನಿನ್ನ ತಂದೆಗೂ ಅದೇ ಗತಿ

ಆಯ್ತು.. ಆದುದರಿಂದ ನಿನ್ನ ಆಶ್ರಯ ಪಡೆದು, ಮಗಧದ ಮೇಲೆ ದಂಡೆತ್ತಿ ಹೋಗಿ ಚಾಣಕ್ಯ ಚಂದ್ರಗುಪ್ತರನ್ನು ದಂಡಿಸಲೆಂದು ರಾಕ್ಷಸ ಇಲ್ಲಿಗೆ ಬಂದಿರ ಬೇಕು. ಈ ಊಹೆ ಸರಿಯಾಗಿದ್ದರೆ ನಮ್ಮ ಇಷ್ಟಾರ್ಥವೂ ಗೈಗೂಡಿದಂತಾ ದೀತು. ರಾಕ್ಷಸನನ್ನು ಮರ್ಯಾದೆಯಿಂದ ಬರಮಾಡಿಕೊಂಡು, ಅವನ ಇಂಗಿತವನ್ನರಿತು ಮುಂದಿನ ಆಲೋಚನೆ ನಡೆಸೋಣ.'' ಎಂದ.

ಮಲಯಕೇತು ಒಪ್ಪಿದ. ರಾಕ್ಷಸನನ್ನು ಬರಮಾಡಲಾಯಿತು. ಆಯಾಸದಿಂದ, ದುಃಖದಿಂದ, ವಿಶ್ರಾಂತಿಯಿಲ್ಲದೆ ರಾಕ್ಷಸ ಬಾಡಿದ್ದ. ಬಾಗು ರಾಯಣನನ್ನು ಕಂಡೂ ಆಶ್ಚರ್ಯವಾಯಿತು! ''ಇದೇನು ? ಮಗಧ ವನ್ನು ಬಿಟ್ಟು ಇತ್ತ ಏಕೆ ಬಂದೆ ?" ಎಂದು ಕೇಳಿದ. "ಆ ಚಾಣಕ್ಯರಾಜ್ಯ ದಲ್ಲಿ ಮರ್ಯಾದೆಯಿಂದ ಬಾಳಬಲ್ಲವರಾರು ? ದೊರೆಯನ್ನೇ ಏಕವಚನ ದಲ್ಲೂ 'ಶೂದ್ರ'ನೆಂದೂ ಎಲ್ಲರ ಎದುರೇ ಬೈಯ್ಯುತ್ತಾನೆ! ಏನಾದರೊಂದು ತಪ್ಪು ಕಂಡು ಹಿಡಿದು ತನಗೆ ಬೇಡಾದವರನ್ನು ಯಮಲೋಕಕ್ಕೆ ದಿನಂ ಪ್ರತಿ ಕಳುಹುತ್ತಿರುತ್ತಾನೆ! ಅರಮನೆಯಲ್ಲಿ ಒಬ್ಬರಿಗೂ ಅವನನ್ನು ಕಂಡ ರಾಗದು. ಮಲಯಕೇತುವಿನ ಪಥೆಗೆ ನನಗೇನೋ ಹೇಳಲು ಬಂದ! ನಾನು ಸಮಯ ನೋಡಿ ಅಲ್ಲಿಂದ ಪಾರಾದ್ದು ಹೆಚ್ಚು! ಸಹಾಯ ಮಾಡಿದ ಪರ್ವತೇಶನನ್ನೇ ಇಷ್ಟು ಕ್ರೂರವಾಗಿ ಮುಗಿಸಿದನೆಂದರೆ ಇನ್ನಾರನ್ನು ಅವನು ನಂಬುತ್ತಾನೆ ? ಅಗ್ನಿಯೊಡನೆ ಸ್ನೇಹವೆಂದರೇನು ?" ಎನ್ನುತ್ತಾ ಬಾಗುರಾಯಣ ತಾನಿತ್ತ ಬಂದುದನ್ನು ಸಮರ್ಥಿಸಿಕೊಂಡ! "ತಾವು ಇತ್ತ ಹೇಗೆ ಬಂದಿರಿ ?'' ಎಂದು ರಾಕ್ಷಸನನ್ನು ಕೇಳಿದ. ನಡೆದುದನ್ನೆಲ್ಲ ರಾಕ್ಷಸ ವಿವರಿಸಿ, ಈಗ ತನಗಿರುವ ಒಂದೇ ಆಸೆಯೆಂದರೆ ಮಲಯಕೇತುವಿನ ಆಶ್ರಯ ದಿಂದ ನಂದರ ಹಗೆಯನ್ನು ತೀರಿಸಿಕೊಳ್ಳುವುದು ಎಂದು ವಿವರಿಸಿದ. ಮಲಯಕೇತು ಬಾಗುರಾಯಣನ ಮುಖ ನೋಡಿದ! ಊಹೆ ಸರಿಯಾಗಿತ್ತು. ಮಲಯಕೇತುವಿನ ಆಶ್ರಯ ದೊರೆಯಿತು, ರಾಕ್ಷಸನಿಗೆ! ಬಾಗುರಾಯಣನ ಶಿಫಾರಸ್ಸಿನಿಂದ ಪರ್ವತರಾಜ್ಯದ ಸಕಲ ಯೋಗಕ್ಷೇಮದ ಜವಾಬ್ದಾರಿ ಯನ್ನೂ ರಾಕ್ಷಸನಿಗೇ ವಹಿಸಿ, ಅವನನ್ನು ಅಮಾತ್ಯನೆಂದು ಘೋಷಿಸಿ, ತುಂಬ ಬೆಲೆಬಾಳುವ ಅನೇಕ ಅಪೂರ್ವ ಒಡವೆ ವಸ್ತ್ರಗಳನ್ನು ಮಲಯಕೇತು

ರಾಕ್ಷಸನಿಗಿತ್ತ. ಇವಾವುವೂ ಬೇಡವೆಂದು ರಾಕ್ಷಸನೆಷ್ಟು ನಿರಾಕರಿಸಿದರೂ ಮಲಯಕೇತುವಿನ ಪ್ರೀತಿಯ ಒತ್ತಾಯಕ್ಕೆ ರಾಕ್ಷಸ ಮಣಿದು ಸ್ವೀಕರಿಸ ಬೇಕಾಯಿತು. ಇಡುವುದಕ್ಕೆ ಜಾಗವಿಲ್ಲದೆ ಅವನ್ನು ಸುಂದರವಾದ ಆಭರಣಗಳ ಪೆಟ್ಟಿಗೆಯೊಂದರಲ್ಲಿರಿಸಿ ಬಾಗುರಾಯಣನ ವಶಕ್ಕೇ ರಾಕ್ಷಸ ನೊಪ್ಪಿಸಿದ. ನಾಲ್ಕಾರು ದಿನಗಳಾದವು. ರಾಕ್ಷಸ, ಸೈನ್ಯವನ್ನೆಲ್ಲ ಲೆಕ್ಕ ಮಾಡಿತರುವಂತೆ ಶೇಖರನಿಗೆ ಆಜ್ಞಾಪಿಸಿ, ಸೈನ್ಯವನ್ನು ಪಾಟಲೀಪುರಕ್ಕೆ ಮತ್ತೆ ಕೊಂಡೊಯ್ಯುವ ಶುಭಮುಹೂರ್ತಕ್ಕೆಂದು ಕಾಯುತ್ತಿದ್ದ.

  

ಯಜ್ಞಶರ್ಮನೆಂಬ ಶಿಷ್ಯ ಒಂದು ದಿನ ಆಚಾರ್ಯನನ್ನು ಕಂಡು ಅಮಾತ್ಯ ರಾಕ್ಷಸನೆಲ್ಲೂ ಕಾಣುತ್ತಿಲ್ಲವೆಂದೂ, ಆದರೆ ಅವನ ಪತ್ನೀ ಪುತ್ರರು ಚಂದನದಾಸನ ಮನೆಯಲ್ಲಿರುವಂತೆ ಕಂಡು ಬಂದುದುಂಟೆಂದೂ, ರಾಕ್ಷಸನ ಮುದ್ರಿಕೆ ಅವಳ ಕೈಲಿರುವಂತೆಯೂ ಕಾಣುವುದೆಂದು ಬಿನ್ನೈಸಿದ. ಚಾಣಕ್ಯ ಏನನ್ನೋ ಯೋಚಿಸಿ "ಬಾಗುರಾಯಣನನ್ನು ಕರೆಸು" ಎಂದಾಜ್ಞಾಪಿಸಿದ. ಅರಮನೆಯ ದೂತರು ಬಂದು "ಬುದ್ಧೀ ! ಅವರು ಹೇಳದೆ ಕೇಳದೆ ಮಲಯ ಕೇತುವಿನೊಡನೆ ಪರ್ವತರಾಜ್ಯಕ್ಕೆ ಓಡಿ ಹೋಗಿರುವರು" ಎಂದ. ಕ್ರುದ್ಧ ನಾದಂತೆ ನಟಿಸಿ ಚಾಣಕ್ಯ "ಏನಂದೆ! ಅಷ್ಟು ಸೊಕ್ಕೇ, ಈ ಚಾಣಕ್ಯನನ್ನು ಕೆಣಕಲು? ಅವನೆಲ್ಲಿದ್ದರೂ ಹಿಡಿತರುವಂತೆ ಭದ್ರಭಟ, ಡಿಂಗಿರಾತ, ಪುರುಷ ದತ್ತರಿಗೆ ಹೇಳಿ, ಅವರೆಲ್ಲರನ್ನೂ ಈಗ್ಗೆಯೇ ನನ್ನನ್ನು ಭೇಟಿ ಮಾಡುವಂತೆ ಹೇಳು" ಎಂದಾಜ್ಞಾಪಿಸಿದ. ಮರಳಿ ಬಂದು. ದೂತ; "ಪ್ರಭೂ ! ಈ ವರೆಗೆ ನಂದರ ಸೇವೆಯಲ್ಲಿದ್ದು ಈಗ ತಮಗೆ ಮುಖ ತೋರಿಸುವುದು ಹೇಗೆಂದು ಎರಡು ದಿನ ವಿಚಾರಿಸಿದರು. ಆಮೇಲೆ ತಾವು ಅರಮನೆಯ ವೈದ್ಯಾದಿಗಳನ್ನು ಕ್ರೂರವಾಗಿ ದಂಡಿಸಿದ್ದನ್ನು ಕೇಳಿ, ತಮಗೂ ಏನಾದ ರೊಂದು ಬಗೆಯಿಂದ ದಂಡನೆ ಕಾದಿರುವುದೆಂದು ಭಯಪಟ್ಟು. ಕೆಂತಮ್ಮ ಅಲ್ಪದಳಗಳೊಡನೆ ಅವರೂ ಪರ್ವತರಾಜ್ಯಕ್ಕೆ ಹೊರಟು ತಲೆ ತಪ್ಪಿಸಿ ಕೊಂಡಿರುವರಂತೆ !" ಎಂದ. "ಓಹೋ ! ಇವರೆಲ್ಲರಿಗೂ ಇಷ್ಟು ಭಯ

ವಾಯಿತೋ? ತಪ್ಪಿತಸ್ಥರಲ್ಲದವರನ್ನು ಚಾಣಕ್ಯನೆಂದಿಗೂ ದಂಡಿಸಲಾರ ನೆಂಬುದು ಅವರಿಗೆ ತಿಳಿಯದೊ? ಅಥವಾ ತಪ್ಪಿತಸ್ಥರೇ ಇದ್ದು ಭಯಪಟ್ಟು ಓಡಿದ್ದಾರು! ಒಳ್ಳೆಯದು, ಹೋಗು'' ಎಂದು ಹೇಳಿ ಅವರವರ ಉದ್ಯೋಗ ಗಳನ್ನು ಸೈನ್ಯದಲ್ಲಿ ಅವರ ಕೆಳಗಿನ ಹಿರಿಯ ಅಧಿಕಾರಿಗಳಿಗೆ ಕೊಡತಕ್ಕ ದ್ದೆಂದು ಚಂದ್ರಗುಪ್ತನಿಂದ ಶಾಸನವಮಾಡಿಸಿ ಊರಲ್ಲಿ ಡಂಗೂರ ಹೊಡೆಸಿ, ಭದ್ರಭಟಾದಿಗಳನ್ನೂ ಬಾಗುರಾಯಣನನ್ನೂ ರಾಜದ್ರೋಹಿಗಳೆಂದು ಘೋಷಿಸುವಂತೆ ಅಪ್ಪಣೆ ಮಾಡಿದನು. ಅನೇಲೆ ಚಾಣಕ್ಯನ ಇನ್ನೊಬ್ಬ ಶಿಷ್ಯನು ಮರಾಳನೆಂಬ ಹೆಸರಿಂದ ಆಚಾರ್ಯನ ಆಶ್ರಮದ ಬಾಗಿಲಲ್ಲಿ ಕಾಣಿಸಿಕೊಂಡು ''ವಿಚಿತ್ರ ಚಿತ್ರಪಟಗಳು ನನ್ನಲ್ಲುಂಟು ! ಆಚಾರ್ಯರಿಗೆ ಬಯಕೆಯಾದರೆ ತೋರುವೆನು'' ಎಂದು ಹೇಳಲು, ಶಾಂರ್ಗರವನು ಅದನ್ನು ಚಾಣಕ್ಯನಿಗೆ ಬಂದು ತಿಳಿಸಿದನು ಹೆಸರನ್ನು ಕೇಳಿಯೇ ತನ್ನ ಗೂಢಚಾರ ನೆಂದರಿತ ಆಚಾರ್ಯ ಅವನನ್ನು ಏಕಾಂತದಲ್ಲಿ ಒಳಕರೆಸಿ ''ಏನು ವಿಶೇಷ?'' ಎಂದು ಕೇಳಲು, ಮರಾಳ ಉತ್ತರಿಸಿದ; ''ಗುರುವೆ ! ತಮ್ಮ ಅಪ್ಪಣೆಯಂತೆ ಬೀದಿ ಬೀದಿ ತಿರುಗುತ್ತ ಸ್ವರ್ಗ, ನರಕ, ಇಂದ್ರಲೋಕ, ಅಪ್ಸರೆಯರು, ಕೈಲಾಸ, ಪಾತಾಳಾದಿ ಲೋಕಗಳ ಚಿತ್ರಪಟಗಳನ್ನು ಮಾರುತ್ತ ಬರುತ್ತಿರುವಾಗ ಒಂದು ಮನೆಯಲ್ಲಿ ಒಂದು ವಿಚಿತ್ರ ನಡೆಯಿತು! ಆ ಮನೆಯ ಜಗುಲಿಯ ಕಟ್ಟೆಯ ಮೇಲೆ ಕುಳಿತು 'ಇದು ನರಕ! ಪಾಪಿ ಗಳನ್ನು ಯಮ ದಂಡಿಸುವ ಸ್ಥಳ. ಇವೆಲ್ಲಾ ಶಿಕ್ಷೆಯ ಪ್ರಕಾರಗಳು'— ಎಂದು ಒಂದೊಂದನ್ನೂ ವಿವರಿಸುತ್ತಿರಲು ಜನಜಂಗುಳಿ ಸೇರ ತೊಡಗಿತು. ಒಳ ಮನೆಯಿಂದ ಒಬ್ಬಪುಟ್ಟ ಬಾಲಕನು ರಭಸದಿಂದ ಓಡಿ ಬಂದು, ಅವನ ತಾಯಿ ಎಷ್ಟು ಒಳ ಕರೆದರೂ ಹೋಗದೆ, ನೆಟ್ಟದೃಷ್ಟಿಯಿಂದ ಪಟಗಳನ್ನು ನೋಡುತ್ತಿದ್ದ. ತಮ್ಮ ಸೂಚನೆಯಂತೆ ನಾನು ಅಮಾತ್ಯರಾಕ್ಷಸನ ಪಟ ವನ್ನೂ ನವನಂದರ ಪಟಗಳನ್ನೂ ತೋರಿಸುತ್ತಿರುವಾಗ ಆ ಮೂರು ವರ್ಷದ ಬಾಲಕನು ಅಮಾತ್ಯನ ಪಟವನ್ನು ನೋಡುತ್ತ, 'ಅಪ್ಪಾ! ಅಪ್ಪಾ!' ಎನ್ನುತ್ತಾ ಶಬ್ದ ಮಾಡಲು, 'ಅಯ್ಯೋ! ಈ ಮೂರ್ಖ ಬಾಲಕನಿಗೆ ಬುದ್ಧಿ ಯಿಲ್ಲವಲ್ಲ, ಇನ್ನೇನುಗತಿ'! ಎಂದಳುತ್ತಾ, ಒಬ್ಬ ಸುಂದರ ಹೆಂಗಸು ಬಾಗಿಲ ಮೂಲೆಯಲ್ಲಿ ಬಂದು ನಿಂತ., ಎಷ್ಟು ಕರೆದರೂ ಆ ಬಾಲಕ ಕದಲಲಿಲ್ಲ;

ರಾಕ್ಷಸನ ಪಟವನ್ನು ಅವಳೂ ದಿಟ್ಟಿಸಿನೋಡಿ, ಅಳಲಾರಂಭಿಸಿದಳು. ಪೂರ್ಣಗರ್ಭವತಿಯಾದಂತಿರುವ ಅವಳಿಗೆ ಇಂದೋ ನಾಳೆಯೋ ಪ್ರಸವ ವೇಂಬಂತಿದೆ, ಅವಳ ಗರ್ಭದ ಬೆಳವಣಿಗೆಯನ್ನು ನೋಡಿದರೆ! ಕೊನೆಗೆ ಬಾಲಕ ನನ್ನು ಅವಳೇ ಜಗಲಿಗೆ ಬಂದು ಜನ ಮಧ್ಯದಿಂದ ಬಲಾತ್ಕಾರವಾಗಿ ಎಳೆ ದೊಯ್ದಳು. ಹಾಗೆ ಮಾಡುವಾಗ ಅವಳ ಎಡಗೈ ಮಧ್ಯದ ಬೆರಳಿನಲ್ಲಿ ಬೆರಳಿನ ಆಕೃತಿಗೆ ಬಹುದೊಡ್ಡದಾದ, ಪುರುಷಧಾರ್ಯವಾದ ಈ ಸುಂದರ ಬಂಗಾರದ ಉಂಗುರವಿದ್ದಿತು! ಅದು ಅವಳು ಮಾಗುವನ್ನು ಎಳೆದು ಒಯ್ದ ರಭಸಕ್ಕೆ ಕೈಯ್ಯಿಂದ ಜಾರಿ, ನೇರವಾಗಿ ನನ್ನ ಕೈಗೇ ಬಂದು ಬಿದ್ದಿತು!! ಪಟಗಳ ರಾಶಿಯಲ್ಲಿ ಎಲ್ಲಿ ಎಂದು ಅದನ್ನು ಅವಳು ಹುಡುಕಾಡುತ್ತಿರಲು, ತಾವು ಮೊದಲೇ ಕೊಟ್ಟಿದ್ದ ಅಂಥದೇ ಮತ್ತೊಂದು ಕೃತಕ ಉಂಗುರವನ್ನು ಅವಳ ಕೈಗಿತ್ತು, ಪಟಗಳನ್ನು ಜೋಡಿಸಿಕೊಂಡು ಬಂದೆನು. ಇಕೋ ಆಕೆಯ ಕೈಯ್ಯಲ್ಲಿದ್ದ ನಿಜ ಉಂಗುರವಿದು" ಎನ್ನುತ್ತಾ ರಾಕ್ಷಸನ ಹೆಸರು ಕೆತ್ತಿದ್ದ, ಅಷ್ಟಕೋನಾಕಾರದ ಸುದರ್ಶನಕಾಂತಿಯುಳ್ಳ ಸುಂದರ ಮುದ್ರಿಕೆ ಯನ್ನು ಮರಾಳ ಆಚಾರ್ಯನ ಕೈಗಿತ್ತನು.

ಉಂಗುರವನ್ನು ಕೈಗೆತ್ತಿಕೊಂಡು ದಿಟ್ಟಿಸಿ ನೋಡಿದ ಆಚಾರ್ಯ, ಅದರ ಭವ್ಯ ಆಕೃತಿಗೆ ಸಂತೋಷಿಸುತ್ತ, ಮನದಲ್ಲೇ ''ಎಲೆ, ಎಲೇ, ರಾಕ್ಷಸ! ಇಂದೀಗ ನನ್ನ ಕೈಗೆ ಸಿಕ್ಕುಬಿದ್ದೆ! ಹೇಗೆ ತಪ್ಪಿಸಿ ಕೊಂಡು ಹೋಗುವೆಯೋ, ನೋಡುತ್ತೇನೆ. ನಿನ್ನ ನಂದನಿಷ್ಠೆಯೂ, ಸೇಡಿನ ಭಾವವೂ ಇನ್ನು ಕನಸಿನ ಮಾತುಗಳಾದವು!'' ಎಂದು ಕೊಳ್ಳುತ್ತಾ ಮರಾಳನನ್ನು ಬಹುಮಾನಗಳಿಂದ ಭೂಷಿಸಿ ಕಳುಹಿದನು. ಶಕಟಾಯನನ ಮನೆಯಲ್ಲಿ ಸಿದ್ಧಾರ್ಥಕ ನೋಡಿದ್ದ ರಾಕ್ಷಸನ ಉಂಗುರದ ಪ್ರತಿ ಕೃತಿ ಚಾಣಕ್ಯ ಮಾಡಿಸಿದ್ದು ಹೀಗೆ ಉಪಯೋಗಕ್ಕೆ ಬಂದಿತು

  

''ಎಲೊ! ಶಾಂರ್ಗರವ! ರಾಜದ್ರೋಹಿಯಾದ ಜೀವಸಿದ್ಧಿಯನ್ನು ನನ್ನ ಆಜ್ಞೆಯಂತೆ ಗಡೀಪಾರು ಈ ಕೂಡಲೇ ಮಾಡಿ ಹೊರಹಾಕಬೇಕೆಂದು

ಅರಸನಿಗೆ ನಾನು ಹೇಳಿದ್ದಾಗಿ ಹೋಗಿ ವಿಜ್ಞಾಪಿಸಿ ಬಾ'' ಎಂದು ಮರು ದಿನ ಚಾಣಕ್ಯ ಅಪ್ಪಣೆ ಮಾಡಿದ.

ತಾನು ಮಾಡಿದ ತಪ್ಪೇನೆಂದು ಜೀವಸಿದ್ಧಿ ರಾಜದೂತನನ್ನು ಕೇಳಿದ; ''ನೀವು ಅಮಾತ್ಯನ ಆಪ್ತರಂತೆ. ಹೊಸ ದೊರೆಗಳು ಬಂದು ಬಹುದಿನಗಳಾದರೂ ನೀವು ಬಂದು ಕಾಣಿಸಿಕೊಳ್ಳಲಿಲ್ಲವೆಂಬುದು ನಿಮ್ಮ ಮೊದಲನೆ ಅಪರಾಧ. ವೈದಿಕ ಮತಸ್ಥರಾದ ಹೊಸ ದೊರೆಗಳ ಅಪ್ಪಣೆಯಂತೆ ಊರಲ್ಲಿ ಯಾರೂ ದಿಗಂಬರರಾಗಿ ತಿರುಗಾಡುವುದು ನಿಷೇಧಿಸಲ್ಪಟ್ಟಿದೆ. ಅದನ್ನು ನೀವು ಉಲ್ಲಂಘಿಸುತ್ತಿರುವುದು ಎರಡನೆಯ ಅಪರಾಧ. ಇಷ್ಟನ್ನು ಮಾಡಿದ್ದು ಸಾಲದೆ 'ಅಪರಾಧವೇನು ?' ಎಂದು ಕೇಳುತ್ತಿರುವುದು ಮೂರನೆಯ ಅಪರಾಧ. ಇನ್ನು ನಾಲ್ಕನೆಯದೂ ಆದರೆ ಶಿರಚ್ಛೇದವೇ ಶಿಕ್ಷೆ. ಈಗಲೇ ನಾಡಿನ ಗಡಿಯಿಂದಾಚೆ ನಡೆಯಿರಿ" ಎಂದು ದೂತ ಕಟ್ಟಪ್ಪಣೆ ಮಾಡಿದ. ''ಜಿನೇಶ್ವರಾ!" ಎಂದು ಸಂಕಟ ಪಟ್ಟವನಂತೆ ಉದ್ಗರಿಸುತ್ತಾ ಜೀವಸಿದ್ಧಿ ಮೇಲೆದ್ದು, ನವಿಲುಗರಿಯ ಪಿಂಛದಿಂದ ಮರ್ಮಸ್ಥಾನವನ್ನು ಮುಚ್ಚಿಕೊಂಡು ಮೆಲ್ಲ ಮೆಲ್ಲನೆ ಹೊರ ನಡೆದ.

ಅದೇ ವೇಳೆಗೆ ಅರಮನೆಯ ದೂತರು ಬೀದಿಯಲ್ಲಿ ಬರುತ್ತಾ, ಕಾಷಾಯಧರಿಸಿ ಭಿಕ್ಷುಗಳಾಗಿಯೂ, ಭಿಕಾರಿಗಳಾಗಿಯೂ ಓಡಾಡುತ್ತಿರುವ ನೂರಾರು ಸಂನ್ಯಾಸಿಗಳನ್ನು ಹಿಡಿ ಹಿಡಿದು ಅರಮನೆಯ ಗಾಡಿಗಳಲ್ಲಿ ಹಾಕಿ ಬೀಡಾಡಿ ನಾಯಿಗಳನ್ನು ಹಿಡಿಯುವಂತೆ, ಅವರು ಗೋಗರೆದರೂ ಕೇಳದೆ, ಅಲ್ಲಲ್ಲಿ ಎರಡು ಪೆಟ್ಟೂ ಹಾಕುತ್ತಾ ಬಂಧಿಸಿ ಕರೆದೊಯ್ಯುತ್ತಿದ್ದರು! ವಿರಾಧಗುಪ್ತನೆಂಬ ರಾಕ್ಷಸನ ಗೂಢಚಾರ ಇದನ್ನೆಲ್ಲ ನೋಡುತ್ತಿದ್ದ! ಜೀವಸಿದ್ಧಿ ಅರಮನೆಯ ದೂತರನ್ನು ಕುರಿತು. 'ಇವರನ್ನೇಕೆ ಹಿಂಸಿಸುವಿರಿ? ಇವರ ಅಪರಾಧವೇನು ?" ಎಂದು ಕೇಳಿದ. ''ರಾಷ್ಟ್ರಕ್ಕೆ ಇಷ್ಟೊಂದು ಸಂನ್ಯಾಸಿಗಳ ಆವಶ್ಯಕತೆಯಿಲ್ಲವೆಂದು ದೊರೆಗಳು ಆಜ್ಞಾಪಿಸಿರುವರು. ಹೀಗೆ ಹಿಡಿದ ಸಂನ್ಯಾಸಿಗಳನ್ನೆಲ್ಲ ಸ್ವಯಂ ಚಾಣಕ್ಯರೇ ಬಗೆಬಗೆಯಿಂದ ಪರೀಕ್ಷಿಸಿ, ಇವರಿಗೆ ಪರೋಕ್ಷವಾಗಿ ಸಂಸಾರವುಂಟೇ ಹೇಗೆಂದೂ,

ಇವರು ಸಂನ್ಯಾಸಾರ್ಹರೋ ಅಲ್ಲವೋ ಎಂದೂ, ಇವರ ಗುರುಗಳ ಪರಂಪರೆ, ಇವರ ವಿದ್ಯಾರ್ಹತೆ, ಇಂದ್ರಿಯ ಶುದ್ಧಿ, ವಯಸ್ಸು, ಇವರನ್ನು ಪ್ರೇರಿಸಿದವರಾರು, ಇವರ ಸಿದ್ಧಿ ಪ್ರಕಾರಗಳನ್ನು ಪರೀಕ್ಷಿಸುತ್ತಿರುವ"ರೆಂದೂ, ಆರ್ಷ ಪದ್ಧತಿಯಂತೆ ಸ್ವೈಜ ಸಂನ್ಯಾಸಿಗಳಾದವರಿಗೆ ಯಾವ ಬಾಧೆಯೂ ಇಲ್ಲದೆ ಅಭಯವುಂಟೆಂದೂ, ಕೃತಕ, ನಾಸ್ತಿಕ ಸಂನ್ಯಾಸಿಗಳಿಗೆ ಮಾತ್ರ ಶರೀರ ಶ್ರಮ ಪೂರ್ವಕ ರಾಷ್ಟ್ರಾಭ್ಯುದಯ ಕಾರ್ಮಿಕ ಕಾರ್ಯದಲ್ಲಿ ನಿಯೋಜಿಸಿ ಸಂಬಳ ಕೊಟ್ಟು ಕೆಲಸ ತೆಗೆಯುತ್ತಿದೆಯೆಂದೂ ದೂತ ತಿಳಿಸಿದ. "ಜಿನೇಶ್ವರಾ! ಚಾಣಕ್ಯರಾಜ್ಯದಲ್ಲಿ ಪರಧರ್ಮಸಹಿಷ್ಣುತೆಯಿಲ್ಲವಾಯಿತೆ? ಎಂಥ ಕಾಲ ಬಂದಿತು?" ಎಂದು ಬೈದುಕೊಳ್ಳುತ್ತಾ ಜೀವಸಿದ್ಧಿ ಬೇಗ ಕಾಲು ಹಾಕಲಾರಂಭಿಸಿದ. "ಎಲೋ! ದಿಗಂಬರ! ಇದು ನಾಲ್ಕನೆಯ ಅಪರಾಧ! ಸರ್ವಸಹಿಷ್ಣುಗಳಾದ ನಮ್ಮ ಆಚಾರ್ಯರನ್ನು ಹೀಗೆ ನಡು ಬೀದಿಯಲ್ಲಿ ಹೀಯಾಳಿಸುವೆಯಾ? ನಾಸಿಕ್ತ ಧರ್ಮಬಿಟ್ಟು ಅವರಿಗೆ ಯಾವುದರಲ್ಲೂ ತಿರಸ್ಕಾರವಿಲ್ಲ! ಸಂನ್ಯಾಸದ ಹೆಸರಿನಲ್ಲಿ ಜನ ವಂಚನೆ ಆಚಾರ್ಯರಿಗಾಗದು. ಇದು ಅಧರ್ಮ, ರಾಷ್ಟ್ರದ್ರೋಹ ಎಂಬುದು ಅವರ ನಿಶ್ಚಯ. ಸಂನ್ಯಾಸಿಗಳು ಮಾತ್ರವಲ್ಲ. ನಂದರಾಜ್ಯದ ಎಲ್ಲ ವಿಟ, ವಿದೂಷಕ, ನಟ, ಗಾಯಕ, ವಂಚಕ, ಕಿತವ (ಜೂಜುಕೋರ) ವಿಲಾಸಿಗಳನ್ನೂ ಹೀಗೇ ಹಿಡಿತರುವಂತೆ ಆಜ್ಞೆಯಾಗಿದೆ! ದುಡಿಯದೇ ಉಣ್ಣುವುದಕ್ಕೆ, ಆರಮನೆಗೆ ಅಂಟಿ ಕೊಂಡಿರುವುದಕ್ಕೆ ಇದು ಸೂಳೆಯರ ರಾಜ್ಯವಲ್ಲ. ತಿಳಿಯಿತೆ? ಈ ಆಜ್ಞೆಯನ್ನು ನಾಳೆ ಪರಿಪಾಲಿಸುವೆವು. ಇಂದು ಕಪಟ ಸಂನ್ಯಾಸಿಗಳನ್ನು ಮಾತ್ರ ಹಿಡಿಯುತ್ತಿರುವೆವು. ವಾದ ಮಾಡುವುದಾದರೆ ಆಚಾರ್ಯರ ಬಳಿ ಬಾ. ಜೀವಭಯವಿದ್ದರೆ ಓಡು. ನಮ್ಮೊಡನೆ ವಾದವಾಡುತ್ತ ಕೆಲಸಕ್ಕೆ ಅಡ್ಡಿ ಬರಬೇಡ'' ಎನ್ನುತ್ತಾ, ಚಾರರು ಜೀವಸಿದ್ಧಿಯನ್ನು ಹೊರದಬ್ಬಿದರು. ಜನಸಂದಣಿ ಇದನ್ನಾಲಿಸುತ್ತಾ ನಾನಾ ರೀತಿಯಲ್ಲಿ ಮಾತಾಡಿಕೊಳ್ಳುತ್ತಿದ್ದರು. ಮೆಚ್ಚುವವರೂ, ದೂಷಿಸುವವರೂ, ಯಾರೂ ಹೇಗೆ ಕೇಳಿದರೆ ಅತ್ತ ಒಪ್ಪುವವರೂ, 'ನಮಗೇಕೆ ಇದು?' ಎಂದು ಉದಾಸೀನ ಮಾಡುವರೂ ಜಾತ್ರೆಯಂತೆ ನಿಂತು ಆಲಿಸುತ್ತಾ ಹಿಂದೆಂದೂ ನಡೆಯದ ಈ ಬಗೆಯ ರಾಜಾಜ್ಞೆಯನ್ನು ವಿಮರ್ಶಿಸುತ್ತಾ ನಡೆಯುತ್ತಿದ್ದರು.

  

"ದುರಾತ್ಮನಾದ ಆ ಚಂದನದಾಸ ಶೆಟ್ಟಿಯನ್ನು ಬರಮಾಡು" ಎಂದು ಚಾಣಕ್ಯನ ಅಪ್ಪಣೆಯಾಯಿತು. ದೂತರು ಶೆಟ್ಟಿಯನ್ನು ಬಂಧಿಸಿ ಎಳೆ ತಂದು ಚಾಣಕ್ಯನ ಮುಂದೆ ನಿಲ್ಲಿಸಿದರು. ವಿಚಾರಣೆ ಆರಂಭವಾಯಿತು.

ಚಾಣಕ್ಯ ; "ಏನಯ್ಯ! ನಿನ್ನ ವ್ಯಾಪಾರ !"

ಶೆಟ್ಟಿ ; "ಬಳೆ ವ್ಯಾಪಾರ ಸ್ವಾಮಿ! ಸ್ತ್ರೀಯರು ಧರಿಸುವ ನಾನಾ ಬಣ್ಣದ ಶಂಖದ ಬಳೆಗಳನ್ನೂ, ಬಂಗಾರದ ಬಳೆಗಳನ್ನೂ, ಮುತ್ತಿನ ಬಳೆಗಳನ್ನೂ, ಮಾರುವುದು ನಮ್ಮ ಕಸುಬು."

ಚಾಣಕ್ಯ : "ಗಂಡಸರಿಗೂ ನೀನು ಬಳೆಗಳನ್ನು ಮಾರುವೆಯೆಂದು ನಿನ್ನ ಮೇಲೆ ದೂರು ಬಂದಿದೆ !"

ಶೆಟ್ಟಿ : "ಈ ರಾಜ್ಯದ ಗಂಡಸರು ಬಳೆ ಹಾಕಿಕೊಳ್ಳುವಷ್ಟು ಮೂರ್ಖರಲ್ಲ, ಪ್ರಧಾನಿಗಳೇ ! ಮಾರುವಷ್ಟು ಮೂರ್ಖನೂ ನಾನಲ್ಲ!"

ಚಾಣಕ್ಯ ; "ಹಾಗಾದರೆ ನಿನ್ನ ಮೂರ್ಖತನ ಯಾವ ಬಗೆಯದು?"

ಶೆಟ್ಟಿ ; "ಇದೆಂಥ ಪ್ರಶ್ನೆ! ನಿರಪರಾಧಿಯನ್ನು ವಿನಾಕಾರಣ ಎಳೆತರಿಸಿ, ಹೀಗೆಲ್ಲ ವ್ಯಂಗ್ಯವಾಡಿ ತೇಜೋವಧೆ ಮಾಡುವುದನ್ನು ನಂದರಾಜ್ಯದಲ್ಲಿ ಹಿಂದೆಂದೂ ಕೇಳರಿಯರು, ಜನ! "

ಚಾಣಕ್ಯ : "ರಾಜದ್ರೋಹವೆಂಬುದನ್ನು ಮಾಡಿ, ಮುಚ್ಚಿಡುವುದು ಮೂರ್ಖತನವಲ್ಲವೊ? "

ಶೆಟ್ಟಿ : "ಇದು ನಿಶ್ಚಯವಾಗಿ ಮೂರ್ಖತನ ! ಆದರೆ ನಾನೇನೂ ಅಪರಾಧ ಮಾಡಿಲ್ಲ !"

ಚಾಣಕ್ಯ : ''ಚಂದ್ರಗುಪ್ತರಾಜ್ಯಕ್ಕಿಂತ ನಂದರಾಜ್ಯವೇ ವಾಸಿ ಯೆಂದೂ, ನಂದರಾಜರು ಸತ್ತ ಬಳಿಕ ಚಂದ್ರಗುಪ್ತರಾಜ್ಯದಲ್ಲಿರುತ್ತ, ಅವನ ಪ್ರಧಾನಿಯ ಎದುರೇ ವಾದಿಸುವುದು ರಾಜದ್ರೋಹವಲ್ಲವೊ ?''

ಶೆಟ್ಟಿ : "ತಪ್ಪಾಯಿತು, ಒಡೆಯರೆ ! ತಾವಾಗಿ ಕೆರಳಿಸಿದ್ದರಿಂದ ಬಾಯಿತಪ್ಪಿ ಹಾಗೆ ಹೇಳಿದೆನು."

ಚಾಣಕ್ಯ : "ಗುಣನಿಧಿಯಾದ ಚಂದ್ರಗುಪ್ತನನ್ನು ಬಿಟ್ಟು, ಸತ್ತ ನಂದರ ಆತ್ಮಶಾಂತಿಗೆಂದು ಸಲ್ಲದ ಉಪಾಯಗಳನ್ನು ಹುಡುಕುತ್ತ, ನಿನ್ನ ಮನೆಯಲ್ಲಿ ತನ್ನ ಹೆಂಡತಿ ಮಕ್ಕಳನ್ನು ಬಿಟ್ಟು, ಹೊರಗೆ ಓಡಿದ ಅಮಾತ್ಯ ರಾಕ್ಷಸನಿಗೆ ನೀನು ಬಳಿಗಳನ್ನು ತೊಡಿಸಲಿಲ್ಲವಷ್ಟೆ? ಗಂಡಸರಿಗೆ ಬಳೆ ಮಾರ ದಿದ್ದರೆ ಇದು ಹೇಗೆ ನಡೆಯಿತು ?''

ಶೆಟ್ಟಿ : (ಚಾಣಕ್ಯನ ಈ ಚುಚ್ಚು ಮಾತಿಗೆ, ಮಿತ್ರನಿಂದೆಗೆ ಮನ ನೊಂದು, ಕಣ್ಣೀರು ಸುರಿಸುತ್ತಾ) "ಪ್ರಭು! ಯಾರೋ ಅಮಾತ್ಯರಿಗಾಗದ ಶತ್ರುಗಳು ಈ ವದಂತಿಯನ್ನು ಹೊರಡಿಸಿರಬೇಕು ! ಜೈನನಾದ ನನಗೂ ಬ್ರಾಹ್ಮಣನಾದ ಅಮಾತ್ಯನಿಗೂ ಏನುಸಂಬಂಧ ?''

ಚಾಣಕ್ಯ : ''ಹಾಗಾದರೆ ಬ್ರಾಹ್ಮಣನಾದ ಅದೇ ಅಮಾತ್ಯ ಜೀವ ಸಿದ್ಧಿಯೆಂಬ ದಿಗಂಬರನಾದ ಜೈನ ಮುನಿಯ ಆಪ್ತಮಿತ್ರನಾದದ್ದು ಹೇಗೆ ? ನಂದರಾಜ್ಯದ ಪ್ರಭಾವವೊ ?''

ಶೆಟ್ಟಿ : ''ಯಾವ ರಾಜ್ಯದ ಪ್ರಭಾವ ಹೇಗಿದ್ದರೆ ನನಗೇನು ? ನನಗೂ ರಾಕ್ಷಸನಿಗೂ ಸಂಬಂಧವಿಲ್ಲ."

ಚಾಣಕ್ಯ : "ಸಂಬಂಧವಿರುವುದಾಗಿ ನಾನು ತೋರಿಸಿ ಕೊಟ್ಟರೆ, ಯಾವ ಶಿಕ್ಷೆಯನ್ನು ಸ್ವಾಗತಿಸುವೆ ?''

ಶೆಟ್ಟಿ : (ಆಲೋಚಿಸಿ) "ಪ್ರಭು! ನಡೆದುದು ಇಷ್ಟು. ಮರೆ ಮಾಚದೇ ಹೇಳುತ್ತೇನೆ. ಅಮಾತ್ಯರು ನಂದರ ಕೊಲೆಯಾದ ಬಳಿಕ, ನಾಲ್ಕು ದಿನ ರಹಸ್ಯದಲ್ಲಿ ನನ್ನ ಮನೆಯಲ್ಲಿ, ಊರಿನ ವಾತಾವರಣ ತಿಳಿಯಾಗುವ ತನಕ, ತಮ್ಮ ಪತ್ನೀಪುತ್ರರನ್ನು ಬಿಟ್ಟಿದ್ದುಂಟು. ಆಮೇಲೆ ಎಲ್ಲಿಯೋ ಎಲ್ಲರನ್ನೂ ಕರೆದೊಯ್ದರು."

ಚಾಣಕ್ಯ : "ಎಲ್ಲಿಗೆ ಒಯ್ದರು ?"

ಶೆಟ್ಟಿ : "ನನಗೆ ಹೇಗೆ ತಿಳಿಯಬೇಕು? ನಾನು ರಾಜಕಾರ್ಯ ಬಲ್ಲವನಲ್ಲ. ನಾನು ಕೇಳಲೂ ಇಲ್ಲ."

ಚಾಣಕ್ಯ : "ಇಂದೋ ನಾಳೆಯೋ ಪ್ರಸವಿಸಲಿರುವ ಪತ್ನಿಯನ್ನು ಮತಿಗೇಡಿ ಗಂಡ ಮಾತ್ರ ಹಾಗೆ ಬೇರೆ ಕಡೆ ಕರೆದೊಯ್ಯಬಲ್ಲನಲ್ಲವೆ? ಯಾರಿಗೆ ಸುಳ್ಳು ಹೇಳುತ್ತಿರುವೆಯೆಂಬುದು ತಿಳಿದಿದೆಯೇನೋ, ಕಳ್ಳಸೆಟ್ಟಿ?"

ಶೆಟ್ಟಿ : "ಅಮಾತ್ಯರು ಮತಿಗೇಡಿಯೋ ಅಲ್ಲವೋ ತಾವೇ ನಿಶ್ಚಯಿಸಿಕೊಳ್ಳಿ."

ಚಾಣಕ್ಯ : "ನಿನ್ನ ಮನೆಯಲ್ಲಿರುವ ಅಮಾತ್ಯ ಪತ್ನಿಯನ್ನೂ, ಪುತ್ರನನ್ನೂ ಎಳೆತರಿಸಿದರೆ, ನಿನ್ನ ಮತಿಗೇಡಿತನವೂ ಬಹಿರಂಗವಾಗುತ್ತದೆ. ನೀನಾಗಿಯೇ ಹೇಳುವೆಯೋ, ನಾನಾಗಿಯೇ ಸ್ಥಾಪಿಸಲೋ ?"

ಶೆಟ್ಟಿ : (ಬೇಸತ್ತು) "ಆರ್ಯರೇ ! ಬಹಳ ಮಾತಾಡಿ ಏನು ? ಅಮಾತ್ಯರ ಕುಟುಂಬ ನನ್ನಲ್ಲಿ ಖಂಡಿತ ಇಲ್ಲ; ಇದ್ದರೂ ಅವರನ್ನು ತಮ್ಮ ವಶಕ್ಕೆ ಒಪ್ಪಿಸಲಾರನೆಂದ ಮೇಲೆ, ಇಲ್ಲದಿರುವಾಗ ಮಾತೇಕೆ ?"

ಚಾಣಕ್ಯ : (ಮನದಲ್ಲೇ ಚಂದನದಾಸನ ಮಿತ್ರನಿಷ್ಠೆಗೆ ಮೆಚ್ಚಿ, 'ಎಲ, ರಾಕ್ಷಸ, ಇವನಿರುವಲ್ಲಿಗೆ ನಿನ್ನನ್ನು ಹೇಗೆ ಎಳೆತರಿಸುವೆನು, ನನ್ನ

ಕಂತ್ರಸಿದ್ಧಿ ನೋಡುತ್ತಿರು!' ಎಂದು ಕೊಂಡು,) "ಎಲ, ದುರಾತ್ಮ ಶೆಟ್ಟಿ! ಇದೇ ನಿನ್ನ ನಿಶ್ಚಯವೋ? ನಮಗೆ ಅನ್ಯರಾಜಕಾರ್ಯವಿರುವುದು. ಹರಟುತ್ತಿರಲು ವೇಳೆಯಿಲ್ಲ. ನಿನ್ನ ನಿಶ್ಚಯವನ್ನು ಬೊಗಳು!"

ಶೆಟ್ಟಿ: "ಹೌದು ಸ್ವಾಮಿ! ಅದೇ ನನ್ನ ನಿಶ್ಚಯ."

ಚಾಣಕ್ಯ: "ಹಾಗಾದರೆ ನಮ್ಮ ಆಜ್ಞೆ ಕೇಳು. ಮೊದಲು ರಾಕ್ಷಸನ ಸಂಬಂಧವಿಲ್ಲವೆಂದು ಹೇಳಿ, ಆಮೇಲೆ ಅವನ ಕುಟುಂಬ ನಾಲ್ಕು ದಿನ ನಿನ್ನಲ್ಲಿದ್ದುದನ್ನೊಪ್ಪಿ, ಬಳಿಕ ಇಲ್ಲವೆಂದು ವಾದಿಸಿ, ಈಗ ಇದ್ದರೂ ನಮಗೆ ಒಪ್ಪಿಸುವುದಿಲ್ಲವೆಂದು ಹಠ ಮಾಡುತ್ತಿರುವ ನಿನಗೆ ಮರಣ ದಂಡನೆ ವಿಧಿಸಿದ್ದೇನೆ. ಆ ದಿನವನ್ನೆದುರು ನೋಡುತ್ತ ಸೆರೆಮನೆಯಲ್ಲಿರಲಿ" ಎಂದು ರಾಜ ಭಟರಿಗೆ ಆಣತಿಯಿತ್ತನು.

  

"ಅಮಾತ್ಯನ ಆಪ್ತ ಪರಿವಾರದ ಶಕಟಾಯನನೇಕೆ ನಮ್ಮನ್ನು ಬಂದು ಕಾಣಲಿಲ್ಲ?" ಎಂದು ಚಾಣಕ್ಯ ದೂತರನ್ನು ಕೇಳಿದ. ಅರಮನೆಯ ರಾಯಸದ ಸಾಮಗ್ರಿಗಳನ್ನೂ, ಪತ್ರ ಭಂಡಾರದ ಮೊಹರನ್ನೂ, ರಹಸ್ಯ ದಾಖಲೆಗಳನ್ನೂ, ಅಮಾತ್ಯರ ಮುದ್ರೆಯುಂಗುರವನ್ನೂ ಕೂಡಲೇ ತಂದೊಪ್ಪಿಸುವಂತೆ ಆಜ್ಞಾಪಿಸಿದವೆಂದು ತಿಳಿಸಿ, ಕರೆತನ್ನಿರಿ." ಎಂದು ಅಣತಿಯಿತ್ತ!

ಶಕಟಾಯನ: "ಆ ದುಷ್ಟ ದೊರೆಗಳ ಕಾಲದಲ್ಲಿ ಮಗನನ್ನು ಕೊಂದರು! ಈಗ ನನ್ನ ಪ್ರಾಣವನ್ನೇ ಕೊಂಡೊಯ್ಯಲಿ! ಮಿತ್ರನಾದ ರಾಕ್ಷಸನಿಗೆ ಮಾತ್ರ ದ್ರೋಹ ಮಾಡಲಾರೆ" ಎಂಬ ಉತ್ತರವನ್ನು ಹೇಳಿ ಕಳುಹಿದ. ಕೇಳಿ ಕಿಡಿಕಿಡಿಯಾದ ಚಾಣಕ್ಯ: "ಹಾಗಾದರೆ ಅವನನ್ನು ಈಗಲೇ ಶೂಲಕ್ಕೆ ಹಾಕಿರಿ" ಎಂದು ಶ್ರುತವಿನೀತನಿಗೆ ಆಜ್ಞಾಪಿಸಿದ. ಪಶು ಲೋಮನೂ ಸಮಿದ್ಧಾರ್ಥಕನೂ ಕಟುಕರ ವೇಷದಲ್ಲಿ ವೃದ್ಧ ಶಕಟಾಯನ

ನನ್ನು ವಧಸ್ಥಾನಕ್ಕೆ, ಸ್ಮಶಾನಕ್ಕೆ ಕೊಂಡೊಯ್ದರು. ಅವನ ಹೆಂಡತಿ ಗೋಳಿಡುತ್ತಾ ಎದೆಯೊಡೆದು ಸತ್ತಳು! ಶಕಟಾಯನನನ್ನು ಇನ್ನೇನು ಶೂಲಕ್ಕೇರಿಸಬೇಕೆನ್ನುವಷ್ಟರಲ್ಲಿ ಸಿದಾರ್ಥಕ ಎಲ್ಲಿಂದಲೋ ಅಶ್ವಾರೂಢನಾಗಿ ಕೈಯ್ಯಲ್ಲಿ ಬಿಚ್ಚಿದ ಕತ್ತಿಯನ್ನು ಹಿಡಿದು, ಕಟುಕರನ್ನು ಬೆದರಿಸುವಂತೆ ಭಯಂಕರನಾಗಿ ಅರ್ಭಟಿಸುತ್ತ ಬಂದು, ಶಕಟಾಯನನನ್ನು ಬಿಡಿಸಿ, ಕುದುರೆಯ ಮೇಲೆ ಏರಿಸಿಕೊಂಡು ಹೊರಟು ಹೋದ. ಭಯಭ್ರಾಂತ ರಾದವರಂತೆ ನಟಿಸುತ್ತಾ ಶಿಷ್ಯರು ಆಚಾರ್ಯನಿಗೆ ನಡೆದುದನ್ನು ತಿಳಿಸಿದರು. ಆಚಾರ್ಯ ಹರ್ಷಿಸಿದ!

ಕುದುರೆ ಏರಿ ಹೊರಟ ಶಕಟಾಯನ ಸಿದ್ಧಾರ್ಥಕರಿಗೆ ಊರಾಚೆಗೆ ಒಬ್ಬನೇ ನಡೆದು ಹೋಗುತ್ತಿದ್ದ ಜೀವಸಿದ್ಧಿ ಕಣ್ಣಿಗೆ ಬಿದ್ದ! "ಏನು, ಮುನಿಗಳು! ಎತ್ತ ಹೊರಟಿರಿ?'' ಎಂದು ಸಿದ್ಧಾರ್ಥಕ ಪ್ರಶ್ನಿಸಿದ. ''ಏನಯ್ಯ! ನಿನಗಿದೇನು ರಾಜಕಾರ್ಯ? ಎತ್ತ ಹೊರಟೆ?'' ಎಂದು ಜೀವ ಸಿದ್ಧಿಯೂ ಮರುಪ್ರಶ್ನಿಸಿದ. ನಡೆದುದನ್ನೆಲ್ಲ ಸಿದ್ಧಾರ್ಥಕ ಹೇಳಿ, "ಹಾಳು ಚಾಣಕ್ಯ ರಾಜ್ಯದಲ್ಲಿ ಬ್ರಾಹ್ಮಣ, ಜೈನ, ಯುವಕ, ವೃದ್ಧ, ಸ್ತ್ರೀ, ಪುರುಷ ಭೇದವಿಲ್ಲದೆ ಎಲ್ಲರಿಗೂ ಹಿಂಸೆತಟ್ಟುತ್ತಿದೆ; ಪರ್ವತ ರಾಜ್ಯಕ್ಕಾದರೂ ಹೋಗಿ ಬದುಕೋಣವೆಂದಿದ್ದೇವೆ.'' ಎಂದ. ''ನಾನೂ ಅತ್ತಲೇ! ನೀವು ನಡೆ ಯಿರಿ. ನಾನು ಬರುತ್ತೇನೆ'' ಎಂದವನೇ ಹೊರಟ, ಜೀವಸಿದ್ಧಿ. ಮೊದಲು ರಾಕ್ಷಸನಲ್ಲಿ ಸಿದ್ಧಾರ್ಥಕ ಶಕಟಾಯನೊಡನೆ ಬಂದು ಸೇರುವ ವೇಳೆಗಾಗಲೇ, ಭದ್ರಭಟಾದಿಗಳನ್ನು ನೋಡಿ ಆಶ್ಚರ್ಯಪಟ್ಟವನಂತೆ ನಟಿಸಿದ ! ಏನು ವಿಷಯವೆಂದು ಕೇಳಿದ! ರಾಕ್ಷಸ ಮಲಯಕೇತುವನ್ನು ನೋಡಿ ''ನೋಡಿ ದೆಯ, ಕುಮಾರ! ಚಂದ್ರಗುಪ್ತನ ರಾಜ್ಯ ಎಷ್ಟು ಅಪ್ರಿಯವಾಗಿದೆ! ನಮ್ಮ ಹಳೆಯ ಸೇನಾಪತಿಗಳೆಲ್ಲ ಬಂದರು ! ಇಂದು ವೃದ್ಧ ಶಕಟಾಯನ! ನಾಳೆ ಯಾರೋ?'' ಎಂದುದ್ಗರಿಸಿದ. ''ಜೀವಸಿದ್ಧಿ ನಿಧಾನವಾಗಿ ನಡೆದು ಬರುತ್ತಿ ದ್ದಾರೆ." ಎಂದು ಸಿದ್ಧಾರ್ಥಕ ಉಸುರಿದ. ಆ ವೇಳೆಗೆ ಬಾಗುರಾಯಣನೂ ಅಲ್ಲಿಗೆ ಬಂದು ವಿಸ್ಮಯ ಪಟ್ಟವನಂತೆ ನಟಿಸಿದ. ''ಕುಮಾರ ! ಎಲ್ಲ ನಮ್ಮ ಅನುಕೂಲಕ್ಕೆ ನಡೆಯುತ್ತಿದೆ. ನಿನ್ನ ಅದೃಷ್ಟ! ನಿಮಗೆ ಜೀವಸಿದ್ಧಿಯೂ

ನನಗೆ ಸಿದ್ಧಾರ್ಥಕನೂ ದೊರಿತ ಮೇಲೆ ರಾಜಕಾರ್ಯಕ್ಕೇನು ಕೊರತೆ ?" ಎನ್ನುತ್ತಾ ಹುಣ್ಣಿಮೆಯ ದಿನಕ್ಕೆ ಸೈನ್ಯ ಪ್ರಯಾಣಕ್ಕೆ ಕಾಯುತ್ತಿದ್ದನು.

  

ಇನ್ನೆರಡು ದಿನ ಬಿಟ್ಟು ಸಿದ್ಧಾರ್ಥಕ ಚಾಣಕ್ಯನ ಮಾತನ್ನು ನೆನೆಸಿಕೊಂಡು ಶಕಟಾಯನನನ್ನು ಕೇಳಿದ. "ಹಿರಿಯರೆ ! ಒಬ್ಬ ನಿಪುಣ ಕವಿ ವೈದಿಕಾಕ್ಷರದ ಮೋಡಿಯಲ್ಲಿ ಇದೇನೋ ಚಮತ್ಕಾರದ ಬರೆವಣಿಗೆಯನ್ನು ಬರೆದುಕೊಟ್ಟಿರುವನು. ಬಲಗಡೆಯಿಂದಕ್ಕೆ ಎಡಕ್ಕೆ ಓದಿದರೆ ಒಂದರ್ಥವೆಂದೂ, ಎಡದಿಂದ ಬಲಕ್ಕೆ ಓದಿದರೆ ಒಂದರ್ಥವೆಂದೂ, ನಡುನಡುವೆ ನಿಯತಾಂಕಿಯ ಅಕ್ಷರಗಳನ್ನು ಕೂಡಿಸಿದರೆ ವಿಚಿತ್ರಾರ್ಥವಾಗುವದೆಂದೂ, ಅಕ್ಷರ ಅಂಕೆಗಳನ್ನು ಚಿತ್ರಿಸಿದರೆ ಅದ್ಭುತ ಚಿತ್ರವಾಗುವುದೆಂದೂ ಹೇಳಿದ್ದ. ಪಾಟಲೀಪುತ್ರದಲ್ಲಿ ನೋಡುವುದಕ್ಕೆ ವೇಳೆಯೇ ಬರಲಿಲ್ಲ. ಹಾಳು ಯುದ್ಧವೆಲ್ಲ ಈಗ ಮುಗಿದಿದೆ. ನನಗೂ ಈಗ ಹೊತ್ತು ಹೋಗುತ್ತಿಲ್ಲ. ದುಂಡಾದ ನಿಮ್ಮ ಅಕ್ಷರಗಳಲ್ಲಿ ಬರೆದು ಕೊಟ್ಟರೆ ಚಮತ್ಕಾರ ತೋರಿಸುತ್ತೇನೆ'' ಎಂದ. ಶಕಟಾಯನ ಒಪ್ಪಿದರೂ, ಕಾಗದ, ಲೇಖನಿ ಇಲ್ಲವೆಂದು ಪೇಚಾಡಿದ. ಸಿದ್ಧಾರ್ಥಕ: "ನಾನು ಬರುತ್ತಾ ಕುದುರೆಯ ಮೇಲೆ ನಿಮ್ಮದಷ್ಟು ಖಾಲಿ ಹಾಳೆಗಳನ್ನೂ, ನಿಮ್ಮ ಲೇಖನಿಗಳನ್ನೂ ತಂದಿರುವೆ'' ಎನ್ನುತ್ತಾ ಒಪ್ಪಿಸಿದ. ಅವನ ದೂರ ದೃಷ್ಟಿಗೆ ಮೆಚ್ಚಿ ಶಕಟಾಯನ ಬರೆಯಲಾದ! ಆ ಬರೆವಣಿಗೆ ಹೀಗಿತ್ತು:– ''ಸ್ವಸ್ತಿ. ಎಲ್ಲಿಂದಲೋ, ಯಾವನೋ, ಮತ್ತಾವನೋ ಒಬ್ಬ ವಿಶಿಷ್ಟ ಪುರುಷನಿಗೆ ತಿಳಿಸುವುದಿಷ್ಟು. ನಮ್ಮ ಪ್ರತಿಪಕ್ಷವನ್ನು ನಿರಾಕರಿಸಿ ಸತ್ಯವಾದಿಯು ಸತ್ಯವನ್ನೇ ತೋರಿಸಿ ನಿದರ್ಶನವಮಾಡಿಸಿಯಾಗಿದೆ. ಈಗ ಉಳಿದಿದುದಿಷ್ಟು; ನಮ್ಮ ಸ್ನೇಹಿತರಿಗೆ ಮೊದಲು ಸಂಧಿಕಾಲದಲ್ಲಿ ವಾಗ್ದಾನ ಮಾಡಿದ್ದಂತೆ, ಅವರವರಿಗೆ ಕೊಡಬೇಕಾದುದನ್ನಿತ್ತು ಸತ್ಯವಂತನು ಪ್ರೀತಿಯನ್ನು ಉಂಟು ಮಾಡಬೇಕು. ಇವರು ಆಗ ಸ್ವಾಶ್ರಯವನ್ನು ಬಿಟ್ಟು, ಅದನ್ನೇ ನಾಶ ಮಾಡಿ ಉಪಕಾರಿಯನ್ನು ಆಶ್ರಯಿಸುವರು. ಇವರಲ್ಲಿ ಕೆಲವರು ಶತ್ರುವಿನ ಕೋಶವನ್ನೂ, ಕೆಲವರು ಆನೆಯ ಹಿಂಡನ್ನೂ, ಕೆಲವರು

ಭೂಮಿಯನ್ನೂ ಆಸೆಪಡುತ್ತಾರೆ. ಸತ್ಯವಂತನು ಕಳುಹಿದ ಅಲಂಕಾರ ತ್ರಯವೂ ಸೇರಿತು. ಏನೂ ಬರೆಯುದೇ ಇರಬಾರದೆಂದೂ, ಬರಿಗೈಯ್ಯಲ್ಲಿ ಕಳುಹಬಾರದೆಂದೂ ಏನನ್ನೋ ಕಳುಹಿರುವೆನು. ಬಾಯಿಮಾತನ್ನು ಈ ಆಪ್ತತಮನಾದ ಸಿದ್ಧಾರ್ಥಕನಿಂದಲೇ ಕೇಳಿ ತಿಳಿಯಬೇಕು.'' ಎಂಬುದು ಆ ಬರೆವಣಿಗೆಯ ಒಕ್ಕಣಿಕೆಯಾಗಿತ್ತು.

ದುಂಡಾದ ಅಕ್ಷರಗಳಲ್ಲಿ ಬರೆದ ಶಕಟಾಯನನಿಗೆ ಇದರ ತಲೆ, ಬಾಲ, ಗರ್ಭ ಒಂದೂ ತಿಳಿಯಲಿಲ್ಲ! ''ಏನಯ್ಯ! ಏನೋ ರಾಜಕಾರ್ಯದ ಪತ್ರ ವಿರುವಂತಿದೆ?" ಎಂದು ಕೇಳಿದ. ಸಿದ್ಧಾರ್ಥಕ ಗಹಗಹಿಸಿ ನಗುತ್ತಾ! "ನೋಡಿದಿರಾ! ಮೋಸ ಹೋದಿರಿ! ಅದೇ ಈ ಬರೆವಣಿಗೆಯ ಸ್ವಾರಸ್ಯ; ಇದು ವೇದಾಂತಾರ್ಥವೂ ಆಗುತ್ತದೆ. ವಿಶಿಷ್ಟ ಪುರುಷನೆಂದರೆ ದೇವರು. ಸತ್ಯ ವಂತನೆಂದರೆ ಮುಮುಕ್ಷು. ಪ್ರತಿಪಕ್ಷವೆಂದರೆ ಅವನ ಪಾಪರಾಶಿ. ವಾಗ್ದಾನ ವೆಂದರೆ ಶರಣಾಗತಿ; ಸ್ವಾಶ್ರಯವೆಂದರೆ ಶರೀರ. ಇದರ ನಾಶವೆಂದರೆ ಅಭಿ ಮಾನ ತ್ಯಾಗ. ಅಲಂಕಾರತ್ರಯವೆಂದರೆ, ತ್ಯಾಗ, ಅಹಿಂಸೆ, ಇಂದ್ರಿಯ ನಿಗ್ರಹ...." ಇತ್ಯಾದಿ ಹೇಳುತ್ತಾ ಹೋದ. ಶಕಟಾಯನನಿಗೆ ತಲೆ ಚಿಟ್ಟು ಹಿಡಿಯಿತು! "ಸಾಕಪ್ಪ! ನಿನ್ನ ವೇದಾಂತ! ಇದರಲ್ಲಿ ಏನು ಉಳಿದ ಚಮ ತ್ಕಾರ?" ಎಂದು ಕೇಳಿದ. ಸಿದ್ಧಾರ್ಥಕ ಅಕ್ಷರಗಳನ್ನು ಅಲ್ಲಲ್ಲಿ ಎಣಿಸುವ ವನಂತೆ ಲೆಕ್ಕ ಹಾಕಿ ನಟಿಸಿ, ''ಎಲ್ಲೋ ಏನೋ ಬಿಟ್ಟು ಹೋದಂತಿದೆ. ಅಥವಾ ನಾನೇ ಸರಿಯಾಗಿ ಗ್ರಹಿಸಲಿಲ್ಲವೋ, ಏನೋ! ಆ ಯೋಗೀಶ್ವರ ನನ್ನೇ ಕೇಳಿ ಮತ್ತೆ ತಿಳಿಸುತ್ತೇನೆ." ಎಂದು ಹೇಳಿ ಪತ್ರವನ್ನು ಸುರುಳಿ ಸುತ್ತಿ ಕೊಂಡೊಯ್ದ. ರಹಸ್ಯದಲ್ಲಿ ರಾಕ್ಷಸನ ಮುದ್ರಿಕೆಯಿಂದ ಇದಕ್ಕೆ ಮುದ್ರೆಯೊತ್ತಿ ಸಕಾಲವನ್ನು ಕಾಯಲಾರಂಭಿಸಿದ.

ನಾಲ್ಕು ದಿನಗಳಾದ ಮೇಲೆ ಆ ಮುದ್ರೆಯುಂಗುರವನ್ನು ರಾಕ್ಷಸನಿಗೆ ಹೇಗಾದರೂ ತಲುಪಿಸಲು ಸಿದ್ಧಾರ್ಥಕ ಸರಿಯಾದ ಸಮಯವನ್ನು ಕಾಯು ತ್ತಿದ್ದ.

ಶಕಟಾಯನನು ರಾಕ್ಷಸನೊಡಗೂಡಿದ ಬಳಿಕ ಒಂದು ದಿನ ಅಮಾತ್ಯನು ಮಲಯಕೇತುವಿಗೆ ''ಇನ್ನು ಮೇಲೆ ರಾಜಕಾರ್ಯಪತ್ರಗಳೇನೇ

ಇದ್ದರೂ ಹಿಂದಿನಂತೆ ಶಕಟಾಯನನನೇ ರಾಯಸದವನಾಗಿದ್ದು ಬರೆಯುತ್ತಾನೆ''ನ್ನಲು ಮಲಯಕೇತುವು ಅದನ್ನನುಮೋದಿಸಿ, ಶಕಟಾಯನನ್ನು ವಸ್ತ್ರ ಭೂಷಣಗಳಿಂದ ಬಹುಮಾನಿಸಿದನು.

ಬಾಗುರಾಯಣನನ್ನು ಕರೆಸಿ ಅಮಾತ್ಯ : ''ಅಯ್ಯಾ ! ಅಂದು ಮಲಯಕೇತುವು ನಮಗೆ ಅನುಗ್ರಹಿಸಿದ್ದ ರಾಜಾರ್ಹವಾದ ಒಡವೆಗಳ ಪೆಟ್ಟಿಗೆಯನ್ನು ನಿನ್ನ ವಶಕ್ಕೆ ಕೊಟ್ಟಿದ್ದುಂಟಲ್ಲ, ಅದನ್ನಿತ್ತ ತಾ. ಇನ್ನು ಶಕಟಾಯನ ಅದರ ಉಸ್ತುವಾರಿ ನೋಡಿಕೊಳ್ಳುತ್ತಾನೆ'' ಎನ್ನಲು ಬಾಗುರಾಯಣ ಅದನ್ನು ತರಿಸಿಕೊಟ್ಟ. ತೆರೆದು ಒಡವೆಗಳನ್ನೆಲ್ಲ ನೋಡಿ, ಸರಿಯಾಗಿವೆಯೆಂದು ಹೇಳಿ, ಶಕಟಾಯನನ ವಶಕ್ಕೆ ರಾಕ್ಷಸ ಅದನ್ನು ಕೊಟ್ಟ. ಶಕಟಾಯನನು ''ಇದು ಪರಸ್ಥಳ. ನನಗೆ ಸ್ವಂತ ರಕ್ಷಣೆಯ ಮನೆಯೂ ಇಲ್ಲ. ತಮ್ಮ ಮುದ್ರಿಕೆಯುಂಗುರವಾದರೂ ಇದ್ದರೆ, ಅದರಿಂದ ಮೊಹರು ಮಾಡಿಟ್ಟು ರಕ್ಷಿಸುತ್ತಿದ್ದೆ.'' ಎನ್ನಲು, ರಾಕ್ಷಸ ಕೈಬೆರಳು ನೋಡಿಕೊಂಡು ''ಅಯ್ಯೋ! ಪಾಟಲೀಪುತ್ರದಿಂದ ಬರುವಾಗ್ಗೆ ಗೋಳಾಡುತ್ತಿದ್ದ ನನ್ನ ಪತ್ನಿಯನ್ನು ಸಂತೈಸಲು ನನ್ನ ಮುದ್ರಿಕೆಯ ಉಂಗುರವನ್ನೇ ಇತ್ತು ಬರಬೇಕಾಯಿತು ! ಏನು ಮಾಡುವುದು ?'' ಎಂದು ಪೇಚಾಡುತ್ತಿದ್ದ. ಸಿದ್ಧಾರ್ಥಕ ತನ್ನಲ್ಲಿದ್ದುದನ್ನು ಶಕಟಾಯನನಿಗೆ ಕೊಟ್ಟು ''ಪರವಾಗಿಲ್ಲ. ಇದರಿಂದಲೇ ಮುದ್ರಿಸಿರಿ'' ಎಂದ. ಅದನ್ನು ನೋಡಿದ ಶಕಟಾಯನ ''ಅಮಾತ್ಯರೇ! ಇದು ತಮ್ಮದೇ ಮುದ್ರಿಕೆ!'' ಎಂದಾನಂದ ಪಟ್ಟು ರಾಕ್ಷಸನ ಕೈಗೆ ಅದನ್ನಿತ್ತ. ರಾಕ್ಷಸ ಆಶ್ಚರ್ಯಪಟ್ಟು ''ಇದು ಹೇಗಯ್ಯಾ ನಿನ್ನ ಕೈಗೆ ಬಂದು ಸೇರಿತು?'' ಎಂದು ಕೇಳಿದ. ಸಿದ್ಧಾರ್ಥಕ: ''ಒಂದು ದಿನ ಬೀದಿಯೊಂದರಲ್ಲಿ ಹಾದು ಹೋಗುವಾಗ, ಆಡುತ್ತಿದ್ದ ಹುಡುಗರು ರಾಜಭಟರು ಕುದುರೆಯೇರಿ ಬರುತ್ತಿದ್ದುದನ್ನು ಕಂಡು ಭಯಾವಿಷ್ಟರಾಗಿ, ಬಿಟ್ಟುದನ್ನು ಬಿಟ್ಟು ಮನೆ ಹೊಕ್ಕರು. ಚಂದನದಾಸಶೆಟ್ಟಿಯ ಮನೆಯ ಸಮೀಪವಿದ್ದಿರಬೇಕು ! ಯಾರೋ ಹುಡುಗ ಆಟದ ಸಾಮಾನು ಬಿಟ್ಟು ಹೊರಟಾಗ ಅವನ ಕೈಯ್ಯಿಂದ ಇದು ಕೆಳಗೆ ಬಿದ್ದಿತು. ಒಳಗೆ ಹೋಗಿ ಕೊಡೋಣವೆಂದರೆ ರಾಜಭಟರು ಆ

ಮನೆಯ ಬಾಗಿಲಲ್ಲೇ ಬಹು ಹೊತ್ತು ನಿಂತರು. ಆಮೇಲೆ ಶಕಟಾಯನ ನಿಗೆ ಮರಣ ದಂಡನೆ ವಾರ್ತೆ ಕೇಳಿ, ಕುದುರೆಯ ಮೇಲೆ ಹಾರಿಸಿಕೊಂಡು ತರಬೇಕಾಯಿತು !'' ಎಂದು ವಿವರಿಸಿದ. ''ಇದರಲ್ಲಿ ನನ್ನ ಹೆಸರೇ ಇರು ವುದು ಕಾಕತಾಳೀಯ !'' ಎಂದ ರಾಕ್ಷಸ, ಶಕಟಾಯನನಿಗೆ "ಇನ್ನು ಮೇಲೆ ನನ್ನ ಸಂಬಂಧದ ಕಾಗದ ಪತ್ರಗಳನ್ನೆಲ್ಲ ಇದರಿಂದಲೇ ಮುದ್ರಿಸು" ಎಂದಪ್ಪಣೆ ಮಾಡಿದ.

ಪ್ರಾಣಿಯ ಬೇಟೆಗೆ ಚಾಣಕ್ಯ ಬೀಸಿದ ಬಲೆ ಸರಿಯಾಗಿ ಕೆಲಸ ಮಾಡಿತು ! ಪ್ರಾಣಿ ಯಾವ ಆತಂಕವೂ ಅನುಮಾನವೂ ಇಲ್ಲದೆ ಬಲೆ ಯೊಳಗೆ ಬಿತ್ತು! ತನ್ನ ಸುತ್ತ ಚಾಣಕ್ಯನ ಪರಿವಾರವೇ ಸುತ್ತುವರೆದಿದೆ ಯೆಂದು ಕನಸಿನಲ್ಲೂ ಕಾಣದ ರಾಕ್ಷಸ ಆ ರಾತ್ರಿ ತುಂಬ ಚೆನ್ನಾಗಿ ನಿದ್ರಿಸಿದ. ಬಾಗುರಾಯಣ, ಸಿದ್ಧಾರ್ಥಕರೂ ಸಹ ಆಚಾರ್ಯ ಪ್ರಸಾದದಿಂದ ನೆಮ್ಮದಿ ಯಾಗಿ ನಿದ್ರಿಸಿದರು.



## ಹತ್ತೊಂಭತ್ತನೆಯ ಅಧ್ಯಾಯ

# ಕಪಟ ಕಲಹ !

ಪರ್ವತೇಶನ ಉತ್ತರ ಕ್ರಿಯೆಗಳನ್ನೆಲ್ಲ ನಡೆಸಿದ ಚಾಣಕ್ಯನು ಸಾಯುವ ದಿನ ಪರ್ವತೇಶನ ಮೈಮೇಲಿದ್ದ ಒಡವೆಗಳನ್ನೆಲ್ಲ ತೆಗೆಸಿ, ಮೂರು ಭಾಗವನ್ನಾಗಿ ಮಾಡಿ, ಮೂರು ಪೆಟ್ಟಿಗೆಗಳಲ್ಲಿಟ್ಟು, ತನ್ನ ಆಪ್ತಶಿಷ್ಯರಾದ ವಿಶ್ವಾವಸು, ವಿಭಾವಸು, ಲೋಹಿತಾಕ್ಷರೆಂಬುವರನ್ನು ಕರೆಸಿ, ಅವನ್ನು ಅವರ ಕೈಗೆ ಕೊಟ್ಟ. ''ನೀವೀಗಲೇ ವರ್ತಕ ವೇಷದಲ್ಲಿ ಪರ್ವತ ರಾಜ್ಯಕ್ಕೆ ಹೋಗಿ ಈ ಒಡವೆಗಳನ್ನು ರಾಕ್ಷಸನಿಗೇ ಮಾರಿ, ಅವನು ಕೊಟ್ಟಷ್ಟು ಹಣವನ್ನು ತೆಗೆದುಕೊಳ್ಳಿರಿ. ಅಲ್ಲಿನ ಸಮಾಚಾರಗಳನ್ನೆಲ್ಲ ಸಿದ್ಧಾರ್ಥಕನ ಮೂಲಕ ತಿಳಿದು ಬಂದು ಹೇಳಿರಿ.'' ಎಂದಾಜ್ಞಾಪಿಸಿದ.

  

ವಿದೇಶೀ ವ್ಯಾಪಾರಿಯು ಆ ಒಡವೆಗಳನ್ನು ನೋಡಿ ರಾಕ್ಷಸ "ಇವು ಅಪೂರ್ವವಾದುವು! ಏನು ಬೆಲೆ ಇವಕ್ಕೆ?" ಎಂದು ಕೇಳಿದ. "ಶ್ರೇಷ್ಠವಾದ ವಿಭೂಷಣಗಳು ಶ್ರೇಷ್ಠ ಪುರುಷರಲ್ಲಿರಬೇಕೆಂಬುದು ದೈವ ನಿಯಮ. ಅವರೇ ಮಾತ್ರ ಅವಕ್ಕೆ ಬೆಲೆಕಟ್ಟಬಲ್ಲರಷ್ಟೆ! ತಾವು ಕೊಂಚ ಬೆಲೆ ಕಡಿಮೆಯೇ ಕೊಟ್ಟರೂ ನಾವು ಕೆಟ್ಟು ಹೋಗಲಾರೆವು! ಕೊಂಚ ಹೆಚ್ಚೇ ಕೊಟ್ಟರೂ ತಾವು ಕೆಟ್ಟು ಹೋಗಲಾರಿರಿ! ಹೇಗೂ ಇವನ್ನು ತಾವು ಧರಿಸಿದರೆ ಅದೇ ನಮಗೆ ಭಾಗ್ಯ!" ಎಂದು ಸ್ತುತಿ ಮಾಡಿದರು. ರಾಕ್ಷಸ ಉಚಿತವಾದ ಬೆಲೆಯನ್ನೇ ಕೊಟ್ಟು ಆಭರಣಗಳ ಪೆಟ್ಟಿಗೆಗಳನ್ನು ತೆಗೆಸಿ ಒಳಗೆ ಇಡಿಸಿದ.

ಸಿದ್ಧಾರ್ಥಕನಿಂದ ಎಲ್ಲ ಸಮಾಚಾರಗಳನ್ನೂ ತಿಳಿದು 'ವರ್ತಕರು' ವಾಪಸಾದರು. "ಗುರುವೆ! ಸೈನ್ಯ ಅತ್ತಣಿಂದ ಹೊರಟಾಗಿದೆ. ಮಗಧದ ಸಮೀಪಕ್ಕೇ ಬರುತ್ತಿದೆ. ಕೆಲಸಗಳೆಲ್ಲ ತಾವು ಯೋಚಿಸಿದಂತೆಯೇ ನಡೆಯುತ್ತಿವೆ. ಭದ್ರಭಟಾದಿಗಳೂ, ಬಾಗುರಾಯಣನೂ, ಎಚ್ಚರನಾಗಿರುತ್ತಾರೆ. ಇನ್ನು ನಾಲ್ಕೈದು ದಿನಗಳಲ್ಲಿ ಮಗಧವನ್ನು ತಲುಪುತ್ತಾರೆ" ಎಂದರು. ಚಾಣಕ್ಯ ಸಂತೋಷಿಸಿದ.

  

"ವೃಷಲ! ಇಂದು ವೈಶಾಖ ಹುಣ್ಣಿಮೆ. ನಿನಗೆ ಪಟ್ಟಾಭಿಷೇಕವಾಗಿ ಬಹುದಿನಗಳೇ ಆದವು. ನೀನಿನ್ನು ಕೊಂಚ ಸ್ವತಂತ್ರವಾಗಿ ರಾಜ್ಯಭಾರ ಮಾಡು. ಅಂತರಂಗ ವಿಷಯಗಳಲ್ಲಿ ನಾನು ಹಾಕಿಕೊಟ್ಟ ಮಾರ್ಗದರ್ಶನದಲ್ಲಿ ನಡೆಯಲು ಯತ್ನಿಸು. ಹೊರಗಿನ ವಿಷಯಗಳನ್ನು ಮಾತ್ರ ನಾನೇ ಗಮನಿಸುವೆ. ಹೇಗೂ ನೀನೂ ಸ್ವಾತಂತ್ರ್ಯ ಬಯಸುವೆ! ಎರಡು ದಿನ ಮಾಡು, ನೋಡಿ ಸಂತೋಷ ಪಡುವೆ!.... ಇನ್ನೊಂದು ಮಾತು" (ಎನ್ನುತ್ತಾ ಕೊಂಚ ಯೋಚಿಸಿ) "ಇಂದು ಏನಾದರೊಂದು ನೆಪದಿಂದ

ನಿನ್ನೊಡನೆ ಜಗಳ ತೆಗೆಯುತ್ತೇನೆ! ಸಿದ್ಧನಾಗಿರು ! ಏಕೆ, ಏನು, ಯಾವಾಗ, ಹೇಗೆ ಎಂದು ಕೇಳಬೇಡ. ನಾನು ಜಗಳವನ್ನಾರಂಭಿಸಿದೊಡನೆಯೇ ಈ ಸೂಚನೆಯನ್ನು ಮನದಲ್ಲಿಟ್ಟು, ನನ್ನೊಡನೆ ಒಂದಕ್ಕೆ ನಾಲ್ಕು ಮಾತನ್ನಾಡಿ ನನ್ನನ್ನು ಕೆರಳಿಸು ! ಇದರಲ್ಲಿ ನಿನ್ನ ಹಿತವಿದೆ.'' ಎಂದು ಆಜ್ಞೆ ಮಾಡಿದ, ಚಾಣಕ್ಯ. ಚಂದ್ರಗುಪ್ತನಿಗೆ ಮೈ ಬೆವರಲಾರಂಭಿಸಿತು! ''ಇದು ನನ್ನಿಂದಾಗದು, ಆಚಾರ್ಯವರ್ಯ! ತಮ್ಮೊಡನೆ ಜಗಳವಾಡಿ ಶಾಪ ಪಡೆಯಲು, ಸುಟ್ಟು ಭಸ್ಮವಾಗಲು ನಾನು ಬಯಸುವುದಿಲ್ಲ. ಅಗ್ನಿಯೊಡನೆ ಸೆಣಸಾಟವೇ?" ಎಂದು ದೂರಿ ಬಿನ್ನೈಸಿದ.

ಚಾಣಕ್ಯ : ''ಸಿಂಹವು ಸಿಂಹದೊಡನೆಯೇ ಸೆಣಸುವುದನ್ನು ಕಲಿಯಬೇಕಾಗುತ್ತದೆ. ಇದು ತಪ್ಪಲ್ಲ. ಆಗ ಮಾತ್ರ ಕ್ಷುದ್ರಮೃಗಗಳೊಡನೆ ಆದರ ಸೆಣಸು ಸುಲಭವಾಗುತ್ತದೆ. ಇಷ್ಟಕ್ಕೂ ಇದು ಕೇವಲ ಕಪಟ ಕಲಹ ಮಾತ್ರ! ಆಚಾರ್ಯನೊಡನೆ ಇದನ್ನು ಮಾಡುವವರಲ್ಲಿ ನೀನೇ ಮೊದಲಿಗನಾಗುವೆ! ಇದರಲ್ಲಿ ನಿನ್ನ ಶ್ರೇಯಸ್ಸೂ ಅಡಗಿದೆ!'' ಎಂದೊಡಂಬಡಿಸಿ ಚಾಣಕ್ಯ ತನ್ನ ಆಶ್ರಮಕ್ಕೆ ಹೊರಟ.

ಸಂಜೆಯಾಗುತ್ತ ಚಂದ್ರಗುಪ್ತನಿಗೆ ಅಂದು ಹುಣ್ಣಿಮೆಯೆಂಬ ನೆನಪಾಯಿತು. ತನ್ನ ಮೊದಲ ಸ್ವತಂತ್ರಾಜ್ಞೆಯನ್ನು ಹೀಗೆ ಮಾಡಿದ. ಡಂಗೂರ ಹಾಕುವ ಅರಮನೆಯ ವಿಭಾಗಾಧ್ಯಕ್ಷನನ್ನು ಕರೆಸಿ, "ಇಂದು ವೈಶಾಖ ಪೂರ್ಣಿಮೆ! ಜನರು ಸಂಭ್ರಮಸಡಗರಗಳಿಂದ ಕೌಮುದೀ ಮಹೋತ್ಸವವನ್ನು ಊರಲ್ಲಿ ಎಲ್ಲೆಡೆ ಆಚರಿಸಬೇಕೆಂಬ ರಾಜಾಜ್ಞೆಯನ್ನು ಡಂಗೂರ ಹಾಕಿಸು. ಅರಮನೆಯಲ್ಲೂ ಸ್ವಯಂ ದೊರೆಗಳೂ ಆಚರಿಸುವರೆಂದು ತಿಳಿಸು. ಜೈನಬೌದ್ಧರಿಗೆ ಇದು ಧಾರ್ಮಿಕ ಹಬ್ಬವೂ ಆಗಿದೆ. ಯುದ್ಧದ ಜಂಜಾಟದಿಂದ, ಹಿಂದಿನ ಅರಸರ ದುರಾಚಾರ ದಬ್ಬಾಳಿಕೆಗಳಿಂದ ಬೇಸತ್ತ ಜನರು ಇಂದು ಕೊಂಚವಾದರೂ ಭಯ ಸಡಲಿ, ಆನಂದಪಡಲಿ'' ಎಂದಪ್ಪಣೆ ಮಾಡಿದನು.

ಚಾಣಕ್ಯನು "ಅಂತರಿಕ ವಿಷಯಗಳಲ್ಲಿ ನೀನಿನ್ನು ಸ್ವತಂತ್ರ" ಎಂದು ಹೇಳಿದ ಮೇಲೆ ದೊರೆ ವಿದ್ಯುಲ್ಲೇಖೆಯನ್ನು ಕರೆಸಿದ. ಬಹುದಿನಗಳಿಂದ ಪತ್ನಿಯನ್ನು ಕಾಣದೆ ಆತಂಕಗೊಂಡಿದ್ದ ಅವಳು ಚಂದ್ರಗುಪ್ತನ ಬಳಿ ಬಂದು ಕುಳಿತಳು.

ಚಂದ್ರಗುಪ್ತ : "ದೇವಿ, ಬೇಸರವೆ? ಇಷ್ಟು ದಿನ ಕಾಲ ಹೇಗೆ ಕಳೆದೆ? ಒಳ್ಳೆಯ ದಿನಗಳು ಇನ್ನು ಬರಲಾರಂಭಿಸಿವೆ. ಕೊಂಚ ತಡೆದುಕೋ! ಏಕಿಷ್ಟು ಸೊರಗಿರುವೆ ?"

ವಿದ್ಯುಲ್ಲೇಖೆ : "ದೊರೆಯೆ ! ಪಾಟಲೀಪುತ್ರದ ಸೊಬಗನ್ನು ನೋಡುತ್ತ, ತಮ್ಮ ಗುಣಾನುಭವವನ್ನು ಎಲ್ಲರ ಬಾಯಲ್ಲಿ ಕೇಳುತ್ತ ಆನಂದ ವಾಗಿಯೇ ಕಾಲ ಕಳೆಯುತ್ತಿರುವೆ. ಆಚಾರ್ಯ ಅನುಗ್ರಹಿಸಿದ ಶ್ರೀಕೃಷ್ಣ ವಿಗ್ರಹವೂ ಇದೆಯಲ್ಲ! ಏಕಾಂತದಲ್ಲಿರುವಾಗ ಆ ಮೂರ್ತಿಯ ಪೂಜೆ, ಧ್ಯಾನ ದಲ್ಲಿ ಕಾಲಕಳೆಯುವೆ. ವಾಸುದೇವ ಭಟ್ಟಾರಕರು ಬಂದು ಪಾಂಚರಾತ್ರ ಸಿದ್ಧಾಂತವನ್ನು ಬೋಧಿಸುತ್ತಿರುತ್ತಾರೆ. ಹೊಸ ದ್ವಿಭಾಷಿಯಿಂದ ಮಗಧದ ಭಾಷೆಯನ್ನೂ ಕಲಿಯುತ್ತಿರುವೆ, ವೇಳೆಯೇ ಸಾಲದು. ಬೇಸರವೆಲ್ಲಿ ಯದು ? ಇಲ್ಲಿನ ಬಿಸಿಲೊಂದು ಮಾತ್ರ ನನಗೆ ಸಹಿಸಲಾಗುತ್ತಿಲ್ಲ. ಅದ ರಿಂದ ನಾನು ಸೊರಗಿದಂತೆ ತಮಗೆ ಕಂಡಿರಬೇಕು..... ಒಂದೆರಡು ಸಣ್ಣ ಪ್ರಶ್ನೆಗಳನ್ನು ಕೇಳಬಹುದೆ ?"

ಚಂದ್ರಗುಪ್ತ : (ಅವಳ ಉತ್ತರದಿಂದ ಸಂತುಷ್ಟನಾಗಿ) "ಕೇಳು. ನನಗೆ ತಿಳಿದಷ್ಟು ಹೇಳುತ್ತೇನೆ."

ವಿದ್ಯುಲ್ಲೇಖೆ : "ಊರ ಜನರಿಗೆ ನಾನು ಕಾಣಿಸಿಕೊಳ್ಳಬಾರ ದೆಂದೇಕೆ ಆಚಾರ್ಯರು ಹೇಳಿದರು ? ಈ ಕೌಮುದೀ ಮಹೋತ್ಸವ ವೆಂದರೇನು ?"

ಚಂದ್ರಗುಪ್ತ : (ನಕ್ಕು) ''ಇಷ್ಟೇ ತಾನೇ ? ಮೊದಲ ಪ್ರಶ್ನೆಗೆ ಉತ್ತರಿಸುವೆ. ಕೇಳು. ನೀನು ಬೇರೆ ದೇಶದಿಂದ ಬಂದವಳಾದುದರಿಂದ, ಒಮ್ಮೆಲೆಗೇ ನೀನು ಸಭೆಗಳಲ್ಲಿ ಕಾಣಿಸಿಕೊಂಡರೆ, ಹೊಸ ದೊರೆಗೆ ಇನ್ನೂ ಹೊಂದಿಕೊಳ್ಳಲಾರದ ಜನ ಸಿಟ್ಟಿಗೆದ್ದು ಅಪಪ್ರಚಾರ ನಡೆಸದಿರಲಿ, ಎಂಬುದು ಆಚಾರ್ಯರ ಹೃದಯವಾಗಿರುವಂತಿದೆ....ಹೆಜ್ಜೆ ಹೆಜ್ಜೆಗೆ ಆಪತ್ತು ದಿನ ದಿನವೂ ಬರುತ್ತಿದೆ. ಅಮಾತ್ಯ ರಾಕ್ಷಸನ ಗೂಢಚಾರರ ಜಾಲ ಇನ್ನೂ ಬಲವಾಗಿದೆ. ಇದೆಲ್ಲ ಶಾಂತವಾದ ಮೇಲೆ ನಿನ್ನ ಗುಣಗಳನ್ನೂ, ನಿನ್ನ ಭಾರತೀಯತ್ವವನ್ನೂ, ಜ್ಞಾನ ಪೂರ್ಣತೆಯನ್ನೂ ಒಂದು ದಿನ ಆಚಾರ್ಯರೇ ಸಭೆಯಲ್ಲಿ ಮುಕ್ತವಾಗಿ ಕೊಂಡಾಡಿ ಜನ ಮುಖ್ಯರ ಸಂಮುಖದಲ್ಲೇ ನಮ್ಮಿಬ್ಬರನ್ನೂ ಒಂದುಗೂಡಿಸಿ, ನಿನ್ನನ್ನು ಪ್ರಕಟಿಸುವುದು ಶಕ್ಯ. ನನ ಗೊಬ್ಬ ಹೆಂಡತಿ ಇಲ್ಲಿದ್ದೇ ಇರುವಳು. ಅವಳನ್ನೂ ನಾನು ಭೇಟಿಯಾಗಲು ಆಚಾರ್ಯರು ಇನ್ನೂ ಅನುಮತಿಸಿಲ್ಲ ! ಅವಳಿಗಿಂತ ನೀನೇ ಹೆಚ್ಚು ಸುದೈವಿ; ಹತ್ತಿರದಲ್ಲಾದರೂ ಇರುವೆ! ಪಾಪ! ಆ ಕಾಂತಿಮತಿ! ಅವಳು ಎಷ್ಟು ಭಯಪಟ್ಟಿರುವಳೋ! ಇನ್ನೂ ಒಂದು ಮಾತು ಹೇಳಿಬಿಡುತ್ತೇನೆ. ನೀನು ತಪ್ಪು ಲೆಕ್ಕ ಹಾಕಿರದಾರದು. ನೀನಾಗಲಿ, ಅವಳಾಗಲಿ ನನ್ನೊಡನೆ ಸಿಂಹಾಸನವನ್ನೇರುವಂತಿಲ್ಲ ! ಅದಕ್ಕೆಂದೇ ನನ್ನ ಪಟ್ಟಾಭಿಷೇಕದಂದು ನಿಮ್ಮನ್ನು ದೂರವೇ ಇಟ್ಟುದು! ನಿಮ್ಮ ದೇಶದ ಹಾಗಲ್ಲ, ನಮ್ಮ ಸಮಾಜ. ಇಲ್ಲಿ ವರ್ಣಾಶ್ರಮಗಳ ಬಿಗಿಯಾದ ಆಚಾರವಿದೆ. ನಾನು ಸರಿಯಾದ ಕ್ಷತ್ರಿ ಯನೋ ಅಲ್ಲವೋ ! ಆಚಾರ್ಯರಂತೂ ನನ್ನನ್ನು ಗುಣವತ್ ಕ್ಷತ್ರಿಯ ನೆನ್ನುವರು. ಕಲಿಯುಗದಲ್ಲಿ ಶುದ್ಧ ಕ್ಷತ್ರಿಯ ಸಂತಾನವಿಲ್ಲವಂತೆ. ಅಂಥದೇ ಕ್ಷತ್ರಿಯಳೊಬ್ಬಳು ಮಾತ್ರ ನನ್ನೊಡನೆ ಪೀಠವೇರಿ ಕುಳ್ಳಿರಬಲ್ಲಳು! ಇದು ಶಾಸ್ತ್ರದ ಮಾತು! ನನ್ನ ಗುರುಗಳು ಇದನ್ನೆಲ್ಲ ನಿನಗೆ ತಿಳಿಸಿದ್ದರು. ಆದರೆ ಆಚಾರ್ಯರ ಹೃದಯ ಸಂಕುಚಿತವೆನ್ನಬೇಡ. ಸರ್ವಜ್ಞರೂ ಸರ್ವಶಕ್ತರೂ ಆದ ಅವರಂತೆ ಶಾಸ್ತ್ರಾರ್ಥ ನಿರ್ಣಯ ಮಾಡಬಲ್ಲವರು ಬೇರೊಬ್ಬರಿಲ್ಲ. ಅನ್ಯದೇಶೀಯ ಅರಸುಮಗಳಾದ ನಿನ್ನಲ್ಲಿ ಗುಣವತ್ ಕ್ಷತ್ರಿಯತ್ವವನ್ನು ಗುರುತಿಸಿ ನಿನ್ನನ್ನೇ ನನ್ನ ಪೀಠಕ್ಕೇರಿಸಿದರೂ ಆಶ್ಚರ್ಯ ಪಡುವುದಕ್ಕಿಲ್ಲ! ಅವರ ನಿರ್ಣಯವನ್ನು ರಾಷ್ಟ್ರದ ಯಾವನೂ ಪ್ರಶ್ನಿಸಲಾರ. ಅಷ್ಟು

ಮರ್ಯಾದೆಯುಂಟು ಅವರ ನಿರ್ಣಯಗಳಿಗೆ. ಯವನರೆಂದರೆ ''ಅನಿರ್ವಾಸಿತ ಶೂದ್ರ ಪ್ರಾಯರೆಂದು" ಅವರು ಪದೇ ಪದೇ ಹೇಳುತ್ತಾರೆ. ವರ್ಣದೊಳಗೆ ಒಮ್ಮೆ ಹೀಗೆ ನುಸುಳಿದರೆ ಸಾಕು; ಮುಂದಿನ ಪ್ರಗತಿ ಗುಣದ ಮೇಲೆ ನಡೆದೇ ಹೋಗುತ್ತದೆ. ವರ್ಣಬಾಹ್ಯತ್ವ ಯವನರಿಗೆ ಹೋಗಿ ಎಷ್ಟೋ ದಿನ ಆಗಿವೆ! ನಿನಗಿಂತ ಪೂರ್ವದಲ್ಲಿ ಇತ್ತ ಬಂದು ನೆಲೆಸಿ, ಭಾಗವತರಾದ ನಿನ್ನ ದೇಶದ ನರು ಬಹಳವಿದ್ದಾರೆ. ಶಕರೂ, ಪಾರ್ಥಿಯರೂ, ಹೀಗೆ ಪಾರಸೀಕರೂ ಇಲ್ಲಿ ನೆಲೆಸಿ, ಜಲ, ನೆಲ, ಗಾಳಿಯ, ಸಂಸ್ಕೃತಿಯ ಸಂಮ್ಮರ್ದದಲ್ಲಿ ಒಂದಾಗಿ ಬೆರೆತಿದ್ದಾರೆ. ಆದುದರಿಂದ ನಿನಗೆ ಭವಿಷ್ಯವಿಲ್ಲ ಎಂದು ನಿರಾಶೆ ಪಡಬೇಡ. ಎರಡನೆಯದಾಗಿ ನಿನ್ನ ಕ್ಷೇಮವನ್ನೂ ಆಚಾರ್ಯರು ಬಯಸಿ ಹಾಗೆ ಹೇಳಿರ ಬೇಕು. ಇಲ್ಲಿನ ಅರಮನೆಯಲ್ಲಿ ಬಹಳ ಆಶ್ಚರ್ಯಗಳೂ ಗಂಡಾಂತರಗಳೂ ಬಹಳ ಇವೆ! ನಾನೇ ದಿನಕ್ಕೊಂದು ಕಡೆ ಮಲಗುತ್ತಿರುವೆ, ಕೇಳಿದೆಯಾ ? ಮೂರನೆಯ ಕಾರಣ! ನಾನು ನಿನ್ನ ಶರೀರ ಲಕ್ಷಣಗಳನ್ನೆಲ್ಲ ಚೆನ್ನಾಗಿ ಪರೀಕ್ಷಿಸಿದ ಮೇಲೆಯೇ ಆಚಾರ್ಯರು ನಿನ್ನೊಡನೆ ಕೂಡಲು ನನಗೆ ಬಿಡುವರಂತೆ! ಮೂರು ಸಲ ಬಾಯಿಬಿಟ್ಟು ಅವರೇ ಹೇಳಿಯಾಯಿತು! ನಿನಗೂ ನನಗೂ ಅದು ಸಂಮ್ಮತವಿರಲಾರದು !!''

ವಿದ್ಯುಲ್ಲೇಖೆ : (ಈ ವಿವರಣೆಗಳಿಂದ ತುಂಬಾ ಪ್ರಸನ್ನಳಾಗಿ, ಆಚಾರ್ಯನ ಹೃದಯವನ್ನು ಇಷ್ಟು ಚೆನ್ನಾಗಿ ಅರಿತ ತನ್ನ ಪತಿಯ ಗುರು ಭಕ್ತಿಗೆ, ವಿಶಾಲ ಪ್ರಜ್ಞೆಗೆ ಮೆಚ್ಚಿಗೆ ತೋರುತ್ತಾ) ''ಆಚಾರ್ಯರಿಗೆ ಸಂಮ್ಮತವಾದದ್ದು ನನಗೂ ನಿಮಗೂ ಸಂಮ್ಮತವಲ್ಲವೆಂದರೇನು ? ಇಷ್ಟು ಪ್ರೇಮದಿಂದ ಕಾಣುವ ತಂದೆ ಬೇರೊಬ್ಬ ನನಗೆ ಈ ಜನ್ಮದಲ್ಲಿ ಇಲ್ಲ. ಮೊದಲು ನೋಡಿದಾಗ ಕೊಂಚ ಭಯವಾದರೂ, ನಿಮ್ಮ ಕಿವಿಯಲ್ಲಿ ಏನೋ ಹೇಳಿ ನನ್ನನ್ನು ತಿರಸ್ಕರಿಸಬೇಡವೆಂದು ಅವರು ಸೂಚನೆಯಿತ್ತಾಗಲೇ ಅವರು ಮಹಾಪುರುಷರೆಂದು ಹೃದಯ ಹೇಳಿತು ! ಇಂಥ ರಾಷ್ಟ್ರ ಭಕ್ತನನ್ನು ಸರಳ ಜೀವಿಯನ್ನು, ಸ್ನೇಹಮಯನನ್ನು ನನ್ನ ದೇಶದಲ್ಲಿಯೂ ಕಾಣೆ. ಇಲ್ಲಿಗೆ ನಾನು ಬಂದುದೇ ಅವರ ಸೇವೆಗೆ, ಅವರ ವ್ಯಕ್ತಿತ್ವದ ಆಕರ್ಷಣೆಯಿಂದ ಎಂದರೆ ನಿಮಗೆ ತಪ್ಪು ಅರ್ಥ ಆಗಬಾರದು !''

ಚಂದ್ರಗುಪ್ತ ; (ಕಪಟ ಕೋಪವನ್ನು ನಟಿಸಿ) "ಹಾಗಾದರೆ ನಾನು ನಿನಗೆ ಬೇಡವೆಂಬ ಅರ್ಥ ತಾನೇ ?"

ವಿದ್ಯುಲ್ಲೇಖೆ ; "ಬೇಕೆಂದೇ ತಪ್ಪು ಅರ್ಥ ತಿಳಿಯುವುದಾದರೆ ನಿಮ್ಮ ಇಷ್ಟ. ನಿಮ್ಮ ಮೂಲಕವಲ್ಲದೆ ಅವರ ಸೇವೆ ನನಗೆ ಹೇಗೆ ಲಭ್ಯ ? ನಾನೇನು ಅವರ ದಿನದಿನದ ಅಗ್ನಿಹೋತ್ರಕ್ಕೆ ಉಪಯೋಗವೆ ? ಅವರ ಒಂದೇ ಹೊತ್ತಿನ ಒಂದೇ ಮುಷ್ಟಿಯ ಊಟಕ್ಕೆ ಅಡಿಗೆ ಮಾಡಿ ಹಾಕಲು ಯೋಗ್ಯವೆ? ಅವರ ವಸ್ತ್ರಗಳನ್ನಾದರೂ ಒಗೆಯಲು ಬಿಡುವರೇ, ಅವರ ಶಿಷ್ಯರು? ನಿಮ್ಮನ್ನು ಪ್ರಸನ್ನವಾಗಿಟ್ಟು, ನನ್ನ ಉಸಿರೆಂದು ನೋಡಿ ಕೊಂಡರೆ, ಅದೇ ಆಚಾರ್ಯರ ಸೇವೆ! ಅದೇ ಅವರಿಗೆ ನೆಮ್ಮದಿಯ ವಿಷಯ ! ನಿಮ್ಮಲ್ಲಿ ಅವರ ವಾತ್ಸಲ್ಯ ಎಷ್ಟೆಂಬುದು ಅವರ ಶಿಷ್ಯ ಸಮೂಹಕ್ಕೆಲ್ಲ ಗೊತ್ತು. ನಿಮಗೇ ಗೊತ್ತಿಲ್ಲವೆಂದರೆ ಹೇಗೆ ?"

ಚಂದ್ರಗುಪ್ತನ ಹೃದಯ ಬಿಗಿದು ಬಂದಿತು! ಗದ್ಗದಿತನಾದ! ಆನಂದಾಶ್ರುಗಳು ಸುರಿಯಲಾರಂಭಿಸಿ, ಅವಳನ್ನು ಬಲವಾಗಿ ಆಲಿಂಗಿಸಿದ. ಬಹು ಹೊತ್ತು ಈ ದಂಪತಿಗಳು ಹಾಗೇ ಇದ್ದರು.

ವಿದ್ಯುಲ್ಲೇಖೆ : "ನನ್ನ ಎರಡನೆಯ ಪ್ರಶ್ನೆಗೆ ಉತ್ತರ ?"

ಚಂದಗುಪ್ತ : "ಕೌಮುದೀ ಮಹೋತ್ಸವವೆಂದರೆ ಚೈತ್ರ ಪೂರ್ಣಿಮೆಯಂದು ನಡೆಯಬೇಕಿದ್ದ ವಸಂತೋತ್ಸವ. ವಸಂತೋತ್ಸವೆಂದೂ, ಹಿಂದೆ ಇಂದ್ರೋತ್ಸವವೆಂದೂ ಪ್ರಸಿದ್ಧವಿದ್ದ ಹಬ್ಬ. ಯೌವ್ವನದಲ್ಲಿರುವ ಪತಿಪತಿಗಳು ಅಂದು ಗಂಧರ್ವ ಅಪ್ಸರೆಯರಂತೆ ಬೆರೆತು, ಆನಂದಿಸಿ, ಮಾಸ ಧರ್ಮಕ್ಕನುಗುಣವಾಗಿ ವ್ಯಕ್ತಿಗಳ ಮಾನಸದಲ್ಲಿ ವಸಂತದೇವತೆಯೂ, ಇಂದ್ರನೂ, ಕಾಮನೂ, ರತಿಯೂ ವಿಕಾಸಗೊಂಡು, ಜೀವನೋಲ್ಲಾಸದ ಅನುಭವವನ್ನು ಅನುಗ್ರಹಿಸುವ ದಿನ. ಹಿಂದಿನ ಪೌರ್ಣಿಮೆಯಂದು ಊರಲ್ಲಿ ಯುದ್ಧದ ವಾತಾವರಣ ಇನ್ನೂ ನೀಗದ ಕಾರಣ ಆಚರಿಸಲಾಗಲಿಲ್ಲ. ನನ್ನ ತಂದೆ ತಾತ ಬದುಕಿದ್ದಾಗ ತುಂಬ ಉತ್ಸಾಹದಿಂದ ಆಚರಿಸುತ್ತಿದ್ದ ಮಗಧದ ವಿಶಿಷ್ಟವಾದ ಹಬ್ಬವಿದು. ನಂದರು ವಿಲಾಸಗಳಾಗಿದ್ದು ಅವರಿಗೂ ಇದು

ಇಷ್ಟವಾಗಿದ್ದರೂ, ಅರಮನೆಯಲ್ಲಿ ಜೈನ ಬೌದ್ಧ ಸಂನ್ಯಾಸಿಗಳ ಪ್ರಭಾವ ಹೆಚ್ಚಿದ ಮೇಲೆ ಇದು ಅಶ್ಲೀಲವೆಂದು ಅಪಪ್ರಚುರಿಸಿ ಇದನ್ನು ತಡೆದರು. ಈಗ ಈ ಹಬ್ಬವನ್ನು ಪುನರಾಚರಣೆಗೆ ತಂದರೆ ಜನ ಹಿಗ್ಗುವರು.''

ವಿದ್ಯುಲ್ಲೇಖೆ : "ಆಚಾರ್ಯರಿಗೆ ಇದು ಸಂಮ್ಮತವಾದೀತೆ ?''

ಚಂದ್ರಗುಪ್ತ : ''ಆಚಾರ್ಯರು ಗೊಡ್ಡು ವೈದಿಕರಲ್ಲ; ಜನ ಸ್ವಾತಂತ್ರ್ಯ ವಿರೋಧಿಗಳೂ ಅಲ್ಲ ! ನಾಸ್ತಿಕ್ಯವಿಲ್ಲದ, ಧರ್ಮ ಬಾಹಿರ ವಲ್ಲದ ಯಾವ ಉತ್ಸವ, ಸಂಭ್ರಮ, ಸೊಗಸು, ಖುಷಿ ಪಡುವುದಕ್ಕೂ ಅವರ ವಿರೋಧವಿಲ್ಲ. ಜನ ಇಲ್ಲೇ ಅವರನ್ನು ತಪ್ಪು ತಿಳಿದಿರುವುದು ! ಸರ್ವಾಧಿ ಕಾರಿ ಮನೋವೃತ್ತಿಯವರೆಂದೂ, ಎಲ್ಲ ವಿಷಯಗಳಲ್ಲೂ ತಲೆ ಹಾಕುವ ರೆಂದೂ ತಪ್ಪು ಕಲ್ಪನೆಯೊಂದಿದೆ ! ಆಗಾಗ ನನಗೂ ಈ ರೀತಿ ಅನಿಸು ತ್ತಿತ್ತು. ಮೊನ್ನೆ ದೊರೆಯ ಹೆಸರಲ್ಲಿ ನೂರು ಹೊಸ ಅಗ್ರಹಾರಗಳ ಸ್ಥಾಪನೆಗೆ ಆಚಾರ್ಯರು ಅಪ್ಪಣೆಯಿತ್ತು, ಆ ಅಗ್ರಹಾರಗಳಿಗೆಲ್ಲ ಸಮೀಪ ವಾಗುವಂತೆ ಹೊಸ ದುರ್ಗ (ಪಟ್ಟಣ)ವೊಂದನ್ನು ಸರ್ವಸಮೃದ್ಧವನ್ನಾಗಿ ಏರ್ಪಡಿಸಲು ಆಜ್ಞೆ ಮಾಡಿದರಷ್ಟೆ! ಆಗ ನನಗೆ ಈ ತಪ್ಪು ಕಲ್ಪನೆ ನಿವಾರಣೆ ಆಯಿತು. ಊರ ಮಧ್ಯದಲ್ಲಿ ದುರ್ಗೆ, ವಿಷ್ಣು, ಸುಬ್ರಹ್ಮಣ್ಯ, ಇಂದ್ರ, ಶಿವ, ಕುಬೇರ, ಅಶ್ವಿನಿದೇವತೆಗಳು, ಮದಿರಾ ದೇವಾಲಯಗಳನ್ನೂ ಸರಿ ಯಾದ ಸ್ಥಳಗಳಲ್ಲಿ ಆಯಾ ದೇವತಾ ಭಕ್ತರ ವಸತಿಗಳಿಗೆ, ಕೇರಿಗಳಿಗೆ ಸಮೀ ಪವಾಗಿರುವಂತೆ ನಿರ್ಮಿಸಬೇಕೆಂದೂ ಅಪ್ಪಣೆ ಮಾಡಿದರು ! ಪರಮೈಕಾಂತೀ ವಿಷ್ಣುಭಕ್ತರಾಗಿ, ವಿಷ್ಣುಗುಪ್ತರೆಂಬ ಅಭಿಧಾನದಿಂದ, ಶುಚಿಯೂ, ಯುಕ್ತರೂ, ಗುಣ ಪುರುಷ ತತ್ತ್ವವಿದರೂ ಆದ ಪರಮ ವೈಷ್ಣವರ ಮನೆತನ ದಲ್ಲಿ ಹುಟ್ಟಿದ ಅವರು ಈ ಅನ್ಯದೇವತೆಗಳ ಗುಡಿ ಕಟ್ಟಿಸಲು ಅಣತಿಯಿತ್ತುದು ನನಗೆ ಪರಮ ವಿಸ್ಮಯವಾಯಿತು ! ಆಚಾರ್ಯರನ್ನೇ ಕೇಳಿಬಿಟ್ಟೆ! 'ಪೂಜ್ಯರೆ! ಮಹಾವಿಷ್ಣುಭಕ್ತರೂ, ಶ್ರೀಕೃಷ್ಣಪ್ರಿಯರೂ ಆದ ತಾವು ಇಂದ್ರಾಲಯ ವನ್ನೇಕೆ ಅಪ್ಪಣೆ ಮಾಡಿದಿರಿ ? ಇಂದ್ರ ಪೂಜೆಯನ್ನು ಸ್ವಯಂ ಶ್ರೀಕೃಷ್ಣ ಭಗವಂತನೇ ತಡೆದನಲ್ಲ ? ತಮಗೇಕೆ ಬೇಕು? ಪರಸ್ಪರ ವಿರುದ್ಧ ಸ್ವಭಾವ, ಆಕಾರ, ಗುಣ, ಫಲಪ್ರದತ್ವಾದಿಲಕ್ಷಣಭಿನ್ನರಾದ ಈ ದೇವತೆಗಳನ್ನು

ಒಂದೇ ಎಡೆ ಪೂಜಿಸುವಂತಾದರೆ, ದೇವರು-ಧರ್ಮದ ಹೆಸರಿನಲ್ಲಿ ಪ್ರಜೆಗಳಲ್ಲಿ ನಾಳೆ ಕಲಹ ನಡೆಯಲಾರದೆ ? ಮದಿರಾ ದೇವತೆ ಎಂದರೆ ಹೆಂಡಕುಡುಕರ ದೇವತೆಯಾಯಿತಲ್ಲ ! ಈ ದುಷ್ಪೂಜೆಗಳನ್ನೆಲ್ಲ ಅರಸ ಏಕೆ ಪ್ರೋತ್ಸಾಹಿಸ ಬೇಕು?' ಎಂದು ಕೇಳುವ ಧೈರ್ಯ ಮಾಡಿದೆ. ಆಚಾರ್ಯರು ದಂಗು ಬಡಿ ಸುವ ಉತ್ತರ ಕೊಟ್ಟು ನನ್ನನ್ನು ಮೂಕ ವಿಸ್ಮಿತನನ್ನಾಗಿಸಿ ಬಿಟ್ಟರು : 'ದೊರೆಯೇ ! ನಿನ್ನ ಸಾಮಾಜಿಕ ರಾಜಕೀಯ ವ್ಯಕ್ತಿತ್ವದ ಹೃದಯಕ್ಕೆ ವಿಶಿಷ್ಟ ದೇವತೆ ಯಾವುದೂ ಇರುವುದಿಲ್ಲ ! ಜನ ಪೂಜಿಸುವ ಎಲ್ಲ ದೇವತೆ ಗಳೂ ನಿನ್ನವರೇ ! ಜನರೆಲ್ಲ ನಿನ್ನವರೆಂದ ಮೇಲೆ ಇದು ಆ ತರ್ಕದಿಂದ ಬರುವ ಸಿದ್ಧಾಂತ. ಮತಾಂಧತೆ ದೊರೆಗೆ ಇರಬಾರದು. ದೊರೆಯ ಆಧ್ಯಾತ್ಮಿಕ ವ್ಯಕ್ತಿತ್ವದ ಹೃದಯಕ್ಕೆ ಒಪ್ಪುವ ಪರದೇವತೆಯ ವಿಷಯಕ್ಕೆ ಈ ಮಾತು ಅನ್ವಯವಿಲ್ಲ. ಆ ದೇವತೆ ಯಾರೆಂದು ಶಾಸ್ತ್ರ ಅವನ ನಿರ್ಣ ಯಕ್ಕೆ ಬಿಡದೆ, ತಾನೇ ನಿರ್ಣಯ ಮಾಡಿ ಹೇಳಿಯೂ ಇದೆ! ಶಾಸ್ತ್ರವಶ್ಯ ನಾಗಿರಬೇಕಾದ ದೊರೆ ಅದನ್ನು ತಿಳಿದೇ ಇರುತ್ತಾನೆ. ತಿಳಿಯದಿದ್ದರೆ ನನ್ನಂತಹವನನ್ನು ಕೇಳಿ ತಿಳಿಯಬೇಕಾಗುತ್ತದೆ. ಪರಮ ಸಾತ್ವಿಕನಾದ ಶ್ರೀಮನ್ನಾರಾಯಣನೇ ಆ ದೇವತೆಯೆಂದು ಸ್ವಯಂ ಭಗವಂತನೇ ಗೀತೆ ಯಲ್ಲಿ ಹೇಳಿ, ವೇದದ ಹೃದಯವನ್ನು ಬೆಳಗಿದ್ದಾನೆ. ಸಾತ್ವಿಕ, ವೈಷ್ಣವ ರಾದ ಗೋಕುಲದ ಗೊಲ್ಲರಿಗೆ ಅವನು ಅವರ ಕುಲಾಚಾರದ ಪ್ರಾಚೀನ ನಿರ್ಣಯವನ್ನು ಮತ್ತೆ ತೋರಿಸಿಕೊಟ್ಟು, ಇಂದ್ರ ಪೂಜೆ ಅವರಿಗೆ ವಿಸಂಗತ ವೆಂದು ಬೋಧಿಸಿದ. ಅದರಿಂದ ಬೇರೆಯವರಿಗೆ ಇಂದ್ರಪೂಜೆಯೋ, ಶಿವ ಪೂಜೆಯೋ, ದುರ್ಗಾಪೂಜೆಯೂ ಬೇಡವೆಂದು ಅರ್ಥವಲ್ಲ. ದುರ್ಗಾಪೂಜೆ ಯನ್ನು ವಿಶಿಷ್ಟರಾದ ಗ್ರಾಮ್ಯ ಜನರಿಗೆ ವಿಹಿತವೆಂದು ತಾನೇ ಅವತಾರ ಕಾಲದಲ್ಲೇ ಹೇಳಿಯೂ ಇದ್ದಾನೆ. ಸರಿಯಾಗಿ ಶ್ರೀ ಭಾಗವತವನ್ನೋದಿಸಿ ಕೇಳು. ವ್ಯಾವಹಾರಿಕವಾಗಿ ನೋಡಿದರೂ ಈ ನಿರ್ಣಯ ಎಷ್ಟು ಜಾಣ ತನದ್ದು, ನೋಡು ! ಯಾವ ನಿಷೇಧದಿಂದಲೂ ಯಾವ ಪೂಜೆಯೂ ಹೋಗಿ ಬಿಡುವುದಿಲ್ಲ ! ಜನ ಮಾಡುವುದನ್ನು ಗುಟ್ಟಾಗಿಯಾದರೂ ಮಾಡಿಯೇ ಮಾಡುತ್ತಾರೆ ! ನಿಷೇಧಿಸುವ ದೊರೆಯೋ, ಪುರೋಹಿತನೋ ಅಪ್ರಿಯ ರಾಗುತ್ತಾರೆ, ಮಾತ್ರ !! ಮೇಲಾಗಿ ದೇವತೆಗಳು ಪರಸ್ಪರ ಜಗಳವಾಡುವವ

ರಲ್ಲ ಎಂದು ವೇದ ಹೇಳುತ್ತದೆ. ತಮ್ಮ ತಮ್ಮ ಹವ್ಯ ಭಾಗಗಳಿಂದ ತೃಪ್ತ ರಾಗಿ ಸಮಭಾವದಿಂದಲೇ ಮಾನವರನ್ನು ಹರಸುತ್ತಾರೆ. ದೇವತೆಗಳೆಲ್ಲ ಒಂದೇ ಎಂದರೆ ವೈಷಮ್ಯಾಭಾವವೇ ಹೊರತು, ಎಲ್ಲರೂ ಒಬ್ಬೊಬ್ಬರಿಗೂ ಸಮ ಎಂದಲ್ಲ. ಒಬ್ಬ ದೇವತಾಭಕ್ತನ ಎದುರಿಗೆ ಅವನ ದೇವತೆಯನ್ನು ನಿಂದಿಸಿದರೆ ಇನ್ನೊಂದನ್ನು ಹೆಚ್ಚೆಂದರೆ ಅವರವರಿಗೆ ಕೋಪ ಬರುವುದು ಸಹಜ; ಇದು ಅಜ್ಞಾನ ಮೂಲದ್ದು. ಅವರವರ ವೃತ್ತಿಗಳಿಗೆ ಬೇರೆ ಬೇರೆ ನಗರ ಭಾಗಗಳಲ್ಲಿ ವಸತಿ, ಸೌಕರ್ಯ ಕಲ್ಪಿಸಿ, ಅಲ್ಲಲ್ಲಿ ಆ ದೇವತೆಗಳನ್ನು ಪೂಜಿಸುವಂತಾದರೆ, ಇದೇ ಸಮರಸ ಜೀವನಕ್ಕೆ ತಾರಕ, ಪೂರಕ. ಗಂಟೆ ಬಡಿಯುವವನ ಮನೆ ಪಕ್ಕದಲ್ಲಿ, ನಾದಸ್ವರ ಊದುವವನ ಮನೆ ಪಕ್ಕದಲ್ಲಿ, ಬೆಳ್ಳಂಬೆಳಗೂ ಹೊಡೆದು ಕುಣಿಯುವ ತಮಟೆ ಪೂಜೆಯ ಮಾರಿಗುಡಿ ಇದ್ದರೆ ಮಾರಾಮಾರಿ ತಪ್ಪಲಾರದು. ಯಾವುದು ಊರ ಹೊರಗೆ, ಒಳಗೆ ಎಂಬುದು ನ್ಯಾಯಮೂರ್ತಿಯಾದ ದೊರೆಗೆ ತಿಳಿದಿರಬೇಕು. ಯಾವ ದೇವತಾ ಪೂಜೆಯೂ ನಿಷಿದ್ಧವಲ್ಲ; ಅವರವರ ಅಭಿರುಚಿಗೆ ಅದು ಸರಿ. ಅಷ್ಟೆ. ಕಾಪಾಲಿಕರ ನರಬಲಿಗೂ, ಜೈನ ಬೌದ್ಧರ ವಾಮಾಚಾರಗಳಿಗೂ, ಶಾಕ್ತರ ಪಶುಬಲಿಗಳಿಗೂ ಮಾತ್ರ ಯಾವ ಅವಕಾಶವೂ ಇರಬಾರದು. ಇಷ್ಟನ್ನು ನೋಡಿಕೊಂಡರಾಯಿತು? ಎಂದು ಸುದೀರ್ಘವಾಗಿ, ಮನೋಹರವಾಗಿ ಉಪದೇಶಿಸಿ, ನನ್ನ ಕಣ್ಣೂ ತೆರೆದರು. ಅವರ ಹೃದಯ ವೈಶಾಲ್ಯ ಅರಿತು ಪುಳಕಿತನಾದೆ. ಆದ್ದರಿಂದ ಕೌಮುದೀ ಮಹೋತ್ಸವಕ್ಕೆ ಅವರ ಆಕ್ಷೇಪ ಬರಲಾರದು'' ಎನ್ನುತ್ತಾ ''ಇದೋ ಚಂದ್ರೋದಯ ಕಾಲ ಬಂದಿತು! ಅರಮನೆಯ ಉಪ್ಪರಿಗೆಯ ಮೇಲೆ ನಿಂತು ವೀಕ್ಷಿಸುವ, ಬಾ'' ಎನ್ನುತ್ತಾ ವಿದ್ಯುಲ್ಲೇಖೆಯ ಕೈ ಹಿಡಿದು ಅರಮನೆಯ ಮೇಲೇರಿದ. ದೊರೆಯ ಅಂಗ ರಕ್ಷಕರೂ, ದಾಸದಾಸಿಯರೂ ಹಿಂಬಾಲಿಸಿ ತಂತಮ್ಮ ಜಾಗಗಳಲ್ಲಿ ಸುತ್ತು ವರಿದು ನಿಂತರು.

ಚಂದ್ರ ಆ ವೈಶಾಖದ ಹಗಲಿನ ಬಿಸಿಲಿನ ಬೇಗೆಯ ರೋಗಕ್ಕೆ ಔಷಧಿ ಯನ್ನು ತಂದು ಲೇಪಿಸಿದ ವೈದ್ಯನಂತೆ ಸರ್ವಜನ ಮನೋಹರನಾಗಿ ಪೂರ್ವ ದಿಗಂತದಿಂದ ಒಂದೆರಡು ಮೊಳದೆತ್ತರಕ್ಕೆ ಮೇಲೇರಿದ್ದ. ವಿದ್ಯುಲ್ಲೇಖೆ

ಆ ಚಂದ್ರನನ್ನೊಮ್ಮೆ, ಚಂದ್ರಗುಪ್ತನನ್ನೊಮ್ಮೆ ನೋಡುತ್ತಾ ಹಿಗ್ಗಿ ದೊರೆಯನ್ನು ಕುರಿತು ''ನಿಮ್ಮ ಹೆಸರು ಎಷ್ಟು ಚೆನ್ನು !'' ಎಂದುದ್ಗರಿಸಿದಳು. (ಅಂಗರಕ್ಷಕರೂ ದಾಸದಾಸಿಯರೂ ಮಾತು ಕೇಳದಷ್ಟು ದೂರಕ್ಕೆ ಸಂದು ನಿಂತರು! ) "ಆಚಾರ್ಯ ನಿನಗಿಟ್ಟ ಹೆಸರಿನ ಚೆನ್ನಿಗೇನು ಕಮ್ಮಿ! ನಾನು ಚಂದ್ರನಾದರೆ, ನೀನು ವಿದ್ಯುಲ್ಲೇಖೆ! ನಾನು ದಿನಾ ಕಾಣುವವ! ನೀನು ದುರ್ಲಭ ಕಾಂತಿಯವಳು ! ಮಳೆಗಾಲದಲ್ಲಿ ಕಾರ್ಮೋಡ ಬಂದಾಗ ಮಾತ್ರ ಕಾಣುವ ಅತ್ಯವಶ್ಯ ಪ್ರಕೃತಿ ಶೋಭೆ ನಿನ್ನದು'' ಎನ್ನುತ್ತಾ ಪ್ರಸನ್ನನಾಗಿ ದೊರೆ ಮಾಳಿಗೆಯ ಕೆಳಗೆ ಊರನ್ನೆಲ್ಲ ವೀಕ್ಷಿಸಿದ ! ಮುಖದಲ್ಲಿ ಕಾರ್ಮೋಡಗಳು ಕಾಣಿಸಿಕೊಂಡುವು !! ಉತ್ಸವದ ಯಾವ ಸೂಚನೆಯೂ ಇರದೆ, ದೊರೆಗೆ, ಅಚ್ಚರಿಯೂ ಕೋಪವೂ ಉಂಟಾದುವು. ಪಕ್ಕದ ಸೇವಕನನ್ನು ಕರೆದು ''ಏನು ! ನಮ್ಮ ಆಜ್ಞೆಯನ್ನು ಜನ ಉಲ್ಲಂಘಿಸಿರುವರೋ? ಅಥವಾ ನಮ್ಮ ಘೋಷಣೆ ಅವರಿಗೆ ಕೇಳಿಸಲಿಲ್ಲವೊ ? ದೊರೆಯ ಪ್ರಥಮಾಜ್ಞೆಗೆ ಈ ದುರ್ಗತಿಯೆ !! '' ಎಂದು ಗರ್ಜಿಸಿದ.

ಸೇವಕ ಹೇಳಿದ : ''ಪ್ರಭು ! ಅಭಯ ಕೊಟ್ಟರೆ ಹೇಳುವೆ !!''

ಚಂದ್ರಗುಪ್ತ ; ''ಭಯವೇತರದ್ದು? ಅಭಯ ಕೊಟ್ಟೆ! ಹೇಳು! ಏನಾಯಿತು ?''

ಸೇವಕ ; ''ನಿಮ್ಮ ಘೋಷಣೆಯನ್ನು ಸಾರುತ್ತಾ ಹೋದಾಗ, ಬ್ರಾಹ್ಮಣಾಗ್ರಹಾರದ ನಡುವೆ ಪರ್ಣಶಾಲೆಯಲ್ಲಿರುತ್ತಿರುವ ಪ್ರಧಾನಿ ಚಾಣಕ್ಯರು 'ಯಾರವನು? ಹುಚ್ಚು ದೊರೆ! ಈ ಆಜ್ಞೆ ಹೊರಡಿಸಿದವನು?'' ಎನ್ನುತ್ತಾ ಸಿಂಹಗರ್ಜನೆ ಮಾಡಿ ಹೊರ ಬಂದು, ನಮ್ಮ ಘೋಷಣೆಯವನಿಗೆ ಹೀನಾಯಮಾನವಾಗಿ ಬೈದು, 'ಇಂದು ಈ ಉತ್ಸವದ ಆವಶ್ಯಕತೆ ಇರುವುದಿಲ್ಲ! ಅವಿವೇಕಿ ದೊರೆಯ ಈ ಆಜ್ಞೆಯನ್ನು ಯಾರೂ ಪರಿಪಾಲಿಸಬೇಕಿರುವುದಿಲ್ಲ. ಚಾಣಕ್ಯ ಹೀಗೆ ಹೇಳಿದನೆಂದೂ, ಉತ್ಸವ ನಿಲ್ಲಿಸಲ್ಪಟ್ಟಿದೆಯೆಂದೂ, ಮೀರಿ ನಡೆದವರಿಗೆ ಉಗ್ರ ದಂಡನೆಯುಂಟೆಂದೂ ಸಾರುತ್ತಾ

ಮತ್ತೆ ಊರಲ್ಲೆಲ್ಲ ಡಂಗೂರ ಹಾಕು' ಎಂದು ಆಜ್ಞಾಪಿಸಿದರು. ವಿಧಿ ಯಿಲ್ಲದೆ ಹಾಗೇ ಮಾಡಬೇಕಾಯಿತು ! ಎಂದಿನಂತೆ ಕೂಡ ಜನ ಬೀದಿ ಯಲ್ಲಿ ಓಡಾಡಲು ಹೆದರುತ್ತಿರುವರು. ಬಿಡಾಡಿ ನಾಯಿಗಳನ್ನು ಬಿಟ್ಟರೆ ಬೇರಾರೂ ಊರಲ್ಲಿ ಸಂಚರಿಸುತ್ತಿಲ್ಲ. ಇದ್ದುದನ್ನು ಹೇಳಿದೆ. ಪ್ರಧಾನಿ ಯವರ ಕೋಪದಿಂದ ನನ್ನನ್ನು ರಕ್ಷಿಸಬೇಕು'' ಎನ್ನುತ್ತಾ ಚಂದ್ರಗುಪ್ತನ ಕಾಲುಗಳ ಮೇಲೆ ಬಿದ್ದ.

ಚಂದ್ರಗುಪ್ತನಿಗೆ ಸಹಜವಾಗಿಯೇ ಕೋಪ ಬಂದಿತು. ''ಇಂದು ಜಗಳವಾಡಬೇಕು" ಎಂದು ಆಚಾರ್ಯ ತಾನೇ ಮಾಡಿದ ಕಟ್ಟಾಜ್ಞೆಯನ್ನು ತಾನೇ ಪ್ರೋತ್ಸಾಹಿಸಿ, ಆಚಾರ್ಯನೇ ಕಾಲು ಕೆರೆದು ಮೊದಲ ಹೆಜ್ಜೆಯಲ್ಲಿ ಜಗಳಕ್ಕಿಳಿದು, ತನ್ನ ಮುಂದಿನ ಹೆಜ್ಜೆಯನ್ನು ನಿರೀಕ್ಷಿಸುತ್ತಿರುವನೆಂದು ಭಾವಿಸಿ, ವಿದ್ಯುಲ್ಲೇಖೆಯ ಮುಖವನ್ನು ನೋಡಿದ ! ಅವಳಿಗೂ ಅರ್ಥ ವಾಯಿತು!! ಹುಬ್ಬು ಸನ್ನೆಯಿಂದ 'ನಡೆಯಲಿ, ಆಚಾರ್ಯ ಶಿಷ್ಯರ ಕಲ ಹೋತ್ಸ!' ಎಂಬಂತೆ, ಮಂದ ಸ್ಮಿತದೊಡನೆ ಸೂಚಿಸಿ, ಅನುಮೋದಿಸಿದಳು. ಚಂದ್ರಗುಪ್ತನೆಂದ ;–

"ಕರೆ, ಇಲ್ಲಿ ಆ ಹುಚ್ಚು ಬ್ರಾಹ್ಮಣನನ್ನು! ಇವನ ಅತ್ಯಾಚಾರ ಹೆಚ್ಚಾಗುತ್ತಿದೆ! ದೊರೆ ಅವನೋ, ನಾನೋ ? ಬಹಿರಂಗವಾಗಿ ನಡೆದ ಈ ರಾಜಾಜ್ಞೆಯ ಉಲ್ಲಂಘನೆಯನ್ನು ಸಹಿಸಲಾರೆ! ಪ್ರಧಾನಿ ಎಂಬ ಅಹಂಕಾರದಿಂದ ಮಾಡಿದ್ದೇ ಆಜ್ಞೆಯಾಗಿ, ಎಷ್ಟು ಜನರನ್ನು ಹಿಂಸಿಸಿದ ? ಬೇರೆಷ್ಟು ಜನರನ್ನು ಕೊಂದ ? ಈ ರಾಜ್ಯದಲ್ಲಿ ಇನ್ನು ನಾನಾದರೂ ಆಳ ಬೇಕು; ಇಲ್ಲವಾದರೆ ತಾನೇ ಆಳಿಕೊಳ್ಳಲಿ'' ಎನ್ನುತ್ತಾ ಚಾಣಕ್ಯ ನನ್ನು ಕರೆತರುವಂತೆ ದೂತನಿಗೆ ಕಟ್ಟಪ್ಪಣೆ ಮಾಡಿದ !

ದೂತನಿಗೆ ಪೀಕಲಾಟಕ್ಕೆ ಬಂತು ! ಈ ಕಠೋರ ರಾಜಾಜ್ಞೆಯನ್ನು ಆ ಸಿಡುಕಿನ, ಮಾಂತ್ರಿಕ, ಶಾಪಾನುಗ್ರಹ ಸಮರ್ಥ ಬ್ರಾಹ್ಮಣನಿಗೆ ತಿಳಿಸಿ

ಜೀವಿಸುವುದೆಂತು ? ಎಂಬ ಭಯದೊಡನೆ, ನಿಧಾನವಾಗಿ ಬ್ರಾಹ್ಮಣಾಗ್ರಹಾರದತ್ತ ನಡೆದ.

  

ಊರಮಧ್ಯದ ವಿಷ್ಣು ದೇವಾಲಯದ ಬಲಗಡೆಗೆ ನಾಲ್ಕು ಕೇರಿಗಳು ತುಂಬಾ ಬ್ರಾಹ್ಮಣರ ಮನೆಗಳೇ. ಅವೆಲ್ಲವನ್ನೂ ಹಿಂದಿನ ಅರಸರು ಬ್ರಾಹ್ಮಣ ಕುಟುಂಬಗಳಿಗೆ ಆನುವಂಶಿಕವಾಗಿ ಬರುವಂತೆ ಬ್ರಾಹ್ಮಣೋತ್ತಮರಿಗೆ ದಾನಕೊಟ್ಟಿದ್ದರು. ನಾಲ್ಕನೆಯ ಕೇರಿ ಗಂಗೆಯ ಸಮೀಪದಲ್ಲೇ ಇತ್ತು. ಅಲ್ಲಿ ಯಾವನೋ ಬಡಬ್ರಾಹ್ಮಣನ ಮನೆ ಬಿದ್ದು ಹೋಗಿದ್ದು ಆ ಪಾಳಿಗೆ ಈಗ ವಾರಸುದಾರರು ಯಾರೂ ಇರದೆ, ಅದು ಅರಮನೆಯ ವಶದಲ್ಲೇ ಇತ್ತು. ಚಾಣಕ್ಯನಿಗೆ, ದೊರೆ. ತನ್ನ ಪಟ್ಟಾಭಿಷೇಕಾನಂತರ ಅರಮನೆಯಲ್ಲೇ ಇರುವಂತೆ ಎಷ್ಟೋ ಪ್ರಾರ್ಥಿಸಿದ್ದ. ಅರಮನೆಗೆ ಸೇರಿದ್ದ ಅತಿಥಿ ಶಾಲೆಯಲ್ಲೋ, ಮಂತ್ರಿಭವನದಲ್ಲೋ, ಒಟ್ಟಿನಲ್ಲಿ ತನ್ನ ಘನತೆಗೆ ಹೊಂದುವ ಅರಮನೆಯ ಯಾವುದಾದರೂ ಒಂದು ಭವ್ಯ ಕಟ್ಟಡದಲ್ಲಿ ಇರಬೇಕೆಂದು ಪರಿಪರಿಯಿಂದ ಯಾಚಿಸಿದ್ದ! ದೇವಾಲಯದ ಎಡಗಡೆಗೇ ವಿಶಾಲ ಆವರಣದಲ್ಲಿ ಅರಮನೆ ಇದ್ದಿತು. ದೊರೆ ಪ್ರಧಾನಿಗಳು ಪರಸ್ಪರ ನೆನೆದಾಗೆಲ್ಲ ಭೇಟಿಯಾಗಲು ಈ ಸಾಮೀಪ್ಯ ಬಹು ಅನುಕೂಲವೆಂದು ಎಷ್ಟು ಹೇಳಿದರೂ ಚಾಣಕ್ಯ ಕೇಳಲಿಲ್ಲ. ಆಪತ್ಕಾಲದಲ್ಲಿ ಬೇರೆ ವಿಧಿಯಿಲ್ಲವೇ ಹೊರತು, ಈಗ ಯುದ್ಧಾನಂತರ ತಾನೊಂದು ಪರ್ಣಶಾಲೆಯಲ್ಲೇ ಇರುವುದಾಗಿ ಹಟಹಿಡಿದ. ಗಂಗಾ ತೀರದ ನಾಲ್ಕನೇ ಕೇರಿಯ ಪಾಳು ನಿವೇಶನದಲ್ಲಿ ಸರಳ ಪರ್ಣಶಾಲೆ ನಿರ್ಮಾಣವಾಗಿ ಅಲ್ಲಿಯೇ ಈಗ ಚಾಣಕ್ಯ ಶಿಷ್ಯರೊಡನೆ ವಾಸಿಸಲಾರಂಭಿಸಿದ್ದ. ಮನೆಯ ಬಾಗಿಲಿಗೆ ಅರಮನೆಯ ಯಾವ ಸೇವಕನ ಕಾವಲೂ ಬೇಡವೆಂದೂ, ಬ್ರಾಹ್ಮಣರಿಗೆ ಇವು ತೊಂದರೆಯಾಗುವುದೆಂದೂ, ತಪಸ್ವಿಯಾದ ತನಗೆ ಯಾವ ಅಂಗರಕ್ಷೆಯೂ ಬೇಡವೆಂದೂ ಹಠ ಹಿಡಿದು, ದೊರೆ ಖಿನ್ನಮನಸ್ಕನಾಗಿ ಅವನ ಪಾಡಿಗೆ ಅವನನ್ನು ಬಿಟ್ಟು ಬಿಟ್ಟಿದ್ದ.

ಆ ಪರ್ಣಶಾಲೆಯ ಹೊರಭಾವಣಿಯ ಸೂರಿಗೆ ಆಚಾರ್ಯನಿಗೆ ದಿನಾ ಬೇಕಾಗುವ ದರ್ಭೆಹುಲ್ಲಿನ ದೊಡ್ಡದೊಡ್ಡ ಹೊರೆಗಳನ್ನು ಕಟ್ಟಿ ನೆರಳಿನಲ್ಲಿ ಒಣಗಲು ಬಿಟ್ಟಿದ್ದರು. ಆ ಸೂರು ಭಾರಕ್ಕೆ ಬಾಗಿತ್ತು. ಸೂರಿನ ಕೆಳ ಗಡೆ ಸವಿತ್ತು ಪರ್ವತದಂತೆ ಬಿದ್ದಿತ್ತು. ಶಾಲೆಯ ಮುಂದೆ ದೊಡ್ಡ ಕಾಡು ಗಲ್ಲು ಬಿದ್ದಿತ್ತು. ಆಶ್ರಮದ ಶಿಷ್ಯರು ಅದರ ಮೇಲೆ ಗೋವಿನ ಸಗಣಿ ಯಿಂದ ಬೆರಣಿಗಳನ್ನು ತಟ್ಟಿದ್ದು, ಆಶ್ರಮಕ್ಕೆ ಅದು ದೃಷ್ಟಿ ಪರಿಹಾರದಂತೆ ಇತ್ತು. ಬಿಸಿಲಿಗೆ ಒಣಗುವಂತೆ ಸಗಣಿಯ ಸಾವಿರಾರು ಉಂಡೆಗಳನ್ನೂ ಅದರ ಬಲಕ್ಕೆ ಶಿಷ್ಯರು ಜೋಡಿಸಿ ಸಾಲುಸಾಲಾಗಿ ಇಟ್ಟಿದ್ದರು. ಈ ಸಗಣಿಯ ವಾಸನೆಯೊಂದು ಕಡೆ! ಒಳಗೆ ನಡೆಯುತ್ತಿದ್ದ ಸಾಯಂ ಹೋಮದ ತುಪ್ಪದ ಆಜ್ಯಾಹುತಿಗಳ ವಾಸನೆಯೊಂದು ಕಡೆ! ಒಳಗೆ ಚಾಣಕ್ಯ ಸಾಯಂ ಸ್ನಾನ ಮಾಡಿ ಅಗ್ನಿಯ ಮುಂದೆ ಆಸೀನನಾಗಿ ಹೋಮ ಮಾಡುತ್ತಿದ್ದ. ಶಿಷ್ಯರು ಧ್ವನಿಗೂಡಿಸಿ ವೇದ ಮಂತ್ರೋಚ್ಚಾರ ಮಾಡು ತ್ತಿದ್ದರು.

ಬೀದಿಯ ಆ ಕೊನೆಯಿಂದ ಬರುತ್ತಲೇ, ಒಂದೊಂದೂ ಮನೆಯ ಮುಂದೆ ಬ್ರಾಹ್ಮಣರು ಕುಳಿತು ಜಗಲಿಯ ಮೇಲೆ ನಾನಾ ಬಗೆಯ ಪಾರಾ ಯಣ ನಡೆಸುತ್ತಿದ್ದರು. ಒಂದು ಕಡೆ ವಿಷ್ಣು ಸಹಸ್ರನಾಮ, ಮತ್ತೊಂದು ಕಡೆ ಭಗವದ್ಗೀತೆ, ಇನ್ನೊಂದೆಡೆ ನಿತ್ಯಸ್ವಾಧ್ಯಾಯದ ವೇದ ಮಂತ್ರ–ಹಾಗೆ ಇಡೀ ಬ್ರಹ್ಮಲೋಕವೇ ಭೂಮಿಗಿಳಿದು ಬಂದ ಅನುಭವ ಅರಮನೆಯ ಸೇವ ಕನಿಗಾಯಿತು. ದುರ್ಬ್ರಾಹ್ಮಣರೂ, ಬಾಲಕರೂ ಚಾಣಕ್ಯನ ಆಶ್ರಮದ ಮುಂದೆ ಹಾಯುವುದಕ್ಕೂ ಹೆದರುತ್ತಿದ್ದರು. ಅರಮನೆಯ ಸೇವಕ ಬಹು ಭಯಭಕ್ತಿಯಿಂದ ವಿನಮ್ರನಾಗಿ ಬರಿಗಾಲಲ್ಲಿ ಬರುತ್ತಾ ಆಶ್ರಮಕ್ಕೆ ಬಂದು ಸಾಷ್ಟಾಂಗ ಪ್ರಣಾಮ ಹಾಕಿದ. ''ರಾಜಾಧಿರಾಜ ಮಂತ್ರಿಯ ಮನೆಯ ವೈಭವ ಇದು!'' ಎಂದೆಂದು ಕೊಂಡು, ಮನಸ್ಸಿನಲ್ಲೇ ಆಚಾರ್ಯನ ಸರಳ ಕಠಿಣ ಜೀವನದ ಬಗ್ಗೆ ದೈವೀ ಭಾವನೆಯಿಂದ ಗದ್ಗದಿತನಾದ! ಬಾಗಿಲಲ್ಲಿ ನಿಂತಿದ್ದ ಋಷಿ ಬಾಲಕ ಏನೆಂದು ದೂತನನ್ನು ವಿಚಾರಿಸಿದ. "ದೊರೆಗಳು ಬರಹೇಳಿದ್ದಾರೆ" ಎಂಬ ವಾರ್ತೆಯನ್ನು ಚಾಣಕ್ಯನಿಗೆ ತಲುಪಿಸಿದ. ಹೋಮ

ಮುಗಿಯುತ್ತ ಬಂದಿದ್ದು, ಕೊನೆಯ ಭಾಗವನ್ನು ಮುಗಿಸಿ, ಆಚಮನ ಮಾಡಿ, ಆಸನವನ್ನು ಪ್ರೋಕ್ಷಿಸಿ, ಸೊಂಟದ ಉತ್ತರೀಯವನ್ನು ಎದೆಗೆ ಹೊದೆದು ಚಾಣಕ್ಯ ಹೊರ ಬಂದ. ''ಏನದು ?" ಎಂದು ಒರಟು ಧ್ವನಿ ಯಲ್ಲಿ ವಿಚಾರಿಸಿದ. "ಈಗಲೇ ನಿಮ್ಮನ್ನು ದೊರೆಗಳು ಕರೆತರುವಂತೆ ಹೇಳಿ ದ್ದಾರೆ'' ಎಂದು ಚಾರ ನಡುಗುತ್ತ ಬಿನ್ನೈಸಿದ.

ಚಾಣಕ್ಯ ; ''ಏನೆಂದೆ ? 'ದಯ ಮಾಡಿಸಬೇಕು' ಎನ್ನದೆ 'ಕರೆದು ತಾ' ಎಂದನೆ ಆ ಶೂದ್ರ ! ಅಷ್ಟು ಸೊಕ್ಕು ಬಂದಿತೋ ಅವನಿಗೆ ! ಬರುವು ದಿಲ್ಲ ಎಂದು ಹೇಳು" ಎಂದವನೇ, ಬಾಗಿಲಲ್ಲಿ ಹೊರಡಲಿದ್ದ ದೂತನನ್ನು ದುರುಗುಟ್ಟಿ ನೋಡುತ್ತಾ, "ತಡೆ, ನಾನೇ ಬಂದು ಆ ವೃಷಲನಿಗೆ ಪಾಠ ಕಲಿಸಿ ಬರುತ್ತೇನೆ" ಎಂದವನೇ ಕೋಳಿಕಾಲುಗಳಲ್ಲಿ ವೇಗವಾಗಿ ಅರಮನೆ ಯತ್ತ ನಡೆದ.

''ಮಹಾರಾಜರಿಗೆ ಏನೋ ಗ್ರಹಚಾರ ಕಾದಿದೆ !'' ಎಂದೆಂದು ಕೊಳ್ಳುತ್ತಾ ಚಾರ ಹಿಂಬಾಲಿಸಿದ.

  

ಚಂದ್ರಗುಪ್ತ ; ''ಆಚಾರ್ಯರು ದಯಮಾಡಿಸಬೇಕು ! ಈ ಪೀಠದಲ್ಲಿ ಕುಳ್ಳಿರಬೇಕು."

ಆಚಾರ್ಯ ; "ಕಪಟ ವಿನಯವನ್ನು ಸಾಕು ಮಾಡು, ಕುಮಾರ ! ಏನೀ ಅವೇಳೆಯಲ್ಲಿ ನಮ್ಮನ್ನು ಕರೆಸಿದ್ದು ?"

ಚಂದ್ರಗುಪ್ತ ; ''ರಾಜಕಾರ್ಯಕ್ಕೆ ವೇಳಾವೇಳೆಗಳುಂಟೆ ?"

ಆಚಾರ್ಯ ; ''ರಾಷ್ಟ್ರದ ಆಂತರಿಕ ವ್ಯವಹಾರಗಳೆಲ್ಲ ನಿನ್ನವೇ ಎಂದು ನೆನ್ನೆಯೇ ಹೇಳಿದೆನಲ್ಲ! ಈಗೇನು ಶತ್ರುರಾಜರಾರಾದರೂ ದಂಡೆತ್ತಿ ಬಂದ ಸಮಾಚಾರವೋ ?''

ಚಂದ್ರಗುಪ್ತ ; ''ರಾಜಾಪಮಾನವೆಂಬುದು ಶತ್ರುರಾಜರ ದಂಡ ಯಾತ್ರೆಯ ಸಮಾಚಾರಕ್ಕಿಂತಲೂ ಹೆಚ್ಚು ತೀವ್ರವೂ ಆತಂಕಕಾರಿಯೂ ಆದದ್ದು.''

ಆಚಾರ್ಯ ; "ಯಾರು ಹಾಗೆ ಮಾಡಿದವರು ? ಅವರನ್ನು ನೀನೇ ನಿಗ್ರಹಿಸಬಹುದಲ್ಲ ! ನಾನೇಕೆ ?"

ದೊರೆ : (ಯೋಚಿಸಿ, ಸಾವಧಾನವಾಗಿ) ''ತಾವೇ ಅಪಮಾನ ಮಾಡಿದವರು. ಶಿಷ್ಯ ಗುರುವನ್ನು ದಂಡಿಸುವುದೆಂತು ?''

ಆಚಾರ್ಯ ; ''ಹಾಗಾದರೆ ನಮ್ಮ ತೇಜೋವಧೆಗಾಗಿಯೇ ನಮ್ಮನ್ನು ಕರೆಸಿದಂತಾಯ್ತು ! ಹೋಗಲಿ, ಹೇಳು ನಮ್ಮ ಅಪರಾಧವಾದರೂ ಏನು? ನಾವೇ ದಂಡಿಸಿಕೊಳ್ಳುತ್ತೇವೆ. ''

ದೊರೆ ; ''ಕೌಮುದೀ ಮಹೋತ್ಸವವನ್ನೇಕೆ ನಿಲ್ಲಿಸಿದಿರಿ? ರಾಜಾಜ್ಞೆ ಯನ್ನು ಏಕೆ ನಿವಾರಿಸಿದಿರಿ ?"

ಆಚಾರ್ಯ : (ನಕ್ಕು) ''ಇದೊಂದು ದೊಡ್ಡ ರಾಜಾಪಚಾರವೋ? ನಾನಿದಕ್ಕೆ ನಿನಗೆ ವಿವರಣೆ ನೀಡುವ ಅವಶ್ಯಕತೆಯಿಲ್ಲ ! ದೊರೆಯಾದ ನಿನಗೇ ತಿಳಿದಿರಬೇಕು! ಅರಿಯದೆ ನೀನು ಮಾಡಿದ ತಪ್ಪನ್ನು ನಾನು ಸರಿ ಪಡಿಸಿರುವೆನೇ ಹೊರತು, ಅದರಲ್ಲಿ ನಿನಗೇನೂ ಅಪರಾಧವಾಗಿಲ್ಲ !''

ದೊರೆ : ''ನನ್ನ ಪ್ರತಿ ಮಾತನ್ನೂ ನಡೆಯದಂತೆ ಹೀಗೆ ವಿರೋಧಿ ಸುತ್ತ ಹೋದರೆ, ಜನರು ನನಗೆಂತು ಗೌರವ ತೋರುವರು? ನೀವೇ ರಾಜ್ಯ ಆಳಿಕೊಳ್ಳಿ! ನಾನೆಲ್ಲಾದರೂ ಹೋಗುತ್ತೇನೆ."

ಆಚಾರ್ಯ ; "ಮೂರ್ಧಾಭಿಷಿಕ್ತನಾದವನಿಗೆ ಹಾಗೆ ಓಡಿ ಹೋಗುವ ಅಧಿಕಾರವಿಲ್ಲ! ನನ್ನನ್ನೇ ಹೋಗೆಂದು ಪರೋಕ್ಷವಾಗಿ ಆಡಿದ ಮಾತಲ್ಲವೆ,

ಇದು ? ಇರಲಿ, ಹೋಗುತ್ತೇನೆ. ನಿನ್ನ ಆಜ್ಞೆಯನ್ನು ಮುರಿದು, ನಿವಾರಿಸಿದ ಕಾರಣ ತಿಳಿದುಕೋ. ರಾಷ್ಟ್ರದ ಪಶ್ಚಿಮ ಭಾಗದಿಂದ ಮತ್ತೆ ಪರ್ವತ ಸೇನೆ ಇತ್ತ ಬರುತ್ತಿದೆ! ಅಮಾತ್ಯ ರಾಕ್ಷಸನು ಮಲಯಕೇತುವನ್ನು ಆಶ್ರಯಿಸಿ ಅವನ ದಂಡನ್ನು ತರುತ್ತಿದ್ದಾನೆಂದು ವಾರ್ತೆ. ನಮ್ಮಿಂದ ತೆಗೆದು ಹಾಕಲ್ಪಟ್ಟ ಭದ್ರಭಟಾದಿಗಳೂ ಈಗ ಅತ್ತ ಕೂಡಿ, ಉಂಡ ಮನೆಗೆ ಎರಡು ಬಗೆದು ಇತ್ತ ಬರುತ್ತಿರುವರಂತೆ. ಸೈನ್ಯ ನಾಳಿದ್ದು ಇಲ್ಲಿ ಬರುವ ನಿರೀಕ್ಷೆ ಇದೆಯೆಂದು ಗೂಢ ವಾರ್ತೆ. ದೊರೆಯಾದ ನಿನಗೂ ಇದುತಿಳಿದಿದ್ದರೆ ಇಂದು ಈ ಉತ್ಸವವನ್ನು ನೀನು ಅಪ್ಪಣೆಮಾಡುತ್ತಿರಲಿಲ್ಲ; ರಾಜ್ಯದರಕ್ಷಣೆಯಕಾಲ ಇದು; ಉತ್ಸವದ ಕಾಲ ಇದಲ್ಲ ಎಂದು ಭಾವಿಸಿ ಕೌಮುದೀ ಮಹೋತ್ಸವವನ್ನು ನಾನು ನಿಲ್ಲಿಸಿದ್ದು ನಿನ್ನ ಕ್ಷೇಮಕ್ಕಾಗಿಯೇ ಹೊರತು ಇದರಲ್ಲಿ ರಾಜಾಪಮಾನವೆಲ್ಲಿದೆ ?''

ದೊರೆ : ''ಆ ರಾಕ್ಷಸನನ್ನು ಇಲ್ಲಿಂದ ಓಡಿ ಹೋಗಲೇಕೆ ಬಿಟ್ಟಿರಿ ? ಇಲ್ಲಿಯೇ ಸೆರೆಹಿಡಿದು ಬಂಧಿಸಿದ್ದರೆ ಇಷ್ಟೆಲ್ಲ ಅನರ್ಥಕ್ಕೆ ಕಾರಣವೇ ಇರುತ್ತಿರಲಿಲ್ಲ! ಭದ್ರಭಟಾದಿಗಳನ್ನೂ ಅಷ್ಟೆ. ಇಲ್ಲಿಯೇ ಕೊಲ್ಲಿಸಿದ್ದರೆ ಕಥೆ ಮುಗಿಯುತ್ತಿತ್ತು. ಆಗ ಉದಾಸೀನರಾಗಿದ್ದು, ಈಗ ಯುದ್ಧಭಯ ತೋರಿಸಿ ದೊರೆಯನ್ನು ಬೆದರಿಸುವುದು ಪ್ರಧಾನಿಗಳಿಗೆ ಭೂಷಣವೊ ?''

ಆಚಾರ್ಯ : ''ಚಾಣಕ್ಯನ ತಂತ್ರಗಳನ್ನು ಪ್ರಶ್ನಿಸುವ ಪ್ರಬುದ್ಧತೆ, ಧೈರ್ಯ ನಿನಗೆ ಬಂತೋ ? ಎಲವೋ ಮೂರ್ಖ! ಕೇಳು. ಸ್ವಾಮಿಭಕ್ತ ರಾಕ್ಷಸನನ್ನು ಸೆರೆಹಿಡಿದಿದ್ದರೆ ಆತ್ಮಹತ್ಯೆ ಮಾಡಿಕೊಂಡು ಸಾಯುತ್ತಿದ್ದ. ಜನಪ್ರಿಯ ಮಂತ್ರಿಯ ಸಾವಿನ ದೆಸೆಯಿಂದ ನಮಗೆ ವಿನಾಕಾರಣ ಅಪಕೀರ್ತಿಯೂ, ಜನಕ್ಷೋಭೆಯೂ ಆಗುತ್ತಿತ್ತು. ಜನ ನಿನ್ನನ್ನು ದ್ವೇಷಿಸಲಾರಂಭಿಸುತ್ತಿದ್ದರು. ಭದ್ರಭಟಾದಿಗಳನ್ನೂ ಅಷ್ಟೆ! ಸೈನ್ಯ ದಂಗೆ ಏಳುತ್ತಿತ್ತು! ಹಾಗೂ ನಿನ್ನಲ್ಲಿ ಸಮರ್ಥ ಪ್ರಧಾನಿ, ಸೇನಾನಾಯಕರುಗಳ ಕೊರತೆ ಇಲ್ಲವಲ್ಲ! ಎಂದು ಉಪೇಕ್ಷಿಸಿದೆ."

ದೊರೆ ; ''ಇದು ಆತ್ಮಶ್ಲಾಘನೆಯಲ್ಲವೋ ?''

ಆಚಾರ್ಯ : ''ಅಲ್ಲ. ಮೂರ್ಖನಿಗೆ ತಿಳಿಸುವ ರೀತಿ ಮಾತ್ರ! ನೀನೇ ಯೋಚಿಸು.''

ದೊರೆ ; ''ಇದು ವೃಥಾ ರಾಜನಿಂದೆ! ನಾನಿಂಥ ಮಾತನ್ನು ಇನ್ನು ಸಹಿಸಲಾರೆ! ರಾಕ್ಷಸನೇ ಪ್ರಧಾನಿಯಾಗಿರುತ್ತಿದ್ದರೆ ಇಂಥ ಒರಟು ಮಾತು ಗಳನ್ನೆಂದೂ ದೊರೆಗೆ ಆಡುತ್ತಿರಲಿಲ್ಲ. ನಂದರು ಸತ್ತರೂ. ಅವರ ರಾಜ ಕಾರ್ಯವನ್ನು ಪರದೇಶದಲ್ಲಿ ಸಮರ್ಥವಾಗಿ ನಡೆಸುತ್ತಿರುವ ಅವನೆಂದೂ ಈ ರೀತಿ ಉದ್ಧಟನಾಗಿ ಮಾತಾಡುತ್ತಿರಲಿಲ್ಲ !''

ಆಚಾರ್ಯ : ''ಎಲೋ ವೃಷಲ ! ನನ್ನೆದುರು ಶತ್ರುಪ್ರಶಂಸೆ ಮಾಡುವ ಧೈರ್ಯವಾಯಿತೋ? ಕೆಲಸಕ್ಕೆ ಬಾರದ ಅವನನ್ನು ಹೊಗಳುವ ನೀನೀಗ ಮತಿಗೇಡಿಯೇ ಸರಿ! ನಂದರನ್ನು ಅವನ ಕಣ್ಣೆದುರೇ ನಿಗ್ರಹಿಸಿದ ವರಾರೋ? ಯವನನ ಧಾಳಿಯಿಂದ ತತ್ತರಿಸಿದ ಪಂಚನದ ಪ್ರಾಂತವನ್ನು ಒಗ್ಗೂಡಿಸಿದವರಾರೋ? ಶಸ್ತ್ರಹಿಡಿಯದೇ ನಿನ್ನ ಶತ್ರುಗಳನ್ನು ನಿಗ್ರಹಿಸಿದವ ರಾರೋ ? ಅನ್ನಸತ್ರದ ದೆಸೆಯಿಂದ ಬಿಡಿಸಿ ನಿನ್ನನ್ನು ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕ ಮಾಡಿದವರಾರೋ ?"

ದೊರೆ : ''ಇದೆಲ್ಲ ಆತ್ಮಪ್ರಶಂಸೆಯಲ್ಲದೆ ಬೇರೇನು ? ನೀವು ಹೇಳಿದ್ದನ್ನೆಲ್ಲ ದೈವವೇ ಮಾಡಿತು. ತಾವು ನಿಮಿತ್ತ ಮಾತ್ರ.''

ಚಾಣಕ್ಯ ; ''ಅಶಕ್ತರು ದೈವವನ್ನು ಸ್ತುತಿಸುವರು !''

ದೊರೆ ; "ಪ್ರಾಜ್ಞರು ಆತ್ಮ ಪ್ರಶಂಸೆಯನ್ನೆಂದೂ ಮಾಡರು ! ಇದೂ ಹೋಗಲಿ. ಸೂಳೆಗೇರಿಯನ್ನು ನಿರ್ಮೂಲ ಮಾಡುವುದನ್ನು ಬಿಟ್ಟು ಅವರಿಗೆ ನಿಯಮಗಳನ್ನು ಕಲ್ಪಿಸಿ ಅವರಿಂದ ರಾಜಾದಾಯವನ್ನು ತಾವು ಏರ್ಪಡಿಸಿರುವುದೇಕೆ ? ಸೂಳೆಯ ವ್ಯಭಿಚಾರದ ಹಣದಿಂದ ದೊರೆ ಧರ್ಮ ಕಾರ್ಯ ನಡೆಸುವುದೆಂತು? ಅಬ್ಕಾರಿ ವಿಭಾಗ, ಮಾಂಸವಿಕ್ರಯಗಳಿಗೂ ಈ

ನನ್ನ ಆಕ್ಷೇಪ ಅನ್ವಯವಿದೆ. ಪೂಜ್ಯರು ಉತ್ತರಿಸಬೇಕು! ನನಗೆ ತಿಳಿಯದ ರಾಜ ನೀತಿ ಇದರಲ್ಲೇನುಂಟು ?''

ಚಾಣಕ್ಯ : ''ನೋಡಿದೆಯಾ? ಮಾತು ಎಲ್ಲಿಂದ ಎತ್ತ ಹೋಯಿತು ? ಕೌಮುದೀ ಮಹೋತ್ಸವಕ್ಕೂ ಇದಕ್ಕೂ ಏನು ಸಂಬಂಧ? ಇಂದು ನನ್ನಲ್ಲಿ ಬರೀ ದೋಷೋದ್ಘಾಟನಕ್ಕೆಂದೇ ನನ್ನನ್ನು ಕರೆಸಿರುವಂತಿದೆ! ನಾನು ಪ್ರಾಜ್ಞನೋ ಅಜ್ಞನೋ ಎಂಬುದನ್ನು ನೀನೇ ನಿರ್ಣೈಸು! ಕೇವಲ ರಾಜಶಾಸನದಿಂದ ಸೂಳೆಯ ವೃತ್ತಿ ನಿರ್ಮೂಲವಾಗದು. ಅದನ್ನು ಬಯಸುವ, ಪೋಷಿಸುವ ಜನ ಇದ್ದೇ ಇರುತ್ತಾರೆ. ರಾಮರಾಜ್ಯದಲ್ಲೂ ಇದ್ದರು. ಧರ್ಮರಾಜ್ಯದಲ್ಲೂ ಇದ್ದರು! ಇದು ಒಂದು ದೃಷ್ಟಿ. ರಾಜಶಾಸನಕ್ಕೊಳಪಡಿಸಿ, ನಿಯಮಗಳನ್ನೇರ್ಪಡಿಸಿ, ದಂಡ ಮಿತಿಯಲ್ಲಿಟ್ಟರೆ ಅವರ ಉಪದ್ರವ ಕಡಿಮೆಯಾಗುವುದು ಎಂಬುದು ಇನ್ನೊಂದು ದೃಷ್ಟಿ. ಅವರೂ ಮನುಷ್ಯ ಮಾತ್ರರಾದುದರಿಂದ ರಾಜರಕ್ಷಣೆಗೆ ಒಳಪಟ್ಟವರೆಂಬುದು ಮೂರನೆಯ ದೃಷ್ಟಿ. ರಾಜ ಶುಲ್ಕವಿರದಿದ್ದರೆ ಅವರಿವರು ಬೆದರಿಸಿ ಅವರ ಹಣ ಕಿತ್ತುಕೊಳ್ಳುವರಾದ್ದರಿಂದ, ಹಾಗೆ ವ್ಯರ್ಥವಾಗುವ ಹಣ ಬೊಕ್ಕಸಕ್ಕೇ ಸೇರಲಿ ಎಂಬುದು ನಾಲ್ಕನೆಯ ದೃಷ್ಟಿ! ನಾನಾಗಲೀ, ಬ್ರಾಹ್ಮಣರಾಗಲಿ ಅತ್ತ ಹೋಗಬೇಕೆಂದಲ್ಲ! ಅರಮನೆಗೆ ಅವರು ಭೂಷಣರೆಂದು ತಲೆತಲಾಂತರಗಳಿಂದ ಬಂದಿದೆ. ಅವರನ್ನೆಲ್ಲ ನಿರ್ಮೂಲ ಮಾಡಿದರೆ ನಿನಗೆ ಚಾಮರ ಬೀಸುವವರಾರು ? ಛತ್ರಿ ಹಿಡಿಯುವವರಾರು ? ಇದನ್ನೆಲ್ಲ ಮುನಿಗಳಿಂದ ಮಾಡಿಸುವೆಯಾ ? ಗಣಿಕಾಧ್ಯಕ್ಷನೆಂಬುವನು ಅರಮನೆಯ ವತಿಯಿಂದ ಅವರ ಮೇಲ್ವಿಚಾರಕನು. ರೂಪ, ಯೌವ್ವನ, ಕಾರ್ಯದಕ್ಷತೆಗಳ ಆಧಾರದಿಂದ ಅವರನ್ನು ವಿಂಗಡಿಸಿ ಅವರವರ ಶುಲ್ಕವನ್ನವನು ಗೊತ್ತು ಮಾಡಬೇಕು. ವೃದ್ಧೆಯೂ ಗತರೂಪಳೂ ಆದವಳನ್ನು ಅರಮನೆಯಲ್ಲಿ ಮಾತೃಸ್ಥಾನದಲ್ಲಿರಿಸಬೇಕು. ಅನಾಥ ಗಣಿಕೆಯರ ಆಸ್ತಿ ಅರಮನೆಗೇ ಸೇರಬೇಕು. ಅಕಾಮಳಾದ ಕುಮಾರಿ ಗಣಿಕೆಯನ್ನು ಯಾರಾದರೂ ಬಲಾತ್ಕರಿಸಿದರೆ ತಲೆ ದಂಡ ಹಾಕಬೇಕು. ಹಣ ತೆಗೆದುಕೊಂಡು ಪುರುಷನಿಗೆ ಭೋಗ ಒದಗಿಸದವಳನ್ನು ಅವಳ ಶುಲ್ಕದ ಎರಡರಷ್ಟು ದಂಡದಿಂದ

ದಂಡಿಸಬೇಕು. ಸಂಭೋಗ ಕಾಲದಲ್ಲಿ ಪುರುಷನನ್ನು ಕೊಂದರೆ, ಅವ ನೊಡನೆಯೇ ಅವಳನ್ನೂ ಸುಡಬೇಕು! ಒಳ್ಳೆಯ ಗಣಿಕೆಯರಿಗೆ ನಾಟ್ಯ, ಸಂಗೀತ, ಚಿತ್ರಲೇಖನ, ವಾದ್ಯಕೌಶಲ, ಮಾಲಾಕರಣ, ಗಂಧ ತಯಾರಿ ಇಂಥ ವಿದ್ಯೆಗಳನ್ನು ಸರ್ಕಾರೀ ಹಣದಲ್ಲಿ ಯುಕ್ತನಾದ ಗುರು ಕಲಿಸಬೇಕು. ಇದಕ್ಕೆ ಪ್ರತಿಯಾಗಿ ಗಣಿಕೆಯರು ತಿಂಗಳ ಎರಡು ದಿನದ ಸಂಪಾದನೆಯನ್ನು ತಿಂಗಳ ತೆರಿಗೆಯನ್ನಾಗಿ ಸರ್ಕಾರಕ್ಕೆ ಕೊಡಬೇಕು. ಅವರ ಹಣ ಅವರಿಗೇ ವಿನಿಯೋಗವಾಗಿ, ಈ ವೃತ್ತಿ ಈಗ ಹಿಡಿತಕ್ಕೆ ಬರುತ್ತದೆ. ಬಿಟ್ಟರೆ ಗಣಿಕೆ ಯರೂ ಕೊಬ್ಬಿ ಹಾವಳಿ ಮಾಡುವರು. ಅವರು ಬಿಟ್ಟರೂ ವಿಟರು ಅವ ರನ್ನು ಬಿಡುತ್ತಿರಲಿಲ್ಲ ! ಕುಡುಕರ ಮಾತೂ ಇಷ್ಟೆ! ಮಾಂಸ ತಿನ್ನುವವರ ಮಾತೂ ಅಷ್ಟೆ! ಇವಾವುದೂ ನಿರ್ಮೂಲವಾಗುವುದಿಲ್ಲ. ಕ್ರಮವಾಗಿ ಹತೋಟಿಯಲ್ಲಿಟ್ಟು, ಉಪದ್ರವ ಇತರರಿಗೆ ತಗಲದಂತೆ ನೋಡಿಕೊಳ್ಳಬೇಕು. ಹೆಂಡದಂಗಡಿಗಳನ್ನು ಊರಾಚೆ ಹಾಕಿಸಿರುವೆನಷ್ಟೆ! ಕುಡುಕರೂ ಮನು ಷ್ಯರೆ ! ಇವರನ್ನೆಲ್ಲ ಮಾನವ ದೃಷ್ಟಿಯಿಂದ ನೋಡಿ ಸಮಾಜದಲ್ಲಿ ಸಮನ್ವ ಯಿಸಿದ ಚಾಣಕ್ಯನಿಗಿಂತ ರಾಕ್ಷಸ ಹೆಚ್ಚು ಸಮರ್ಥನೋ ?''

ದೊರೆ ; ''ಆರ್ಯರೇ ! ಬ್ರಾಹ್ಮಣೋತ್ತಮರಾಗಿರುವ ತಾವು ಈ ವಿಷಯಗಳಲ್ಲೆಲ್ಲ ಕೈ ಹಾಕಬಾರದಿತ್ತು ! ಇದರ ಕೆಟ್ಟ ಹೆಸರೆಲ್ಲ ಈಗ ನನಗೇ ಬರುವುದು. ವಿಲಾಸಿಗಳಾಗಿದ್ದೂ ನಂದರು ಈ ಸುಧಾರಣೆಗೆ ಕೈ ಹಾಕ ದುದು ರಾಕ್ಷಸನ ಮೃದು, ಮಾನವ, ಪ್ರಾಜ್ಞ ನೀತಿಯಿಂದ. ತಮ್ಮ ಉಗ್ರ ಶಾಸನ, ಕಠೋರ ನೀತಿ, ಭಯಂಕರ ದಂಡ ಸಂಹಿತೆಗಳು ಜನ ಪೀಡೆಗೆ, ಹಾಹಾಕಾರಕ್ಕೇ ದಾರಿಯಾಗುವುವು !''

ಆಚಾರ್ಯ : ''ಮುಂದಿನ ಇಪ್ಪತ್ತೈದು ವರ್ಷಗಳಲ್ಲಿ ಈ ಶಾಸನದ ಸತ್ಪರಿಣಾಮವನ್ನು ನೀನೇ ನೋಡುವೆ."

ದೊರೆ ; ''ಈಗಲೇ ನೋಡಿದ್ದಾಗಿದೆಯಲ್ಲ! ಹೇಗೂ ಆ ರಾಕ್ಷಸ ಇಲ್ಲಿದ್ದಿದ್ದರೆ ಈ ಅನರ್ಥಗಳಾಗುತ್ತಿರಲಿಲ್ಲ.

ಆಚಾರ್ಯ ; (ಕ್ರೋಧದಿಂದ ಹುಬ್ಬು ಗಂಟಿಕ್ಕಿ, ಕಾಲಿನಿಂದ ನೆಲ ವನ್ನೊದೆಯುತ್ತಾ) ''ಎಲವೆಲವೋ ಶೂದ್ರ! ಈಚಲ ಗಿಡವನ್ನು ಕಲ್ಪ ವೃಕ್ಷದೆದುರು ಕೊಂಡಾಡುವ ಧೈರ್ಯ ನಿನಗಾಯಿತೋ ? ಪದೇ ಪದೇ ಆ ಕ್ಷುದ್ರ ಅಮಾತ್ಯನನ್ನು ನೆನೆಸಿ ಕೊಂಡಾಡಿ, ನನ್ನನ್ನು ಪರ್ಯಾಯದಿಂದ ಅಧಿ ಕಾರಬಿಡುವಂತೆ ಪ್ರಚೋದಿಸುತ್ತಿರುವೆ ! ಇನ್ನು ಮುಂದೆ ಆ ರಾಕ್ಷಸನನ್ನೇ ಕರೆಸಿ ಅಮಾತ್ಯ ಮಾಡಿಕೊಂಡು ರಾಜ್ಯಭಾರ ಮಾಡು ! ಗೌರವವಿಲ್ಲದಲ್ಲಿ ಚಾಣಕ್ಯ ಒಂದು ಗಳಿಗೆಯೂ ಇರಲಾರ !'' ಎಂದು ಗರ್ಜಿಸಿ, ಆಚಾರ್ಯ ತನ್ನ ಕೈಯ್ಯಲ್ಲಿನ ಸಚಿವ ಶಸ್ತ್ರವನ್ನು ಕೋಪದಿಂ ಸೆದು ಅರಮನೆಯಿಂದ ಹೊರಹೊರಟೇ ಹೋದ!!

ಚಂದ್ರಗುಪ್ತನಿಗೆ ಆಚಾರ್ಯ ನಿಜವಾಗಿಯೇ ಕೋಪಗೊಂಡನೆಂಬ ಭೀತಿ ಕಾಡ ತೊಡಗಿತು! ವಿದ್ಯುಲ್ಲೇಖೆ ಆಚಾರ್ಯನ ಈ ಕೋಪವನ್ನು ಹಿಂದೆ ಕಂಡಿರಲಿಲ್ಲ ! ಆಸ್ಥಾನದ ಅಧಿಕಾರಿಗಳೂ ಊಳಿಗದವರೂ ನಡುಗಿದರು!

ಸಿಂಹಾಸನದ ಹಿಂದಿನಿಂದ ಇಬ್ಬರು ವಂದಿ ಮಾಗಧರು, ಒಬ್ಬ ಶಿವ ಸ್ತುತಿಯನ್ನೂ, ಇನ್ನೊಬ್ಬ ವಿಷ್ಣುಸ್ತುತಿಯನ್ನೂ ಮಾಡುವ ನೆಪದಲ್ಲಿ ದೊರೆಯನ್ನು ಕೊಂಡಾಡಿ, ನಡುವೆ ''ಸಿಂಹವು ಪರಪ್ರಾಣಿಗಳ ದೆಸೆಯಿಂದ ತನ್ನ ಕೋರೆ ಹಲ್ಲುಗಳನ್ನು ಮುರಿಸಿಕೊಂಡು ಸಹಿಸದು'' ಎಂದೂ, "ರಾಜನು ಭೋಗದಿಂದ ಮಾತ್ರ ರಾಜನೆನಿಸಲಾರ; ಶಾಸನ ಅತಿಕ್ರಮಣ ಸಹಿಸದವನು ಮಾತ್ರ ಉತ್ತಮ ನರೇಂದ್ರ" ಎಂದೂ ಅರ್ಥ ಬರುವ ಸ್ತುತಿ ಗಳನ್ನು ಶ್ರಾವ್ಯವಾಗಿ ಮಾಗಧೀ ಭಾಷೆಯಲ್ಲಿ ಹಾಡಿ ಹೊಗಳಿದರು!

ಸಭಾ ದ್ವಾರದಲ್ಲಿ ನಿಂತು ಆಲಿಸಿದ ಚಾಣಕ್ಯ : ''ಎಲವೋ ರಾಕ್ಷಸ! ಚಾಣಕ್ಯನಿನ್ನೂ ಜೀವಿಸಿದ್ದಾನೆ ! ಅವನಿಗೆ ಮತಿ ಮಾಂದ್ಯವೋ, ಮೌಢ್ಯ ಜಾಡ್ಯಗಳೋ ಇಲ್ಲ; ಯಾರ ತಂತ್ರಕ್ಕೆ ಯಾರು ಬಲಿಯಾಗುವರೆಂದು ಇಷ್ಟ ರಲ್ಲೇ ತಿಳಿಯುವುದು!'' ಎಂದೆಂದು ಕೊಳ್ಳುತ್ತಾ ಅಡಿಯಿಟ್ಟ.

ಚಂದ್ರಗುಪ್ತನು ದೂತನಿಗೆ "ಅರಸರು ಚಾಣಕ್ಯನನ್ನು ಅಧಿಕಾರದಿಂದ ಕಿತ್ತು ಹಾಕಿದರೆಂದೂ, ನಾಳೆಯಿಂದ ಅಧಿಕಾರಿಗಳು ನೇರವಾಗಿ ದೊರೆಯನ್ನೇ ಇನ್ನು ಮುಂದೆ ಸಂಪರ್ಕಿಸಬೇಕೆಂದೂ ತಿಳಿಸು" ಎಂದು ಅಪ್ಪಣೆ ಮಾಡಿದನು.

ಚಾರನು : "ಈಗಲೀಗ ಮಹಾಸ್ವಾಮಿಗಳು ಸ್ವತಂತ್ರರಾಗಿ ದೊರೆಯಾದರು!" ಎಂದಭಿನಂದಿಸಿದ. ದೊರೆ ಅವನಿಗೆ ಮುತ್ತಿನ ಹಾರವನ್ನಿತ್ತ.

  

ಇದನ್ನೆಲ್ಲ ಗಮನಿಸುತ್ತಿದ್ದ ಗೂಢಚಾರನು ರಾಕ್ಷಸನಿಗೆ ಎಲ್ಲ ವಿಷಯಗಳನ್ನೂ ವಿವರವಾಗಿ ತಿಳಿಸಿ, "ತಮ್ಮ ಆಗಮನಕ್ಕೆ ದೊರೆಯಾದಿಯಾಗಿ ಊರೆಲ್ಲ ಕಾದು ಸಿದ್ಧವಾಗಿದೆ" ಎಂದುಸುರಿದನು.

ಆ ರಾತ್ರಿ ಚಂದ್ರಗುಪ್ತನಿಗೆ ನಿದ್ರೆ ಬರಲಿಲ್ಲ! ಆಚಾರ್ಯದ್ರೋಹವಾದ ಭಾವ ಒಂದು ಕಡೆ! ಆಚಾರ್ಯರ ಗೂಢ ಹೃದಯವೇ ತಿಳಿಯದುದು ಮತ್ತೊಂದು ಕಡೆ! ಹೊಗಳುಭಟ್ಟರ ವಾಕ್ಯಗಳಿಂದ ರಾಕ್ಷಸನ ಪರಿವಾರ ತನ್ನ ಸುತ್ತ ಇನ್ನೂ ಇದೆಯೆಂಬ ಎಚ್ಚರಿಕೆಯೊಂದು ಕಡೆ !

ವಿದ್ಯುಲ್ಲೇಖ ಚಂದ್ರಗುಪ್ತನಿಗೆ : "ನಾಟಕ ಚೆನ್ನಾಗಿ ಮಾಡಿದಿರಿ! ಬಹುಮಾನವನ್ನು ಆಚಾರ್ಯರು ಬೇಗನೇ ದಯಪಾಲಿಸುವ ವಿಶ್ವಾಸ ನನಗುಂಟು" ಎಂದಳು. ಆ ಭೀತಿಯ ನಡುವೆಯೂ ಚಂದ್ರಗುಪ್ತ ಕೊಂಚ ನಕ್ಕ ! ಆಗಸದ ಚಂದ್ರನನ್ನೂ ಈ 'ಗುಪ್ತ'ನನ್ನೂ ನೋಡುತ್ತ ಅವಳು ಬಹು ಹೊತ್ತು ನಿಂತಳು!



## ಇಪ್ಪತ್ತನೆಯ ಅಧ್ಯಾಯ

# ರಾಕ್ಷಸನ ಉಚ್ಚಾಟನೆ

ಪಾಟಲೀಪುತ್ರದಲ್ಲಿ ನಡೆದುದೆಲ್ಲವನ್ನೂ ಅಮಾತ್ಯ ರಾಕ್ಷಸ ಕೇಳಿ ಕೊಂಡು ಶತ್ರುವಿನ ಮುತ್ತಿಗೆಗೆ ಇದೇ ಸರಿಯಾದ ಸಮಯವೆಂದು ನಿಶ್ಚಯಿ ಸಿದನು. ಹೊರಗೆ ಮಲಯಕೇತುವೂ ಭಾಗುರಾಯಣನೂ ನಿಂತು ಈ ಅಮಾತ್ಯ-ಚಾರರ ಸಂವಾದವನ್ನು ಕೇಳುತ್ತಿದ್ದುದು ರಾಕ್ಷಸನಿಗೆ ತಿಳಿಯ ಲಿಲ್ಲ! ಬೆಳಗ್ಗೆಯಿಂದ ಅಮಾತ್ಯನು ತಲೆಶೂಲೆಯಿಂದ ಬಳಲುತ್ತಿರುವುದನ್ನು ಕೇಳಿ ಅವನನ್ನು ವಿಚಾರಿಸಿ ಹೋಗಬೇಕೆಂದು ಅಮಾತ್ಯನ ಬೀಡಾರಕ್ಕೆ ಮಲಯಕೇತುವು ಬರುವಷ್ಟರಲ್ಲಿ ಮಗಧದ ಚಾರನು ಒಳ ಹೊಕ್ಕುದನ್ನು ನೋಡಿ ಅವನೂ ಭಾಗುರಾಯಣನೂ ಪಕ್ಕಕ್ಕೆ ಸರಿದು ನಿಂತರು. ಒಳಗೆ ಹೀಗೆ ಸಂವಾದ ನಡೆಯುತ್ತಿತ್ತು.

ಚಾರ : "ಅಯ್ಯಾ ಅಮಾತ್ಯರೇ ! ತಾವು ಸಂಕಲ್ಪಿಸಿದ್ದ ಕೆಲಸ ಘಟಿಸಿ, ತಾವು ಕಾಯುತ್ತಿದ್ದ ಸುಸಂದರ್ಭ ಒದಗಿ ಬಂದಿದೆ.''

(ಹೊರಗಡೆ ಕೇಳುತ್ತಿದ್ದ ಮಲಯಕೇತುವು "ರಾಕ್ಷಸ ಕಾಯುತ್ತಿದ್ದ, ಸಂಕಲ್ಪಿಸಿದ್ದ ಸುಸಂದರ್ಭ ಎಂದರೇನು ?'' ಎಂದು ಬಾಗುರಾಯಣನನ್ನು ಕೇಳಿದ. ಅವನು "ಇನ್ನೂ ಮುಂದೆ ಕೇಳೋಣ, ತಿಳಿಯುತ್ತದೆ." ಎಂದನು.)

ರಾಕ್ಷಸ ; ''ಅದು ಹೇಗೆ ?''

ಚಾರ : "ಮೊನ್ನೆ ಹುಣ್ಣಿಮೆಯಂದು ಮಹಾಪ್ರಭುವಾದ ಚಂದ್ರ ಗುಪ್ತರು ಊರ ಜನಗಳಿಗೆ ಮನರಂಜನೆಯಾಗಿ, ಯುದ್ಧದ ಕ್ಲೇಶಗಳನ್ನು ಮರೆಸಲು ಕೌಮುದೀ ಮಹೋತ್ಸವ ನಡೆಸಲು ಅಣತಿಯಿತ್ತರು. ಅದನ್ನು ಸಹಿಸದ ಆ ಚಾಣಕ್ಯನು ದೊರೆಯ ಮುಖದ ಮೇಲೆ ಹೊಡೆದಂತೆ ಆ ಆಜ್ಞೆಯನ್ನು ರದ್ದು ಪಡಿಸಿ, ಯಾರೂ ಅದನ್ನಾಚರಿಸಬಾರದೆಂದು ಡಂಗೂರ ಸಾರಿಸಿದನು. ಕ್ರುದ್ಧರಾದ ಅರಸರು ಪ್ರಧಾನಿಯನ್ನು ಕರೆಸಿ ವಿಚಾರಿಸಲು, ಅಡ್ಡಾದಿಡ್ಡಿಯಾಗಿ ಮಾತಾಡಿದ ಚಾಣಕ್ಯನು ಅರಸರಿಗೆ ಮತ್ತೂ ಕೋಪ ಹೆಚ್ಚಾಗುವಂತೆಯೇ ಮಾತಾಡಿದನು. ಆ ಸಮಯದಲ್ಲಿ ತಮ್ಮ ಪ್ರೇರಣೆಯಂತೆ ಅರಮನೆಯ ವೈತಾಳಿಕರು ಅರಸನನ್ನು ಹೊಗಳಿ, 'ಸಿಂಹವು ಇತರ ಪ್ರಾಣಿಗಳ ಆಜ್ಞೆಯಿಂದ ನಡೆಯತಕ್ಕುದಲ್ಲ' ಎಂಬರ್ಥದ ಗೀತೆಗಳನ್ನೂ ಹಾಡಿ ಅರಸರಿಂದ ಬಹುಮಾನಿತರಾದರು !''

ರಾಕ್ಷಸ : "ಎಷ್ಟಾದರೂ ರಾಜಪುತ್ರನಲ್ಲವೆ ? ಆ ಒರಟು ಬ್ರಾಹ್ಮಣನ ಅಪಮಾನವನ್ನು ಎಷ್ಟು ದಿನ ಸಹಿಸಿಯಾನು ? ಸಾಮಾನ್ಯನೇ ಆಜ್ಞಾಭಂಗವನ್ನು ತಾಳಲಾರನೆಂದರೆ, ಮಹಾಪ್ರಭುವಾಗಿ ಅಭಿಷೇಕಗೊಂಡವನು ಅದನ್ನೆಂತು ಸಹಿಸಿಯಾನು ?"

(ಮಲಯಕೇತು ; "ರಾಕ್ಷಸ ಚಂದ್ರಗುಪ್ತನನ್ನು ಹೊಗಳುತ್ತಿರುವು ದೇಕೆ ? ಅವನು ಅವನಿಗೂ ನಮಗೂ ಸಮವಾಗಿಯೇ ಶತ್ರುವಲ್ಲವೆ ?" ಬಾಗುರಾಯಣ ; "ರಾಕ್ಷಸನ ದ್ವೇಷ ಚಾಣಕ್ಯನ ಮೇಲೆ ಮಾತ್ರವೇ ಇರುವಂತೆ ತೋರುತ್ತದೆ! ಎಷ್ಟಾದರೂ ಪರಂಪರೆಯಿಂದ ಬಂದ ಪ್ರಧಾನಿ ರಾಕ್ಷಸನೇ ಅಲ್ಲವೆ ? ಈರ್ಷೆ ಸ್ವಾಭಾವಿಕ." ಮಲಯಕೇತು ; "ಹಾಗಾ ದರೆ ನನ್ನ ಗತಿ ? ರಾಕ್ಷಸ ಇಲ್ಲಿಗೇಕೆ ಬಂದ? ಅವನ ಉದ್ದೇಶ್ಯವೇ ತಿಳಿಯು ವುದಿಲ್ಲವಲ್ಲ !" ಭಯದಿಂದ ಮುಖ ವಿವರ್ಣವಾಗುವುದು !)

ಚಾರ : "ಆಮೇಲೆ ಚಂದ್ರಗುಪ್ತಪ್ರಭುಗಳು ಪ್ರಕಟವಾಗಿಯೇ ತಮ್ಮ ಗುಣಗಾನ ಮಾಡಿ ತಮ್ಮ ನೀತಿಗಳೇ ಚಾಣಕ್ಯನವಕ್ಕಿಂತ ಜನಾ ದರಣೀಯವೂ, ಜನಪ್ರಿಯವೂ ಆಗಿದ್ದುವೆಂದು ಹೇಳಿ ಚಾಣಕ್ಯನನ್ನು ಅಧಿ ಕಾರದಿಂದ ಇಳಿಸಿದರು. ಚಾಣಕ್ಯ ಸಚಿವಶಸ್ತ್ರವನ್ನು ಬಿಸುಟು ಎಲ್ಲಿಯೋ ಹೋದ."

(ಮಲಯಕೇತು : "ಇದರರ್ಥವೇನಯ್ಯ, ಮಿತ್ರ !" ಬಾಗು ರಾಯಣ : "ರಾಕ್ಷಸನಿಗೆ ಚಂದ್ರಗುಪ್ತನಲ್ಲಿರುವ ಪ್ರೀತಿ ಪ್ರಕಟ ವಾಯಿತು! ಚಾಣಕ್ಯನನ್ನು ಹೊರಡಿಸಿ, ಆ ಸ್ಥಾನವನ್ನು ಪಡೆಯಲು ಯತ್ನ ನಡೆಸಿರಬೇಕು. ಎಷ್ಟಾದರೂ ಮಗಧ, ಪಾಟಲೀಪುತ್ರ ಅವನ ಜನ್ಮ ಭೂಮಿಯಲ್ಲವೆ ?")

ಮಲಯಕೇತುವಿಗೆ ಒಂದು ಅನಿರ್ವಚನೀಯ ಭಯ ಆವರಿಸಿತು ! ಕಾನಿರುವುದು ಪರಸ್ಥಳ! ಅದೂ ಮಗಧ ರಾಜಧಾನಿಯ ಸಮೀಪದಲ್ಲಿ ! ಈ ಹಾಳು ರಾಕ್ಷಸನನ್ನು ನಂಬಿ ಇಷ್ಟು ದೂರ ಬಂದಾಯಿತು. ಈಗವನು ತನಗೆ ಕೈಕೊಟ್ಟು ಚಂದ್ರಗುಪ್ತನತ್ತ ಸುಮ್ಮನೆ ಜಿಗಿದು ಬಿಡುವನೋ ? ತನ್ನನ್ನೇ ಸೆರೆ ಹಿಡಿದು ಅವನಿಗೆ ಒಪ್ಪಿಸುವ ಉದ್ದೇಶ್ಯವೋ? ಒಂದೂ ತಿಳಿ ಯದೆ ಇಂಗುತಿಂದ ಮಂಗನಂತೆ ಬಾಗುರಾಯಣನ ಮುಖವನ್ನೇ ನೋಡು ತ್ತಿದ್ದ.

ಬಾಗುರಾಯಣ ; "ಕುಮಾರ! ರಾಕ್ಷಸನ ಅಂತರಂಗ, ತಂತ್ರ ಏನೇ ಇದ್ದರೂ ಇಂದೋ ನಾಳೆಯೋ ತಿಳಿದೇ ಹೋಗುವುದು. ನಾನಿರು ವಾಗ ನಿನಗೇತರ ಭಯ? ರಾಕ್ಷಸನನ್ನು ಪರೀಕ್ಷಿಸೋಣ. ಆದರೆ ದುಡುಕ ಬಾರದು. ಹಿಂದೆ ಮುಂದೆ ವಿಚಾರಿಸದೆ ಏನಾದರೂ ಮಾಡಿದರೆ ಈ ಶತ್ರು ದೇಶದ ಮಧ್ಯೆ ಸಿಕ್ಕಿ ಸಾಯುವುದಾಗುತ್ತದೆ. ರಾಕ್ಷಸ ಪ್ರಾಯಃ ದ್ರೋಹಿ ಯಲ್ಲ! ಆದರೂ ಈ ಮಾತುಗಳು ಸಂಶಯ ತರುತ್ತವೆ'' ಎಂದು ಹೇಳಿ, ಭೇದ ಬೀಜವನ್ನೂ ಬಿತ್ತಿ, ಭಯವನ್ನು ಹುಟ್ಟಿಸಿ, ಒಂದು ರೀತಿ ಸಮಾಧಾನ ಪಡಿಸಿದನು.

ಒಳಗೆ ಸಂವಾದ ನಡೆದೇ ಇತ್ತು. ಮತ್ತೇನು ವಾರ್ತೆಯುಂಟೆಂದು ರಾಕ್ಷಸ ಕೇಳಲು ಚಾರ ಹೇಳಿದ. "ಗಣಿಕೆಯರ ಪೋಷಣೆ, ನಿಬಂಧನೆ, ದಂಡ, ರಕ್ಷಣೆ, ಸುರಾಪಾನ ಗೃಹ ವಿಭಾಗ, ಮಾಂಸ ವಿಕ್ರಯ ವ್ಯವಹಾರ, ಎಲ್ಲ ವಿಷಯಗಳಲ್ಲೂ ತಮ್ಮ ನೀತಿಯೇ ಚಾಣಕ್ಯನ ನೀತಿಗಿಂತ ಉದಾರ ವೆಂದು ದೊರೆಗಳು ಕೊಂಡಾಡಿದರು ! ಕೋಪಗೊಂಡ ಚಾಣಕ್ಯ ತನ್ನನ್ನು ಕಲ್ಪವೃಕ್ಷವೆಂದೂ, ನಿಮ್ಮನ್ನು ಈಚಲಗಿಡವೆಂದೂ ಬೈದು ಹೋದ. ನಿಮ್ಮ ಇಷ್ಟಾರ್ಥ ಕೈಗೂಡಿತು ! ಇದೇ ಸುಸಂದರ್ಭ'' ಎಂದ.

ಬಾಗುರಾಯಣ ಮಲಯಕೇತು ಒಬ್ಬರ ಮುಖ ಒಬ್ಬರು ನೋಡಿ ಕೊಂಡರು ! ಮರೆಯಾದರು. ಚಾರ ಹೊರಟು ಹೋದ.

ಅನಿರೀಕ್ಷಿತವಾಗಿ ಬಂದ ಮಲಯಕೇತು ಬಾಗುರಾಯಣರನ್ನು ನೋಡಿ ರಾಕ್ಷಸ ಚಕಿತನಾದ ! ಅವನ ಮುಖ ಭಾವವನ್ನು ನೋಡಿದ ಮಲಯ ಕೇತುವಿಗೆ ತನ್ನ ಊಹೆ ಸರಿ ಎನಿಸಿತು! "ಅಮಾತ್ಯರೇ, ತಮಗೆ ತಲೆಶೂಲೆ ಹೇಗಿದೆಯೆಂದು ವಿಚಾರಿಸಲು ಬಂದೆವು" ಎಂದ, ಮಲಯಕೇತು.

ಅಮಾತ್ಯ ; "ಶುಭ ಸಮಾಚಾರ ಪಾಟಲೀಪುತ್ರದಿಂದ ಬಂದು, ಈಗ ನನ್ನ ತಲೆ ಶೂಲೆ ಇಳಿಯಿತು.''

ಮಲಯಕೇತು : ''ಅದೇನು ಅಂಥ ಶುಭ ಸಮಾಚಾರ ?"

ಅಮಾತ್ಯ : "ಚಾಣಕ್ಯನನ್ನು ಚಂದ್ರಗುಪ್ತ ಅಧಿಕಾರದಿಂದಿಳಿಸಿದ ನಂತೆ ! ಸಮರ್ಥ ಮಂತ್ರಿಯಿಲ್ಲದ ಅವನನ್ನು ನಾವಿಕನಿಲ್ಲದ ಮೂಢ ನೌಕೆಯಂತೆ ಈಗ ನಾವು ಸುಲಭವಾಗಿ ಕೈ ವಶಪಡಿಸಿ ಕೊಳ್ಳಬಹುದು!''

ಮಲಯಕೇತು : ''ಚಂದ್ರಗುಪ್ತನಿಗೆ ಈಗ ಅರಮನೆಯ ಹಳೆಯ ಅಧಿಕಾರಿಗಳೂ, ಪ್ರಜೆಗಳೂ ಅನುಕೂಲವಾಗಿರುವಂತೆ ತೋರುತ್ತದೆ. ಒಳ ಭೇದವಿಲ್ಲದ ಈ ಕಾಲದಲ್ಲಿ ಕೇವಲ ಚಾಣಕ್ಯನಿಗರ್ಮನದಿಂದ ನಮ್ಮ ಕೆಲಸ ಹೇಗೆ ಕೈಗೂಡೀತು ?"

ಅಮಾತ್ಯ ; "ಚಂದ್ರಗುಪ್ತನಲ್ಲಿ ಬದ್ಧವೈರವುಳ್ಳ ನಾವೂ ನಮ್ಮಂಥ ಪ್ರಜೆಗಳೂ ಇರುವಾಗ ನಿನಗೇಕಯ್ಯ ಆ ಯೋಚನೆ ? ಚಂದ್ರಗುಪ್ತನನ್ನು ನಿನಗೆ ಹಿಡಿದು ಕೊಟ್ಟರಾಯಿತೋ ಇಲ್ಲವೊ ?''

ಮಲಯ ಕೇತುವು ''ಯಾರನ್ನು ಯಾರಿಗೆ ಹಿಡಿದು ಕೊಡುವೆಯೋ, ನೋಡೋಣ !'' ಎಂದೆಂದುಕೊಳ್ಳುತ್ತಾ ಶಿಬಿರದಿಂದ ನಿರ್ಗಮಿಸಿದ. ಬಾಗುರಾಯಣ ಏನೂ ಮಾತಾಡಲಿಲ್ಲ. ರಾಕ್ಷಸನಿಗೆ ತನ್ನನ್ನು ಮಲಯ ಕೇತುವು ಶಂಕಿಸಿರುವ ವಿಷಯದಲ್ಲಿ ಅನುಮಾನವೇ ಬರಲಿಲ್ಲ. ಅನನುಭವಿ ರಾಜಕುಮಾರನ ಪ್ರಶ್ನೆಗಳೆಂದು ಅಲ್ಲಿಗೇ ಬಿಟ್ಟ.

  

ಮರುದಿನ ಬೆಳಿಗ್ಗೆ ಮಲಯಕೇತುವು ಪರೀಕ್ಷಾರ್ಥವಾಗಿ ಭದ್ರಭಟಾದಿ ಗಳನ್ನು ಕರೆಸಿ, ಬಾಗುರಾಯಣನೆದುರು ; ''ಏನಿರಯ್ಯ ! ಸೈನ್ಯಗಳೆಲ್ಲ ಸಜ್ಜಾಗಿವೆಯೋ ? ಪಾಟಲೀಪುತ್ರ ಸಮೀಪಿಸುತ್ತಿದೆ. ಎಷ್ಟಾದರೂ ನಿಮಗೆ ಸ್ವಸ್ಥಳ ! ನಮಗೆ ಮಾತ್ರ ಪರಸ್ಥಳ!! ನಿಮ್ಮ ಅಮಾತ್ಯರಿಗೆ ನೆನ್ನೆ

ಮೊನ್ನೆ ತಲೆ ಶೂಲೆಯಿತ್ತು. ಇನ್ನು ಅವರ ಯೋಗಕ್ಷೇಮವನ್ನೂ ನೋಡಿ ಕೊಂಡು ಸ್ವಲ್ಪ ಎಚ್ಚರಿಕೆಯಿಂದ ಮುಂದುವರೆಯಲಿ.'' ಎಂದನು.

ಭದ್ರಭಟ : "ಸ್ವಾಮಿ! ನಾವು ಪರಸ್ಥಳಕ್ಕೆ ಬಂದುದು ನಿಮ್ಮನ್ನಾ ಶ್ರಯಿಸಲೆಂದು ಮಾತ್ರ. ಇಲ್ಲೀ ಇರುವವರಾಗಿದ್ದರೆ ತಮ್ಮಲ್ಲೀಕೆ ಬರುತಿ ದ್ದೆವು? ನಾವು ಶೇಖರನ ಮೂಲಕ ತಮ್ಮನ್ನಾಶ್ರಯಿಸಿದವೇ ಹೊರತು ಅಮಾತ್ಯರ ಮೂಲಕವಲ್ಲ ಎಂಬುದು ತಮಗೆ ತಿಳಿದಿರಬೇಕು ! ಅಮಾತ್ಯರ ಯೋಗಕ್ಷೇಮವೇನಿದ್ದರೂ ತಮಗೆ ಸೇರಿದುದು. ತಮ್ಮ ಯೋಗಕ್ಷೇಮ ಮಾತ್ರ ನಮ್ಮದು'' ಎಂದನು.

ಮಲಯಕೇತುವಿನ ಅನುಮಾನ ಹೆಚ್ಚಿತು. ಬಾಗುರಾಯಣನ ಮುಖವನ್ನು ನೋಡಿದ. ಭದ್ರಭಟಾದಿಗಳು ಹೊರಟ ಮೇಲೆ, ''ಇನ್ನೂ ಪರೀಕ್ಷಿಸೋಣ ! ಇಷ್ಟಕ್ಕೇ ದುಡುಕಬಾರದು'' ಎಂದು ಮಲಯಕೇತು ವನ್ನು ಸಂತೈಸಿದ.

"ಚಾಣಕ್ಯ, ಚಂದ್ರಗುಪ್ತನೊಡನೆ ಜಗಳವಾಡಿ ಎಲ್ಲಿಗೆ ಹೋದ ?'' ಎಂದು ಮಲಯಕೇತು ಕೇಳಿದ. ''ಎಲ್ಲಿಗೆಂದು ಗೊತ್ತಿಲ್ಲ. ಇಷ್ಟರಲ್ಲೀ ತಪೋವನಕ್ಕೆ ಹೊರಡುವನೆಂಬ ಸುದ್ದಿ ಪಾಟಲೀಪುರದಲ್ಲೆಲ್ಲ ಹರಡಿದೆಯಂತೆ'' ಎಂದು ಬಾಗುರಾಯಣ ಉತ್ತರಿಸಿದ.

''ಈ ಧೂರ್ತ ಅಮಾತ್ಯನು ನನ್ನನ್ನೇನು ಮಾಡುವನೋ! ಧರ್ಮಾತ್ಮ ನಾದ ನಿನ್ನ ರಕ್ಷಣೆಯಿಲ್ಲದಿದ್ದರೆ ಅಂದೇ ಚಾಣಕ್ಯ ನನ್ನನ್ನು ಕೊಲ್ಲಿಸುತ್ತಿದ್ದ. ಇಂದೂ ನೀನೇ ನನಗೆ ರಕ್ಷನಾಗಿರುವೆ'' ಎಂಬ ಧನ್ಯ ಭಾವವನ್ನು ಮಲಯ ಕೇತು ವ್ಯಕ್ತಪಡಿಸಿದ.

  

ಅದೇ ಪ್ರಾತಃಕಾಲ ಅಮಾತ್ಯ ರಾಕ್ಷಸನು ಸೈನ್ಯ ತನ್ನ ಕೊನೆಯ ಕಂತಿನ ಪ್ರಯಾಣ ಮಾಡಿ ಪಾಟಲೀಪುತ್ರವನ್ನು ಮುತ್ತಿಗೆ ಹಾಕಲು ಸರಿಯಾದ ಮುಹೂರ್ತಕ್ಕಾಗಿ ಕಾಯುತ್ತಿದ್ದನು. ''ಹೊರಗೆ ಯಾರಾದರೂ ಜೋಯಿಸರಿರುವರೋ ? ನೋಡಿ ಕರೆದು ಬಾ'' ಎಂದು ತನ್ನ ಸೇವಕನಿಗೆ ಹೇಳಿ ಕಳುಹಿದನು. ಚಾರ ನೋಡಿ ಬಂದು ''ಸ್ವಾಮಿ ! ಕ್ಷಪಣಕರು ತಮಗಾಗಿ ಕಾಯುತ್ತಿದ್ದಾರೆ. ಅವರು ಜ್ಯೋತಿಷವನ್ನೂ ಬಲ್ಲವರು; ತಮಗೂ ಆಪ್ತರು; ಹೋಗಿ ಕರೆತರಲೇ ?" ಎಂದ.

ರಾಕ್ಷಸನಿಗೆ ಎಡ ಭುಜ ಅದುರಲಾರಂಭಿಸಿತು. ''ಇದೇನು! ಹೊರಡುತ್ತಲೇ ಕ್ಷಪಣಕನ ಅಮಂಗಳ ದರ್ಶನ !!'' ಎಂದುಕೊಂಡವನೇ, ಎಷ್ಟಾದರೂ ತನ್ನ ಆಪ್ತನೆಂದು ತನಗೆ ತಾನೇ ಸಮಾಧಾನ ಪಡಿಸಿಕೊಂಡ. "ಬರ ಹೇಳು" ಎಂದ.

ಕ್ಷಪಣಕ ಬಂದ ; ''ಜನೇಶ್ವರಾ !" ಎನ್ನುತ್ತಾ ಆಸನದಲ್ಲಿ ಕುಳಿತು ಕಣ್ಮುಚ್ಚಿದ. ಕೆಲ ಕಾಲವಾದ ಮೇಲೆ ಕಂದೆರೆದು ''ಅಮಾತ್ಯರಿಗೆ ಪೂರ್ವದ ಕಡೆಗೆ ಪ್ರಯಾಣವಿರುವಂತಿದೆ'' ಎಂದ. ''ಹೌದು, ಕ್ಷಪಣಕರೇ ! ಸರಿಯಾದ ಮುಹೂರ್ತ ನೋಡಿ ಹೇಳಿ. ಸೇನೆ ಪಾಟಲಿಪುರದ ಕಡೆ ಹೊರಡುವುದಿದೆ. ಹಿಂದೆ ನಂದ ನಿರ್ಯಾಣಕ್ಕೆ ಇಟ್ಟ ಮುಹೂರ್ತದಂತಾಗಬಾರದು'' ಎಂದು ಬಾಯಿತಪ್ಪಿ ಹೇಳಿದ, ರಾಕ್ಷಸ !

ಜೀವಸಿದ್ಧಿಗೆ ಬಲು ಕೋಪ ಬಂದಿತು! "ನಂದ ನಿರ್ಯಾಣಕ್ಕೆ ನಾನು ಮುಹೂರ್ತವಿಟ್ಟವನಲ್ಲ ! ಇದೇನು ಹುಚ್ಚು ಮಾತು ಅಮಾತ್ಯರೇ! ನಂದ ವಿಜಯಕ್ಕೆ ನಾನು ಮುಹೂರ್ತವಿಟ್ಟದ್ದು !! ನಿಮ್ಮ ಅವಿವೇಕದಿಂದ, ಚಾಣಕ್ಯ ತಂತ್ರದಿಂದ ನಂದರಿಗೆ ಮೃತ್ಯುವಾದರೆ ಅದಕ್ಕೆ ನಾನು ಹೊಣೆಯೇ ! ನಿಮಗೆ ನಮ್ಮಲ್ಲೂ ಜ್ಯೋತಿಷದಲ್ಲೂ ನಂಬಿಕೆ ಕೆಟ್ಟಂತಿದೆ ! ನಕ್ಷತ್ರಗಳೂ ಗ್ರಹಗಳೂ ಏನು ಮಾಡಬಲ್ಲವು ? ನಿಮ್ಮ ಕೈಹಿಡಿಸಿ ಜಯ ತಂದು ಕೊಡುತ್ತವೆಯೇ ? ಈಗ ನೀವು ಚಂದ್ರಗುಪ್ತನ ಮರಣಕ್ಕೆಂದು

ವಿಷಕನ್ಯೆಯನ್ನು ನನ್ನೊಡನೆ ಕಳುಹಿ ಚಾಣಕ್ಯನಿಗೆ ಒಡಂಬಡಿಸಿ, ಕುಮಾರ ನೊಡನೆ ಅವಳನ್ನು ಸೇರುವಂತೆ ಏರ್ಪಡಿಸಿದಿರಿ ! ನೀವು ಹೇಳಿದಂತೆಯೇ ನಾನು ಮಾಡಿದೆ. ಆದರೆ ಚಾಣಕ್ಯ ಅವಳನ್ನು ಪರ್ವತೇಶ್ವರನ ಮೇಲೆಯೇ ಪ್ರಯೋಗಿಸಿದ !! ಇದನ್ನೆಲ್ಲ ಮುಹೂರ್ತ ಮಾಡಿತೇ ? ಚಾಣಕ್ಯನ ಬುದ್ಧಿ ತಿಳಿತಿಳಿದೂ ಅವನಲ್ಲಿಗೆ ವಿಷ ಕನ್ಯೆಯನ್ನು ಕಳುಹಿದ್ದು ಯಾರ ತಪ್ಪು ? ಈಗ ಪರ್ವತೇಶನನ್ನು ಕೊಂದವರಾರು ? ನೀವೇ ಹೇಳಿ ? ಹಾಳು ಚಾಣಕ್ಯನ ಊರು ಬೇಡವೆಂದು ಇಷ್ಟು ದೂರ ದಣಿದು ನಡೆದು ಬಂದು ನಿಮ್ಮನ್ನಾಶ್ರಯಿಸಿದ ಈ ಜೈನ ಮುನಿಯನ್ನೇ ನೀವು ಶಂಕೆಯಿಂದ ನೋಡುವುದಾದರೆ ನಮ್ಮ ಅದೃಷ್ಟ ಚೆನ್ನಾಗಿಲ್ಲವೆನ್ನಬೇಕು ? ಲೌಕಿಕ ವನ್ನೆಲ್ಲ ಬಿಟ್ಟ ನಮಗೆ ಯಾವ ರಾಜಕೀಯದಿಂದ ತಾನೇ ಆಗಬೇಕಾದು ದೇನು ? ನಿಮ್ಮಿಂದ ತಾನೇ ಆಗಬೇಕಾದುದೇನು ? ಇದೋ ಹೊರಟೆವು'' ಎನ್ನುತ್ತಾ ''ಜಿನೇಶ್ವರ'' ನಾಮಸ್ಮರಣೆಯೊಂದಿಗೆ ಜೀವ ಸಿದ್ಧಿ ಹೊರಗೆ ನಡೆದೇ ಬಿಟ್ಟ! ''ಇಷ್ಟು ಸಣ್ಣ ವಿಷಯಕ್ಕೆ ಇಷ್ಟು ದೊಡ್ಡ ಕೋಪವೇತಕ್ಕೆ?'' ಎಂದು, ಭಾಗುರಾಯಣ ಎದುರು ಬಂದುದನ್ನೂ ಗಮನಿಸದೆ, ರಾಕ್ಷಸ, ಜೀವಸಿದ್ಧಿಯ ಹಿಂದೆಯೇ ನಡೆದ ! ಮುನಿ ಅಷ್ಟು ದೂರ ಹೋಗಿ ಬಿಟ್ಟಿದ್ದ.

''ಅಮಾತ್ಯರೇ. ಸೇನಾ ಪ್ರಯಾಣ ಎಷ್ಟು ಹೊತ್ತಿಗೆ ಎಂದು ತಿಳಿದು ಬರಲು ರಾಜಕುಮಾರನ ಅಪ್ಪಣೆಯಾಗಿದೆ." ಎಂದ ಭಾಗುರಾಯಣನಿಗೆ ''ಅದನ್ನೇ ನಿಷ್ಕರ್ಷಿಸಲು ಜೀವಸಿದ್ಧಿಯನ್ನು ಕರೆಸಿದ್ದೆ! ಮುಹೂರ್ತ ಕೇಳಿದ್ದಕ್ಕೇ ಕೋಪಗೊಂಡು ಹೋಗಿ ಬಿಟ್ಟ ! ನಮಗೆ ಗ್ರಹಚಾರ ಕಾಲ ವಾದರೆ ಎಲ್ಲವರೂ ಕೆಟ್ಟವರೇ ಆಗುವುದೇ ಹೀಗೆ'' ಎನ್ನುತ್ತಾ ರಾಕ್ಷಸ ನಿಟ್ಟುಸಿರು ಬಿಟ್ಟು ತನಗೆ ತಿಳಿದಂತೆ ತಾನೇ ಮುಹೂರ್ತವಿಟ್ಟು, "ಇನ್ನೊಂದು ಗಂಟೆಗೆ ಪ್ರಯಾಣ" ಎಂದು ಹೇಳಿ ಕಳುಹಿದ. ಹೊರ ಬಂದ ಭಾಗುರಾಯಣ, ತಾನು ಅರ್ಧಮರ್ಧ ಕೇಳಿದ್ದ 'ಪರ್ವತೇಶನನ್ನು ಕೊಂದವ ರಾರು ?' ಎಂಬ ವಾಕ್ಯವನ್ನು ಪೂರ್ತಿ ತಿಳಿಯಲು ಕುತೂಹಲದಿಂದ ಅಲ್ಲೇ ನಿಂತಿದ್ದ ಕ್ಷಪಣಕನನ್ನು ಸಮೀಪಿಸಿದ. "ಪರ್ವತೇಶನನ್ನು ಕೊಲ್ಲಿಸಿದವನು

ಚಾಣಕ್ಯನಲ್ಲವೆ ?'' ಎಂದು ಕೇಳಿದ. ''ಶಾಂತಂ ಪಾಪಂ'' ಎಂದು ಎರಡೂ ಕೈಗಳಿಂದ ಕಿವಿ ಮುಚ್ಚಿದ ಕ್ಷಪಣಕ ''ಚಾಣಕ್ಯ ದುಷ್ಟನೂ ಧೂರ್ತನೂ ಇರಬಹುದು; ಆದರೆ ಈ ವಿಷಯದಲ್ಲಿ ಅವನು ಧರ್ಮಾತ್ಮ! ವಿಷ ಕನ್ಯೆಯನ್ನು ಕಳುಹಿದವನು ರಾಕ್ಷಸ! ಚಾಣಕ್ಯನಲ್ಲ!!'' ಎಂದ.

ಚಕಿತನಾದಂತೆ ನಟಿಸಿ ಬಾಗುರಾಯಣ ''ಪೂಜ್ಯರೇ! ಮಲಯಕೇತು ವಿನಲ್ಲಿ ಇದನ್ನು ತಿಳಿಸೋಣ ಬನ್ನಿರಿ' ಎಂದು ಕರೆದ. ''ಸತ್ಯವನ್ನು ಹೇಳು ವುದಕ್ಕೆ ಎಲ್ಲಾದರೇನು? ಬರುವೆನು, ನಡೆ" ಎನ್ನುತ್ತಾ ಕ್ಷಪಣಕ ಬಾಗು ರಾಯಣನನ್ನು ಅನುಸರಿಸಿ ನಡೆದ.

ಮಲಯಕೇತು ತನ್ನ ಶಿಬಿರದಲ್ಲಿ ಎದೆಗೆ ಕವಚ ಬಿಗಿದು ತಲೆಗೆ ಉಷ್ಣೀಷವನ್ನು ಕಟ್ಟಿ ಸಿಂಪಡಿಸಿಕೊಳ್ಳುತ್ತಾ ಪ್ರಯಾಣದ ಸಿದ್ಧತೆಯಲ್ಲಿದ್ದ ವನು ಕ್ಷಪಣಕನನ್ನು ಕಂಡು ಆಶ್ಚರ್ಯಪಟ್ಟು ''ಸೇನಾ ಪ್ರಯಾಣದ ವಿಷಯ ನಮಗಿಂತ ನಿಮಗೇ ಮೊದಲು ತಿಳಿದಿರುವಂತಿದೆ! ಇದೇನು ಮುನಿ ಗಳೇ ! ರಾತ್ರಿ ನಿದ್ರಿಸಲಿಲ್ಲವೆ ? ಎತ್ತ ಹೊರಟಿರಿ, ಈ ಪ್ರಾತಃಕಾಲ ?" ಎಂದು ಹೇಳಿ ''ಅಥವಾ ಅಮಾತ್ಯರೇ ನಿಮ್ಮನ್ನೇನಾದರೂ ಅಪ್ತಕಾರ್ಯದ ಮೇಲೆ ಇಷ್ಟು ಬೇಗ ಕಳುಹಿದರೋ?" ಎಂದು ಕೇಳಿದ !

ಕ್ಷಪಣಕ ಸಿಟ್ಟಿನಿಂದ ''ಯಾವನು ರಾಕ್ಷಸನೋ, ಯಾವನು ಪಿಶಾ ಚನೋ ! ಯಾರಿಂದ ನನಗೇನಾಗಬೇಕಾಗಿದೆ, ಕುಮಾರ ? ಅಮಾತ್ಯನ ಹೆಸರನ್ನೇ ನನ್ನೆದುರು ಎತ್ತಬೇಡ" ಎಂದು ತಲೆಯಾಡಿಸುತ್ತ ಧ್ವನಿಯೆತ್ತಿ ಕಿರುಚಿದ.

"ಓಹೋ ! ಮಿತ್ರನ ಮೇಲೆ ಇಷ್ಟು ಪ್ರಣಯ ಕೋಪವೋ ? ಸಿಟ್ಟಿ ಗೇನು ಕಾರಣ ?" ಎಂದು ಮಲಯಕೇತು ಮರು ಪ್ರಶ್ನಿಸಿದ.

ಬಾಗುರಾಯಣ ''ಮಿತ್ರ ! ಮುನಿಗಳು ಒಂದು ವಿಶೇಷ ಮಾತು ಹೇಳುತ್ತಾರೆ, ಕೇಳು. ನಿನ್ನ ತಂದೆಯನ್ನು ಕೊಲ್ಲಿಸಿದವನು ಅಮಾತ್ಯನಂತೆ !

ಚಾಣಕ್ಯನಲ್ಲವಂತೆ'' ಎಂದು ಮಲಯಕೇತುವಿನ ಕುತೂಹಲವನ್ನು ಕೆರಳಿಸಿದ ! ''ನಿಜವೇ ?'' ಎಂಬಂತೆ ಅವನು ಕ್ಷಪಣಕನ ಮುಖವನ್ನು ದುರುಗುಟ್ಟಿ ನೋಡಿದ.

''ಜಿನೇಶ್ವರಾ ! ರಾಕ್ಷಸ ಪರ್ವತೇಶನ ವಧೆಗೆಂದು ಆ ವಿಷಕನ್ಯೆಯನ್ನು ತಾನೇ ಕಳುಹಿದ. ಚಾಣಕ್ಯ ಅದನ್ನು ತಪ್ಪಿಸುವ ಮೊದಲೇ ಅವಳು ನಿನ್ನ ತಂದೆಯ ಅಂತಃಪುರ ಸೇರಿಯಾಗಿತ್ತು. ನಾನೇ ಕಣ್ಣಿಂದ ಕಂಡು ನೋಡಿದ ವಿಷಯ ! ಮಿತ್ರನಾದರೇನು, ಶತ್ರುವಾದರೇನು? ಸತ್ಯ ಸತ್ಯವೇ. ಆಗಿ ಹೋದ ವಿಷಯಕ್ಕೆ ಜನ ವೃಥಾ ಚಾಣಕ್ಯನನ್ನು ದೂಷಿಸಿ ಅಪಪ್ರಚಾರ ಮಾಡುತ್ತಿರುವರು! ನಡೆದುದೇ ಬೇರೆ'' ಎಂದು ಜೀವಸಿದ್ಧಿ ನಿಟ್ಟುಸಿರಿಟ್ಟ.

"ನೀವು ಮಾತಾಡುತ್ತಿರಿ. ಉಕ್ಕಡದಲ್ಲಿ ಎಲ್ಲ ಸಿದ್ಧವಾಗಿದೆಯೋ ಹೇಗೆಂದು ನೋಡಿ ಬರುತ್ತೇನೆ'' ಎಂದವನೇ ಬಾಗುರಾಯಣ ಶಿಬಿರದ ಹೊರ ಬಾಗಿಲಲ್ಲಿ ನಿಂತು ಒಳ ಹೊರ ಬರುವವರನ್ನೆಲ್ಲ ಪರೀಕ್ಷಿಸುತ್ತಿದ್ದ ಶೇಖರನ ಸೇನಾಠಾಣೆಯ ಬಳಿ ಬಂದ. ಜೀವಸಿದ್ಧಿಯೊಡನೆ ಮಾತಾಡುತ್ತ ಮಲಯಕೇತು ಹೆಚ್ಚಿನ ವಿಷಯಗಳನ್ನು ಸಂಗ್ರಹಿಸಲಾರಂಭಿಸಿದ.

  

ಇತ್ತ ಠಾಣೆಯ ಬಳಿ ಸಿದ್ಧಾರ್ಥಕ ಕಂಕುಳಲ್ಲಿ ಒಂದು ಪೆಟ್ಟಿಗೆಯನ್ನೂ ಕೈಯಲ್ಲಿ ಒಂದು ಮೊಹರಾದ ಪತ್ರವನ್ನೂ ಹಿಡಿದು, ಠಾಣೆಯ ಬಳಿ ಸಮೀಪಿಸಿ, ಹೊರ ಹೊರಡಲು ಸಮಯ ನೋಡುತ್ತಿದ್ದ. ಅಲ್ಲಿ ಕಾವಲುಗಾರರು ಅಪ್ಪಣೆ ಚೀಟಿ (ಉಂಡಿಗೆ)ಗಳನ್ನು ಪರೀಕ್ಷಿಸುತ್ತ, ಗುರುತಿನ ಚೀಟಿಯಿದ್ದವರನ್ನು ಮಾತ್ರ ಹೊರಬಿಡುತ್ತ, ಒಳಬಿಡುತ್ತಾ, ಅನುಮಾನಾಸ್ಪದ ಗೂಢಚಾರರುಂಟೋ ಎಂದು ಪರೀಕ್ಷಿಸುತ್ತ ನಿಂತಿದ್ದರು. ಸಿದ್ಧಾರ್ಥಕ ಅಲ್ಲಿ ನಾಲ್ಕು ಹೆಜ್ಜೆ ಮುಂದೆ, ಎರಡು ಹೆಜ್ಜೆ ಹಿಂದೆ ಹಾಕುತ್ತಾ ಬೋನಿನಲ್ಲಿ ಸಿಕ್ಕಿಬಿದ್ದ ಹುಲಿಯಂತೆ ಓಡಾಡುತ್ತಿದ್ದವನನ್ನು ಕಂಡು ಒಬ್ಬ ಕಾವಲುಗಾರ

"ನೀನಾರು ? ಹೊರಗೆ ಹೋಗಲು ಗುರುತಿನ ಚೀಟಿಯಿದೆಯೋ ? ಇಲ್ಲ ವಾದರೆ, ಯತ್ನಿಸಿ, ಏಟು ತಿನ್ನುವೆ. ಒಳಗೆ ಹೋಗು" ಎಂದು ಕಾವಲಿನವ ಬೆದರಿಸಿದ.

"ನಾನು ಅಮಾತ್ಯರ ಆಪ್ತ ಸೇವಕ ! ತುರ್ತುರಾಜಕಾರ್ಯದಿಂದ ಈಗಲೇ ಹೊರಗೆ ಹೋಗಬೇಕಾಗಿದೆ. ನನಗೆಂಥ ಚೀಟಿ ? ಅಮಾತ್ಯರ ಸೇವಕ ವರ್ಗಕ್ಕೂ ಈ ನಿಬಂಧನೆಯುಂಟೇ" ಎಂದು ಸಿದ್ಧಾರ್ಥಕ ಹೇಳಿದ. "ನೀನು ಯಾರಾದರಾಗು ! ಚೀಟಿಯಿಲ್ಲದೆ ಹೊರಬಿಡಲಾಗದು" ಎಂದು ಕಾವಲುಗಾರ ಶೇಖರನನ್ನು ಕರೆತಂದು "ಇವನಾವನೋ ರಾಕ್ಷಸನ ದೂತ ನಂತೆ. ಸೇನೆ ಹೊರಡುವ ಮೊದಲು ಇವನಿಗೇನು ರಾಜಕಾರ್ಯ? ರಹ ಚೀಟಿಯೂ ಇಲ್ಲ. ಏನೇನೋ ಹೇಳುತ್ತಾನೆ" ಎಂದು ದೂರಿದ. ಶೇಖರ ಭಾಗುರಾಯಣನ ಮುಖ ನೋಡಿದ. ಭಾಗುರಾಯಣ ಸಿದ್ಧಾರ್ಥಕನನ್ನು ಗುರುತು ಹಿಡಿದು "ಏನಯ್ಯ, ನನ್ನನ್ನು ಕೇಳಿದ್ದರೆ ಗುರುತುಚೀಟಿ ಕೊಡು ತ್ತಿದ್ದೆನಲ್ಲ! ಮಗಧದ ಗೂಢಚಾರರ ಕಾಟ ಬಲವಾಗಿದೆ. ನಿಯಮಗಳನ್ನು ಶಿಬಿರದಲ್ಲಿ ಕಟ್ಟುನಿಟ್ಟಾಗಿ ಪಾಲಿಸಬೇಕಾಗಿದೆ. ಹೇಳು, ಎಲ್ಲಿಗೆ ಹೊರಟಿ ರುವೆ? ಯಾರಪ್ಪಣೆ ?" ಎಂದು ಕೇಳಿದ. ಆ ವೇಳೆಗೆ ಮಲಯಕೇತುವೂ ಕ್ಷಪಣಕನೂ ಅಲ್ಲಿಗೆ ಬಂದರು. ಸಿದ್ಧಾರ್ಥಕನ ಮಾತನ್ನು ಕೇಳಿದ ಮಲಯ ಕೇತುವಿನ ಆ ಮನಃಸ್ಥಿತಿಯಲ್ಲಿ ವಿಷಯವನ್ನು ತಿಳಿಯಲು ಕುತೂಹಲ ಹೆಚ್ಚಾಯಿತು. "ನೀನಾಗಿಯೇ ಬೊಗಳುವೆಯೋ ? ಬಾಯಿ ಬಿಡಿಸ ಬೇಕೋ?" ಎಂದು ಮಲಯಕೇತು ಗರ್ಜಿಸಿದ. "ನಾನು ರಾಕ್ಷಸನ ಆಪ್ತ ಪರಿವಾರ ! ನನಗೇಕೆ ಬೆದರಿಸುವಿರಿ ?" ಎಂದು ಸಿದ್ಧಾರ್ಥಕ ಅಂಗಲಾ ಚುವವನಂತೆ ಕೇಳಿದ. ಭಾಗುರಾಯಣ "ಅದೇನು ನಿನ್ನ ಕೈಯ್ಯಲ್ಲಿನ ಪತ್ರ ? ಯಾರಿಗೆ ಅದು ?" ಎಂದು ಕೇಳಿದ. ಸಿದ್ಧಾರ್ಥಕ ಏನೂ ಹೇಳದೆ ತಲೆ ತಗ್ಗಿಸಿ ನಿಂತ. ಮಲಯಕೇತು "ಈ ಪ್ರಾಣಿ ಸುಮ್ಮನೆ ಬಾಯಿ ಬಿಡ ಲಾರದು. ಕರೆದೊಯ್ದು ಅತ್ತ ಬಲವಾಗಿ ಪೆಟ್ಟುಹಾಕಿ ಬಾಯಿ ಬಿಡಿಸಿ" ಎಂದಪ್ಪಣೆ ಮಾಡಿದ.

ಚಾರರು ಸಿದ್ಧಾರ್ಥಕನನ್ನು ಬೇರೆತ್ತ ಕರೆದೊಯ್ದು ನಾಲ್ಕು ಪೆಟ್ಟು ಚೆನ್ನಾಗಿಯೇ ಹಾಕಿದರು ! ಅಷ್ಟಕ್ಕೇ ಆರ್ಭಟೆ ಮಾಡುತ್ತಾ "ಅಪ್ಪಗಳಿರಾ! ನಿಮ್ಮ ಕಾಲಿಗೆ ಬೀಳುತ್ತೇನೆ! ಹೊಡೆಯಬೇಡಿ!! ಎಲ್ಲ ಹೇಳುತ್ತೇನೆ" ಎನ್ನುತಾ ಕೈ ಕೊಡವಿದಾಗ ಕಂಕಳ ಪೆಟ್ಟಿಗೆ ಕೆಳಗೆ ಬಿತ್ತು! ಅದನ್ನು ಕೈಗೆತ್ತಿಕೊಂಡ ಭಟರು ಬಾಗುರಾಯಣನಿಗೆ ಅದನ್ನು ತಂದು ಕೊಟ್ಟು "ಎಲ್ಲ ತಾನೇ ಬಾಯಿಬಿಟ್ಟು ಹೇಳುತ್ತಾನಂತೆ! ಈ ಪೆಟ್ಟಿಗೆ ಅವನ ಕಂಕುಳಿಂದ ಕೆಳಗೆ ಬಿತ್ತು! ಇದು ಅವನ ಕೈಯ್ಯಲ್ಲಿದ್ದ ಪತ್ರ!!" ಎನ್ನುತ್ತಾ, ಅದನ್ನು ಕೊಟ್ಟರು. ಅದೇನೆಂದು ನೋಡುವಂತೆ ಮಲಯಕೇತು ಆಜ್ಞಾಪಿಸಿದ. ಹಿಂದೆ ಮುಂದೆ ಪರೀಕ್ಷಿಸುತ್ತ ಮಲಯಕೇತುವು "ಕುಮಾರ ! ಇದು ರಾಕ್ಷಸನ ಮುದ್ರಿಕೆಯಿಂದ ಮೊಹರಾಗಿದೆ! ಏನು ವಿಶೇಷವೋ ಕಾಣೆ" ಎಂದು ಹೇಳಿ, "ಅಯ್ಯಾ! ಸಿದ್ಧಾರ್ಥಕ! ಎಲ್ಲ ಹೇಳು. ಸುಮ್ಮನೆ ಪೆಟ್ಟು ತಿನ್ನಬೇಡ" ಎಂದ.

ಸಿದ್ಧಾರ್ಥಕ ಇಷ್ಟವಿಲ್ಲದವನಂತೆ ನಟಿಸಿ "ಕೆಲಸ ಕೆಟ್ಟಿತು! ಅಮಾತ್ಯರು ನನ್ನನ್ನು ದಂಡಿಸುವರು! ಇನ್ನೇನು ಗತಿ ! ಹೇಳದಿದ್ದರೆ ನೀವೇ ದಂಡಿಸುವಿರಿ !" ಎನ್ನುತ್ತಾ ಅಳಲಾರಂಭಿಸಿದ. ಭಟರು ಬಡಿಗೆಯಿಂದ ಹೊಡೆಯಲು ಕೈ ಮೇಲೆತ್ತಿದ್ದರು. "ಅಮಾತ್ಯರು ಒಂದು ಗುಪ್ತ ಕಾರ್ಯಾರ್ಥವಾಗಿ ನನ್ನನ್ನು ಪಾಟಲೀಪುರಕ್ಕೆ ಕಳುಹಿರುವರು. ಒಬ್ಬ ರಾಜಪುರುಷನಿಗೆ ಇದನ್ನು ಸಮರ್ಪಿಸಬೇಕಾಗಿದೆ !" ಎಂದ. "ಯಾರು ಆ ರಾಜಪುರುಷ ?" ಎಂದು ಮಲಯಕೇತು ಕೇಳಿದ. ಸಿದ್ಧಾರ್ಥಕ ಮತ್ತೆ ತಲೆ ತಗ್ಗಿಸಿ ನಿಂತ. ಬಾಗುರಾಯಣ "ಈ ಪತ್ರವನ್ನೋದಿದರೆ ತಿಳಿಯುವುದು. ಮೊಹರು ಕೆಡದಂತೆ ಬಿಡಿಸಿ ಓದು" ಎಂದ. (ಶಕಟಾಯನನ ಅಕ್ಷರದಲ್ಲಿ ಸಿದ್ಧಾರ್ಥಕ ಚಾಣಕ್ಯನ ಅಪ್ಪಣೆಯಂತೆ ಬರೆಸಿ, ಮುದ್ರಿಸಿದ್ದ ಪತ್ರ ಅದಾಗಿತ್ತು !)

ಹಾಗೇ ಮಾಡಿ ಅದನ್ನು ಬಾಗುರಾಯಣ ಓದಿದಾಗ ಅವನಿಗಾಗಲೀ, ಮಲಯಕೇತುವಿಗಾಗಲೀ ಏನೂ ತಿಳಿಯಲಿಲ್ಲ! "ಸತ್ಯವಂತನೆಂದರೆ ಯಾರು?

ವಿಶಿಷ್ಟ ಪುರುಷನೆಂದರೆ ಯಾರು? ಅಲಂಕಾರತ್ರಯವಾವುದು ? ಏನನ್ನೋ ಕಳೆದಿದ್ದೇನು ? ಯಾರು? ಬಾಯಿ ಮಾತೇನು ? ಸ್ವಾಶ್ರಯವನ್ನೇ ನಾಶ ಮಾಡುವ ಆ ಸ್ನೇಹಿತರಾರು ?" ಎಂದು ಮಲಯಕೇತು ಗರ್ಜಿಸಿದ! "ನನಗೊಂದೂ ಗೊತ್ತಿಲ್ಲ" ಎಂದು ಸಿದ್ಧಾರ್ಥಕ ಮತ್ತೆ ಅಳಲಾರಂಭಿಸಿದ! "ಮೂರ್ಖ! ಪತ್ರದಲ್ಲಿ ನಿನ್ನ ಹೆಸರೇ ಇದೆ ! ನಿನ್ನನ್ನು ಆಪ್ತತಮನೆಂದು ಬರೆಸಿದವನಾರು ? ಅವನ ಬಾಯಿ ಮಾತೇನು? ಅವನು ಹೇಳದಿದ್ದರೆ ಇಲ್ಲೇಕೆ ಹೀಗೆ ಬರೆದಿದೆ ?" ಎಂದು ಕೇಳಿದ. ಬಾಗುರಾಯಣ "ಪೆಟ್ಟಿಗೆ ಯಲ್ಲೇನಿದೆಯೆಂದು ನೋಡೋಣ. ತಾನೇ ತಿಳಿಯುತ್ತದೆ" ಎನ್ನುತ್ತಾ, ಮೊಹರು ಕೆಡದಂತೆ ಅದನ್ನೂ ಬಿಚ್ಚಿದ. ಮಲಯಕೇತುವಿಗೆ ಎದೆಯೊಡೆ ಯಿತು !

ರಾಕ್ಷಸನನ್ನು ತಾನು ಪುರುಷಪುರದಲ್ಲಿ ಮೊದಲು ಸ್ವಾಗತಿಸಿದಾಗ, ಅವನಿಗೆಂದು ಕೊಟ್ಟ ವಿಶಿಷ್ಟ ಒಡವೆಗಳು, ಕಿರೀಟ, ವಕ್ಷಾಭರಣ, ತೋಳ ಆಭರಣ, ಕಂಠಾಭರಣ ಇತ್ಯಾದಿ! ಇವನ್ನು ರಾಕ್ಷಸ ಈಗ ಯಾರಿಗಾಗಿ ಕಳುಹುತ್ತಿರಬೇಕು ? ಎಂದು ಯೋಚಿಸಲಾರಂಭಿಸಿದ.

ಬಾಗುರಾಯಣ ಚಿಂತಿಸಿ, ಏನೋ ಹೊಳೆದವನಂತೆ: "ಎಲ್ಲ ತಿಳಿ ಯಿತು ಕುಮಾರ! ನಿನ್ನ ಶಂಕೆ ಈಗ ನೀಗಿತು ! ರಾಕ್ಷಸ ಈ ಒಡವೆಗಳನ್ನು ಚಂದ್ರಗುಪ್ತನಿಗೆಂದು ಕಳುಹುತ್ತಿರುವಂತಿದೆ. ಪತ್ರವೂ ಅವನಿಗೇ ಇರ ಬೇಕು" ಎನ್ನುತ್ತಾ ಮತ್ತೆ ಪತ್ರ ಓದಿ "ಹೌದು! ಎಲ್ಲ ಸರಿಯಾಗುತ್ತದೆ. ಕೇಳು. ಸತ್ಯವಂತನೆಂದರೆ ಚಂದ್ರಗುಪ್ತನೇ! ಅಲಂಕಾರತ್ರಯವೆಂದರೆ ಯಾವುದೋ ಗೂಢ ಪೆಟ್ಟಿಗೆಯ ಆಭರಣಗಳೇ! ಸಂಶಯವಿಲ್ಲ! ಚಂದ್ರಗುಪ್ತ ರಾಕ್ಷಸನಿಗೆ ಗುಟ್ಟಾಗಿ ಕಳುಹಿರಬೇಕು. ರಾಕ್ಷಸನ ಪ್ರತಿಪಕ್ಷವೆಂದರೆ ಚಾಣಕ್ಯ. ಅವನನ್ನು ದೂರ ಮಾಡಿ ಚಂದ್ರಗುಪ್ತ ರಾಕ್ಷಸನಿಗೆ ಪ್ರೀತಿ ಯುಂಟು ಮಾಡಿರಬೇಕೆಂದು ಕಾಣುತ್ತಿದೆ. 'ಸ್ವಾಶ್ರಯವನ್ನು ನಾಶ ಮಾಡುವ ಸ್ನೇಹಿತರೆಂದರೆ' ನಿನ್ನ ಸುತ್ತ ರಾಕ್ಷಸನಿಟ್ಟ ಗೂಢಚಾರರೋ ಸೇನಾನಾಯಕರೋ ಇರಬೇಕು!....ಎಲ್ಲ ತಿಳಿಯಿತು! ನಿನ್ನನ್ನು ಉಪಾಯ

ದಿಂದ ಹಿಡಿದು ಚಂದ್ರಗುಪ್ತನಿಗೊಪ್ಪಿಸಿ, ಇದರಿಂದ ಅವನ ಹೆಚ್ಚಿನ ಪ್ರೀತಿ ಯನ್ನು ಗಳಿಸಿ, ರಾಕ್ಷಸ ಅಲ್ಲೇ ಮತ್ತೆ ಹೋಗಿ ಸೇರುವ ಯತ್ನದಲ್ಲಿದ್ದು ನಿನ್ನ ಸುತ್ತ ವ್ಯೂಹವೊಂದನ್ನು ರಚಿಸಿದ್ದಾನೆ. ಸಂದೇಹವೇ ಇಲ್ಲ!'' ಎಂದು ವಿವರಿಸಿದ.

ಮಲಯಕೇತುವಿನ ಹೃದಯ ಭಯದಿಂದ ಬಾಯಿಗೇ ಬಂತು ! ಕುದಿ ಯಲಾರಂಭಿಸಿದ! ತನ್ನ ಪರಿಸ್ಥಿತಿಯನ್ನು ತಾನೇ ಮಾಡಿಕೊಂಡೆನೆಂದು, ರಾಕ್ಷಸನನ್ನು ನಂಬಿದ್ದಕ್ಕೆ, ತನ್ನನ್ನೇ ಶಪಿಸಿಕೊಂಡ. ''ಬಾಯಿ ಮಾತೇನು? ಬೊಗಳು" ಎಂದು ಸಿದ್ಧಾರ್ಥಕನನ್ನು ಗದರಿಸಿದ.

ಸಿದ್ಧಾರ್ಥಕ : ''ಇನ್ನೇನೂ ಉಳಿಯಲಿಲ್ಲ. ಹೇಳುವೆನು ಕೇಳಿ. ಚಂದ್ರಗುಪ್ತನಿಗೆ ಆಪ್ತರಾದ ಐವರು ಅರಸರು ಇಲ್ಲಿ ನಿಮ್ಮ ಬಳಿ ಇರುವರಂತೆ. ಚಂದ್ರಗುಪ್ತನ ಆಸೆ ತೀರಿದ ಬಳಿಕ ಅವಂಗೆ ಏನೇನು ಇಷ್ಟವೋ ಅದನ್ನು ಅವನು ಅವರಿಗೆ ಕೊಡಿಸಬೇಕಂತೆ.''

ಬಾಗುರಾಯಣ : "ಆ ಐವರು ಯಾರು ?"

ಸಿದ್ಧಾರ್ಥಕ : "ಕುಲೂತಪತಿ ಚಿತ್ರವರ್ಮ, ಮಲಯಾಧಿಪತಿ ಸಿಂಹ ನಾದ, ಕಾಶ್ಮೀರದ ಪುಷ್ಕರಾಕ್ಷ, ಸಿಂಧುಪಾಲ ಸುಷೇಣ, ಪಾರಸೀಕ ಮೇಘ ನಾದ ಇವರೇ ಆ ಐವರಂತೆ!''

ಮಲಯಕೇತುವು, ತನ್ನ ಆಪ್ತರಾದ ಈ ಐವರೇ ಹೀಗೆ ದ್ರೋಹವೆಣಿಸಿ ದರೆ ಇನ್ನು ಯಾರನ್ನೂ ನಂಬಬೇಕು! ಎನ್ನುತ್ತಾ ದಿಗ್ಭ್ರಾಂತನಾದ.

ಅಮಾತ್ಯರನ್ನು ಕೂಡಲೇ ಕರೆತರುವಂತೆ ಆಜ್ಞಾಪಿಸಿದ ! ನಡೆದು ದೊಂದೂ ತಿಳಿಯದ ರಾಕ್ಷಸ ತಾನು 'ವರ್ತಕ'ರಿಂದ ಬೆಲೆಗೆ ಕೊಂಡ ಆಭರಣ ಗಳನ್ನು ತರಿಸಿ, ಸೇವಕರಿಂದ ಧರಿಸುತ್ತಿದ್ದ. ರಾಜಾಜ್ಞೆಯನ್ನು ಕೇಳಿ

ಬೆಚ್ಚಿ, "ಕುಮಾರನೆಲ್ಲಿರುವನು ?" ಎಂದು ಕೇಳಿದ. ''ಶಿಬಿರದ ಬಾಗಿಲ ಸೇನಾ ಠಾಣೆಯಲ್ಲಿ'' ಎಂಬ ಉತ್ತರ ಕೇಳಿ "ಇಷ್ಟು ಬೆಳಗ್ಗೆ ಅಲ್ಲೇನು ಕೆಲಸ ? ಯಾವನೋ ಗೂಢಚಾರ ಸಿಕ್ಕಿಬಿದ್ದಿರಬೇಕು.'' ಎಂದು ಕೊಂಡು ಬೇಗ ಅಲ್ಲಿಗೆ ಬಂದ. ಸಂದರ್ಭ, ಸಂನ್ನಿವೇಶ ಏನೂ ತಿಳಿಯಲಿಲ್ಲ! ಕ್ರುದ್ಧನಾದ ಮಲಯಕೇತುವೊಂದು ಕಡೆ ! ಅಳುತ್ತಾ, ಪೆಟ್ಟು ತಿಂದು, ಲಜ್ಜೆಯಿಂದ ನೆಲನೋಡುತ್ತ ನಿಂತ ಸಿದ್ಧಾರ್ಥಕ ಒಂದು ಕಡೆ! ಕೋಪಗೊಂಡು ಹೊರಬಿದ್ದಿದ್ದ ಕ್ಷಪಣಕನೊಂದು ಕಡೆ ! ಭೂತ ಬಡಿದವನಂತೆ ದಿಗ್ಭ್ರಾಂತಿ ನಟಿಸುತ್ತ ನಿಂತಿದ್ದ ಬಾಗುರಾಯಣನೊಂದೆಡೆ ! ವಿಸ್ಮಿತನಾದ ಶೇಖರ, ಭಯಭ್ರಾಂತರಾದ ಸೇನಾ ಕಾವಲುಗಾರರು ಇನ್ನೊಂದೆಡೆ!! ರಾಕ್ಷಸನಿಗೂ "ಇದೇನೋ ವ್ಯೂಹವಿರುವಂತಿದೆ !'' ಎನಿಸಿತು! "ಕುಮಾರ ! ಇದೇನು? ಏಕೆ ಎಲ್ಲರೂ ಇತ್ತ ಸೇರಿರುವಿರಿ? ಸೇನಾ ಪ್ರಯಾಣಕ್ಕೆ ಎಲ್ಲ ಸಿದ್ಧವಾಗಿರುವಾಗ ವಿಳಂಬವೇಕೆ ? ಸಿದ್ಧಾರ್ಥಕ ಏಕೆ ಅಳುತ್ತಿರುವನು? ಇದೇನಯ್ಯ ಬಾಗುರಾಯಣ ! ಯಥಾಯಥವಾಗಿರುವೆ ? ಏನರ್ಥ ?" ಎಂದು ರಾಕ್ಷಸ ಆತಂಕದೊಡನೆ ಕೇಳಿದ.

''ಪ್ರಯಾಣಕ್ಕೆ ಸೇನಾವ್ಯೂಹವನ್ನು ಹೇಗೆ ರಚಿಸಿರುವಿರಿ?'' ಎಂದು ಮಲಯಕೇತು ಅಬ್ಬರಿಸಿದ! ಆ ಧ್ವನಿಯಿಂದಲೇ ಮುಂದೇನೋ ಅನರ್ಥ ಕಾದಿದೆಯೆಂದು ರಾಕ್ಷಸನಿಗೆ ಅನ್ನಿಸಿತು ! ''ಇಂದು ಮತ್ಸ್ಯವ್ಯೂಹದಲ್ಲಿ ಸೈನ್ಯ ಮುನ್ನಡೆಯುವುದು. ನಿನ್ನ ಮುಂದೆ ಚಿತ್ರವರ್ಮ, ಎಡಬಲಗಳಲ್ಲಿ ಸಿಂಹನಾದ ಪುಷ್ಕರಾಕ್ಷರು, ಹಿಂದೆ ಸುಷೇಣ ಮತ್ತು ಮೇಘನಾದ. ಸೈನ್ಯ ಮಧ್ಯೆ ನೀನೂ ನಾನೂ. ಶೇಖರನ ಸೈನ್ಯ ಮುನ್ನಡೆಯುತ್ತ ಮಾಮೂಲಾಗಿ ಸೂಚನೆ ನೀಡುತ್ತಿರುವುದು. ಏಕೆ? ಸರಿಯಿಲ್ಲವೆ ?" ಎನ್ನುತ್ತಾ ಮಲಯಕೇತುವಿನ ಮುಖವನ್ನು ನೋಡಿದ. ಅವನು ಬಾಗುರಾಯಣನ ಮುಖ ನೋಡಿದ! ಸಿದ್ಧಾರ್ಥಕನ ಬಾಯಿ ಮಾತು ಸರಿಹೋಯಿತೆಂದು ಇಬ್ಬರೂ ಕಂಗಳಲ್ಲಿ ಹೇಳಿಕೊಂಡರು.

ಮಲಯಕೇತು ; "ಇಂದು ಪಾಟಲೀಪುರಕ್ಕೆ ಯಾರನ್ನಾದರೂ ತ್ವರಿತ ಸಂದೇಶದಿಂದ ಕಳುಹುತ್ತಿರುವಿರಾ ?"

ರಾಕ್ಷಸ ; "ಯಾವ ಸಂದೇಶ ಇನ್ನೇಕೆ ? ನಾವೇ ಹೊರಡು ತ್ತಿರುವೆವಲ್ಲ !''

ಮಲಯಕೇತು ; "ಹಾಗಾದರೆ ಈ ಪತ್ರ ಯಾರದ್ದು?" ಪತ್ರ ವನ್ನು ಕೈಗೆ ಕೊಡುತ್ತಾನೆ. ಅದನ್ನೋದಿ ರಾಕ್ಷಸನ ಎದೆಯೊಡೆಯುತ್ತದೆ. "ಕುಮಾರ ! ಕೆಳಗಿನ ಮುದ್ರೆ, ಅಕೋಟೆಯನ್ನು ಮೊಹರು ಮಾಡಿರುವ ಮುದ್ರೆಗಳು ಮಾತ್ರ ನನ್ನವೇ ! ಮುದ್ರೆ ಶಕಟಾಯನನ ಬಳಿ ಇತ್ತು. ಪತ್ರ ಮಾತ್ರ ಕೃತಕ. ನಾನು ಇದನ್ನು ಬರೆಸಲೂ ಇಲ್ಲ, ಶಕಟಾಯನನು ಬರೆಯಲೂ ಇಲ್ಲ. ಎಲ್ಲ ಚಾಣಕ್ಯ ತಂತ್ರವಿರುವಂತಿದೆ! ಓ ! ಈಗ ತಿಳಿ ಯಿತು! ಇದನ್ನೋದಿ ನೀವೆಲ್ಲ ಚರ್ಚಿಸುತ್ತ ದುಗುಡದಿಂದಿರುವಂತಿದೆ! ಅಲ್ಲವೆ ? ಕುಮಾರ ! ಶತ್ರುತಂತ್ರಗಳಿಗೆ ಈ ಗಳಿಗೆಯಲ್ಲಿ ನಾವು ಬಲಿ ಯಾಗಬಾರದು! ನಮ್ಮಲ್ಲಿ ಒಡಕು ತರಲು ಚಾಣಕ್ಯ ಮಾಡಿಸಿ ಬರೆಸಿದ ಪತ್ರ ಇದು.''

ಮಲಯಕೇತು ; "ಇಲ್ಲಿ ಬರೆಸಿರುವ 'ಅಲಂಕಾರತ್ರಯ'ವೆಂದ ರೇನು ?'

ರಾಕ್ಷಸ ; "ನಾನು ಪತ್ರ ಬರೆಸಿದ್ದರಲ್ಲವೆ, ಅದು ನನಗೆ ತಿಳಿಯ ಬೇಕು ?"

ಮಲಯಕೇತು ; "ಚಂದ್ರಗುಪ್ತ ರಹಸ್ಯದಲ್ಲಿ ನಿನಗೆ ಮೂರು ಪೆಟ್ಟಿಗೆ ಆಭರಣಗಳನ್ನು ಕಳುಹಲಿಲ್ಲವೆ ?''

ರಾಕ್ಷಸ ; "ಏನಂದೆ ? ಚಂದ್ರಗುಪ್ತನೆ? ಶಿವ, ಶಿವ! ಯಾರೋ ಮೂವರು ಬ್ರಾಹ್ಮಣ್ರರು ಈಗ ಎಂಟು ದಿನಗಳ ಹಿಂದೆ ಬಂದು ಈ ಒಡವೆ ಗಳ ಮೂರು ಪೆಟ್ಟಿಗೆಗಳನ್ನು ನನಗೆ ಮಾರಿ ಹೋದರು! .. ಓಹೋ !! ತಿಳಿ ಯಿತು, ತಿಳಿಯಿತು ! ಅವರೂ ಚಾಣಕ್ಯನ ಗೂಢಚಾರರೇ ಇರಬೇಕು ! ವತ್ಸ, ಕೆಲಸ ಕೆಟ್ಟಿತು !"

ಮಲಯಕೇತು ; (ರಾಕ್ಷಸ ಧರಿಸಿದ್ದ ಒಡವೆಗಳನ್ನು ಗುರುತು ಹಿಡಿಯುತ್ತ, ಚಾಮರ ಹಿಡಿದಿದ್ದ ಚೇಟಿಯನ್ನು ಕರೆದು) "ಚೇಟಿ, ಈ ಒಡವೆಗಳನ್ನು ಗುರುತು ಹಿಡಿಯಬಲ್ಲೆಯ ? ಸಾಯುವಾಗ ನನ್ನ ತಂದೆ, ಪರ್ವತೇಶ್ವರರು ಧರಿಸಿದ್ದ ಒಡವೆಗಳಲ್ಲವೆ ? ಅಯ್ಯೋ ಈ ರಾಕ್ಷಸನನ್ನು ನಂಬಿ ನನ್ನ ಸರ್ವನಾಶವಾಯಿತಲ್ಲ! (ಎಂದಳುತ್ತಾ) ರಾಕ್ಷಸ! ಸೀಸೀಗ ರಾಕ್ಷಸನೇ ಆಗಿಹೋದೆ! ನಿಜವಾಗಿ ಹೇಳು! ನನ್ನ ತಂದೆಯನ್ನು ಕೊಲ್ಲಿಸಿದವರಾರು?"

ರಾಕ್ಷಸ ; (ದಿಗ್ಭ್ರಾಂತನಾಗಿ, ತಡವರಿಸುತ್ತಾ) "ಅಯ್ಯಾ! ನಾನು ಮಾಡಿದುದೇ ಒಂದು! ಅಲ್ಲಿ ನಡೆದುದೇ ಇನ್ನೊಂದು. ಚಂದ್ರಗುಪ್ತನನ್ನು ವಧಿಸಲು ನಾನು ವಿಷಕನ್ಯೆಯನ್ನು ಕಳುಹಿದ್ದೆನಟು. ಆದರೆ ಅವಳನ್ನು ಚಾಣಕ್ಯ ಹಿಡಿದು ಪರ್ವತೇಶ್ವರನ ಬಳಿ ಕಳುಹಿದ! ನಾನು ನಿರಪರಾಧಿ."

ಮಲಯಕೇತು : "ಇದಕ್ಕೆ ಯಾರು ಪ್ರಮಾಣ ?"

ರಾಕ್ಷಸ ; "ಪ್ರಮಾಣವೇ ಬೇಕಾದರೆ ದೈವವನ್ನೇ ಕೇಳಬೇಕು!"

ಮಲಯಕೇತು ; "ಎಲೋ! ನೀಚನೇ ! ಸುಳ್ಳು ಹೇಳುವೆಯೂ? ದೈವವನ್ನೇಕೆ ಕೇಳಬೇಕು ? ಜೀವಸಿದ್ಧಿಯನ್ನು ಕೇಳಿದರೆ ಸಾಲದೋ ?" ಎನ್ನುತ್ತಾ ಜೀವಸಿದ್ಧಿಯ ಮುಖ ನೋಡಿದ !

ರಾಕ್ಷಸ ; "ಆಂ!....ಅಯ್ಯೋ! ಜೀವಸಿದ್ಧಿಯೂ ಚಾಣಕ್ಯನ ಗೂಢ ಚಾರನೆಂದ ಹಾಗಾಯಿತು! ಎನ್ನುತ್ತಾ ಕುಸಿದು ಬೀಳುವುದರಲ್ಲಿರುತ್ತಾನೆ.

ಮಲಯಕೇತು ; "ಈ ಚಾರನೊಡನೆ ಹೇಳಿ ಕಳುಹಿದ ಬಾಯಿ ಮಾತೇನು? ಈ ಪೆಟ್ಟಿಗೆಯಲ್ಲಿರುವ ಆಭರಣಗಳು ಯಾರಿಗಾಗಿ ?"

ರಾಕ್ಷಸ ; "ಎಲೋ! ಸಿದ್ಧಾರ್ಥಕ! ಏನು ಆಟ ಇದು?" ಎನ್ನುತ್ತಾ ಪೆಟ್ಟಿಗೆಯನ್ನು ಕೈಗೆ ತೆಗೆದುಕೊಂಡು, ನೋಡಿ, "ಕುಮಾರ ! ಇದು ನೀನು

ನನಗೆ ಕೊಟ್ಟ ಆಭರಣಗಳು. ಇವು ಶಕಟಾಯನನ ಬಳಿ ಇದ್ದುವು! ಸಿದ್ಧಾರ್ಥಕ! ಎಲ್ಲಿಗೆ ತೆಗೆದುಕೊಂಡು ಹೊರಟಿರುವೆಯೋ? ಈ ಪತ್ರ ಬರೆದವರಾರೋ? ಬಾಯಿ ಬಿಡು!''

ಸಿದ್ಧಾರ್ಥಕ : "ಸ್ವಾಮಿ! ನಿಮ್ಮ ಸಹವಾಸ ಸಾಕು, ಸಾಕು! ಅವರು ಬಲವಾಗಿ ಪೆಟ್ಟು ಕೊಟ್ಟ ಮೇಲೆಯೇ ಎಲ್ಲ ಬಾಯಿ ಬಿಡಬೇಕಾಯಿತು! ಶಕಟಾಯನನೇ ಇದನ್ನು ಬರೆದದ್ದು! ಬಡಪಾಯಿಯನ್ನು ನಡುವೆ ಸಿಕ್ಕಿಸಿ, ಹೀಗೆಲ್ಲ ಕಪಟ ನಾಟಕವಾಡುವುದು ಹಿರಿಯರಿಗೆ ಭೂಷಣವಲ್ಲ!"

ರಾಕ್ಷಸ ; (ಮಲಯಕೇತುವಿಗೆ) "ಪೆಟ್ಟು ತಿಂದವನು, ಹೊಡೆತ ತಪ್ಪಿಸಿಕೊಳ್ಳಲು ಏನು ಬೇಕಾದರೂ ಆಡುತ್ತಾನೆ! ಅದೆಲ್ಲ ಪ್ರಮಾಣವಾಗು ವುದೇ?" (ಸಿದ್ಧಾರ್ಥಕನಿಗೆ) "ಎಲವೊ! ಶಕಟಾಯನನೇ ಇದನ್ನು ಬರೆದ ನೆಂದು ನೀನು ಸಿದ್ಧ ಮಾಡುವೆಯಾದರೆ ನಾನು ಯಾವ ಶಿಕ್ಷೆಗೂ ತಯಾರು!''

ಸಿದ್ಧಾರ್ಥಕ ; "ಅವರನ್ನೇ ಕರೆಸಿ ಕೇಳಿ ನೋಡಿ ಸ್ವಾಮಿ! ನೀವೇ ಬರೆಸಿಕೊಟ್ಟು ಹೀಗೆಲ್ಲ ಮಾಡುವುದು ತರವಲ್ಲ!"

ಮಲಯಕೇತುವು ಶಕಟಾಯನನನ್ನು ಕರೆಸುವುದರಲ್ಲಿದ್ದ. ಭಾಗು ರಾಯಣ'ಉಪಾಯ ಮಾಡಿದ. "ಕುಮಾರ! ಅವನು ರಾಕ್ಷಸನ ಆಪ್ತ! ಕರೆಸಿದರೂ ಸಬೂಬು ಹೇಳಿ ಇಲ್ಲವೆಂದಾನು. ಮಿತ್ರನ ಎದುರು ಒಪ್ಪಲಾರ! ಅವನ ಬರವಣಿಗೆಯ ಬೇರೊಂದು ಚೂರನ್ನು ತರಿಸಿ ನಾವೇ ಲಿಪಿಗಳನ್ನು ಹೋಲಿಸಿದರಾಯ್ತು" ಎಂದು ಸೂಚಿಸಿದ! ಹಾಗೆ ತರಿಸಿ ನೋಡಿದಾಗ ಲಿಪಿಗಳು ಒಂದೇ ಆಗಿದ್ದುವು ಎಂದು ಕಂಡು ಬಂತು! ರಾಕ್ಷಸನೇ ಒಪ್ಪ ಬೇಕಾಯಿತು! "ಅಂದ ಮೇಲೆ ಶಕಟಾಯನನೂ, ಭಾಗುರಾಯಣನೂ, ಸಿದ್ಧಾರ್ಥಕನೂ ಎಲ್ಲರೂ ಚಾಣಕ್ಯನ ಗೂಢಚಾರನೇ ಎಂದಂತಾಯ್ತು! ಸತ್ಯ ಎಂದಾದರೊಂದು ದಿನ ಹೊರ ಬರುತ್ತದೆ!" ಎಂದು ತಲೆ ತಗ್ಗಿಸಿದ.

ಮಲಯಕೇತು ; "ಈಗ ಹೊರ ಬಂದಿರುವ ಸತ್ಯ ಸಾಲದೇ? ಇನ್ನೂ ಹೆಚ್ಚಿನ ಆಪತ್ತು ಬರಲು ನಾನು ಬಿಡುವುದಿಲ್ಲ! ಎಲವೋ ನೀಚನೇ! ನೀನು ಬ್ರಾಹ್ಮಣನಾದುದರಿಂದ ನಿನ್ನನ್ನು ಜೀವ ಸಹಿತ ಬಿಟ್ಟಿರುವೆ! ಇಲ್ಲವಾದಲ್ಲಿ ಈಗಲೇ ಯಮಲೋಕಕ್ಕೆ ಕಳುಹುತ್ತಿದ್ದೆ! ಆ ನೀಚ ಚಂದ್ರಗುಪ್ತನ ಬಳಿಯೇ ಹೋಗಿ ಸೇರಿಕೋ. ಮೊದಲು ಇಲ್ಲಿಂದ ತೊಲಗು'' ಎನ್ನುತ್ತಾ ರಾಕ್ಷಸನನ್ನು ಕೊರಳು ಹಿಡಿದು ಸೇವಕರಿಂದ ದಬ್ಬಿಸಿದನು.

ರಾಕ್ಷಸ ಭಾರವಾದ ಹೆಜ್ಜೆ ಹಾಕುತ್ತ, ಪೂರ್ಣ ನಿರಾಶನಾಗಿ ಪಾಟಲೀ ಪುರದತ್ತ ನಡೆಯಲಾರಂಭಿಸಿದ.

ಮಲಯಕೇತುವು ಚಿತ್ರವರ್ಮನೇ ಮೊದಲಾದ ತನ್ನ ಐವರು ಸೇನಾ ಪ್ರಮುಖರನ್ನು ಚಿತ್ರವಧೆ ಮಾಡಿಸಿ ಕೊಲ್ಲಿಸಲು ಆಣತಿಯಿತ್ತ.

  

ಅಂದು ಸಂಜೆ ಭಾಗುರಾಯಣನು ಭದ್ರಭಟಾದಿಗಳನ್ನು ಸೇರಿಕೊಂಡು ಮಲಯಕೇತುವನ್ನು ಸೆರೆಹಿಡಿದು ಪಾಟಲಿಪುರದತ್ತ ಒಯ್ಯುದ ಮುಟ್ಟಿಸಲು ಸೇನೆಯೊಡನೆ ಹೊರಟರು. "ಏನಿದೆಲ್ಲ ?" ಎಂದ ಮಲಯಕೇತುವಿಗೆ "ಚಾಣಕ್ಯರು ಎಲ್ಲ ತಿಳಿಸುತ್ತಾರೆ! ಸದ್ದಿಲ್ಲದೆ ಬನ್ನಿ" ಎಂದರು.

ರಾಕ್ಷಸ, ಪಾಟಲೀಪುರದ ಉದ್ಯಾನಕ್ಕೆ ಒರುವ ವೇಳೆಗೆ ಸೂರ್ಯಾ ಸ್ತಕ್ಕೆ ಎರಡು ಗಂಟೆ ಕಾಲವಿದ್ದಿತ್ತು.

ಶ್ರೀ

## ಇಪ್ಪತ್ತೊಂದನೆಯ ಅಧ್ಯಾಯ

# ಮತ್ತೆ ಮಗಧದ ಅಮಾತ್ಯ!

ರಾಕ್ಷಸನು ಪಾಟಲೀ ಪುರದತ್ತ ಹೊರಟುದನ್ನು ನೋಡಿ ಸಿದ್ಧಾರ್ಥಕನು ವೇಗವಾದ ಕುದುರೆಯೊಂದನ್ನೇರಿ, ಮೊದಲೇ ಪಾಟಲೀಪುರಕ್ಕೆ ಬಂದು ಚಾಣಕ್ಯನನ್ನು ಆಶ್ರಮದಲ್ಲಿ ಕಂಡು ನಡೆದುದೆಲ್ಲವನ್ನೂ ಹೇಳಿದನು. ಚಾಣಕ್ಯನ ಕಣ್ಣು ಹನಿಗೂಡಿ "ನಮ್ಮ ಗುರುಗಳ ಋಣವನ್ನು ಇಂದು ಪೂರ್ತಿ ತೀರಿಸಿದಂತಾಯ್ತು!" ಎನ್ನುತ್ತಾ ಆಕಾಶದತ್ತ ನೋಡಿ, ಕೈ ಮುಗಿದನು.

ಅರ್ಧಗಂಟೆಯ ನಂತರ ಬಾಗುರಾಯಣನೂ ಬಂದು "ಜೀಯಾ! ತಾವು ನನಗೆ ನೇಮಿಸಿದ ಕಾರ್ಯಗಳೆಲ್ಲವೂ ನಿಮ್ಮ ಆಶೀರ್ವಾದ ಬಲದ ದೆಸೆ ಯಿಂದ ನಿರ್ವಿಘ್ನವಾಗಿ ಕೈಗೂಡಿದವು. ಮತ್ತೇನಪ್ಪಣೆ?" ಎನ್ನಲು,

ಚಾಣಕ್ಯ ''ಮಲಯಕೇತುವನ್ನು ನಮ್ಮ ಭದ್ರಭಟ ಡಿಂಗಿರಾತಾದಿಗಳು ಸೆರೆ ಹಿಡಿದು ತಂದನಂತರ, ಆ ಕುಮಾರನಿಗೆ ರಾಜೋಚಿತವಾದ ಸತ್ಕಾರ್ಯ ಮಾಡಿ ಬಿಡಾರ ಮಾಡಿಸಿರಿ'' ಎಂದಾಜ್ಞಾಪಿಸಿದನು.

  

ಇನ್ನೇನು ಸೂರ್ಯಾಸ್ತವಾಗುವುದರಲ್ಲಿತ್ತು. ದಣಿದ ಅಮಾತ್ಯ ರಾಕ್ಷಸನು ಪಾಟಲೀಪುರದ ಹೊರವಲಯದ ಉದ್ಯಾನಕ್ಕೆ ಬಂದು, ಕೊಳದಲ್ಲಿ ನೀರು ಕುಡಿದು ದಣಿವಾರಿಸಿಕೊಂಡು, ಆ ಉದ್ಯಾನದ ದುಃಸ್ಥಿತಿಯನ್ನು ನೋಡಿ "ಇದು ನಂದರ ವಸಂತ ಉದ್ಯಾನ! ಅವರ ನೆನಪಿಲ್ಲದೆ ಇಲ್ಲಿ ಹೇಗೆ ಇರಲಿ? ಎಂಥ ಪ್ರಭುಗಳಿಗೆ ಎಂಥ ಮೃತ್ಯು ಬಂದಿತು!'' ಎನ್ನುತ್ತಾ ಅಳುವನ್ನು ಕಷ್ಟಪಟ್ಟು ತಡೆದುಕೊಂಡು ಇನ್ನೆಲ್ಲಿ ಹೋಗುವುದೆಂದು ಯೋಚಿಸುತ್ತಾ, ಕತ್ತಲಾಗುವುದನ್ನು ಕಾಯುತ್ತಿದ್ದನು.

ರಾಕ್ಷಸನ ಬರವನ್ನೇ ಕಾಯುತ್ತಿದ್ದ ಪಶುಲೋಮನೆಂಬ ಚಾಣಕ್ಯ ಶಿಷ್ಯನು, ರಾಕ್ಷಸನ ಅತಿ ಸಮೀಪದಲ್ಲಿಯೇ ಇದ್ದ ಒಂದು ಮರಕ್ಕೆ ಹಗ್ಗ ಕಟ್ಟಿ ತಾನು ಕುದುರೆಯ ಮೇಲೆ ನಿಂತು, ಜೀರ್ಗುಣಿಕೆಯನ್ನು ಇನ್ನೇನು ಕೊರಳಿಗೆ ಬಿಗಿದು, ಕುದುರೆಯ ಮೇಲಿಂದ ಜಗಿಯುವುದರಲ್ಲಿದ್ದ. ಅದೇನೆಂದು ನೋಡಿದ ರಾಕ್ಷಸನಿಗೆ ಈ ಪ್ರಾಣಿಯು ಏಕೆ ಆತ್ಮಹತ್ಯೆ ಮಾಡಿ ಕೊಳ್ಳುವುದೆಂದು ತಿಳಿಯದೆ, ಅವನನ್ನು ಬಿಡಿಸಲೆಂದು ಮೇಲೆದ್ದ! ಅಷ್ಟರಲ್ಲಿ ಪಶುಲೋಮನು :

"ಎಲೈ, ಮೂವತ್ತು ಮೂರು ಕೋಟಿ ದೇವತೆಗಳಿರಾ! ನನ್ನ ದುರವಸ್ಥೆಯನ್ನು ಕೇಳಿ. ನಾನು ಕೃಷ್ಣದಾಸನೆಂಬ ಶೆಟ್ಟಿಯು. ನನ್ನ ಮಿತ್ರನಾದ ವಿಷ್ಣುದಾಸನೆಂಬುವನು ಇದೇ ಗಳಿಗೆಗೆ ನೇಣು ಹಾಕಿಕೊಂಡು ಸಾಯುವವನಿದ್ದಾನೆ. ಅಂಥ ಮಿತ್ರನೇ ಹೋದ ಮೇಲೆ ಈ ಚಾಣಕ್ಯನ ಹಾಳು ಊರಲ್ಲಿ ಒಂದು ಗಳಿಗೆಯೂ ಬದುಕಿರಲಾರೆ! ಒಳ್ಳೆಯವರಿಗೆ ಇಲ್ಲಿ ಉಳಿಗಾಲವಿಲ್ಲ'' ಎನ್ನುತ್ತಾ ಇನ್ನೇನು ಧುಮುಕುವುದರಲ್ಲಿದ್ದ.

ಅಮಾತ್ಯನು, ಕುದುರೆಯನ್ನು ಹಿಡಿದು ''ಅದೇನಯ್ಯ! ನಿನಗೆ ಇಂಥ ಆಪತ್ತು! ವಿಷ್ಣುದಾಸನೆಂದರೆ ಯಾರು? ಅವನು ಸಾಯಲು ಕಾರಣ ವೇನು? ಸಣ್ಣ ವಿಷಯಗಳಿಗೆ ಪ್ರಾಣ ಕಳಕೊಳ್ಳುವುದುಂಟೆ? ನನಗೆ ಹೇಳು. ಸಾಧ್ಯವಾದರೆ ಆ ವಿಷ್ಣುದಾಸನನ್ನೂ ಉಳಿಸುವೆ'' ಎಂದ.

ಪಕುಲೋಮನು : "ಮಹಾತ್ಮರೇ, ಕೈಯ್ಯಲ್ಲಿ ಕತ್ತಿ ಹಿಡಿದಿರುವ ನಿಮ್ಮನ್ನು ನೋಡಿದರೆ ಮಹಾತ್ಮರಂತೆ ಕಾಣುತ್ತೀರಿ! ನೀವು ಪರೋಪಕಾರಿ ಗಳೂ, ಕಾರ್ಯದಕ್ಷರೂ ಇರಬಹುದು. ಸಾಮಾನ್ಯ ಸಂದರ್ಭವಾಗಿದ್ದರೆ ಬೇರೆ ಮಾತು- ಆದರೆ ಇದು ಅಮಾತ್ಯ ರಾಕ್ಷಸನ ಪಾಟಲೀಪುರವಲ್ಲ! ಕರುಣಾಶೂನ್ಯನಾದ ಹಾಳು ಚಾಣಕ್ಯನ ಊರು!! ನಿರಪರಾಧಿಯಾದ ಆ ಬಳೆಗಾರ ಚಂದನದಾಸನನ್ನು ಇಂದು ಸೂರ್ಯಾಸ್ತಕ್ಕೆ ಸರಿಯಾಗಿ ನಗರದ ಉತ್ತರದ ಸ್ಮಶಾನದಲ್ಲಿ ಶೂಲಕ್ಕೆ ಹಾಕಲಾಗುತ್ತಿದೆ. ಇವನು ಸತ್ತ ನಂತರ ನನ್ನ ಮತ್ತು ಅವನ ಆಪ್ತಮಿತ್ರನಾದ ವಿಷ್ಣುದಾಸನು ಬದುಕಲಾರ ! ಅವ ನನ್ನು ನೀವು ಕಾಪಾಡಲು ಶಕ್ಯವೇ ಇಲ್ಲ ! ಅಂದ ಮೇಲೆ ನನಗೆ ಬೇರೇನು ಉಪಾಯವುಂಟು ?'' ಎಂದ.

ಇದನ್ನು ಕೇಳಿದ ರಾಕ್ಷಸನಿಗೆ ಸಿಡಿಲು ಬಡಿದಂತಾಯಿತು! ''ಅತ್ತ ನಂದರೂ ಸತ್ತರು! ಸರ್ವಾರ್ಥಸಿದ್ಧಿ ರಾಯನಿಗೆ ದತ್ತು ಪುತ್ರನನ್ನು ತರೋಣ ವೆಂದರೆ ಅವನೂ ಸತ್ತ. ಇತ್ತ ಮಲಯಕೇತುವಿನ ನೆರವಿನಿಂದ ಸೇಡು ತೀರಿ ಸೋಣವೆಂದರೆ, ಚಾಣಕ್ಯ ಅದನ್ನಾಗಗೊಡದೆ ನನ್ನ ಸುತ್ತ ಚಕ್ರವ್ಯೂಹ ದಂತಹ ಕೂಟ ತಂತ್ರವನ್ನು ನಿರ್ಮಿಸಿ, ಅದನ್ನಾಗಗೊಡಲಿಲ್ಲ ! ಇಲ್ಲಿ ಬಂದರೆ ಮಿತ್ರನೂ ಪ್ರಾಣಾಪತ್ತಿನಲ್ಲಿರುವನು. ನನ್ನ ಪತ್ನೀಪುತ್ರರ ರಕ್ಷೆಯ ಭಾರಹೊತ್ತ ನಿಮಿತ್ತ ಅವನಿಗೇ ಆಪತ್ತು ಬಂದಿದೆ. ಇನ್ನು ಅವನ ಮೃತ್ಯು ವನ್ನಾದರೂ ತಡೆಯದಿದ್ದರೆ ನಾನು ಬದುಕಿ ಫಲವೇನು? ರಾಕ್ಷಸನ ಹೆಸರು ಹೇಳಿದವರಿಗೆಲ್ಲ ಹೀಗೆ ಮೃತ್ಯು ಬರುವುದುಂಟೇ! '' ಎಂದು ಹಲುಬುತ್ತಾ ''ಅಯ್ಯಾ, ಕೃಷ್ಣದಾಸನೇ, ನಿನ್ನ ಮಿತ್ರ ಬದುಕುವನು. ನೀನು ಕೆಳಗಿಳಿ'' ಎನ್ನುತ್ತಾ ಖಡ್ಗದಿಂದ ಅವನ ನೇಣನ್ನು ಕತ್ತರಿಸಿ, ಅವನನ್ನು ಇಳಿಸಿದನು.

ಪಶುಲೋಮನು ಆನಂದದಿಂದ "ತಾವು ಆಡುವುದನ್ನು ನೋಡಿದರೆ ದೇಶಭ್ರಷ್ಟರಾದ ಅಮಾತ್ಯರೇ ನೀವೆಂದು ತೋರುತ್ತದೆ. ಚಂದನದಾಸ ನನ್ನು ತಾವು ಉಳಿಸಲು ನಿಶ್ಚಯ ಕೈಗೊಂಡ ಬಳಿಕ ನನಗೆ ಇದು ಆಗುವು ದೆಂಬ ವಿಶ್ವಾಸವಿದೆ.'' ಎಂದನು.

ಅಮಾತ್ಯ : "ಮಿತ್ರನೇ, ನೀನೀಗಲೇ ಕುದುರೆಯೇರಿ ಹೋಗಿ ನಿನ್ನ ಮಿತ್ರನಿಗೆ ಈ ಸಮಾಚಾರ ತಿಳಿಸಿ ಉಳಿಸು. ನಾನು ಚಂದನದಾಸನನ್ನು ಕಾಪಾಡುವೆನು'' ಎಂದು ಹೇಳಿ ವಧಸ್ಥಾನದತ್ತ ಹೊರಡಲು ಸಿದ್ಧನಾದನು. ಕೈಯ್ಯಲ್ಲಿ ಕತ್ತಿ ಹಿಡಿದ ಅವನನ್ನು ಕಂಡು ಪಶುಲೋಮ ಈ ಹೊಸ ಮಾತನ್ನು ಸೇರಿಸಿದ : ''ಜೀಯಾ ! ಚಂದನದಾಸನು ಬದುಕಬೇಕೆನ್ನು ವುದಾದರೆ ಮೊದಲು ಈ ಕತ್ತಿಯನ್ನು ಬಿಸಾಡಿರಿ ! ಇಲ್ಲವಾದರೆ, ದೂರ ದಿಂದ ನೀವು ಕತ್ತಿ ಹಿಡಿದು ಬರುತ್ತಿರುವುದನ್ನು ನೋಡಿದೊಡನೆಯೇ, ವಧ ಸ್ಥಾನದ ರಾಜಸೇವಕರು ಅವನನ್ನು ಮೊದಲೇ ಕೊಂದು ಬಿಡುವರು. ಹಿಂದೆ ಶಕಟಾಯನನೆಂಬ ಅಮಾತ್ಯನಿಗೆ ಇದೇ ಶಿಕ್ಷೆ ಆಗುವುದರಲ್ಲಿತ್ತು. ಅಷ್ಟರಲ್ಲಿ ಅಶ್ವಾರೂಢನಾದ ಒಬ್ಬ ಪುರುಷನು ಎಲ್ಲಿಂದಲೋ ಬಂದು ಅವನನ್ನು ಬಿಡಿಸಿ, ಅಪಹರಿಸಿಕೊಂಡೊಯ್ದನು ! ರಾಜಶಾಸನಕ್ಕೆ ವ್ಯತ್ಯಯವಾಯಿತು! ಅಂದಿನಿಂದ ಚಾಣಕ್ಯ ಈ ಹೊಸ ಆಜ್ಞೆಯನ್ನು ಮಾಡಿರುವನು.''

ಇದನ್ನು ಕೇಳಿ, ವಿಧಿಯಿಲ್ಲದೆ, ರಾಕ್ಷಸ ಕತ್ತಿಯನ್ನು ಬಿಸುಟು, ಅಂದಿಗೆ ನಂದರೊಡನೆ ತನ್ನ ಋಣ ತೀರಿತೆಂದು ನಿರಾಶನಾಗಿ ವೇಗವಾಗಿ ವಧ ಸ್ಥಾನದತ್ತ ಓಡಿದ!

  

ಪಶುಲೋಮನಿಂದ ವಾರ್ತೆಯನ್ನು ತಿಳಿದ ಚಾಣಕ್ಯ, ರಾಕ್ಷಸನ ಮತ್ತು ಮಲಯಕೇತುವಿನ ಸ್ವಾಗತಕ್ಕಾಗಿ ಊರು ಶೃಂಗಾರವಾಗತಕ್ಕ ದೆಂದು ರಹಸ್ಯದಲ್ಲಿ ಅಪ್ಪಣೆ ಮಾಡಿ, ಸಿದ್ಧಾರ್ಥಕ, ಸಮಿದ್ಧಾರ್ಥಕರಿಗೆ

ಕಟುಕವೇಷವನ್ನು ಹಾಕಿಸಿ, ಸೆರೆಯಲ್ಲಿದ್ದ ಚಂದನದಾಸನಿಗೆ ದಾಸವಾಳದ ಮತ್ತು ಕಣಿಗಿಲೇ ಪುಷ್ಪದ ಹಾರಗಳನ್ನು ಹಾಕಿಸಿ, ಮಾರೀಗುಡಿಗೆ ಒಯ್ಯುವ ಕುರಿಯಂತೆ ಅವನನ್ನಲಂಕಸಿ, "ರಾಜದ್ರೋಹಿಗೆ ಧಿಕ್ಕಾರ," "ಶತ್ರುಪ್ರೇಮಿಗೆ ಧಿಕ್ಕಾರ" ಇತ್ಯಾದಿ ಘೋಷಣೆಗಳನ್ನು ಭಟರ ಕೈಲಿ ಕೂಗಿಸುತ್ತಾ, ಅವನನ್ನು ಸ್ಮಶಾನಕ್ಕೆ ಒಯ್ಯುವಂತೆ ಅಪ್ಪಣೆ ಮಾಡಿದ. ಈ ಕೆಟ್ಟ ಸಮಾಚಾರ ಕೇಳಿ ಚಂದನದಾಸನ ಹೆಂಡತಿಯು ಬಾಣಂತಿಯಾಗಿದ್ದೂ ಓಡಿ ಬಂದು ಎದೆಬಡಿದು ಕೊಳ್ಳುತ್ತಾ, ಗೋಳಿಡುತ್ತಾ, ಅವನನ್ನು ವಧಸ್ಥಾನಕ್ಕೆ ಹಿಂಬಾಲಿಸಿದಳು. ಚಿಕ್ಕ ಮಗನೂ ಸಹ. ಅದನ್ನು ಕೇಳುತ್ತಾ ಊರಿನ ಜನರು ಚಾಣಕ್ಯನಿಗೆ ನಾನಾ ಬಗೆಗಳಲ್ಲಿ ಶಾಪ ಹಾಕುತ್ತಿದ್ದರು. ಕೆಲವರು ಅಮಾತ್ಯನನ್ನೂ ಕೊಂಡಾಡುತ್ತಿದ್ದರು. ಮತ್ತೆ ಹಲವರು ಚಂದನದಾಸನ ಗುಣವನ್ನೂ, ಆತ್ಮತ್ಯಾಗ ಬುದ್ಧಿಯನ್ನೂ ಕೊಂಡಾಡುತ್ತಿದ್ದರು. ಗದ್ದಲವೋ ಗದ್ದಲ. ಭಟರು ಅವರನ್ನು ಅಲ್ಲಲ್ಲಿ ಚದುರಿಸುತ್ತ ಅಪರಾಧಿಯನ್ನು ವಧಸ್ಥಾನಕ್ಕೆ ಕರೆತಂದರು.

ಅರಮನೆಯಲ್ಲಿ ಚಂದ್ರಗುಪ್ತ ಸಿಡಿಮಿಡಿ ಗುಟ್ಟುತ್ತಿದ್ದ! ಯಾರ ಮರಣಕ್ಕೋ ಯಾರ ತಪ್ಪಿಗೂ ಏನು ಸಂಬಂಧವೆಂದು ಅವನಿಗೆ ತಿಳಿಯಲಿಲ್ಲ, ಆಚಾರ್ಯನೊಡನೆ ಜಗಳ ಮಾಡಿದಂದಿನಿಂದ ಆಚಾರ್ಯನ ದರ್ಶನವೂ ಇಲ್ಲದೆ, ದಿನವೊಂದು ನಡೆಯುವ ಈ ಮರಣ ದಂಡನೆಗಳು ಆಚಾರ್ಯನ ಹಳೆಯ ಅಪ್ಪಣೆಗಳಿರಬೇಕೆಂದು ಭಾವಿಸಿ, ಅದನ್ನು ಪ್ರಶ್ನಿಸಲೂ, ಆಚಾರ್ಯನ ಹೃದಯವರಿಯಲೂ ಆಗದೆ ತಳಮಳಿಸುತ್ತಿದ್ದ.

ವಧಸ್ಥಾನದಲ್ಲಿ ಭಯಂಕರ ಶೂಲವನ್ನು ನೆಡಲಾಗಿತ್ತು. ಸಾವಿರಾರು ಜನ ಸುತ್ತ ಸೇರಿದ್ದರು. ಚಂದನದಾಸನ ಮನಸ್ಸು ಕಲ್ಲಾಗಿತ್ತು. ಕಟು ಕರು ಕೊನೆಯದಾಗಿ ಕೇಳಿದರು:

"ಎಲವೋ ದುರಾತ್ಮನೆ! ಈಗಲಾದರೂ ಬೊಗಳು, ರಾಕ್ಷಸನೆಲ್ಲಿ ರುವನು ?"

ಶೆಟ್ಟಿ: "ಸಾಯುವುದಕ್ಕೆ ತೀರ್ಮಾನಿಸಿರುವೆ. ಹೇಳಲಾರೆ. ನಿಮ್ಮ ಕೆಲಸ ಮಾಡಿರೋ!''

ಚಂದನದಾಸನ ಪತ್ನಿ ಪತಿಯ ಕಾಲ ಮೇಲೆ ಬಿದ್ದು ಅಳಲಾರಂಭಿಸಿ ದಳು. ಎಂಥ ಕಲ್ಲು ಹೃದಯದವರನ್ನೂ ಕರಗಿಸುವ ದೃಶ್ಯ ಅದು! ಮಗು ಅಳುತ್ತಿದ್ದ!

"ಅಪ್ಪಾ! ಇನ್ನು ನಮಗೆ ಯಾರು ಗತಿ? ಎಲ್ಲಿ ಹೋಗಿ ಬದುಕ ಲಾದೀತು?''

ಶೆಟ್ಟಿ: "ಚಾಣಕ್ಯನ ಹೆಸರೇ ಕೇಳ ಬರದ ದೇಶಕ್ಕೆ ಹೋಗಿ ಬದುಕಿರಿ."

ಕಟುಕರು; "ಶೆಟ್ಟಿ! ನಿನ್ನ ಕೊನೆಯ ಆಸೆಯೇನು? ಪ್ರಾರ್ಥನೆ ಮಾಡುವುದಾದರೆ ಮಾಡಿ ಮುಗಿಸು.''

ಶೆಟ್ಟಿ: "ನನ್ನ ಕೊನೆಯ ಆಸೆ, ಸತ್ತ ಮೇಲೆ ಎಂದಾದರೊಂದು ದಿನ ಪರಲೋಕದಲ್ಲಿ ಮಿತ್ರನನ್ನು ಭೇಟಿಯಾಗುವುದು. ಪ್ರಾರ್ಥನೆ; ಜನ್ಮ ಜನ್ಮಾಂತರದಲ್ಲೂ ರಾಕ್ಷಸ ನನ್ನ ಮಿತ್ರನೇ ಆಗಬೇಕು.''

ಕಟುಕರು ಚಂದನದಾಸನ ಮುಖಕ್ಕೆ ಕಪ್ಪು ಬಟ್ಟೆ ಕಟ್ಟಿ, ಒಂದೊಂದು ಕಡೆಯಿಂದ ಒಬ್ಬ ಕಟುಕ ಒಂದೊಂದು ತೊಡೆ, ಕಾಲುಗಳನ್ನು ಹಿಡಿದೆತ್ತುತ್ತಾ ಅವನ ಪೃಷ್ಠವನ್ನು ಶೂಲಾಗ್ರಕ್ಕೆ ಹಾಕಲು ಅವನನ್ನು ಮೇಲೆತ್ತಿದ್ದರು:

ಅಷ್ಟರಲ್ಲಿ: ''ಅಯ್ಯೋ! ಆ ನಿರಪರಾಧಿಯನ್ನು ಬಿಡಿ! ನನ್ನನ್ನೇ ಆ ಶೂಲಕ್ಕೆ ಹಾಕಿ. ಅವನನ್ನು ಬಿಡಿ. ನನ್ನನ್ನು ಅವನ ಬದಲು ಶೂಲಾ ರೋಪಣ ಮಾಡಿಸಿ'' ಎನ್ನುತ್ತಾ ರಾಕ್ಷಸನೇ ಅಲ್ಲಿಗೆ ಬಂದ.

ಕಟುಕರು : "ನೀನಾರಯ್ಯ, ನಮ್ಮ ಕರ್ತವ್ಯವನ್ನು ತಡೆಯಲು? ಒಬ್ಬನ ಬದಲು ಇನ್ನೊಬ್ಬನನ್ನು ಶೂಲಕ್ಕೇರಿಸಲು ನಮಗೆ ಅಪ್ಪಣೆಯಿಲ್ಲ. ದೂರ ಸರಿ. ನಮ್ಮ ಕೆಲಸ ಮುಗಿಸುತ್ತೇವೆ.''

ರಾಕ್ಷಸ : "ಅಯ್ಯಾ! ಯಾರ ಸಲುವಾಗಿ ಇವನನ್ನು ಈಗ ಕೊಲ್ಲು ತ್ತಿರುವಿರೋ ಆ ಅಮಾತ್ಯರಾಕ್ಷಸ ನಾನೇ ! ಖಂಡಿತ ನನ್ನನ್ನೇ ಕೊಲ್ಲಿರಿ. ಅವನನ್ನು ಬಿಡಿಸಿ."

ಕಟುಕರು ಒಬ್ಬರ ಮುಖ ಒಬ್ಬರು ನೋಡಿ "ಇದೇನೋ ವಿಚಿತ್ರ ಪರಿಸ್ಥಿತಿಯಾಯಿತು ! ಈಗ ಈ ವಿಶೇಷವನ್ನು ಚಾಣಕ್ಯರಿಗರುಹದಿದ್ದರೆ ನಮ್ಮನ್ನೇನು ಮಾಡಿಬಿಡುವರೋ !!'' ಎಂದು ಬೆದರಿದವರಂತೆ ನಾಟಕ ಮಾಡಿ, "ಸ್ವಾಮಿ ಅಮಾತ್ಯರೇ! ತಾವು ಇಲ್ಲೇ ಇರಿ. ಅಪರಾಧಿಯನ್ನು ಒಂದು ಗಳಿಗೆ ತಡೆಯೋಣ. ನಿಮ್ಮ ಆಗಮನದ ವಾರ್ತೆಯನ್ನು ಪ್ರಧಾನಿ ಗಳಿಗೆ ತಿಳಿಸಿ, ಅಪ್ಪಣೆ ಪಡೆದು ಬರುವೆ" ಎನ್ನುತ್ತಾ, ರಾಜಭಟರ ಕೈಗೆ ಚಂದನದಾಸನನ್ನೂ ಅಮಾತ್ಯನನ್ನೂ ಒಪ್ಪಿಸಿ, ಆಚಾರ್ಯನ ಆಶ್ರಮಕ್ಕೆ ಬಂದು ಬಿನ್ನವಿಸಿದರು.

ಸಂತೋಷ ಸಮಾಚಾರವನ್ನು ಕೇಳಿದ ಚಾಣಕ್ಯ ಚಿನ್ನದ ಪಲ್ಲಕ್ಕಿ ಯಲ್ಲಿ ಕುಳಿತು ವಧಸ್ಥಾನಕ್ಕೆ ಬಂದನು. ಶಿಷ್ಯರು ಪರಾಕು ಹೇಳುತ್ತಿದ್ದರು.

ಒಬ್ಬ : "ಎಲ ಎಲವೋ ? ಸಿಡಿಲನ್ನು ಗಾಳಿಯಿಂದ ಹಿಡಿಸಿ ಬಂಧಿಸಿ ದವರಾರೋ ?''

ಇನ್ನೊಬ್ಬ ; "ಆಚಾರ್ಯ ಚಾಣಕ್ಯರೇ !''

ಒಬ್ಬ : "ಎಲ ಎಲವೋ ಮದ್ದಾನೆಯನ್ನು ತಾವರೆದಂಟಿನಿಂದ ಬಂಧಿಸಿ ತಂದವರಾರೋ ?''

ಇನ್ನೊಬ್ಬ . "ಆಚಾರ್ಯ ಚಾಣಕ್ಯರೇ !"

ಒಬ್ಬ ; "ಯಾರ ಹೃದಯವೂ ಕಾರ್ಯವೂ ಆರಂಭದಲ್ಲಿ ತಿಳಿಯದೆ ಫಲಾಂತ್ಯದಲ್ಲಿ ಮಾತ್ರ ತಿಳಿಯುವುದೋ, ಆ ಮಹಾತ್ಮನಾರೊ ?"

ಇನ್ನೊಬ್ಬ ; "ಆಚಾರ್ಯ ಚಾಣಕ್ಯರೇ !"

ಒಬ್ಬ : "ಎಲವೋ, ಯಾವನು ಪರೋಪಕಾರವನ್ನೇ ದೀಕ್ಷೆಯನ್ನಾಗಿ ಹೊಂದಿರುವನೋ, ಯಾರು ವಜ್ರದಷ್ಟು ಕಠಿಣನೂ, ಪುಷ್ಪಕ್ಕಿಂತ ಮೃದುವೂ ಆಗಿರುವನೋ, ಅವನಾರೋ ?

ಇನ್ನೊಬ್ಬ ; "ಆಚಾರ್ಯ ಚಾಣಕ್ಯರೇ"

ಒಬ್ಬ : "ಯಾವನು ಶುಕ್ರನೀತಿ ವಿಶಾರದನೋ, ಯಾವನು ಚತುರ್ವಿಧಪುರುಷಾರ್ಥಸಾಧಕ ಗ್ರಂಥಗಳನ್ನನುಗ್ರಹಿಸಿರುವನೋ, ಯಾವನು ಶಸ್ತ್ರಶಾಸ್ತ್ರಗಳಲ್ಲೂ, ಶಾಪಾನುಗ್ರಹಗಳಲ್ಲೂ ಸಮರ್ಥನೋ, 'ಯಾವನು ಹಿಡಿದ ಕಾರ್ಯ ಎಂದೂ ನಿಷ್ಫಲವಲ್ಲವೋ, ಆ ಮಹಾತ್ಮನಾರೋ ?

ಇನ್ನೊಬ್ಬ ; "ಆಚಾರ್ಯ ಚಾಣಕ್ಯರೇ !"

ಇದನ್ನು ಕೇಳುತ್ತಾ ಜನಜಂಗುಳಿ ಶಾಂತವಾಯಿತು. ಅಲ್ಲಿದ್ದ ಬಹು ಜನರು ಚಾಣಕ್ಯನ ಹೆಸರನ್ನು ಕೇಳಿ ನಡುಗಿದ್ದವರೇ ವಿನಾ ಅವನನ್ನು ಕಣ್ಣಿಂದಲೂ ಕಂಡವರಲ್ಲ !

ಪಲ್ಲಕ್ಕಿಯಿಂದಿಳಿದು, ಬರೀ ಗಾಲಿನಲ್ಲಿ ನೆಲದ ಮೇಲೆ ನಿಂತು, ಸರಳ ಉಡುಪಿನಲ್ಲಿದ್ದರೂ ಅಗ್ನಿ ಪುರುಷನಂತೆ ತೇಜೋವಂತನಾಗಿದ್ದು, ಕೃಶವಾದ ಆಕೃತಿಯ ಆ ಮಹಾಪುರುಷನನ್ನು ಕಂಡು, ಭಯವಿದ್ದರೂ, ಅಗೋಚರ ಶಕ್ತಿ ಪ್ರೇರಿತರಾಗಿ, ಜನಜಂಗುಳಿ ಅವನಿಗೆ ಸಾಷ್ಟಾಂಗವಿಟ್ಟಿತು. ಅದೇ ಶಕ್ತಿಯಿಂದ ಪ್ರೇರಿತನಾಗಿ ಅಮಾತ್ಯನೂ ಚಾಣಕ್ಯನಿಗೆ ವಂದಿಸಿದ.

ಚಾಣಕ್ಯ ಅಮಾತ್ಯನ ಹತ್ತಿರ ಬಂದು; "ಅಮಾತ್ಯರಾಕ್ಷಸರೇ! ಅಂದು ಯುದ್ಧದಲ್ಲಿ ಭೇಟಿಯಾದ್ದನ್ನು ಬಿಟ್ಟರೆ ಇಂದೇ ಭೇಟಿ. ನಮಗೆ ಹೇಳದೇ ಕೇಳದೇ ಊರು ಬಿಟ್ಟು ಹೋಗುವುದೆ? ಚಂದ್ರಗುಪ್ತ ನಿಮ್ಮ ಭೇಟಿಗಾಗಿ ನಿರೀಕ್ಷಿಸುತ್ತಿರುವನು. ಅಮಾತ್ಯಸ್ಥಾನ ತೆರವಾಗಿಯೇ ಇದೆ. ನಿಮ್ಮನ್ನು ನಂಬಿರುವ ಈ ಪಾಟಲೀಪುರದ, ಮಗಧದ ಜನತೆಗೆ ಹೀಗೆ ದ್ರೋಹ ಮಾಡಿ ಓಡಿ ಹೋಗಬಹುದೇ ? ಇಕೋ, ಈ ವಿಷ್ಣುಗುಪ್ತ ಆಚಾರ್ಯನ ಅಭಿವಂದನೆಗಳು. ತಮಗೆ ಸ್ವಾಗತ" ಎಂದು ವಿನಯದಿಂದ ವಂದಿಸಿದ.

ಕ್ಷಣಕಾಲ ರಾಕ್ಷಸನಿಗೆ ದಿಗ್ಭ್ರಮೆ ಆಯಿತು! ತಾನು ದ್ವೇಷಿಸು ತ್ತಿದ್ದ ವ್ಯಕ್ತಿ ಇಷ್ಟು ಸರಳನೂ, ವಿನಯಾನ್ವಿತನೂ, ಗುಣಗ್ರಾಹಿಯೂ, ನಿಃಸ್ವಾರ್ಥನೂ ಇದ್ದಾನೆಂದು ಆವನೆಣಿಸಿರಲಿಲ್ಲ. ಸೊಕ್ಕಿನ, ಕ್ರೂರ ಸ್ವಭಾವದ, ಅಟ್ಟಹಾಸ ಪ್ರವೃತ್ತಿಯ ಕುಟಿಲ, ಕಪಟ, ವಂಚಕ ಸ್ವಭಾವದ ವನೆಂದು ತಾನೆಣಿಸಿದ್ದ ೯ಆ ವ್ಯಕ್ತಿಯ ಕೃಶ ಶರೀರವನ್ನೂ, ತಪೋಮಯ ವ್ಯಕ್ತಿತ್ವವನ್ನೂ, ತೇಜೋವಂತ ಮುಖವನ್ನೂ, ಬೆಳಗುವ ಕಂಗಳನ್ನೂ, ಹಣೆಯಲ್ಲಿ ಬಂಗಾರದ ಗೆರೆಗಳಂತೆ ರಾರಾಜಿಸುವ ಊರ್ಧ್ವಪುಂಡ್ರವನ್ನೂ, ತಲೆಯ ಹಿಂದೆ ಜೋಲಾಡುವ ಅಗ್ನಿಶಿಖೆಯಂಥ ಅವನ ಶಿಖೆಯನ್ನೂ ಕಂಡು ಅನಿರ್ವಚನೀಯ ಪೂಜ್ಯ ಭಾವವುಂಟಾಯಿತು ! ಹೀಗೆಂದ ;

''ಪೂಜ್ಯರೇ, ತಾವು ನನಗೆ ನಮಸ್ಕರಿಸುವುದೆಂದರೆ ಎಂಥ ವಿಡಂಬನೆ ? ಮೊದಲೇ ನಾನು ದುರ್ಬ್ರಾಹ್ಮಣ! ಅದರ ಮೇಲೆ ಈ ಕಟುಕರಿಂದ ಮುಟ್ಟ ಲ್ಪಟ್ಟವನು! ತಮ್ಮನ್ನು ಅರಿತು ಕೊಳ್ಳಲು ಅಸಮರ್ಥನಾದ ಮಂದಮತಿ! ನಾನು ಊರು ಬಿಟ್ಟುದು ಮಗಧದ ಜನತೆಗೆ ದ್ರೋಹ ಎಣಿಸಿ ಅಲ್ಲ. ಸ್ವಾಮಿ ನಿಷ್ಠೆ ಹಾಗೆ ಮಾಡಿಸಿತು. ನಂದರಿಗೆ ಅಮಾತ್ಯನಾಗಿದ್ದ ನಾನು ಚಂದ್ರ ಗುಪ್ತನಿಗೆ ಹೃದಯಪೂರ್ವಕವಾಗಿ ಅಮಾತ್ಯನೆಂತಾಗುವೆ? ಅವನೆಂತು ನನ್ನನ್ನು ನಂಬಿಯಾನು ?"

ಚಾಣಕ್ಯ ; "ಅಮಾತ್ಯರೇ ! ತಮ್ಮ ಸ್ವಾಮಿನಿಷ್ಠೆಗೆ ನಾನು ನಮಸ್ಕರಿಸಿದುದು ತಪ್ಪಲ್ಲ. ನಿಮ್ಮನ್ನು ಮುಟ್ಟಿದವರು ಕಟುಕರಲ್ಲ ! ಇವನು ಸಿದ್ಧಾರ್ಥಕ !! ಇವನ ಪರಿಚಯ ತಮಗಿರಬಹುದಲ್ಲವೆ ? ಇವನು ಸಮಿದ್ಧಾರ್ಥಕ ? ಯಾಗಶಾಲೆಯನ್ನು ನಡೆಸಿದವನು. ಈ ಮಗಧದ ಜನತೆ ನಿಮ್ಮನ್ನು ಅಪಾರವಾಗಿ ಪ್ರೀತಿಸುತ್ತಾರೆ. ಸಾವಿರ ಚಾಣಕ್ಯರೂ ಆ ಸ್ಥಾನವನ್ನು ಅವರ ಹೃದಯದಿಂದ ಕಸಿಯಲಾರರು. ಚಾಣಕ್ಯನು ಗುಣಕ್ಕೆ ಕುರುಡಲ್ಲ! ನೀವು ಊರು ಬಿಟ್ಟುದು ಖಂಡಿತವಾಗಿ ಜನದ್ರೋಹ. ರಾಜರು ಬರುತ್ತಾರೆ, ಹೋಗುತ್ತಾರೆ. ಅಮಾತ್ಯರು ಬದಲಾಗಬಾರದು. ನಿಮ್ಮ ನಿಷ್ಠೆ ಸಿಂಹಾಸನಕ್ಕೆ ಇರಬೇಕು. ವ್ಯಕ್ತಿನಿಷ್ಠವಾಗಬಾರದು. ರಾಜಕೀಯ ವ್ಯಕ್ತಿನಿಷ್ಠವಾದರೆ ಸ್ವಾರ್ಥ ತಪ್ಪಲಾರದು. ಅದು ಆಗ ಜನರನ್ನು ಕೊಲ್ಲುವ ವಿಷ ಪ್ರವಾಹವಾಗಿ ಬಿಡುತ್ತದೆ. ನನಗೆ ನಿಮ್ಮ ಮೇಲೆ ದ್ವೇಷವೆ ? ನಿಷ್ಠುರರೂ, ಲೋಭಿಗಳೂ, ಧರ್ಮಶೂನ್ಯರೂ, ಮದಾಂಧರೂ ಆದ ನಂದರ ಸಾವಿಗೆ ಎಷ್ಟು ಜನ ಅತ್ತರೆಂದು ನೀವೇ ಪರೀಕ್ಷಿಸಿ ಬೇಹು ಸಮಾಚಾರದವರನ್ನು ಕೇಳಿ. ಅವರ ಪಾಪಕ್ಕೆ ಅವರು ಪ್ರಾಣತೆತ್ತರು. ವಿಷ್ಣುಗುಪ್ತ ಭಗವಂತನ ಉಪಕರಣವಾಗಿ ಅದನ್ನು ಆಗು ಮಾಡಿಸಿದ. ಮಗಧದ ಪಾರಂಪರಿಕ ಅಮಾತ್ಯರು ನೀವೆ; ತಕ್ಷಶಿಲೆಯ ನಾನಲ್ಲ" ಎನ್ನುತ್ತಾ ದೂರದಿಂದ ಬರುತ್ತಿದ್ದ ಕ್ಷಪಣಕನನ್ನು ನೋಡಿ : "ಬರಬೇಕು, ಮುನಿಗಳು" ಎಂದು ಸ್ವಾಗತಿಸಿದ. ಅವನನ್ನು ಕಂಡು ಚಾಣಕ್ಯ ''ಅಮಾತ್ಯರೇ! ಇವನು ನನ್ನ ಮಿತ್ರ, ಸಹಾಧ್ಯಾಯಿ, ಇಂದುಶರ್ಮ ! ಧರ್ಮ ರಕ್ಷಣೆಗೆಂದು ಕೆಲಕಾಲ ಯಜ್ಞೋಪವೀತವನ್ನೂ ತ್ಯಾಗ ಮಾಡಿ ಸಹಕರಿಸಿದ ಮಹಾತ್ಮಾ. ನಿಮ್ಮ ಆಪ್ತಮಿತ್ರ. ಇಕೋ ಬಾಗುರಾಯಣಾದಿ ನಮ್ಮ ಸೇನಾನಾಯಕರೂ ಬಂದರೂ" ಎನ್ನುತ್ತಾ ಕೈಸನ್ನೆ ಮಾಡಿದ. ಬಂಧಿಸಿದ ಮಲಯಕೇತುವಿನ ಶರೀರವನ್ನು ಭಟರು ಚಾಣಕ್ಯನ ಪಾದಗಳಲ್ಲಿ ಉರುಳಿಸಿದರು ! ಅಮಾತ್ಯನಿಗೆ ಏನೂ ತಿಳಿಯಲಿಲ್ಲ! ಮೂಢನಂತೆ ನೋಡುತ್ತಿದ್ದ.

ಸ್ವಯಂ ಚಂದ್ರಗುಪ್ತನೇ ರಾಜವೈಭವದಿಂದ ಅತ್ತ ಬಂದ. ಜನ ಜಂಗುಳಿ ದಾರಿಮಾಡಿಕೊಟ್ಟಿತು. ಅಮಾತ್ಯನಿಗೆ ವಿಸ್ಮಯವಾಯ್ತು.

ಪಲ್ಲಕ್ಕಿಯಿಂದಿಳಿದು ದೊರೆ ಚಾಣಕ್ಯರ ಪಾದಗಳಲ್ಲಿ ಸಾಷ್ಟಾಂಗ ಪ್ರಣಾಮ ಮಾಡಿದ. ಅವನ ವಿನಯವನ್ನು ಕಂಡು ಅಮಾತ್ಯನಿಗೂ ಅಚ್ಚರಿಯಾಯಿತು! ಅವನಿಗಾಗಿದ್ದ ಅನ್ಯಾಯಕ್ಕೆ ಮನ ಮರುಗಿತು. ಕಂಗಳಲ್ಲಿ ಹನಿಗೂಡಿತು.

ಆಚಾರ್ಯ ; "ದೊರೆಯೇ! ನಿನ್ನ ಕುಲಕ್ರಮಾಗತ ಅಮಾತ್ಯನಿಗೆ ನಮಸ್ಕರಿಸು" ಎಂದ. ಚಂದ್ರಗುಪ್ತ ಹಾಗೇ ಮಾಡಿದ. ರಾಕ್ಷಸ ಆಶೀರ್ವದಿಸಲಿಲ್ಲ!

ಆಚಾರ್ಯರ ; "ನಮಸ್ಕರಿಸಿದವನಿಗೆ ಆಶೀರ್ವಾದ ಮಾಡುವುದು. ಬ್ರಾಹ್ಮಣ ಕರ್ತವ್ಯ, ಅಮಾತ್ಯರೇ! ನೀವು ಚಂದನದಾಸನನ್ನು ಬದುಕಲು ಇಚ್ಛಿಸುವಿರಾದರೆ, ಈ ಅಮಾತ್ಯ ಪದವಿಯನ್ನು ವಹಿಸಲೇಬೇಕು! ಇಲ್ಲವಾದರೆ ಅವನನ್ನು ಕೊಲ್ಲಿಸಿದ ಪಾಪ ನಿಮಗೇ ತಟ್ಟುವುದು. ವೃಥಾರಕ್ತಪಾತನನ್ನು ಶುಕ್ರನೀತಿ ಒಪ್ಪಲಾರದು!! ಇದೋ ಹಿಡಿಯಿರಿ'' ಎನ್ನುತ್ತಾ ತನ್ನ ಕೈಯ್ಯಲ್ಲಿದ್ದ ಸಚಿವ ಶಸ್ತ್ರವನ್ನು ಅವನ ಕೈಗೆ ಬಲಾತ್ಕಾರವಾಗಿತ್ತ! ಅದು ರಾಕ್ಷಸನ ಕೈಗಳಿಂದ ಕೆಳಗೆ ಬೀಳಲಿಲ್ಲ! ಚಂದ್ರಗುಪ್ತನನ್ನು ರಾಕ್ಷಸ ನಿಟ್ಟಿಸಿ ನೋಡಿದ! ಅವನ ಮುಖದಲ್ಲಿದ್ದ ಪ್ರೀತಿ, ಆಸೆ, ಹೊಸನಿರೀಕ್ಷೆ, ಭಕ್ತಿಭಾವಗಳು ರಾಕ್ಷಸನನ್ನು ಕರಗಿಸಿದವು. ಚಂದ್ರಗುಪ್ತನನ್ನು ಬಿಗಿಯಪ್ಪಿದ! ಅಲ್ಲಿಗೆ ಮುಗಿಯಿತು ಅವನ ನಂದಾಭಿಮಾನ, ಚಂದ್ರಗುಪ್ತ ದ್ವೇಷಗಳು!! ಜನತೆ ಚಪ್ಪಾಳೆ ಹಾಕಿತು. ಜಯಘೋಷ ಮಾಡಿತು.

ಆಚಾರ್ಯ ; ''ಇನ್ನು ಅಮಾತ್ಯರಾದ ತಾವು ಈ ಮಲಯಕೇತುವನ್ನೇನು ಮಾಡಬೇಕೆಂದು, ತಾವೇ ಆಜ್ಞಾಪಿಸಬೇಕು.''

ರಾಕ್ಷಸ ः ''ನಮಗೆ ಆಶ್ರಯ ನೀಡಿ ಮಗಧಕ್ಕೆ ಉಪಕಾರಿಯಾದ ಈತನನ್ನು ಬಿಡಿಸಿ, ಅವನ ರಾಜ್ಯವನ್ನು ಅವನಿಗೇ ಕೊಡಬೇಕು.''

ಆಚಾರ್ಯ ; ''ಇನ್ನೆರಡು ಶರತ್ತುಗಳಿವೆ. ಇವನ ತಂಗಿ ರೂಪಾವತಿಯನ್ನು ಚಂದ್ರಗುಪ್ತನಿಗೆ ಕೊಟ್ಟು ವಿವಾಹ ಮಾಡಲು ಅವನು ಒಪ್ಪಬೇಕು.

ಚಂದ್ರಗುಪ್ತನಿಗೆ ಅಂದು ಗಡಿಬಿಡಿಯಲ್ಲಿ ಮಾಡಿದ ಪಟ್ಟಾಭಿಷೇಕದಲ್ಲಿ ತಾವಿರ ಲಿಲ್ಲ. ವಿವಾಹಾನಂತರ ವಿಸ್ತಾರವಾದ ಪಟ್ಟಾಭಿಷೇಕ ನಡೆಯಬೇಕು. ಪುರುಷಪುರದಲ್ಲಿ ನಡೆಯುವ ಮಲಯಕೇತುವಿನ ಪಟ್ಟಾಭಿಷೇಕಕ್ಕೆ ತಾವೆಲ್ಲ ಹೋಗಿ ಬರಬೇಕು.''

ಚಾರರು ಮಲಯಕೇತುವಿನ ಬಂಧನವನ್ನು ಬಿಡಿಸಿದರು. ಆನಂದ ದಿಂದ ಅವನು ಆಚಾರ್ಯನಿಗೂ ಅಮಾತ್ಯನಿಗೂ ವಂದಿಸಿ, ಚಂದ್ರಗುಪ್ತನನ್ನು ಆಲಿಂಗಿಸಿಕೊಂಡ.

ಮುಕ್ತಬಂಧನನಾದ ಚಂದನದಾಸ ಆಚಾರ್ಯನಿಗಭಿವಂದಿಸಿದ; "ಎಲೋ ಸೆಟ್ಟಿ! ನಿನ್ನ ಮಿತ್ರನಿಷ್ಠೆಗೆ ಮೆಚ್ಚಿರುವೆವು. ಇಂದಿನಿಂದ ನೀನೇ ಪಾಟಲೀ ಪುರದ ಪಟ್ಟಣಶೆಟ್ಟಿ'' ಎಂದು ಚಾಣಕ್ಯ ಘೋಷಿಸಿದ. ಜನ ಹರ್ಷೋ ದ್ಗಾರ ಮಾಡಿತು.

ಚಾಣಕ್ಯ : "ಅಮಾತ್ಯನನ್ನು ಮತ್ತೆ ದೊರಕಿಸಿಕೊಟ್ಟ ಈ ವಧ ಸ್ಥಾನ ಇಂದಿನಿಂದ ಪವಿತ್ರವಾಯಿತು. ಇನ್ನೂ ವಧಸ್ಥಾನವನ್ನು ದೂರ ಸರಿಸಿ, ಇಲ್ಲಿ ಈ ವಿಜಯಕ್ಕೊಂದು ಸ್ಮಾರಕ ಆಗಬೇಕು" ಎಂದಾಜ್ಞಾಪಿಸಿದ.

ಪಂಜಿನ ಬೆಳಕಿನ ಝಗಝಗ ಬೆಳಕಿನಲ್ಲಿ ಉತ್ಸವ ಮತ್ತೆ ಊರತ್ತ ಹೊರಟಿತು. ಚಂದ್ರಗುಪ್ತ ಮಲಯಕೇತುಗಳು ಅರಸನ ಪಲ್ಲಕ್ಕಿಯಲ್ಲೂ ಚಾಣಕ್ಯ ಅಮಾತ್ಯರು ಇನ್ನೊಂದರಲ್ಲೂ ಹೊರಟರು.

ಕ್ಷಪಣಕ ಶುಭ ವಸ್ತ್ರಧರಿಸಿ, ಶಿಷ್ಯರೊಡನೆ ಊರು ತಲುಪಿದ. ಮರು ದಿನ ಅರಮನೆಯ ಖರ್ಚಿನಲ್ಲಿ ಅವನಿಗೆ ಪುನಃ ಉಪನಯನಾದಿ ಸಂಸ್ಕಾರ ಗಳು ನಡೆದುವು. ಅನ್ನಸತ್ರ ಮತ್ತೆ ತೆರೆಯಿತು. ವಿದ್ಯುಲ್ಲೇಖೆ, ಚಂದ್ರ ಗುಪ್ತನ ಮೊದಲ ಪತ್ನಿಯರು ಅರಮನೆಯಂಗಳದಲ್ಲಿ ಇತರ ಸುಮಂಗಲಿಯ ರೊಡನೆ ಆಚಾರ್ಯನಿಗೂ ದೊರೆಗೂ ಆರತಿ ಮಾಡಿ ಸ್ವಾಗತಿಸಿದರು.



## ಇಪ್ಪತ್ತೆರಡನೆಯ ಅಧ್ಯಾಯ

# ಪಟ್ಟಾಭಿಷೇಕ, ದಿಗ್ವಿಜಯ

ಶುಭಮುಹೂರ್ತದಲ್ಲಿ ಚಂದ್ರಗುಪ್ತನಿಗೆ ವಿಸ್ತಾರವಾದ, ವೈಭವಪೂರ್ಣವಾದ ಪಟ್ಟಾಭಿಷೇಕ, ನಡೆಯಿತು. ರೂಪಾವತಿ ಅವನೊಡನೆ ಪಟ್ಟಮಹಿಷಿಯ ಸ್ಥಾನಕ್ಕೇರಿದಳು ಮೊದಲನೆಯ ಹೆಂಡತಿ ಶೂದ್ರಳೆಂಬ ಕಾರಣದಿಂದಲೂ, ಎರಡನೆಯವಳು ಯವನಳೂ ವಿದೇಶೀಯಳೂ ಎಂಬ ಕಾರಣಗಳಿಂದಲೂ ಆ ಸ್ಥಾನಕ್ಕೇರುವಂತಿರಲಿಲ್ಲ. ಆದರೆ ಅವರನ್ನೂ ರಾಣಿಯರೆಂದು ಘೋಷಿಸಲಾಯಿತು. ಜನತೆ ಅದನ್ನು ಸ್ವಾಗತಿಸಿತು. ವಿದ್ಯುಲ್ಲೇಖೆಯನ್ನು ಜನತೆ ಒಪ್ಪುವಂತೆ ಚಾಣಕ್ಯ ಶೈಲೂಷಕನ ಮರಣದ ಹಿನ್ನೆಲೆಯನ್ನೂ, ಅವಳು ಚಂದ್ರಗುಪ್ತನಿಗೊಲಿದು ಮಾಡಿದ ಉಪಕಾರವನ್ನೂ ಸಭೆ

ಯಲ್ಲೇ ಸುದೀರ್ಘನಾಗಿ ವಿವರಿಸಿದ್ದ. ಆಚಾರ್ಯನ ತಂತ್ರಕ್ಕೆ, ದೂರ ದೃಷ್ಟಿಗೆ ವಿಶಾಲ ಮನೋಭಾವಕ್ಕೆ ಪಾಟಲೀಪುರದ ಜನತೆ ತಲೆದೂಗಿತು.

"ಕುಮಾರ! ಇನ್ನು ಅಮಾತ್ಯರಾಕ್ಷಸನ ನೇತೃತ್ವದಲ್ಲಿ ನಿನ್ನ ಸಾಮ್ರಾಜ್ಯವನ್ನು ವಿಸ್ತರಿಸಿ, ಆರ್ಯಾನಾರ್ಯಮ್ಲೇಚ್ಛ ಜನರೆಲ್ಲ ನಿನ್ನ ಧರ್ಮಧ್ವಜದಡಿಯಲ್ಲಿ ಬಂದು ಒಗ್ಗೂಡುವಂತೆ ದ್ವಿಗಿಜಯ ನಡೆಸಿ ಕೀರ್ತಿವಂತನಾಗು" ಎಂದು ಚಾಣಕ್ಯ, ಪಟ್ಟಾಭಿಷಿಕ್ತನಾಗಿ ನಮಸ್ಕರಿಸಿದ ದೊರೆಗೆ ಹರಸಿದ.

ದೊರೆ ಅಮಾತ್ಯನ ಮುಖ ನೋಡಿದ. ಅಮಾತ್ಯ ಕೊಂಚ ಮೌನವಾಗಿದ್ದು ಚಿಂತಿಸಿ ಆಚಾರ್ಯನಿಗೆಂದ: "ಗುರುಗಳೇ! ಕೆಲಸದ ಪೌರೋಹಿತ್ಯವನ್ನು ತಾವೇ ವಹಿಸಬೇಕು. ತಮ್ಮಿಂದಲೇ ಆರಂಭವಾದ ಕಾರ್ಯ ತಮ್ಮ ನೇತೃತ್ವದಲ್ಲೇ ಪೂರ್ಣವಾಗಬೇಕು. ತಾವು ದಿಗ್ದರ್ಶನ ಮಾಡಿದರೆ ಸಾಕು. ಅದನ್ನು ಕಾರ್ಯಗತ ಮಾಡುವ ಭಾರ ಮಾತ್ರ ನನ್ನದಾಗಲಿ"

ಚಾಣಕ್ಯ : "ಅಮಾತ್ಯರೇ! ಈ ಗೌರವೋಕ್ತಿಯನ್ನು ಚಾಣಕ್ಯ ಮೆಚ್ಚುತ್ತಾನೆ. ಆದರೆ ಚಂದ್ರಗುಪ್ತನ ಸಾಮ್ರಾಜ್ಯ ವಿಸ್ತಾರದ ಕಾರ್ಯ ನಿಮ್ಮಿಂದಲೇ ಆಗಬೇಕು. ನೋಡಿ ನೆಮ್ಮದಿ ಪಡುವ ಭಾಗ್ಯ ನನ್ನದಾಗಲಿ. ಈಗಾಗಲೇ ಸಾಕಷ್ಟು ನನ್ನ ತಪಸ್ಸು ವ್ಯಯವಾಗಿದೆ. ಅಮಾತ್ಯ ಪದವಿ ತಮಗೆ ತಲೆ ತಲಾಂತರಗಳಿಂದ ಬಂದದ್ದು. ನನಗಲ್ಲ! ನಾನು ಒಬ್ಬ ತಪಸ್ವೀ ಮಾತ್ರ. ವಿಧಿ ಬಲದಿಂದ ಒಂದು ಆಪತ್ಕಾಲದಲ್ಲಿ ನಾನು ರಾಜಕಾರಣಕ್ಕೆ ಸಿಕ್ಕಿ ಬಿದ್ದೆನೇ ಹೊರತು ಅದು ನನ್ನ ಕುಲಕರ್ತವ್ಯವಲ್ಲ. ನಾನಿಲ್ಲದಾಗಲೂ, ನಾನಾರಂಭಿಸಿದ ಈ ಮಹಾಕಾರ್ಯ ನಡೆದು, ಬೆಳೆದು ನನ್ನ ತಪಸ್ಸು ಸಾಧನೆಗಳು ಸಾರ್ಥಕವಾದುದನ್ನು ನೋಡಿ ತೃಪ್ತಿ ಪಡೆದು ಧನ್ಯನಾಗುತ್ತೇನೆ. ನಿಮ್ಮ ಸಾಮರ್ಥ್ಯದಲ್ಲಿ ನನಗೆ ಪೂರ್ಣವಿಶ್ವಾಸವುಂಟು! ಶುಭಮುಹೂರ್ತದಲ್ಲಿ ಕಾರ್ಯಾರಂಭವಾಗಲಿ.'

ಚಾಣಕ್ಯನ ತರ್ಕವನ್ನು ಅಮಾತ್ಯನೂ ಚಂದ್ರಗುಪ್ತನೂ ಒಪ್ಪ ಬೇಕಾಯಿತು. ಆದರೂ ದೊರೆಯ ಕಣ್ಣಂಚುಗಳು ನೀರ್ಗೂಡಿದವು. ಸಿಂಹಾಸನದಲ್ಲಿ ಕುಳಿತವನು ಅಳಬಾರದೆಂಬ ನಿಯಮದಂತೆ ಅವನೆಷ್ಟು ತಡೆದುಕೊಂಡರೂ ದುಃಖ ಉಮ್ಮಳಿಸಿತು. ಚಾಣಕ್ಯ ಇದನ್ನು ಗಮನಿಸಿದ. ದೊರೆಗೆ ಹೀಗೆಂದ : "ವತ್ಸ ! ನಾನಿನ್ನು ನಿನ್ನ ಒಬ್ಬ ಸಾಮಾನ್ಯ ಪ್ರಜೆ. ನನ್ನ ತಪಸ್ಸಿನ ಆರನೆಯ ಒಂದು ಭಾಗ ನಿನಗೆ ಸೇರುವುದು. ಬೇರೆ ತೆರಿಗೆಗಳನ್ನು ನಾನು ಕೊಡಲಾರೆ. ಬಡಬ್ರಾಹ್ಮಣ ಹರಸಿಯಾನು ಮಾತ್ರ! ನಾನು ಹತ್ತಿರವಿಲ್ಲವೆಂದು ಅಧೈರ್ಯ ಪಡಬೇಡ. ಸಮರ್ಥ ಅಮಾತ್ಯ ನಿನ್ನ ಹತ್ತಿರವೇ ಇದ್ದಾನೆ. ಅವನನ್ನು ವಿಶ್ವಾಸಕ್ಕೆ ತೆಗೆದುಕೊಂಡು ಕಾರ್ಯಪ್ರವೃತ್ತನಾಗು. ನನ್ನ ಸಲಹೆಯ ಅವಶ್ಯಕತೆ ಬಿದ್ದರೆ ಅದು ನಿನಗೆ ದೊರಕಿಯೇ ತೀರುವುದು. ಆದರೆ ನಾನು ಸದಾ ನಿನ್ನ ಹತ್ತಿರವಿದ್ದರೆ ಸ್ವತಂತ್ರನಾಗಿ ನಡೆಯುವ ನಿನ್ನ ಪ್ರವೃತ್ತಿಯೇ ಕುಂಠಿತವಾಗಿ ಬಿಡುವುದು! ತಕ್ಷಶಿಲೆಯ ಆಶ್ರಮ ಶಿಥಿಲವಾಗಿದೆ. ಆ ಗುರುಕುಲವೆಲ್ಲ ಯವನನ ಧಾಳಿಯಿಂದ ತತ್ತರಿಸಿ ಅಸ್ತವ್ಯಸ್ತವಾಗಿದೆ. ವಿದ್ಯಾ ಸಂಸ್ಥೆಗಳು ರಾಜಕೀಯಕ್ಕೆ ಸಿಕ್ಕಿ ಹಾಳಾಗಬಾರದು. ಹಾಳು ಯವನನಿಗೆ ಇದನ್ನಾರೂ ಹೇಳಲಿಲ್ಲ! ಈಗ ಅಲ್ಲಿ ಪುನರ್ವ್ಯವಸ್ಥೆಯ ಕಾರ್ಯ ಆರಂಭವಾಗಬೇಕು. ಅಮಾತ್ಯ ರಾಕ್ಷಸ ಇದನ್ನು ಮಾಡಲಾರ! ಅದು ಚಾಣಕ್ಯನದೇ ಕೆಲಸ. ಈಗ ಆ ಗುರುಕುಲವೂ, ಗಾಂಧಾರದ ತನಕ ಆ ನಾಡೂ ಎಲ್ಲ ನಿನ್ನ ಸಾಮ್ರಾಜ್ಯಕ್ಕೆ ಅಧೀನ ಎಂಬುದನ್ನು ಮರೆಯಬೇಡ. ನನ್ನ ಹಳೆಯ ಶಿಷ್ಯ ಕಾಮಂದಕನನ್ನು ಅಲ್ಲಿಟ್ಟೇ ಬಂದಿರುವೆನಾದರೂ ಹಲವಾರು ಶಾಸ್ತ್ರ ಬೋಧನ ವಿಭಾಗಗಳಲ್ಲಿ ಸಮರ್ಥ ಪ್ರಾಧ್ಯಾಪಕರಿಲ್ಲ. ಭಾರತದ ಇನ್ನಿತರ ಭಾಗಗಳಲ್ಲಿ ಸಮರ್ಥರಾದ ವಿದ್ವನ್ಮಣಿಗಳನ್ನು ಆಯ್ದು ಕರೆದೊಯ್ದು ಅಲ್ಲಿ ಅಧ್ಯಾಪನ ಮತ್ತೆ ಆರಂಭಿಸಬೇಕಾಗಿದೆ. ವ್ಯವಹಾರ ಶಾಸ್ತ್ರ, ದಂಡ ನೀತಿಗಳನ್ನು ಕಾಮಂದಕನೇ ಕಲಿಸಿಯಾನು. ವೇದಾಂತ, ಮೀಮಾಂಸೆ, ನ್ಯಾಯ, ವ್ಯಾಕರಣ, ಉಳಿದ ವಿದ್ಯಾಸ್ಥಾನಗಳು ಹಲವಕ್ಕೆ ಯೋಗ್ಯರನ್ನು ತುಂಬಬೇಕಾಗಿದೆ. ಅವರನ್ನು ಹುಡುಕಿ ತೆಗೆಯಲು, ಇದೋ, ಚಾಣಕ್ಯ ಇಷ್ಟರಲ್ಲೇ ಭಾರತಪರ್ಯಟನ ಕಾರ್ಯವನ್ನಾರಂಭಿಸುವನು " ಎನ್ನುತ್ತಾ

ಸಿದ್ಧಾರ್ಥಕ, ಸಮಿದ್ಧಾರ್ಥಕ, ಶ್ರುತವಿನೀತ ಮೊದಲಾದ ಶಿಷ್ಯರ ಮುಖ ವನ್ನು ಆಚಾರ್ಯ ನೋಡಿದ. ಅವರ ಹರ್ಷವನ್ನು ಗಮನಿಸಿದ ದೊರೆಯ ಮುಖದಲ್ಲೂ ಒಂದು ಹೊಸ ಹರ್ಷದ ಮಿಂಚು ಮಿಂಚಿತು.

  

ನಂದರ ಕಾಲದ ಆಪ್ತ ರಾಜಸೇವಕರನ್ನೆಲ್ಲ (ಬದುಕಿ ಉಳಿದಿದ್ದವರನ್ನು) ಅಮಾತ್ಯ ಮತ್ತೆ ಅವರವರ ಸ್ಥಾನದಲ್ಲಿ ನೇಮಿಸಿದ. ತಾನೂ ಎಂದಿನ ಉತ್ಸಾಹದಂತೆ ಅಮಾತ್ಯ ಕಾರ್ಯವನ್ನು ನಿರ್ವಹಿಸಿದ. ಬಹುಕಾಲ ಉತ್ತರ ಭಾರತವೆಲ್ಲ ಹೊರಗಿನ ಧಾಳಿಕಾರರಿಂದ ತತ್ತರಿಸಿ ಹೋಗಿದ್ದು ಈಗ ಶಾಂತಿ ಯನ್ನು ಬಯಸಿತ್ತು. ಮಗಧದಲ್ಲಿ ನಂದರ ಕಾಲದ ದುರಾಡಳಿತೆಯ ಪರಿ ಣಾಮವನ್ನೆಲ್ಲ ಈಗ ಸ್ವತಂತ್ರ ಅಮಾತ್ಯನಾದ ರಾಕ್ಷಸ ಸರಿಪಡಿಸಲಾರಂಭಿ ಸಿದ. ಬ್ರಾಹ್ಮಣರಿಗೆ ಗೌರವ ಮತ್ತೆ ಸಂದಿತಾದರೂ ಜೈನ ಬೌದ್ಧರಿಗೆ ಯಾವ ಹಿಂಸೆಯೂ ಬಾಧೆಯೂ ಆಗಲಿಲ್ಲ. ಆದರೆ ಮೊದಲಿನ ಪ್ರಾಶಸ್ತ್ಯ, ಪ್ರಾಧಾನ್ಯಗಳು ದೊರೆಯದೆ, ಹಿಂದೆ ಅದು ದೊರೆತಿದ್ದ ನೆನಪಿನ ಗುಂಗಿನಲ್ಲಿ ಅವರು ಒಳಗೊಳಗೇ ಕಸಿವಿಸಿಪಟ್ಟರು ! ಹಲವಾರು ದೇವಾಲಯಗಳು ಜೀರ್ಣೋದ್ಧಾರವಾದವು. ಹಲವು ಹೊಸದಾಗಿ ತಲೆ ಎತ್ತಿದವು. ಅನ್ನ ಸತ್ರಗಳು ನಿರ್ಮಾಣವಾದವು. ದಾನಧರ್ಮಗಳು ಬೆಳೆದವು ಇಂದು ಶರ್ಮ ಆಸ್ಥಾನದ ಜೋಯಿಸನಾಗಿ ನಿಯಮಿತನಾದ.

ಶುಭಮುಹೂರ್ತದಲ್ಲಿ ದೊರೆಯೇ ಸಮಸ್ತ ಪರಿವಾರ ಸಮೇತನಾಗಿ' ದಂಡಿನೊಡನೆ ದಿಗ್ವಿಜಯ ಬೆಳೆಸಿದ. ಪಾಟಲೀಪುತ್ರದಲ್ಲಿ ಮೂಲಬಲ ವನ್ನಿಟ್ಟು, ನಗರ ರಕ್ಷಣೆಗೆ ಅಧಿಕಾರಿಗಳನ್ನು ನಿಯಮಿಸಿ, ಪ್ರದಕ್ಷಿಣಾಕಾರ ವಾಗಿ ಚಂದ್ರಗುಪ್ತ ದಿಗ್ವಿಜಯ ಹೊರಟ ಕಾಮರೂಪ, ಅಂಗ, ವಂಗ, ಕಳಿಂಗ, ಓಢ್ರಕ, ಆಂಧ್ರ, ತುಂಡೀರ, ಪಾಂಡ್ಯ, ಚೇರ, ಚೋಳ, ಮಾಹಿ ಷಕ, ಕುಂತಲ, ಕರವೀರ, ಅವಂತೀ, ಉಜ್ಜಯಿನೀ, ವಿದರ್ಭ, ಸೌರಾಷ್ಟ್ರ, ಗುರ್ಜರ, ಸಿಂಧು ಸೌವ್ವೀರ, ಮೊದಲಾದ ದೇಶಗಳ ಎಲ್ಲ ಅರಸರೂ ಬೇಹರ

ತ್ತಾಗಿ ಚಂದ್ರಗುಪ್ತನ ಸಾಮ್ರಾಟ್‌ಪದವಿಯಡಿಯಲ್ಲಿರಲು ಒಪ್ಪಿ, ಕಪ್ಪ ಕಾಣಿಕೆಗಳನ್ನು ಕೊಟ್ಟರು. ಎಲ್ಲೂ ಕಿಂಚಿತ್ತೂ ರಕ್ತಪಾತವಾಗದುದು ಈ ದಿಗ್ವಿಜಯದ ವೈಶಿಷ್ಟ್ಯವಾಗಿತ್ತು! ಭರತ ಭೂಮಿಯ ಸಸ್ಯಸಂಪತ್ತು, ಜಲಸಂಪತ್ತು, ಭಾಷಾವಿವಿಧತೆ, ಸಂಸ್ಕೃತಿಯ ವಿವಿಧತೆಯ ಸೊಬಗು, ಉಡಿಗೆ ತೊಡಿಗೆ, ರೀತಿನೀತಿಗಳ ವೈಭವವನ್ನು ದೊರೆ ಕಣ್ಣಿಂದ ಕಂಡು, ಆನಂದಿಸುತ್ತಾ, ಅವನಿಗೆ ಇದು ರಾಜಕೀಯ ದಿಗ್ವಿಜಯವೆನಿಸಲೇ ಇಲ್ಲ! ಇದೊಂದು ಸಾಂಸ್ಕೃತಿಕ ಏಕೀಕರಣದ ಮೇಳವೆಂದೇ ಎನಿಸಿತು. ಆಚಾರ್ಯ ಚಾಣಕ್ಯನ ಪವಾಡಗಳನ್ನೂ, ರಾಜಕೀಯ ಸಾಮರ್ಥ್ಯವನ್ನೂ, ಚಂದ್ರ ಗುಪ್ತ ಅವನ ಶಿಷ್ಯನೆಂಬುದನ್ನೂ ಕೇಳಿದ್ದ ದೂರದೂರದ ಅರಸರು ತಾವಾ ಗಿಯೇ ಅವನನ್ನು ಸಮ್ರಾಟನೆಂದು ಸ್ವಾಗತಿಸಿದರು. ಚಾಣಕ್ಯನ ಹೆಸರು ಈ 'ಮಾಂತ್ರಿಕ' ಸಿದ್ಧಿಯನ್ನುಂಟು ಮಾಡಿದ್ದು ರಾಕ್ಷಸನಿಗೆ ಪರಮಾಶ್ಚರ್ಯ ವೆನಿಸಿತು. ರಾಜ್ಯರಾಜ್ಯಗಳ ಸಂಚಾರ ಕಾಲದಲ್ಲಿ ಶೇಖರವಾದ ಬಂಗಾರದ, ನವಮಣಿಗಳ, ಉಡುಗೊರೆಗಳ ಭಾರದಿಂದ ಪಾಟಲೀಪುರದ ಆನೆ, ಕುದುರೆ ಗಳು ಜರ್ಝರಿತವಾದವು. ಯಾವ ಅಧಿಕಾರಿಯೂ ಯಾವುದನ್ನೂ ದುರು ಪಯೋಗಿಸದಂತೆ ಚಾಣಕ್ಯನ ಹೆಸರಿನ ಮಂತ್ರ ಅದನ್ನು ಸಂರಕ್ಷಿಸಿತ್ತು. ಚಾಣಕ್ಯ ತಪೋವನಕ್ಕೆ ಹೊರಟನೆಂಬುದನ್ನು ಯಾವ ಅರಸನೂ ನಂಬಲಿಲ್ಲ! ಅದನ್ನೂ ಒಂದು ತಂತ್ರವೆಂದೇ ಅವರು ಬಗೆದರು!! ರೂಪಾಂತರದಿಂದ, ವೇಷಾಂತರದಿಂದ ಎಲ್ಲಿ ಯಾವಾಗ ಕಾಣಿಸಿಕೊಂಡಾನೋ! ಎಂಬ ಭಯ ವೊಂದು ಕಡೆ! ಅವನ ಗೂಢಚಾರ ಜಾಲ ಎಲ್ಲೆಲ್ಲಿದ್ದು ಯಾವ ಯಾವ ಮಾಹಿತಿಗಳನ್ನು ಸಂಗ್ರಹಿಸುತ್ತಿದೆಯೋ! ಎಂಬ ಎಚ್ಚರವೊಂದು ಕಡೆ! ಹೀಗಾಗಿ ಅಮಾತ್ಯನ ಕೆಲಸ ಹಗುರವಾಯಿತು.

ನಾಲ್ಕೂವರೆ ವರ್ಷ ನಡೆದ ಈ ವಿಜಯಯಾತ್ರೆ ಭಾರತದೇಶದ ಇತಿ ಹಾಸದಲ್ಲೇ ಅಭೂತಪೂರ್ವವೆನಿಸಿತು. ಅವನ ವಿಜಯ ಯಾತ್ರೆಯ ನೆನ ಪಿಗೆ ಅನೇಕ ಬೆಟ್ಟಗಳು "ಚಂದ್ರಗಿರಿ"ಗಳಾದವು; ಅನೇಕ ಊರುಗಳು "ಚಂದ್ರರಾಯಪಟ್ಟಣ''ಗಳಾದವು. "ಚಂದ್ರಗುಪ್ತಿ''ಗಳಾದವು; ನದಿ ಗಳು ''ಚಂದ್ರಭಾಗಾ", "ಚಂದ್ರಾ'' ಆದವು. ದುರ್ಗಗಳು "ಚಂದ್ರ

ಪಟ್ಟಣ'', "ಚಂದ್ರದುರ್ಗ"ಗಳಾದವು. ಯಾವ ಊರೂ "ಚಾಣಕ್ಯ ನಗರ'' ವೆನಿಸವೆ, ''ಚಾಣಕ್ಯ ದುರ್ಗ''ವೆನಿಸದೆ, ಎಲ್ಲ ''ಚಂದ್ರ''ಮಯವಾದು ದರ ಮೂಲ ಕಾರಣವನ್ನು ದೊರೆ ಅರಿಯದೇ ಹೋಗಲಿಲ್ಲ! ಪದೇ ಪದೇ ಮನಸ್ಸು ಗುರುವಿನ ಪಾದದರ್ಶನಕ್ಕೆ, ಗುರು ಸಂಸರ್ಗಕ್ಕೆ ಆಶಿಸಿತು.

ಪಟ್ಟ ಮಹಿಷಿಯು ಮಾತ್ರ ದೊರೆಯೊಡನೆ ಈ ವಿಜಯಯಾತ್ರೆ ಯಲ್ಲಿ ಪಾಲ್ಗೊಂಡಳು. ವಿದ್ಯುಲ್ಲೇಖೆ ಪಾಟಲೀಪುರದಲ್ಲಿರಲು ಇಷ್ಟಪಡದೆ ಮಧುರೆಯ ಸಂಕರ್ಷಣಾಲಯದ ಬಳಿ ಹೊಸದಾಗಿ ನಿರ್ಮಿತವಾದ ಅರಮನೆ ಯಲ್ಲಿರುತ್ತಾ ವಾಸುದೇವಭಟ್ಟಾರಕರಿಂದ ಪಾಂಚರಾತ್ರಶಾಸ್ತ್ರವನ್ನೂ ಪೂರ್ಣವಾಗಿ ಅಧ್ಯಯನ ಮಾಡಿದ್ದಳು. ಆವಳ ವಿಷ್ಣುಭಕ್ತಿ ನಾಲ್ಕೂ ವರೆ ವರ್ಷದಲ್ಲಿ ನಿಸ್ಸೀಮವಾಗಿ ಬೆಳೆದಿತ್ತು. ಆವಳ ಸೌಜನ್ಯ, ವಿದ್ಯಾ ಪ್ರೇಮ, ದೈವಭಕ್ತಿಗಳಿಗೆ ಜನ ಮಾರುಹೋಗಿದ್ದರು.........

...ದೊರೆಯ ದಿಗ್ವಿಜಯ ಯಾತ್ರೆ ಮುಗಿದು, ದಂಡು ಪಾಟಲೀಪುತ್ರ ವನ್ನು ಮತ್ತೆ ಸೇರುವ ದಿನ ಹತ್ತಿರ ಬರುತ್ತಾ ವಿದ್ಯುಲ್ಲೇಖೆ ಪಾಟಲೀ ಪುರಕ್ಕೇ ಮರಳಿದ್ದಳು. ದೊರೆಗೆ ವೈಭವೋಪೇತವಾದ ಸ್ವಾಗತ ನಡೆಯಿತು! ಬ್ರಾಹ್ಮಣರ ಅಗ್ರಪಂಕ್ತಿಯಲ್ಲಿ ಸ್ವಯಂ ಚಾಣಕ್ಯನೇ ಬಂದು ನಿಂತು ದೊರೆ ಯನ್ನು ಹರಸಿದ! ಚಂದ್ರಗುಪ್ತ ಗುರುಪಾದಕ್ಕೆ ನಮಸ್ಕರಿಸಿ ಎದ್ದಾಗ ಆ ಪಾದಗಳು ಅವನ ಕಣ್ಣೀರಿನಿಂದ ತೊಯ್ದಿದ್ದವು! "ವೃಷಲ! ಮುಂದಿನ ಪೂರ್ಣಿಮೆಯ ದಿನ ನಿನ್ನ ಕೌಮುದೀ ಮಹೋತ್ಸವದ ಬಯಕೆ ನೆರವೇರಲಿ!'' ಎಂದು ಚಾಣಕ್ಯ ಹಳೆಯದನ್ನು ನೆನೆಸುವಂತೆ ಸೂಚಿಸಿದ. "ಹೌದು, ಗುರುಗಳೇ! ಆದರೆ ಕಪಟಕಲಹಕ್ಕೆ ನೀವಿರುವುದಿಲ್ಲವಲ್ಲ!'' ಎಂದು ದೊರೆಯೂ ಹಾಸ್ಯ ಚಟಾಕಿ ಹಾರಿಸಿದ. ಉತ್ಸವ ನಡೆಯಿತು. ಜನ ನಲಿದರು. ಎಲ್ಲೆಡೆ ಹರ್ಷ, ಉತ್ಸಾಹ, ಶಾಂತಿ ನೆಲೆಸಿತ್ತು.

  

ಚಂದ್ರಗುಪ್ತ ಸಮ್ರಾಟನಾಗಿ ಈಗ ಹತ್ತು ವರ್ಷಗಳು ಸಂದಿವೆ. ದೊರೆಗೆ ರೂಪಾವತಿಯಲ್ಲಿ ಮಗು ಹುಟ್ಟಿ ಹತ್ತು ತಿಂಗಳಾಗಿವೆ. ಅವನಿಗೆ ಬಿಂದುಸಾರನೆಂದು ಪಟ್ಟದರಾಣಿ ಅನ್ಯಮತೀಯ ಗುರುಗಳ ಸಲಹೆಯಂತೆ ದೊರೆಯನ್ನೊಡಂಬಡಿಸಿ ಹೆಸರಿಟ್ಟಳು! ವಿದ್ಯುಲ್ಲೇಖೆಗೆ ಇದು ಹಿಡಿಸಲಿಲ್ಲ. ಮಗುವಿಗೆ ಆಚಾರ್ಯನ ಹೆಸರನ್ನೇ ಇಡಬೇಕೆಂದು ವಿನಯ ಪೂರ್ವಕ ವಾಗಿಯೇ ನಿರ್ಬಂಧಿಸಿದಳು. ಇದರಿಂದ ರಾಣಿಯರಲ್ಲಿ ವೈಮನಸ್ಯವೇ ಹೆಚ್ಚಾಯಿತು. "ನಿನ್ನದೇನು ಇಲ್ಲಿ ದರ್ಬಾರು ?'' ಎನ್ನುವಂತೆ ರೂಪಾ ವತಿ ಒರಟಾಗಿ ನುಡಿದು ಬಿಟ್ಟಳು. ವಿದ್ಯುಲ್ಲೇಖೆಯನ್ನು ದೊರೆ ನೋಡು ವುದೂ ಅಪರೂಪವಾಯಿತು. ಅವಳಿಗೂ ಇತ್ತ ಮಕ್ಕಳಾಗಲಿಲ್ಲ! ಆ ಇನ್ನೊಬ್ಬಳಿಗೂ ಸಹ! ಇಂದುಶರ್ಮ ಜ್ಯೋತಿಷ ಲೆಕ್ಕ ಹಾಕಿ ವಿದ್ಯು ಲ್ಲೇಖೆಗೆ ಸಂತಾನ ಭಾಗ್ಯವಿಲ್ಲವೆಂದ. ಅರಮನೆಯ ವೈದ್ಯನೂ, ಪರೀಕ್ಷಾ ನಂತರ ಇದೇ ಭವಿಷ್ಯ ನುಡಿದ.

ಅವಳು ಕೃಷ್ಣೋತ್ಸವದ ನೆಪ ಮಾಡಿ ಸಂಕರ್ಷಣಾಲಯಕ್ಕೆ ಮಧು ರೆಗೆ ಹೊರಟವಳು ಆರು ತಿಂಗಳಾದರೂ ಊರಿಗೆ ಮರಳಲಿಲ್ಲ. ಉತ್ಸವಕ್ಕೆ ಚಾಣಕ್ಯನೂ ಬಂದಿದ್ದ. ಚಂದ್ರಗುಪ್ತನಿಗೂ ಆಹ್ವಾನ ಹೋಗಿತ್ತು. ಜನ್ಮಾಷ್ಟಮಿ ಸಂಜೆ ವಿದ್ಯುಲ್ಲೇಖೆ ಇರುವೆಡೆಗೆ ಶಿಷ್ಯರೊಂದಿಗೆ ಚಾಣಕ್ಯನೇ ಬಂದು ಕಾಣಿಸಿಕೊಂಡ. ಅವಳು ನಮಸ್ಕರಿಸಿ, ತಲೆತಗ್ಗಿಸಿ, ಕಣ್ಣಂಚಿನ ನೀರನ್ನು ಗುರುವಿಗೆ ಕಾಣಗೊಡಬಾರದೆಂದು ಬಹುವಾಗಿ ಯತ್ನಿಸಿದಳು. ಚಾಣಕ್ಯ ಇದನ್ನೆಲ್ಲ ಗಮನಿಸಿದ ;

ಚಾಣಕ್ಯ : ''ಮಗಳೇ ! ಸುಖವಾಗಿರುವೆಯಾ ?''

ವಿದ್ಯುಲ್ಲೇಖೆ : ( ಹೌದೆಂಬಂತೆ ತಲೆಯಾಡಿಸಿದಳು. ಹಿಂದಿನ ಪ್ರಸನ್ನತೆ, ಸಹಜ ತುಂಟತನಪ್ರವೃತ್ತಿ, ನೆಮ್ಮದಿಗಳು ಅವಳ ಮುಖದಲ್ಲಿ ಕಾಣಬರಲಿಲ್ಲ! ಚಾಣಕ್ಯ ಗಮನಿಸಿದ.)

ಚಾಣಕ್ಯ : "ನಿನಗೆ ಮಕ್ಕಳಾಗದ ಚಿಂತೆ ಆಗಿರುವುದು ಸಹಜ. ದೊರೆ ಸೌಖ್ಯವಷ್ಟೆ! ನಮ್ಮ ಆದರ್ಶ ಮಾರ್ಗದಲ್ಲಿ ಆಳುತ್ತಿರುವನಷ್ಟೆ?"

ವಿದ್ಯುಲ್ಲೇಖೆ ; "ಗುರುವರ್ಯ ! ಮಕ್ಕಳನ್ನು ಕರುಣಿಸುವವನು ದೇವರು. ಅವನಿಗೆ ಬೇಡವಾದರೆ ನಾವು ಬೇಸರಿಸಿ ಮಾಡುವುದೇನು ? ನನಗೆ ಪುಟ್ಟ ಕೃಷ್ಣವಿಗ್ರಹವನ್ನು ಅನುಗ್ರಹಿಸಿದ್ದೀರಿ. ಅದೇ ನನ್ನ ಮಗು. ದೊರೆಯನ್ನೂ ಮಗುವನ್ನಾಗಿ ನೋಡಿಕೊಳ್ಳಬೇಕೆಂದೂ ತಾವಿತ್ತ ಆಣತಿ ಯನ್ನು ನಾನು ಮರೆತಿಲ್ಲ. ದೊರೆಗಳಿಗೆ ನೋಡುವವರೂ, ಸಲಹುವವರೂ ಬೇರೆ ಇರುತ್ತಾರೆ. ನಾನಿದನ್ನು ಪಾಲಿಸಲಾಗಿಲ್ಲ" (ಎನ್ನುತ್ತಾ ದುಃಖ ಉಮ್ಮಳಿಸಿತು. ಮುಖ ತಿರುಗಿಸಿ ತಡೆಯಲು ಯತ್ನಿಸಿದಳು.)

ಚಾಣಕ್ಯ ; "ಅರಮನೆಯಲ್ಲಿ ಅನ್ಯಮತೀಯರ ಬಲ, ಪ್ರಾಬಲ್ಯ ಮತ್ತೆ ಬೆಳೆಯುತ್ತಿದೆಯಂತೆ! ನಿಜವೆ ?"

ವಿದ್ಯುಲ್ಲೇಖೆ : "ಸರ್ವಜ್ಞರು ತಾವೇ ಹೇಳಬೇಕು! ದೊರೆಯ ಮಗುವಿಗೂ ನಿಮ್ಮ ನೆನಪಿನ ಹೆಸರು ಬೇಡವಾಯಿತು, ರಾಣೀ ಪರಿವಾರಕ್ಕೆ! ಉಪ್ಪುಹುಳಿ ಇಲ್ಲದ ಹೆಸರು ಯಾರು ಇಟ್ಟರೋ ? ಏನರ್ಥವೋ ? ಯಾವ 'ಬಿಂದು'ವಿಗೆ ಯಾವನು 'ಸಾರ'ನೋ ? ದೇವರೇ ಹೇಳಬೇಕಷ್ಟೆ? ದೊರೆಗೆ ಅವಕಾಶ ಸಿಕ್ಕಾಗಲೆಲ್ಲ ಹೇಳಿದೆ– ಗುರುದ್ರೋಹವಾಗಬಾರದು! ಸನಾತನ ಮೌಲ್ಯಗಳ ರಕ್ಷಣೆ, ದೊರೆಯ ಹೊಣೆ, ಎಂದು. ಅವರು ಹೌದೆನ್ನುತ್ತಾರೆ. ಆದರೆ ಅರಮನೆಗೆ ಬಂದು ಹೋಗುವ ಅನ್ಯಮತದ ಗುರುಗಳ ಸಂಖ್ಯೆ ಹೆಚ್ಚಿದೆ..... ಅಮಾತ್ಯರು ಮತ್ತೆ ನಿಸ್ಸಹಾಯಕರು! ಬ್ರಾಹ್ಮಣರು ಬಂದು ಹೋಗುವುದನ್ನು ತಾವೇ ಕಡಿಮೆ ಮಾಡಿದ್ದಾರೆ. ಬಂದರೆ ಅವರಿಗೂ ಉಳಿದ ವರಿಗೂ ಒಂದೇ ಗೌರವವಾದಾಗ ಬ್ರಾಹ್ಮಣರು ಸಹಿಸಲಿಲ್ಲ. ಇಂದುಶರ್ಮರೂ ಅತೃಪ್ತರಾಗಿದ್ದಾರೆ. ನನಗೇ ಅರಮನೆ ಬೇಡವಾಗಿದೆ....." (ಅಳುತ್ತಾಳೆ.)

ಚಾಣಕ್ಯ ; "ಇದನ್ನೆಲ್ಲ ನಾನು ಬಲ್ಲೆ. ಇಂದುಶರ್ಮ ತಿಳಿಸಿ ದ್ದಾನೆ....(ನಿಟ್ಟುಸಿರಿಟ್ಟು)– ಸಿಂಹವು ನರಿಗೆ ಅಡವಿಯೊಡೆತನದ ಪಟ್ಟಗಟ್ಟಿ

ದಂತಾಯ್ತು!! ಆದರೇನು? ನಾನೀಗ ಸಾಮಾನ್ಯ ಪ್ರಜೆ ಮಾತ್ರ. ಹಿಂದಿನ ರಾಜಗುರುವಲ್ಲ! ಕೊನೆಯದಾಗಿ ಬುದ್ಧಿ ಹೇಳಿ ನೋಡುವೆ. ಮಗನೇ ನೀನು ದುಡುಕಬಾರದು ಈ ದೇಶ ಮತ್ತೆ ನಿನ್ನ ಸೇವೆಯನ್ನು ಬಯಸೀತು.''

  

ಸೂರ್ಯಾಸ್ತಮಾನಕ್ಕೆ ಸರಿಯಾಗಿ ದೊರೆಯೂ ಮಿತಸೈನ್ಯದೊಡನೆ ಮಧುರೆಯ ಉತ್ಸವಕ್ಕೆ ಬಂದ. ಅಮಾತ್ಯ ಬರಲಿಲ್ಲ. ಏನೋ ಕಾರಣ ಹೇಳಿ ಪಾಟಲೀಪುರದಲ್ಲೇ ಉಳಿದ.

ಏಕಾಂತದಲ್ಲಿ ಚಂದ್ರಗುಪ್ತ ಆಚಾರ್ಯನನ್ನು ಕಂಡು ಪಾದಾಭಿವಂದನ ಮಾಡಿದ. ದೊರೆಯ ಮುಖ ನೋಡಿ ಚಾಣಕ್ಯನಿಗೆ ಆತಂಕವಾಯಿತು!

ಚಾಣಕ್ಯ ; "ಕುಮಾರ! ಏನಿದು ನಿನ್ನ ಮುಖದಲ್ಲಿ ಈ ವಿಕಾರ? ನಿನ್ನ ಚರ್ಮವೇಕೆ ಹೀಗೆ ಕಪ್ಪು ಕಪ್ಪು ಚುಕ್ಕೆಗಳಾಗಿವೆ? ಮೈ ಕೈಯ್ಯಲ್ಲಿ ಈ ನರಗಳ ಗಂಟುಗಳೇಕೆ? ಯಾರದಾದರೂ ಅಭಿಚಾರ ಕೃತ್ಯವೋ? ಅನಾರೋಗ್ಯವೋ? ಚಿಕಿತ್ಸೆ ನಡೆಯಲಿಲ್ಲವೆ?''

ದೊರೆ ; ''ಎಲ್ಲ ಆಯಿತು, ಗುರುವರ್ಯ! ಏನು ಖಾಯಿಲೆಯೆಂದೇ ವೈದ್ಯರಿಗೆ ತಿಳಿಯುತ್ತಿಲ್ಲ. ಮಧುಮೇಹವೂ ಇದೆಯೆನ್ನುತ್ತಾರೆ. ನನಗೆ ಜೀವನದಲ್ಲೇ ಜುಗುಪ್ಸೆ ಬರುತ್ತಿದೆ. ಅತ್ತ, ರಾಷ್ಟ್ರದಲ್ಲೂ ಅನಾವೃಷ್ಟಿಯಾಗಿದೆ ಮುಂದೆ ಹನ್ನೆರಡು ವರ್ಷಕಾಲ ಮಳೆಯ ಯೋಗವೇ ಇಲ್ಲವೆನ್ನುತ್ತಾರೆ. ಯಾವ ಪಾಪಕ್ಕೆ ಈ ಶಿಕ್ಷೆಯೋ ತಿಳಿಯುತ್ತಿಲ್ಲ."

ಚಾಣಕ್ಯ ; "ನೀನು ವೇದನಿಂದೆ ಮಾಡಲಿಲ್ಲವಷ್ಟೆ? ಯಾವ ವೈದಿಕನೂ ನಿನಗೆ ಶಾಪ ಹಾಕಲಿಲ್ಲವಾದರೆ ಸರಿ. ವಿನಾಕಾರಣ ಈ ಉತ್ಪಾ

ತಗಳೇಕೆ ಕಾಣುತ್ತಿವೆ. ನನಗೇಕೆ ಹೇಳಿ ಕಳುಹಲಿಲ್ಲ ? ನಿನಗೆ ಪುತ್ರೋತ್ಸವಾಯಿತಂತೆ ? ಶುಭ ಸಮಾಚಾರ ನನಗೆ ತಿಳಿಸಬೇಡವೆ ?"

ದೊರೆ ; "ಗುರುವೆ, ಇಷ್ಟು ಸಣ್ಣ ಸಮಾಚಾರಕ್ಕೆ ತಪಸ್ವಿಗಳಿಗೇಕೆ ಶ್ರಮಕೊಡಬೇಕೆಂದು ಸುಮ್ಮನಿದ್ದೆ. ನಾನು ತಮ್ಮ ಆದೇಶದಂತೆ ಎಲ್ಲರನ್ನೂ ಸಮವಾಗಿಯೇ ಕಾಣುತ್ತಿರುವೆ. ಉತ್ಸಾಹಕ್ಕೆ ವಿಶೇಷ ಕಾರಣವಿದ್ದರೆ ಪೂಜ್ಯರು ತಿಳಿಸಬೇಕು.''

ದೊರೆಯ ಮಾತಿನಲ್ಲಿ ಚಾಣಕ್ಯ ಹೊಸ ಜಾಡೊಂದನ್ನು ಕಂಡು ವಿಸ್ಮಿತನಾದ ! ಅವನಿಗೇನೋ ಹೊಣೆಯಿತು ! ದೊರೆಗೆಂದ!

ಚಾಣಕ್ಯ : "ಕುಮಾರ ! ನೀನೀಗ ಬದಲಾದ ಚಂದ್ರಗುಪ್ತನಾಗಿರುವೆ ! ಎಲ್ಲರನ್ನೂ ಸಮಾನವಾಗಿ ಕಾಣು ಎಂದದ್ದು ಪ್ರಜೆಗಳನ್ನು ಕುರಿತು. ಎಲ್ಲ ಧರ್ಮಗಳ ಬಗೆಗಲ್ಲ ! ಆಸ್ತಿಕ-ನಾಸ್ತಿಕ ಮತಗಳೆಲ್ಲ ಒಂದೇ ಆಗಲಾರವು ! ಅವರವರ ಮನಕ್ಕೆ ಬಂದ ಧರ್ಮಗಳನ್ನು ಜನ ಆಚರಿಸುವುದರಲ್ಲಿ ದೊರೆ ಸಮನಾಗಿರಬೇಕೆಂಬುದೂ ಒಂದಷ್ಟು ಸರಿಯಾದರೂ, ಜೀವನವನ್ನು ಪೋಷಿಸಿ, ಬೆಳೆಸಿ, ಸಮೃದ್ಧವನ್ನಾಗಿಸುವ ಮೌಲ್ಯಗಳನ್ನು ಎತ್ತಿ ಹಿಡಿಯುವ ಧರ್ಮ ರಾಜನಿಗೆ ತುಂಬಾ ಆವಶ್ಯಕ. ಇದನ್ನು ಅವನು ಬೆಳೆಸಬೇಕು. ನನ್ನ ಬೋಧೆಯನ್ನು ನೀನೀಗ ತಿರುವುಮುರುವು ಮಾಡಿ, ನನಗೇ ಒಪ್ಪಿಸುತ್ತಿರುವುದರ ಹಿಂದೆ ಏನೋ ನಡೆದಿದೆಯೆಂದು ಕಾಣುತ್ತದೆ. ನನ್ನ ಉಪದೇಶ ಮತ್ತೆ ನಿನಗೆ ಅವಶ್ಯವಾದರೆ ಖಂಡಿತ ಲಭ್ಯವಾಗುವುದು. ಬೇಡವಾದರೆ ಮೇಲೆ ಬಿದ್ದು ಬಂದು ಹೇಳಲಾರೆ !"

ದೊರೆ : "ಗುರುಗಳು ನನ್ನ ವಿಷಯದಲ್ಲಿ ಕೋಪಗೊಂಡಂತಿದೆ ! ತಾವೇಕೆ ನನ್ನನ್ನು ಬಿಟ್ಟು ತಪೋವನಕ್ಕೆ ತೆರಳಿದಿರಿ ? ರಾಜ್ಯಕ್ಕೆ ಅಶುಭ ಅಂದೇ ಅಡರಿರಬೇಕು ! ನನ್ನ ಆರೋಗ್ಯ, ಪ್ರಣಯಸೌಖ್ಯ, ಎರಡಕ್ಕೂ ಕುತ್ತು ಬಂದಿರುವುದಲ್ಲದೆ, ನನಗೆ ಬುದ್ಧಿಯೂ ಸರಿಯಾಗಿಲ್ಲವೇನೋ !

ತಿಳಿದಷ್ಟರಲ್ಲಿ ನ್ಯಾಯವಾದುದನ್ನೇ ಆಚರಿಸುತ್ತಿರುವೆ. ತಾವು ಖಂಡಿತ ಉಪದೇಶ ನೀಡಬೇಕು. ನನ್ನನ್ನುದ್ಧರಿಸಬೇಕು."

ಚಾಣಕ್ಯನು ಶಿಷ್ಯನ ಈ ವಿನಯಕ್ಕೂ ಪ್ರಾಮಾಣಿಕತೆಗೂ ಮೆಚ್ಚಿ, ಮತ್ತೆ ಅವನನ್ನು ತಿದ್ದುವ ಅವಕಾಶ ಸಿಕ್ಕದ್ದಕ್ಕೆ ಹರ್ಷಿಸಿದನು.

ಚಾಣಕ ; "ಇಂದು ರಾತ್ರಿ ಶ್ರೀಕೃಷ್ಣ ಜನನೋತ್ಸವ ನೆರವೇರಲಿ. ಬೆಳಗಿನ ಝಾವ ನಾಲ್ಕು ಹೊಡೆಯುವ ಹೊತ್ತಿಗೆ ಏಕಾಂತದಲ್ಲಿ ಇಬ್ಬರೂ ಸಂಧಿಸುವ ಏರ್ಪಾಡಾಗಲಿ."

ದೊರೆ ; ''ತಮ್ಮ ಚಿತ್ತದಂತೆ ಆಗಲಿ."

ಗುರು ಶಿಷ್ಯರು ಅಗಲಿದರು. ಗೊತ್ತಾದ ವೇಳೆಗೆ ದೊರೆಯೂ ಗುರುವೂ ಸಂಕರ್ಷಣಾಲಯದ ಅತಿಥಿಶಾಲೆಯ ಅಂಗಳದಲ್ಲಿ ಭೇಟಿಯಾದರು. ದೊರೆಯ ಪರಿವಾರ ದೊರೆಯನ್ನಲ್ಲಿ ಬಿಟ್ಟು ಚದುರಿದರು.

  

ದೊರೆ ; ''ಗುರುವೆ ? ಪ್ರಜಾಕ್ಷೇಮದ ಮೊದಲ ಹೆಜ್ಜೆಯಾಗಿ ನಾನೇನು ಮಾಡಬೇಕು ?''

ಚಾಣಕ್ಯ ; "ವರ್ಣಾಶ್ರಮ ಧರ್ಮಗಳನ್ನು ಸರಿಯಾಗಿ ಪಾಲಿಸಿ, ಜನರೂ ಪಾಲಿಸುವಂತೆ ನೋಡಬೇಕು. ಆಗ ಮಾತ್ರ ವ್ಯವಸ್ಥೆ ಎಂಬುದು ನಿಲ್ಲುವುದು. ವೇದವೇ ವ್ಯವಸ್ಥೆಗೆ ಮೂಲ. ಅವರವರ ಒಲವಿನ ವೃತ್ತಿ ಅವರವರಿಗೆ ಸಿದ್ಧವೇ ಇರುವುದಷ್ಟೆ. ಯಾವ ರಾಷ್ಟ್ರದಲ್ಲಿ ಜನರಿಗೆ ವೃತ್ತಿ ತೃಪ್ತಿ ಇಲ್ಲವೋ ಅಲ್ಲಿ ಕು-ವ್ಯವಹಾರ ತಪ್ಪದು."

ದೊರೆ ; (ತಲೆಯಾಡಿಸುತ್ತ) ; "ಆಚಾರ್ಯ ! ನಾನೇ ಸವರ್ಣ ಕ್ಷತ್ರಿಯನಲ್ಲ ಎಂದು ನೀವೇ ಹೇಳುತ್ತೀರಿ ! ಅಂಥವನು ಉಳಿದವರಿಗೆ ವರ್ಣ ನಿಯಮ ಹೇಳುವುದು ಹೇಗೆ ?"

ಚಾಣಕ್ಯ : "ಎಲೋ ವೃಷಲ! ನಿನ್ನನ್ನೆಂದು ಕೈಗೆತ್ತಿಕೊಂಡೆನೋ, ನಿನ್ನ ಸಾಮ್ರಾಟ್ ಪದವಿಗೆ ಕಂಟಕರಾದ ನಂದರನ್ನು ಎಂದು ಕೊಂದೆನೋ, ಅಂದೇ ನೀನು ಕ್ಷತ್ರಿಯನಾದೆ. ಆಚಾರ್ಯ ಚಾಣಕ್ಯ ಇದನ್ನೊಪ್ಪಿದ ಬಳಿಕ ಇನ್ನೂ ಸಂದೇಹವೆ ? ಶಕ್ಯವಿದ್ದಷ್ಟು, ತಾವೇ ಉಳಿದ ವರ್ಣಸ್ಥಿತರನ್ನು ಪೋಷಿಸು. ಅತಿಕ್ರಮಣಕಾರರನ್ನು ಪತ್ತೆ ಹಚ್ಚು. ಪರೀಕ್ಷಿಸು. ದಂಡ್ಯರನ್ನು ದಂಡಿಸು. ಸಮರ್ಥ ಶಾಸ್ತ್ರಜ್ಞರನ್ನು ಉಪಯೋಗಿಸಿ ನಿರ್ಣಯಕ್ಕೆ ಬಾ....."

ದೊರೆ : "ಪ್ರತಿಯೊಂದು ಸಂಕರ ಪ್ರಸಂಗವನ್ನೂ ನಾನು ತಡೆಯಬಲ್ಲೆನೆ ? ತಿಳಿದವರೇ ಕೆಲವರು ಈ ವರ್ಣಗಳೂ ಮಾನವ ನಿರ್ಮಿತವೆನ್ನುತ್ತಾರೆ! ದೇವರೂ ಮಾನವ ಸೃಷ್ಟಿಯೇ ಎಂಬುದು ಅವರ ವಾದ. ದೇವರೇ ವರ್ಣನಿಯಮ ಮಾಡಿರುವನಾದರೆ ಉಳಿದ ದೇಶಗಳಲ್ಲಿ ಅವೇಕೆ ಇಲ್ಲ ?''

ಚಾಣಕ್ಯ : "ಓಹೊ ! ಅವೈದಿಕರ ಬೋಧೆ ಭದ್ರವಾಗಿ ಬೇರು ಬಿಟ್ಟಂತಿದೆ! ಕೇಳು. ವರ್ಣಧರ್ಮವೆಂಬುದು ಗಿಡಮರ ಪಕ್ಷಿ ಗ್ರಹ ಪ್ರಾಣಿಗಳಿಗೂ ಉಂಟು. ತೆಂಗಿನ ಮರವನ್ನು ಬ್ರಾಹ್ಮಣನೆಂದೂ ಈಚಲವನ್ನು ಚಂಡಾಲನೆಂದೂ, ಅಶ್ವತ್ಥವನ್ನು ರಾಜನೆಂದೂ ಕೇಳಿಲ್ಲವೆ ? ಸಿಂಹವು ಪ್ರಾಣಿ ರಾಜನಾದರೆ, ನಾಯಿ ಶೂದ್ರವರ್ಣ. ಪಕ್ಷಿಗಳಲ್ಲೂ ಹೀಗೆ ಗುಣ ಕರ್ಮದಿಂದಲೇ ಗುರುತು ಹಚ್ಚಬರುತ್ತದೆ. ಹಂಸ-ಕಾಗೆ-ಗೂಬೆ ಇತ್ಯಾದಿ. ಮನುಷ್ಯರಲ್ಲಿಯೂ ಬೇರೆ ಬೇರೆ ದೇಶಗಳಲ್ಲಿ ಒಂದೊಂದು ಬಗೆಯ ವರ್ಣ ನಿಯಮಗಳಿದ್ದುದನ್ನು ಆ ಆದೇಶಗಳ ಇತಿಹಾಸಗಳೇ ತಿಳಿಸುತ್ತವೆ. ಮಿಗುಪ್ತರಲ್ಲಿ ಏಳು ವರ್ಣಗಳೂ, ಪ್ರಾಚೀನ ಯವನರಲ್ಲಿ ಐದು ವರ್ಣಗಳೂ ಇದ್ದವು. ಕಿರಾತ, ಹೂಣ, ಪುಲಿಂದ, ಶಬರ, ಬರ್ಬರ, ಮ್ಲೇಚ್ಛ ಗಣ

ಗಳೆಂಬ ಇತರರ ವರ್ಗೀಕರಣವೇ ಒಂದೊಂದು ಬಗೆಯ ವೃತ್ತಿಗಳ ನಿರ್ದೇಶನ ವೆಂದು ತಿಳಿ. ಇವರಲ್ಲೇಕೆ ಬ್ರಾಹ್ಮಣರಿಲ್ಲವೆಂಬ ಪ್ರಶ್ನೆ, ಶೂದ್ರರಲ್ಲೇಕೆ ಬ್ರಾಹ್ಮಣರಿಲ್ಲವೆಂಬಂತೆ ಹಾಸ್ಯಾಸ್ಪದ. ಸ್ವಯಂ ಬುದ್ಧಿಯಿಲ್ಲದವರು ಅದಿ ರುವವರ ಆಶ್ರಯ ಪಡೆಯಬೇಕು. ಇದ್ದುದೇ ಬುದ್ಧಿ ಶ್ರೇಷ್ಠವೆಂಬ ವಾದದ ಪರಿಣಾಮ ಬೇರೆಯಾಗುತ್ತದೆ. ಮೇಲಾಗಿ, ಇತರ ಪ್ರದೇಶಗಳ ಜನ ಬುದ್ಧಿಭ್ರಷ್ಟರಾಗಿ ವರ್ಣತ್ಯಾಗ ಮಾಡಿದರೆ ನಾವೇಕೆ ಮಾಡಬೇಕು? ಎಲ್ಲ ಕಡೆಯೂ ಒಂದೇ ನಿಯಮವೆನ್ನುವುದು ಪ್ರಕೃತಿಗೂ ವಿರುದ್ಧ ! ಜಗತ್ತಿನ ಎಲ್ಲೆಡೆ ಒಂದೇ ವೇಳೆಗೆ ಸೂರ್ಯೋದಯ ಸೂರ್ಯಾಸ್ತಗಳಾಗುವುವೆ ? ಯೋಚಿಸು. ಒಂದೇ ಮಾನವ ಕುಲ, ಒಂದೇ ದೇವರು, ಒಂದೇ ಧರ್ಮ ಎನ್ನುವ ತರ್ಕ – ಒಂದೇ ಗುಡಿ, ಒಂದೇ ಜನಾಂಗ ಶ್ರೇಷ್ಠತೆ ಎಂಬ ಮತಾಂಧತೆಯ ಕೂಪಕ್ಕೆ ತುತ್ತಾಗಬೇಕಾಗುತ್ತದೆ ! ಯೋಚಿಸಿ ನೋಡು!! ಮಾನವ ಕುಲ ಒಂದೇ ಆದರೂ, ಭಿನ್ನತೆ, ವೈವಿಧ್ಯ ಇದ್ದೇ ಇವೆ. ಈ ಭಿನ್ನತೆಯಲ್ಲಿ ಏಕತೆ ಎಂದರೆ ಸರಿ. ಭಿನ್ನತೆಯ ಸ್ವಾತಂತ್ರ್ಯಕ್ಕೆ ಧಕ್ಕೆ ಬರುವ ಏಕತೆಯು ರೋಗವೆನಿಸುತ್ತದೆ. ವರ್ಣ ನಿಯಮ ಈ ಭಿನ್ನತೆಯನ್ನು, ತನ್ಮೂಲಕ ಏಕತೆಯನ್ನೂ ರಕ್ಷಿಸುವ ದೈವ ತಂತ್ರ! ಪ್ರಾಣಿರಾಶಿ ಒಂದೇ ಆದರೂ ಎಷ್ಟೊಂದು ಜಾತಿ, ನೋಡು ! ಧಾನ್ಯರಾಶಿ ಒಂದೇ ಆದರೂ. ಎಷ್ಟೊಂದು ಧಾನ್ಯ ವೈವಿಧ್ಯ, ಗೊತ್ತಿಲ್ಲ ? ಹಾಗೇ ಮಾನವರಲ್ಲೂ ಯಾವ ವರ್ಣವೂ ಶ್ರೇಷ್ಠ, ನಿಕೃಷ್ಟ ತಾನೇ ಆಗಲಾರದು! ಎಲ್ಲ ಸಮಾಜಕ್ಕೆ ಬೇಕು. ಸಮಾಜಕ್ಕೆ ಹಾನಿಕರವಾದ ವೃತ್ತಿಗೆ ಈ ಮಾತು ಅನ್ವಯವಿಲ್ಲ. ಅವರನ್ನು ದೊರೆ ಉಗ್ರವಾಗಿ ದಂಡಿಸಬೇಕು.''

ದೊರೆ : "ರಾಜ ಶಾಸನ ಉಗ್ರವಾದರೆ, ದಂಡ ಹೆಚ್ಚಿದರೆ ಪ್ರಜಾ ಕ್ಷೋಭೆಯಾಗುತ್ತದೆ. ಆಚಾರ್ಯರೆ ! ರಾಜ, ಪ್ರಜೆಗಳಿಗೆ ಪ್ರಿಯನಾಗ ಬೇಡವೆ ? ಪ್ರಜಾ ಸ್ವಾತಂತ್ರ್ಯದಲ್ಲಿ ಸಿಕ್ಕ ಕಡೆಯೆಲ್ಲ ಅವನು ತಲೆ ಹಾಕಿದರೆ ಅಪ್ರಿಯನಾಗುತ್ತಾನೆ, ಅಲ್ಲವೆ? ಅಪ್ರಿಯ ದೊರೆಯ ಸಮರ್ಥನೀಯ ಶಾಸನಗಳೂ ಆಗ ನಡೆಯುವುದಿಲ್ಲ ಗುರುಗಳೆ! ಜನರೊಡನೆಯೇ ದೊರೆ ಹೋಗಬೇಕಾಗುತ್ತದೆ !!''

ಚಾಣಕ್ಯ : "ಎಲ, ಎಲ ! ನನಗೇ ಅರ್ಥಶಾಸ್ತ್ರವನ್ನು ಕಲಿಸ ಬರುವೆಯ !! ಕೇಳು. ರಾಜನ ಮೊದಲ ಕರ್ತವ್ಯ ಧರ್ಮಶಾಸನದ ಅನು ಷ್ಠಾನ. ಜನಹಿತಕ್ಕೆ ಅವನು ಬದ್ಧನೇ ಹೊರತು ಜನಪ್ರಿಯತೆಗಲ್ಲ ! ಬಹು ಜನರು ಸಮಾಜ ದ್ರೋಹ ಕೃತ್ಯಗಳನ್ನೇ ಬಯಸಿ, ಶೀಘ್ರವಾಗಿ ಮೇಲೆ ಬರಲು ಯತ್ನಿಸುವುದು ಎಲ್ಲ ಕಾಲದ ಪ್ರಜಾ ದೌರ್ಬಲ್ಯ. ಇಂಥ ವನ್ನು ಪ್ರೋತ್ಸಾಹಿಸಿಯೋ, ಕಣ್ಮುಚ್ಚಿ ಅನುಮೋದಿಸಿಯೋ ದೊರೆ ರಾಜಾ ಸನದಲ್ಲಿ ಕುಳಿತು ಸಾಧಿಸುವುದೇನೂ ಆಗ ಉಳಿಯಲಾರದು! ದುಷ್ಟರ ಶಿಕ್ಷೆಯ ಕ್ರಮ ಉಗ್ರವಾಗಿರುವುದು ಅನಿವಾರ್ಯ. ಅದು ರಾಜನ ಕ್ರೌರ್ಯ ವಲ್ಲ ! ಇದರ ಬೆದರಿಕೆಯಿಂದ ಉಳಿದವರು ಆಗ ತಂತಮ್ಮ ಧರ್ಮಗಳಲ್ಲಿ ರುವುದು ಶಕ್ಯ. ದುಷ್ಟರು ಏಕೀಕರಿಸಿ, ರಾಜನ ಮೇಲೆ ಕೈ ಮಾಡಿ, ಪ್ರಜಾಕ್ಷೋಭೆ ಎಬ್ಬಿಸಲು ರಾಜ ಬಿಡಬಾರದು. ಬಿಟ್ಟರೆ ಪ್ರಜಾಕ್ಷೋಭೆಯ ಮಂತ್ರದಿಂದ ದಿನದಿನವೂ ಪುಂಡರು ಒಗ್ಗೂಡಿ ತಮ್ಮ ಅಭಿಪ್ರಾಯವನ್ನೇ ರಾಜನ ಮೇಲೆ ಹೇರಿಯಾರು! ರಾಜನ ಕೈಲಿ ಸೈನ್ಯ, ಶಾಸನ ಬಲ ಇರು ವುದು ಇದರ ನಿವಾರಣೆಗಾಗಿ. ಭೋಗಕ್ಕಲ್ಲ ! ಜನಪ್ರಿಯತೆಯೆಂಬುದು ಧರ್ಮಾಧಾರದ ಮೇಲೆ ಬಂದರೆ ಸರಿ. ಧರ್ಮ ಬಿಟ್ಟೂ ಪ್ರಿಯತೆಗೆ ಯತ್ನಿ ಸುವ ದೊರೆ ಮೂರ್ಖನಾಗುತ್ತಾನೆ. ದೊರೆ ಬರೀ ಆಡಳಿತ ಯಂತ್ರದ ನಿರ್ದೇಶಕನಲ್ಲ. ಧರ್ಮತಪ್ಪಿದವರಿಗೆ ಅವನು ಧರ್ಮಶಾಸಕನೂ, ಕಾಲ ಕೆಟ್ಟರೆ ಕಾಲವನ್ನೇ ಸರಿಪಡಿಸುವ ಸುದರ್ಶನನೂ, ಯುಗ ಪುರುಷನೂ, ಸಮಾಜ ಸುಧಾರಕನೂ, ದೇವರ ಅವತಾರಿಯೂ ಆಗಬೇಕು. "ರಾಜಾ ಕಾಲಸ್ಯ ಕಾರಣಂ," "ನಾವಿಷ್ಣುಃ ಪೃಥಿವೀಪತಿಃ" ಎಂಬುದು ಇದ ಕ್ಕಾಗಿಯೇ. ದಂಡ ಹೆಚ್ಚು ಕಮ್ಮಿಯಾಗುವುದು ರಾಜನ ಇಚ್ಛೆಯಿಂದಲ್ಲ! ಪ್ರಜೆಗಳ ಸದಾಚಾರ ದುರಾಚಾರ, ಪ್ರವೃತ್ತಿಗಳಿಂದ, ತಿಳಿಯಿತೆ ? ಆದ್ದ ರಿಂದ ಸಮಾಜದ ಏರುಪೇರುಗಳಿಗೆ ರಾಜನೇ ಹೊಣೆ. ಸರಿಯಾಗಿದ್ದ ನಿನ್ನ ಬುದ್ಧಿ ವೈದಿಕೇತರ ಮತಗಳ ದುರ್ಬೋಧನೆಯಿಂದ ಕೆಟ್ಟಿರುವಂತಿದೆ! ನಾನು ಸದಾ ನಿನ್ನ ಬಳಿಯೇ ಇದ್ದು ಬೋಧಿಸುವುದು ಹೇಗೆ ಶಕ್ಯ? ನಿನಗೆ ಸ್ವತಂತ್ರ ಬುದ್ಧಿ ಬೇಡವೆ ? ಅದು ಬಲಿಯುವುದು, ಫಲಕೊಡುವುದು ಹೇಗೆ, ಯಾವಾಗ ?"

ದೊರೆ : "ಗುರುಗಳೇ! ಕೋಪಿಸಬಾರದು. ತಾಳ್ಮೆಯಿಂದ ಕೇಳಿ ನನ್ನ ಸಂಶಯಕ್ಕೆ ತಾವು ಉತ್ತರಿಸಬೇಕು. ಯಾವುದು ಆರ್ಯಮತ, ಯಾವುದು ಅನಾರ್ಯ ಮತವೆಂಬುದಕ್ಕೆ ಏನು ಮಾನದಂಡ ! ಎಲ್ಲ ಮತ ಗಳೂ ಶಾಂತಿಗೇ ದಾರಿಯಾಗಿರುವಾಗ, ಎಲ್ಲವೂ ಸಮಃವಾಗಲಾರವೆ? ಅವರ ವರ ಮತದಂತೆ ಅವರವರು ನಡೆದರೆ ರಾಜನಿಗೇನು ನಷ್ಟ ? ಸತ್ಯವು ಯಾವುದೇ ಮತಧರ್ಮಗಳ ಸ್ವತ್ತಲ್ಲ, ಅಲ್ಲವೆ ? ಪರಿಪೂರ್ಣಸತ್ಯವನ್ನೂ, ಅದರ ಸಾಧನೆಯ ಮಾರ್ಗವನ್ನೂ ಬೋಧಿಸಲಲ್ಲ ಧರ್ಮ, ಮತ ಯಾವುದು? ಎಲ್ಲ ಅಪೂರ್ಣವೆನಿಸಿದಾಗ, ಯಾವುದನ್ನು ಪ್ರೋತ್ಸಾಹಿಸುವುದು ? ಯಾವು ದನ್ನು ಉಪೇಕ್ಷಿಸುವುದು ?"

ಆಚಾರ್ಯ ; "ಇಷ್ಟು ದಿನ ನಿನಗೇ ವ್ಯತ್ಯಾಸ ತಿಳಿಯದೆಯೇ ಇರುವುದಾದರೆ ಇನ್ನು ತಿಳಿಸುವುದು ಕಷ್ಟ! ಸರಿಯಾಗಿ ತಿಳಿದಿದ್ದುದು ಈಗ ಗೊಂದಲಕ್ಕೀಡಾಗಿದ್ದರೆ ತಿಳಿಸೋಣ! ನೀನು ತಿಳಿದುಕೊಳ್ಳುವೆಯೆಂಬ ನಂಬಿಕೆ ಇಂದು ಈಗ ನನಗಿಲ್ಲ ! (ನಿಟ್ಟುಸಿರಿಟ್ಟು)...ಯಾವ ಧರ್ಮ, ಮತವು ಇಹ ಜೀವನವನ್ನೇ ಎತ್ತಿ ಹಿಡಿದು ಇದರ ಭೋಗ ಸುಖಗಳನ್ನು, ಪರದ ವಿರುದ್ಧ ಎತ್ತಿ ಕಟ್ಟುವುದೋ ಅದು ಅನಾರ್ಯ. ಯಾವುದು ಪರವನ್ನು ಅತಿ ಮಾಡಿ ಇಹವನ್ನು ನಿರಾಕರಿಸುವುದೋ ಅದು ಮೊದಲದಕ್ಕಿಂತ ಹೆಚ್ಚು ಕ್ರೂರವಾದ ಅನಾರ್ಯಧರ್ಮ, ಮತ. ಇಹವು ಪರಕ್ಕೆ ಸಾಧನ ಸೋಪಾನ ವೆಂಬ ಸಮರಸದ ಧರ್ಮ ಮಾತ್ರ ಆರ್ಯಧರ್ಮ. ರಾಜನಿರುವುದು ಪ್ರಜೆಗಳು ಧರ್ಮಮಾರ್ಗದಲ್ಲಿ ನಡೆಯುವುದನ್ನು ಉಸ್ತುವಾರಿ ನೋಡಲು. ಆ ಧರ್ಮ ಪರಕ್ಕೆ ಸೇತುವೆ ಇದ್ದಂತೆ. ಹುಟ್ಟುವುದೇ ಪಾಪವೆಂದೂ, ದುಷ್ಟ ಶಿಕ್ಷಣಕ್ಕೆ ದೊರೆ ಶಕ್ತಿ ಹಿಡಿಯುವುದೂ, ಪ್ರಜಾಜೀವನಾಧಾರವಾದ ಅನಿವಾರ್ಯವಾದ ವ್ಯವಸಾಯಾದಿ ವೃತ್ತಿಗಳೆಲ್ಲ ಪಾಪಪೂರಿತವೆಂದೂ, ಸಾಯುವುದೇ ಪರಮ ಧರ್ಮವೆಂದೂ ಬೋಧಿಸುವ ಧರ್ಮಗಳನ್ನು ನೀನೂ ನಾನೂ ಬಲ್ಲೆವಷ್ಟೆ! ಈ ಪಲಾಯನವಾದವನ್ನು ರಾಜ ಎತ್ತಿ ಹಿಡಿದರೆ ರೋಗ ಬರದೇ ಏನು ಮಾಡೀತು ? ಕ್ಷಾಮ ಏಕೆ ಬರಲಾರದು? ಮತ್ತೆ ಮಗಧದಲ್ಲಿ ಭಿಕ್ಷುಕರ ಕಾಟ ಹೆಚ್ಚಾಗಿರುವುದು ನಿಜವೇ ? ... ದೊರೆಯೆ !

ದುಡಿಮೆಯೇ ಸಂಪತ್ತಿಗೆ ಆಧಾರವೆಂಬ, ದುಡಿವ ಪ್ರಜೆಗಳೇ ರಾಜ್ಯದ ಆಧಾರ ಸ್ತಂಭವೆಂಬ, ಪ್ರವೃತ್ತಿಪರವಾದ, ಹರ್ಷದಾಯಕವಾದ ಧರ್ಮ ನಿನಗೇಕೆ ಬೇಡವಾಗಿದೆ? ಮರಣವನ್ನೇಕೆ ಪ್ರೀತಿಸುವೆ ? ಇದನ್ನು ನಿನಗೆ ಬೋಧಿಸಿದವನಿಗೆ ನೀನು ಮರಣ ದಂಡನೆಯನ್ನೇಕೆ ನೀಡಲಿಲ್ಲ ? ಆರ್ಯ ಅನಾರ್ಯ ಧರ್ಮಗಳ ವ್ಯತ್ಯಾಸ ತಿಳಿಯಿತೆ ? ಶಾಂತಿಬೇಕೆಂಬುದು ನಿಜ. ಸ್ಮಶಾನದ ಶಾಂತಿಯೂ ಒಂದು ಬಗೆಯ ಶಾಂತಿಯೆ ! ತಾನಾಗಿಯೇ ಬರುವ ಮರಣಕ್ಕಾಗಿ, ಅಷ್ಟರೊಳಗೆ ವ್ಯಕ್ತಿಯೂ ಪರಿಪೂರ್ಣತ್ವವನ್ನು ಸಾಧಿಸಿ, ತೊಟ್ಟು ಕಳಚಿಬಿದ್ದ ಹಣ್ಣಿನಂತೆ ಸಕ್ವವಾಗಿ, ಮರಣವನ್ನು ಸ್ವೀಕರಿಸುವ ಶಾಂತಿಯು ಧೀರವಾರ್ಗ ! ಯಾವ ಮತವೂ ಜನರ ಮೇಲೆ ಪರಿಣಾಮ ಬೀರದಿರುವುದಿಲ್ಲ! ಜನ ಜೀವನರೀತಿಯನ್ನು ಕ್ಷೋಭೆಗೊಳಿಸುವ ಮತವು ರೋಗವೆನ್ನಬೇಕು ! ಅದರ ಹೀಬಾಲಕರು ಎಷ್ಟೇ ಪ್ರಭಾವ ಶಾಲಿಗಳಾಗಲಿ, ರಾಜ ಅವರನ್ನು ನಿಗ್ರಹಿಸುವುದು ರೋಗ ನಿಗ್ರಹ ಕ್ರಮ ದಂತೆ. ನಿರಪರಾಧಿಗಳನ್ನು ಹಿಡಿದು ಕಾಳಿಗೆ ಬಲಿಕೊಡುವ ಶಾಕ್ತಧರ್ಮವೂ ಧರ್ಮವೆನಿಸಿದೆ ! ರಾಜ ಇದನ್ನು ಸುಮ್ಮನೆ ನೋಡುತ್ತಿರಬೇಕೆ? ಕೇವಲ ನಿವೃತ್ತಿ ಮಾರ್ಗವನ್ನು ಬೋಧಿಸುವರು ಪ್ರಭಾವಶಾಲಿಗಳಾದರೆ ಪ್ರವೃತ್ತಿ ಮಾರ್ಗದ ಗತಿ ಏನಾಗುತ್ತದೆ? ಸಾಯುವುದೇ ಗುರಿ ಎಂದರೆ ಏನರ್ಥ ? ಕೇವಲ ಪ್ರವೃತ್ತಿಯು ಅತಿರೇಕವಾದರೆ, ಇಂದ್ರಿಯನಿಗ್ರಹ ಬರುವುದೆಂತು? ಜನರಲ್ಲಿ ಮತ ವೈಮನಸ್ಯ ಬೆಳೆದರೆ, ರಾಜ ಸುಮ್ಮನಿರಬೇಕೆ? ಒಬ್ಬನ ಗುಡಿ ಯನ್ನು ಇನ್ನೊಬ್ಬ ಕೆಡುವುದು ಅವನ 'ಧರ್ಮ'ವಾದರೆ, ರಾಜ ಈಗ ಈ ಧರ್ಮಕ್ಕೆ ಸಾಕ್ಷಿ ಮಾತ್ರವಾಗಬೇಕೇ? ಯಾವುದು ಪೂರ್ಣ ಧರ್ಮ ಯಾವು ದಲ್ಲ ಎಂಬುದಕ್ಕೆ ಸರಿಯಾದ ಮಾನದಂಡವಿದ್ದರೆ ಉತ್ತರ ಸಿಗುತ್ತದೆ. ಎಲ್ಲ ಅಪೂರ್ಣವೆನ್ನುವುದರಿಂದ ಏನು ಸಾಧನೆಯಾಯಿತು? ಜನಸಾಮಾನ್ಯನ ನಿತ್ಯ ಜೀವನಕ್ಕೆ ಇದೆಲ್ಲ ದೊಂಬರಾಟ ಬೇಡ. ದೇವರಿಲ್ಲದೆ ಮಾನವ ಬಾಳಲಾರ! ಅನೇಕ ಪ್ರಶ್ನೆಗಳಿಗೆ ಉತ್ತರ ಈ ಬಂಡೆಯ ನಂಬಿಕೆಯಮೇಲೇ ನಿಂತಿದೆ. ಮಾನವ ಮಾನವನನ್ನೇಕೆ ಪ್ರೀತಿಸಬೇಕೆಂಬ ಪ್ರಶ್ನೆಗೆ ಸಹ. ದೇವರಿಲ್ಲದೆ ನಿನ್ನ ಮಾನವೀಯ ಮೌಲ್ಯಗಳು ಉಳಿಯಲಾರವು. ಮೌಲ್ಯವಿಲ್ಲದ ಸಮಾಜ, ಹುಚ್ಚರ ಸಂತೆಯಾದೀತು.... ನಿನಗೆ ಹೇಳಿ ಉಪಯೋಗವೇನು?

ಚಂದ್ರಗುಪ್ತ! ನಂದರ ಮಾರ್ಗವನ್ನೇ ನೀನು ಹಿಡಿಯುವುದು ನಿನಗೂ ರಾಷ್ಟ್ರಕ್ಕೂ ಶ್ರೇಯಸ್ಸಲ್ಲ! ಚಾಣಕ್ಯನ ತಪಸ್ಸು ನಿನ್ನನ್ನು ಮೇಲೆತ್ತಿದ್ದು, ನೀನು ಧರ್ಮವನ್ನುದ್ಧರಿಸುವೆ ಎಂಬ ನಂಬಿಕೆಯಿಂದ! ನೀನು ಅದನ್ನು ಕೆಡಿಸುವುದಾದರೆ ಚಾಣಕ್ಯ ನಿನ್ನನ್ನು ತಪಶ್ಶಕ್ತಿಯಿಂದ ಸುಟ್ಟು ಬೂದಿ ಮಾಡಿಯಾನು!! ಇದು ಬೆದರಿಕೆಯಲ್ಲ!!! ನಾನೇ ನೆಟ್ಟ ಸಸಿಯನ್ನು ನಾನೇ ಕಿತ್ತೆಸೆಯಬಾರದೆಂಬ ಪರಿಮಿತಿಯಲ್ಲಿ ಈ ಮಾತನ್ನಾಡುತ್ತಿರುವೆನು! ....ಇಗೋ ಬೆಳಗಾಗುತ್ತಿದೆ! ನನಗೆ ಆಹ್ನಿಕದ ಹೊತ್ತಾಯಿತು. ದೇವಾಲಯದ ಶಂಖಗಳು ಮೊಳಗುತ್ತಿವೆ. ನಿನಗೆ ನನ್ನ ಉಪದೇಶ ತಲೆಗೆ ಹತ್ತಿದಂತೆ ಕಾಣುವುದಿಲ್ಲ. ಮುಂದಿನ ಅಮಾವಾಸ್ಯೆ ಕಳೆಯಲಿ; ಪಂಚಮಿ ದಿನ ನಾನೇ ಪಾಟಲೀಪುತ್ರಕ್ಕೆ ಬರುವೆ. ನಿನ್ನ ಉಳಿದೆಲ್ಲ ಪ್ರಶ್ನೆಗಳನ್ನು ಕೇಳುವೆಯಂತೆ."



## ಇಪ್ಪತ್ತಮೂರನೆಯ ಅಧ್ಯಾಯ

# ಚಾಣಕ್ಯನ ವಾಗ್ವಿಜಯ

ಭಾದ್ರಪದ ಮಾಸ ಶುಕ್ಲ ಪಂಚಮಿ ಪ್ರಾತಃಕಾಲ ಚಾಣಕ್ಯ ಶಿಷ್ಯರೊಡನೆ ಪಾಟಲೀಪುತ್ರನಗರದ ಬಾಗಿಲಲ್ಲಿ ಸೂರ್ಯೋದಯಕ್ಕೆ ಕಾಣಿಸಿಕೊಂಡ. ಪೂರ್ವದ್ವಾರದಲ್ಲಿ ಸ್ವಯಂ ಚಂದ್ರಗುಪ್ತನೇ ಸಕಲ ರಾಜ ಪರಿವಾರಸಮೇತ ತನ್ನ ಪ್ರಿಯ ಗುರುವನ್ನು ಎದುರುಗೊಂಡ. ಅಮಾತ್ಯ ರಾಕ್ಷಸ ಚಾಣಕ್ಯನಿಗೆ ನಮಸ್ಕರಿಸಿದ. ವಿದ್ಯುಲ್ಲೇಖೆ ಸಂಕರ್ಷಣಾಲಯದಿಂದ ಈ ಗುರುಶಿಷ್ಯ ಸಮಾಗಮವನ್ನು ಗಮನಿಸಲು ಹೊಸ ಆಸೆಯೊಂದರ ಚಿಗುರೊಡೆದು ಬಂದಿದ್ದಳು. ಆಚಾರ್ಯನಿಗೆ ನಮಸ್ಕರಿಸಿದಳು. ದೊರೆಯ ಇನ್ನಿಬ್ಬರು ರಾಣಿಯವರೂ ಸಹ.

ಪಾದಯಾತ್ರೆಯಲ್ಲಿ ಹೊರಟು ಬಂದ ಚಾಣಕ್ಯ ಮಗಧದ ಪರಿಸರದಲ್ಲಿ ಮಳೆಯಿಲ್ಲದುದನ್ನು ಮೈಲಿ ಮೈಲಿ ದೂರದಿಂದ ಕಂಡು ಸಂಕಟಪಟ್ಟಿದ್ದ. ಅಲ್ಲಲ್ಲಿ ಸತ್ತು ಬಿದ್ದ ಆಕಳು, ಎಮ್ಮೆಗಳ ಅಸ್ಥಿಪಂಜರಗಳು ಕಂಡವು. ರಾತ್ರಿ ಹಗಲೆನ್ನದೆ ರಾಜ್ಯದ ಪ್ರಜೆಗಳು ಬೇರೆ ರಾಜ್ಯಗಳತ್ತ ವಲಸೆ ಹೊರಟಿದ್ದ ದೃಶ್ಯ ಆಚಾರ್ಯನ ಕರುಳು ಹಿಂಡಿತು. ಹಸಿರು ತುಂಬಿ ತುಳುಕಬೇಕಿದ್ದ ಆ ಮಳೆಗಾಲದಲ್ಲಿ ಭೂಮಿ ಎಲ್ಲೂ ಬಿರುಕು ಬಿಟ್ಟು ಹಸಿರಿನ ಆಸೆಯನ್ನು ತೊರೆದಿತ್ತು. ಕೆರೆಗಳ ಅಂಗಳಗಳು ಬರಿದಾಗಿದ್ದವು! ಜಲಚರ ಪ್ರಾಣಿಗಳೂ ಸತ್ತಿದ್ದವು. ಸುಡುಗಾಡಿನ ಸೆಖೆ ನಾಡನ್ನೆಲ್ಲ ಆವರಿಸಿತ್ತು.

ಅರಮನೆಯ ಪೂರ್ವದ್ವಾರಕ್ಕೆ ಅಲಂಕರಿಸಿದ್ದರೂ, ಅದು ಕೃತಕವೆನಿಸಿತ್ತು. "ಇದೆಲ್ಲ ಏಕೆ?" ಎಂದು ತುಸು ಮುನಿಸಿನಿಂದಲೇ ಆಚಾರ್ಯ ದೊರೆಯನ್ನು ಹಳಿಯುವಂತೆ ಕೇಳಿದ. ದೊರೆ ಉತ್ತರಿಸಲಿಲ್ಲ. ದೊರೆಗೆ ಗುರು ರಾಜಾಶೀರ್ವಾದ ಮಾಡಿ ಮಹಾದ್ವಾರದಲ್ಲಿ ಪ್ರವೇಶಿಸಿದೊಡನೆಯೇ ಸಹಸ್ರಾರು ಬ್ರಾಹ್ಮಣರ ತಂಡವೊಂದು ಚಾಣಕ್ಯನಿಗೆ ಅಭಿವಂದಿಸಿ, ವೇದ ಘೋಷ ಮಾಡಿತು. ಭಯಭ್ರಾಂತರಾಗಿದ್ದ ಆ ಬ್ರಾಹ್ಮಣರ ಮುಖದಲ್ಲಿ ಹಿಂದಿನ ತೇಜಸ್ಸೋ, ನೆಮ್ಮದಿಯೋ ಇರದುದನ್ನು ಚಾಣಕ್ಯ ಗಮನಿಸಿದ.

ಅಂದು ಬೇಕೆಂದೇ ಯಾವ ಇತರ ಮತೀಯ ಅರಮನೆ ಗುರುವೂ ಚಾಣಕ್ಯನ ಎದುರು ಬಾರದಂತೆ ಚಂದ್ರಗುಪ್ತ ಮಾಡಿದ್ದಾನೆಂಬ ಶಂಕೆ ಆಚಾರ್ಯನಿಗೆ ಬಾರದಿರಲಿಲ್ಲ!

"ಮಳೆಯಾಗಿ ಎಷ್ಟು ದಿನವಾಯ್ತು?'' ಆಚಾರ್ಯನ ಮೊದಲ ಪ್ರಶ್ನೆ.

"ಎರಡು ವರ್ಷವಾಯ್ತು?'' ದೊರೆಯ ನಿಧಾನದ, ನಿರುತ್ಸಾಹದ ಉತ್ತರ.

"ಬೇರೆ ರಾಜ್ಯಗಳಿಂದ ಆಹಾರ ಆಮದು ಆಗಿದೆಯೆ?" ಮರು ಪ್ರಶ್ನೆ.

"ಎಷ್ಟು ದಿನ ಅವುದು ಮಾಡುವುದು ?'' ಮಾರುತ್ತರ.

"ಜನ ಸಾಯದೇ ಬದುಕುವ ತನಕ !!" ಚಾಣಕ್ಯನ ಸಿಡಿಲಿನ ಉತ್ತರ. "ದೊರೆಯೇ! ನಿನ್ನ ಕೃಷಿ ನೀತಿ, ವಾಣಿಜ್ಯ ನೀತಿಗಳು ಕುಸಿದಿವೆ ಯೆಂದು ಕಾಣುತ್ತೆ. ಬೇರೆಡೆ ಇರದ ಕ್ಲಾವು ತುಗಧವನ್ನೇ ಏಕೆ ಕಾಡ ಬೇಕು ? ಯೋಚಿಸಿರುವೆಯಾ ?" ಆಚಾರ್ಯ ಗುಡುಗಿದ. ಚಂದ್ರ ಗುಪ್ತ ಏನೂ ಹೇಳದೆ ಮೌನವಾಗಿ ಆಚಾರ್ಯನನ್ನು ಅರಮನೆಗೆ ಕರೆತಂದ. ಚಾಣಕ್ಯ ಪಾದಪೂಜೆಯನ್ನು ನಿರಾಕರಿಸಿದ. ''ಗಿಡಮರಗಳಿಗಿಲ್ಲದ ನೀರು ನನ್ನ ಪಾದಕ್ಕೆ ಬೇಡ" ಎಂದು ನೊಂದು ನುಡಿದ. ಇಂದುಶರ್ಮನ ಮನೆಯಲ್ಲಿ ಆಚಾರ್ಯನಿಗೆ ಪರಿವಾರಕ್ಕೆ ಬಿಡದಿ, ಆಹಾರ ವ್ಯವಸ್ಥೆ ಆಗಿತ್ತು. ವಿಶ್ರಾಂತಿಯಾದ ಮೇಲೆ ಸಂಜೆ ರಾಜಸಭೆ ಸೇರಿತು. ದೊರೆ ಸಿಂಹಾಸನದಲ್ಲಿ ಮಂಡಿತನಾಗಿದ್ದ ಚಾಣಕ್ಯನಿಗೆ ವಿಶೇಷ ಪೀಠ ಹಾಕಲಾಗಿತ್ತು. ಅವನ ಹಿಂದೆ ಶಿಷ್ಯರೂ, ಊರಿನ ಗಣ್ಯ ವಿದ್ವನ್ಮಣಿಗಳೂ ನೂರಾರು ಜನ ಸೇರಿ ದ್ದರು. ದೊರೆಯ ಆಸನದ ಹಿಂದೆ ಸೆರೆಯ ಮರೆಯಲ್ಲಿ ವಿದ್ಯುಲ್ಲೇಖೆ ಚೇಟಿಯರೊಡನೆ, ಆಸೀನಳಾಗಿ, ಈ ಸಂವಾದವನ್ನು ಕಿವಿಯಿಟ್ಟು ಕೇಳುತ್ತಿ ದ್ದಳು. ಚಾಣಕ್ಯ ದೊರೆಗೆ ಉಪದೇಶ ಆರಂಭಿಸಿದ.

ಚಾಣಕ್ಯ : "ದೊರೆಯೇ! ನಿನ್ನ ಸೀತಾಧ್ಯಕ್ಷ (ಕೃಷಿಯ ಮೇಲ್ವಿ ಚಾರಕ)ನನ್ನೂ, ಕೋಷ್ಠಾಗಾರಾಧ್ಯಕ್ಷನನ್ನೂ ಕರೆಸು.'' (ಕೋಷ್ಠಾ ಗಾರಾಧ್ಯಕ್ಷನದು ರಾಷ್ಟ್ರೀಯ ಧಾನ್ಯಾಗಾರ ರಕ್ಷಣೆಯ ಹೊಣೆ.)

ದೊರೆ ಕೈ ಚಪ್ಪಾಳೆ ಹಾಕಿದೊಡನೆಯೇ ಅವರಿಬ್ಬರೂ ಬಂದು ಚಾಣಕ್ಯನ ಎದುರು ನಿಂತರು. ಚಾಣಕ್ಯ ಮೊದಲು ಸೀತಾಧ್ಯಕ್ಷನ ವಿಚಾರ ಣೆಗೆ ಆರಂಭಿಸಿದ:

ಚಾಣಕ್ಯ : "ಅಯ್ಯಾ, ಶುಲ್ಬಶಾಸ್ತ್ರ, ವೃಕ್ಷಾಯುರ್ವೇದಗಳನ್ನು ತಿಳಿದಿರುವೆಯಾ ?"

ಸೀತಾಧ್ಯಕ್ಷ : ತಬ್ಬಿಬ್ಬಾದ! ತಾನು ಹೊಸಬನೆಂದು ಹೇಳಿಕೊಂಡ!

ಚಾಣಕ್ಯ : "ನೀನು ಅರಮನೆಗೆ ಹೊಸಬನೋ? ಈ ಪದವಿಗೇ, ಕೆಲಸಕ್ಕೇ ಹೊಸಬನೋ"

ಸೀತಾಧ್ಯಕ್ಷ : (ಏನೂ ಹೇಳದೆ ತಲೆತಗ್ಗಿಸಿ ನಿಂತ.)

ಚಾಣಕ್ಯ : "ಅಯ್ಯಾ ಅಮಾತ್ಯನೇ! ಇವನಿಗೀ ಕೆಲಸ ಕೊಟ್ಟವರಾರು ?''

ಅಮಾತ್ಯ ರಾಕ್ಷಸ ಏನೂ ಹೇಳದೇ ತಲೆ ತಗ್ಗಿಸಿದ. ಈ ವರ್ತನೆಯಲ್ಲಿ ಚಾಣಕ್ಯನಿಗೆ ಈ ಅನರ್ಹನ ನೇಮಕ ಯಾರದೋ ಒತ್ತಾಯದ ಶಿಫಾರಸಿನಂತೆ ನಡೆದದ್ದೆಂದು ತಿಳಿಯಿತು. ಚಂದ್ರಗುಪ್ತನಿಗೂ ಅಪಮಾನವಾಯಿತು! ತುಂಬಿದ ಸಭೆಯಲ್ಲಿ ಅಮಾತ್ಯನನ್ನು ನಿರ್ಬಂಧಿಸಿ ಕೇಳಿದ್ದರೆ, ಪ್ರಭಾವ ತಂದವನ ಮರ್ಯಾದೆಯೂ ಪಟ್ಟದ ರಾಣಿಯ ಮಾನವೂ ಹೋಗುತ್ತಿತ್ತೆಂದು ಅನ್ನಿಸಿ ಸುಮ್ಮನಾದ. ಎಲ್ಲರ ಮುಖ ನೋಡಿ ಚಾಣಕ್ಯನೂ ವಿಷಯವರಿತ ! ಕೇಳಿದ.

ಚಾಣಕ್ಯ : ''ಅಯ್ಯಾ ! ಸೀತಾಧ್ಯಕ್ಷನೇ ! ಶುಲ್ಬಶಾಸ್ತ್ರವೆಂದರೇನು ? ಓದಿರುವೆಯಾ?''

ಸೀತಾಧ್ಯಕ್ಷ : ಮೌನದಿಂದ ತಲೆತಗ್ಗಿಸಿ ನಿಂತ.

ಚಾಣಕ್ಯ : "ವೃಕ್ಷಾಯುರ್ವೇದದ ಹೆಸರು ಕೇಳಿರುವೆಯಾ ?"

ಸೀತಾಧ್ಯಕ್ಷ ಮತ್ತೆ ಮೌನ ತಾಳಿ ತಲೆತಗ್ಗಿಸಿದ ! ಚಾಣಕ್ಯನೇ ಹೀಗೆ ಮುಂದುವರೆಸಿದ.

ಚಾಣಕ್ಯ : ''ಶುಲ್ಬ ಶಾಸ್ತ್ರವೆಂದರೆ ಯಾವ ಯಾವ ಬಗೆಯ ಭೂಮಿಯ ಸಾರಾಸಾರ ಹೇಗೆ, ಮಳೆಗಾಲಯೋಗ್ಯ ಭೂಮಿ, ಮಳೆಬಾರ

ದಾಗ ಫಸಲು ಕೊಡುವ ಭೂಮಿ, ಯಾವುದಕ್ಕೆ ಯಾವ ಬೆಳೆ ಅರ್ಹ ಇತ್ಯಾದಿ ತಿಳಿಸುವ ಶಾಸ್ತ್ರ. ಇದೊಂದು ಭೂವಿಜ್ಞಾನಶಾಸ್ತ್ರ ಪ್ರಭೇದ. ವೃಕ್ಷಾಯುರ್ವೇದವೆಂದರೆ ನಾನಾ ವಿಧ ಧಾನ್ಯ, ಫಲ, ಪುಷ್ಪ, ತರಕಾರಿ, ಗೆಡ್ಡೆ ಗೆಣಸು, ಬಳ್ಳಿಯ ದವಸ (ಕುಂಬಳ, ಸೋರೆ, ಪಡುವಲ, ಹಾಗಲ ಮೊದಲಾದ) ಬೀಜಗಳ ರಕ್ಷಣೆ, ಯೋಗ್ಯ ಸಮಯದಲ್ಲಿ ಸಂಗ್ರಹಣೆ, ವಿತರಣೆಯ ಶಾಸ್ತ್ರ. ಇವೆರಡರ ಹೆಸರನ್ನೂ ಕೇಳಿಲ್ಲದವನನ್ನು, ಕೇವಲ ಜಾತಿಯ ಅಭಿಮಾನದಿಂದ ಸೀತಾಧ್ಯಕ್ಷ ಪದವಿಗೇರಿಸಿದರೆ ಕ್ಷಾಮ ನಿವಾರಣೆ ಹೇಗಾಗ ಬೇಕು? ವ್ಯವಸಾಯವೇ ಪಾಪವೆಂಬುವವನನ್ನು ಈ ವೃತ್ತಿಗೆ ನೇಮಿಸುವುದು ಗೋಹಂತಕನನ್ನು ಗೋಶಾಲಾಧ್ಯಕ್ಷ ಮಾಡಿದಂತಾಗದೆ ? ಬರಗಾಲ ಒಮ್ಮೆಗೇ ಬರುವುದಿಲ್ಲ ! ಒಂದು ವರ್ಷ ಮಳೆ ಹೋದರೂ, ಭೂಜಲ ಪ್ರಮಾಣ ಮಟ್ಟ ಒಮ್ಮೆಗೇ ಕುಸಿಯುವುದಿಲ್ಲ. ಆಗ ಜಲ ನೆಲಾನುಗುಣವಾದ ಬೀಜ, ಬಳ್ಳಿ, ಗೆಡ್ಡೆ, ಕಾಯಿಪಲ್ಯೆ ಬಿತ್ತಿ, ಸಮಯೋಚಿತವಾಗಿ ಧಾನ್ಯಾಪಮದಿಂದ ಬರಪರಿಹಾರ ಸಾಧ್ಯ. ಮುಂದಿನ ಬರಕ್ಕೆ ಅಂದೇ ಸಿದ್ಧತೆ ಯಾಗಬೇಕು. ಒಂದು ಮೊಳ ಅಗಲವುಳ್ಳ ಬಾಯಿಯಿಂದ ಕೂಡಿದ ಹೊಂಡದಲ್ಲಿ ಸಂಗ್ರಹವಾದ, ತಂಗಿ ನಿಂತ ನೀರು ಹದಿನಾರು ದ್ರೋಣದಷ್ಟು (ಒಂದು ಅಳತೆ) ದೊರೆತರೆ ಮರುಪ್ರಾಯವಾದ ಭೂಮಿಯಲ್ಲೂ ವ್ಯವಸಾಯ ಶಕ್ಯ! ಒಂದು ಮಳೆ ತಪ್ಪಿದರೆ ಭೂಮಿಯೇ ಬಂಜರಾಗದು! ಯಂತ್ರಗಳಿಂದ ಭೂಗರ್ಭದ ನೀರನ್ನೆತ್ತಲೂ ಬರುವುದು. ಕೆರೆಗಳ ಅಂಗಳಗಳಲ್ಲಿ ಬೆಳೆಯುವ ಬಳ್ಳಿ, ಆಹಾರವಸ್ತುಗಳೂ ಉಂಟು. ಇದನ್ನೆಲ್ಲ ಅರ್ಥಶಾಸ್ತ್ರದಲ್ಲಿ ಬರೆದಿರುವನಷ್ಟೆ ! ದೊರೆ ಓದದಿದ್ದರೂ, ಸೀತಾಧ್ಯಕ್ಷ ಓದಬೇಡವೆ ? ಕೆಲಸದಲ್ಲಿ ಅನಾಸಕ್ತನಾದ ಇವನಿಗೆ ಈಗೇನು ಶಿಕ್ಷೆ ?''

ಅರಮನೆಯಲ್ಲಿ ಪ್ರಭಾವ ಬೀರಿ ರಾಜನನ್ನು ವಶ ಮಾಡಿಕೊಂಡಿದ್ದ ಒಬ್ಬ ಅನ್ಯಮತೀಯ ಗುರು ನಕ್ಕು, ಅಟ್ಟಹಾಸ ಮಾಡುತ್ತಾನೆ! "ವೇದ, ಮಂತ್ರ, ತಂತ್ರ, ತಪಸ್ಸುಗಳಿಂದ, ಆಚಾರ್ಯರೇ ಮಳೆ ತರಿಸಬಹುದಲ್ಲ !" ಎಂದು ಆಚಾರ್ಯನ ಶಕ್ತಿಯ ಅಣಕ ಮಾಡುತ್ತಾನೆ!!

ಚಾಣಕ್ಯ : "(ಕೋಪದಿಂದ)" ಎಲೋ 'ಗುರು'ವೆ ? ನನ್ನನ್ನೂ ಬ್ರಾಹ್ಮಣರನ್ನೂ ಅಪಹಾಸ್ಯ ಮಾಡುವೆಯಾ? ಈ ರಾತ್ರಿ ಮುಗಿಯುವಷ್ಟರಲ್ಲಿ ಮುಗಧವೇ ಕೊಚ್ಚಿ ಹೋಗುವಂತೆ ಮಳೆ ತರಿಸುತ್ತೇನೆ, ನೋಡುವೆಯಂತೆ! ಈಗ ಹೇಳಿದ ಮಾತು, ಮಳೆ ಬಾರದ ವರ್ಷದಲ್ಲಿ ಸೀತಾಧ್ಯಕ್ಷನ ಕರ್ತವ್ಯದ ಬಗೆಗೆ ! ಅಯೋಗ್ಯನನ್ನು ಅಲ್ಲಿ ಕುತಂತ್ರದಿಂದ ಪ್ರತಿಷ್ಠಿಸಿ, ಈಗ ತಮಾಷೆ ನೋಡುತ್ತಿರುವೆಯಾ ? ನನ್ನ ಮಂತ್ರಕ್ಕೆ ಮಳೆ ಬಾರದಾದರೆ, ನಿನ್ನ ತಪಕ್ಕೇಕೆ ಮಳೆಯಾಗಬಾರದು ? ಅಥವಾ ಎಲ್ಲರಿಗೂ 'ಮೋಕ್ಷ'ವಾಗುವುದೇ ಕಲ್ಯಾಣವೊ ? ಇಲ್ಲಿ ಬಾಳಲಾರದವರಿಗೆ ಎಂಥ ಮೋಕ್ಷ ?"

ಚಾಣಕ್ಯನ ಇಂಗಿತದಂತೆ ಸೀತಾಧ್ಯಕ್ಷನಿಗೆ ಅಧಿಕಾರ ಹೋಯಿತು ! ಸೇನಗುಪ್ತನೆಂಬ ವೃದ್ಧ ವೈಶ್ಯನಿಗೆ, ಹಿಂದಿನ ತಲೆ ಮಾರಿನ ಅದೇ ವೃತ್ತಿಯವನಿಗೆ, ಅಂದೇ ಅದೇ ಕೆಲಸ ದೊರೆಯಿತು. ರಾಜಗುರುವಾಗಿದ್ದವನಿಗೆ ಅಪಮಾನವಾಯಿತು! ಚಂದ್ರಗುಪ್ತನಿಗೆ ಧೈರ್ಯವಾಯಿತು. ಅಮಾತ್ಯನಿಗೆ ಹರ್ಷವಾಯಿತು.

ಇನ್ನು ಕೋಷ್ಠಾಗಾರಾಧ್ಯಕ್ಷನ ವಿಚಾರಣೆ ಆರಂಭವಾಯಿತು.

ಚಾಣಕ್ಯ ; "ಏನು ನಿನ್ನ ಹೆಸರು ?''

ಅಧ್ಯಕ್ಷ ; "ಶ್ರುತಸೇನ''

ಚಾಣಕ್ಯ ; ''ರಾಷ್ಟ್ರೀಯ ಧಾನ್ಯಾಗಾರದಲ್ಲಿ ಭತ್ತ, ಗೋಧಿ, ಬೆಲ್ಲ, ಕಡಲೆ, ಎಣ್ಣೆಕಾಳುಗಳ ಸಂಗ್ರಹ ಇಂದಿಗೆ ಸರಿಯಾಗಿ ಎಷ್ಟೆಷ್ಟು ಉಳಿದಿದೆ ?''

ಅಧ್ಯಕ್ಷ ; ''ಏನೂ ಇಲ್ಲ, ಬುದ್ಧಿ,"

ಚಾಣಕ್ಯ ; "ಸೀತಾ, ರಾಷ್ಟ್ರ, ಕ್ರಯಿಮ, ಪರಿವರ್ತಕ, ಪ್ರಾಮಿತ್ಯಕ, ಅಪಮಿತ್ಯಕ, ಸಿಂಹನಿಕ, ಅನ್ಯಜಾತ, ವ್ಯಯ ಪ್ರತ್ಯಾಯ, ಉಪ

ಸ್ಥಾನ ಎಂಬ ಹತ್ತು ರೀತಿಯ ಧಾನ್ಯ ಸಂಗ್ರಹಗಳನ್ನು ಶಾಸ್ತ್ರಕಾರರು ಹೇಳು ತ್ತಾರೆ. ನಾನೂ ಬರೆದಿರುವೆ. ಹಾಗೆಂದರೇನು ಹೇಳುವೆಯಾ ? ಈ ಕ್ರಮದಲ್ಲಿ ಧಾನ್ಯ ಸಂಗ್ರಹ ಮಾಡಿದ್ದರೆ ಬರ ಏಕೆ ಬರುತ್ತಿತು?"

ಶ್ರುತಸೇನನಿಗೆ ಮೈ ಬೆವರಿತು ! ರಾಜಗುರುವಿಗೆ ಅಪಮಾನವೂ ಸಂಕಟವೂ ಆದವು. ಅಮಾತ್ಯ ತಲೆ ತಗ್ಗಿಸಿದ.

ಚಾಣಕ್ಯ : "ದೊರೆಯೆ ! ಇಂಥ ಅಯೋಗ್ಯರನ್ನು ಇಷ್ಟು ಉನ್ನತ ಸ್ಥಾನಗಳಿಗೆ ಪರೀಕ್ಷೆ ಇಲ್ಲದೆ ನಿಯಮಿಸಿದರೆ ಬರವೂ ಬರುತ್ತದೆ; ಜನವೂ ಸಾಯುತ್ತಾರೆ. ಇದು ವ್ಯವಹಾರ ಜ್ಞಾನ. ಅದನ್ನು ತಿರಸ್ಕರಿಸುವ ಮತಗಳು ಇವಕ್ಕೆ ಹೇಗೆ ಪ್ರೋತ್ಸಾಹ ಕೊಟ್ಟಾವು ? ಧಾನ್ಯ ಬೆಳೆಯುವ ವರ್ಷಗಳಲ್ಲಿ ತೆರಿಗೆಯಾಗಿ ಸಂಗ್ರಹಿಸಬೇಕಾದ ಧಾನ್ಯ ಪ್ರಮಾಣ, ಹೆಚ್ಚು ಧಾನ್ಯ ಬೆಳೆದಾಗ, ಹೆಚ್ಚುವರಿಯನ್ನು ಮಾರಿ, ಕಡಿಮೆಯಾದ, ಧಾನ್ಯದ ಸಂಗ್ರಹಣ, ಸಾಲರೂಪದಲ್ಲಿ ಇತರ ರಾಜ್ಯಗಳಿಂದ ತರುವ ಧಾನ್ಯ, ವೃತ್ತಿ ಪರರಿಂದ ತೆರಿಗೆಯಾಗಿ ಪಡೆಯುವ ಧಾನ್ಯ ಮೊದಲಾದ ಎಲ್ಲ ವಿಧಾನ ಗಳನ್ನೂ ಹಿಂದಿನ ಕ್ರಮವಾಗಿ ಅನುಸರಿಸಿದ್ದರೆ, ಒಂದೆರಡು ವರ್ಷಗಳ ಬರ ದಿಂದ ರಾಷ್ಟ್ರ ಸಾಯುವುದಿಲ್ಲ. ತುಪ್ಪ, ಎಣ್ಣೆ. ಬೆಲ್ಲ. ಕಲ್ಲುಸಕ್ಕರೆ, ಷಡ್ವಿಧ ಲವಣಗಳು, ನಾನಾ ಹಣ್ಣಿನ ರಸಗಳು. ಹುಳಿಹಣ್ಣುಗಳು, ಇತ್ತ, ಮೀನು, ಮಾಂಸ, ಗೆಡ್ಡೆ-ಇತ್ಯಾದಿಗಳನ್ನು ಕೆಡದಂತೆ ವರ್ಷಗಟ್ಟಳೆ ಉಳಿಸಿಡುವ ವಿಧಾನಗಳನ್ನೆಲ್ಲ ಶಾಸ್ತ್ರಕಾರರು ಕತ್ತೆಗಳಿಗಾಗಿ ಬರೆದಿಟ್ಟರೋ, ನಮಗೋ ? ಭತ್ತವನ್ನು ಬೇಯಿಸಿ, ಅಕ್ಕಿ ಮಾಡಿಡುವ ವಿಧಾನವೂ ಇದೆಯಷ್ಟೆ! ಧಾನ್ಯ ಗಳ ದಾಸ್ತಾನು ವಿಧವೂ ಇದೆ. ಶಾಸ್ತ್ರದಂತೆ ನಡೆಯದೆ ಸತ್ತರೆ ಯಾರು ಹೊಣೆ ?''

ಹೀಗೇ ಪಣ್ಯಾಧ್ಯಕ್ಷ, ಅಂತಪಾಲ, ಮೊದಲಾದವರ ಪರೀಕ್ಷೆಯೂ ನಡೆದು, ಹೊಸ ಅಧಿಕಾರಿಗಳು ಅನರ್ಹರೆಂದೂ, ಇವರೆಲ್ಲ ಕರ್ತವ್ಯ ಕೈ

ಬಿಟ್ಟು, ಬರಗಾಲ ಬಂದಿತೆಂದೂ, ಇದರ ಹಿಂದೆ ರಾಜಗುರುವಿನ ಕೈವಾಡ ವಿದೆಯೆಂದೂ ಚಾಣಕ್ಯ ಸಭೆಗೆ ಪ್ರಮಾಣ ಮಾಡಿ ತೋರಿಸಿದ. ಚಂದ್ರ ಗುಪ್ತ ಅವಾಕ್ಕಾದ !

ಸೂರ್ಯ ಮುಳುಗಲಾರಂಭಿಸಿದ್ದ. ಅಂದು ಆಗಲೇ ಚಾಣಕ್ಯ ಪರ್ಜನ್ಯ ಹೋಮವನ್ನು ನಡೆಸುಹನೆಂದೂ, ಹನ್ನೆರಡು ನೂರು ಬ್ರಾಹ್ಮಣರು ಪರ್ಜನ್ಯ ಜಪ ಮಾಡುವರೆಂದೂ ಊರಲ್ಲಿ ಘೋಷಣೆಯಾಯ್ತು ! ರಾಜ ಗುರುವು ಪರಿಣಾಮವನ್ನು ಕುತೂಹಲದಿಂದ ಎದುರು ನೋಡುತ್ತಿದ್ದ !! ಚಂದ್ರಗುಪ್ತನಿಗೆ ಮತ್ತು ಆಶಾಕಿರಣ ಮೂಡಿತು !

ರಾತ್ರಿ ಒಂದು ಗಂಟೆಯ ಸುಮಾರಿಗೆ ಕಾರ್ಮೋಡಗಳು ಆಗಸದಲ್ಲಿ ಕಾಣಿಸಿಕೊಂಡವು. ಗುಡುಗು ಮಿಂಚು ಕೂಡಿ ಮಳೆ ಆರಂಭವಾಯ್ತು! ಮೂರು ದಿನ ಕಾಲ ಹಗಲೂ ರಾತ್ರಿ ಎನ್ನದೆ ಹೊಡೆದ ಮಳೆ ಮಗಧದ ಎಲ್ಲ ಭಾಗಗಳಲ್ಲೂ ಆದ ವರದಿಯನ್ನು ಚಾರರು ತಂದರು. ಕೆರೆಗಳು ತುಂಬಿದವು. ಭೂಮಿ ತಂಪಾಯಿತು ! ಬ್ರಾಹ್ಮಣರು ಹಿಗ್ಗಿದರು.

ನಾಲ್ಕನೇ ದಿನ ಮತ್ತೆ ಸಭೆ ಕೂಡಿತು. ರಾಜಗುರು ಅಂದು ಸಭೆಗೆ ಬರಲಿಲ್ಲ. ಆರೋಗ್ಯವಿಲ್ಲವೆಂಬ ಸಬೂಬು ಹೇಳಲಾಯಿತು !

ಚಾಣಕ್ಯ: "ದೊರೆಯೇ! ಆರ್ಯ ಅನಾರ್ಯ ಧರ್ಮಗಳ ವ್ಯತ್ಯಾಸ ಈಗಲಾದರೂ ತಿಳಿಯಿತೇ ? ನಾನು ಮಾಡಿದ ಪವಾಡ ಸದಾ ಮಾಡು ವಂಥದ್ದಲ್ಲ. ಪ್ರಕೃತಿಯನ್ನೂ ದೇವರನ್ನೂ ಒತ್ತಾಯಿಸಿ ಪಡೆಯುವ ಫಲ ಅಧಮ, ಅಧರ್ಮ. ನಮ್ಮ ಧರ್ಮ ನಾವು ನಡೆಸಿದರೆ ಪ್ರಕೃತಿ ತನ್ನ ಧರ್ಮ ತಾನು ಮಾಡುತ್ತದೆ. ಇದೇ ವೇದದ ಬೋಧೆ, ಗೀತೆಯ ಬೋಧೆ. ಇನ್ನು ನಿನ್ನ ರಾಷ್ಟ್ರದ ಭೂಮಿಯ ಹಂಚಿಕೆಯ ವ್ಯವಸ್ಥೆ ಹೇಗಿದೆಯೆಂದು ನೋಡುವ. ಜನಪದ ನಿವೇಶಾಧ್ಯಕ್ಷನನ್ನು ಕರೆಸು."

ಚಾಣಕ್ಯನೆದುರು ಆ ಅಧಿಕಾರಿ ನಡುಗುತ್ತ ಬಂದು ನಿಂತ. ಚಾಣಕ್ಯ ಆರಂಭಿಸಿದ ;

ಚಾಣಕ್ಯ : ''ನಂದರ ಅನುರಾಗಿಗಳಾಗಿದ್ದ ದೊಡ್ಡ ಜಮೀನುದಾರರು ಈ ರಾಷ್ಟ್ರದಲ್ಲಿ ಎಷ್ಟು ಜನರುಂಟು ?''

ಅಧಿಕಾರಿ : "ಸುಮಾರು ಎಂಭತ್ತೈದು ಸಾವಿರವಿದ್ದಾರೆ, ಪ್ರಭು."

ಚಾಣಕ್ಯ ; ''ಇವರಲ್ಲಿ ದೊಡ್ಡ ಹಿಡುವಳಿದಾರರ ಜಮೀನಿನ ಒಟ್ಟು ಪ್ರಮಾಣ, ಒಬ್ಬೊಬ್ಬರಲ್ಲಿ ಎಷ್ಟೆಷ್ಟು ಇದ್ದೀತು ?''

ಅಧಿಕಾರ : ''ಕೆಲವರು ಸಾವಿರಾರು ಎಕರೆ ಭೂಮಿ ಉಳ್ಳವರು, ಸುಮಾರು ಐವತ್ತು ಸಾವಿರ ಜಮೀನ್ದಾರರು ಇಂಥವರೇ. ಉಳಿದವರಲ್ಲಿ ಕೆಲವರು ಹಲವಾರು ಗ್ರಾಮಗಳನ್ನೇ ಉಳ್ಳವರು, ನೂರಾರು ಎಕರೆ ಭೂಮಿಯುಳ್ಳವರು, ಜೋಡೀದಾರರು, ಇನಾಮುದಾರರು, ದೇವಾಲಯ ಭೂಮಿ ಮೇಲ್ವಿಚಾರಕರು, ಬ್ರಾಹ್ಮಣ ಭೂಮಿ ರಕ್ಷಕರು ಹೀಗೆ ನಾನಾ ವಿಧ ಉಸ್ತುವಾರಿಯವರೂ ಉಂಟು.''

ಚಾಣಕ್ಯ : "ಅಯ್ಯಾ ! ಎಚ್ಚರಿಕೆಯಿಂದ ಈಗ ಉತ್ತರಿಸು.... ಈ ಎಲ್ಲ ಸಾಗುವಳಿ ಭೂಮಿಯೂ ಈಗ ಫಲಕೊಡುತ್ತಿದೆಯೋ ? ಉಳದೇ ಬಿಟ್ಟ ಭೂಮಿಯ ಪ್ರಮಾಣವೆಷ್ಟು? ಕಾರಣವೇನು? ಭಯವಿಲ್ಲದೆ ಹೇಳು. ಅವರಲ್ಲಿ ಹೀಗೆ ಬಂಜರು ಬಿಟ್ಟವರು ಯಾವ ಧರ್ಮದವರು ಇದ್ದರೂ ಸರಿ."

ಅಧಿಕಾರಿ ; "ಪ್ರಭು! ನನ್ನನ್ನು ವೃತ್ತಿಯಿಂದ ತೆಗೆಯದೆ ರಕ್ಷಿಸಬೇಕು. ನಂದರ ವಧೆಯ ನಂತರ ಅವರ ಅನುರಾಗಿಗಳಾದ ಈ ಬಲಾಢ್ಯ ದೊಡ್ಡ ಹಿಡುವಳಿದಾರರು ತಮ್ಮ ಭೂಮಿಯ ಅರ್ಧಕ್ಕರ್ಧ ಭಾಗವನ್ನು ಏನನ್ನೂ ಬೆಳೆಯದೇ ಬಿಟ್ಟಿರುತ್ತಾರೆ. ಅದರಿಂದ ಅವರಿಗೇನೂ ಕೇಡಾಗಿಲ್ಲ.

ರಾಷ್ಟ್ರದ ಉತ್ಪತ್ತಿ ಮಾತ್ರ ಕಮ್ಮಿಯಾಯ್ತು. ಅವರಲ್ಲಿ ಅನೇಕರು ನನ್ನಂತೆ ಅನ್ಯಧರ್ಮೀಯರು. ಬಡ್ಡಿಯ ವ್ಯವಹಾರದಿಂದಲೇ ಬದುಕುವ ಅವರಿಗೆ ವ್ಯವಸಾಯ ಉಪಧರ್ಮವಾಗಿದೆ. ಒಟ್ಟು ಭೂಮಿಯ ಅರ್ಧ ದಷ್ಟು ಈಗ ಐದಾರು ವರ್ಷಗಳಿಂದಲೂ ಪಾಳಾಗಿದೆ. ಮಳೆ ಬಿದ್ದರೂ ಅಷ್ಟೆ. ಬಾರದಿದ್ದರೂ ಅಷ್ಟೆ! ದೇವಾಲಯ ಮೇಲ್ವಿಚಾರಕಭೂಮಿ ರಕ್ಷಕರೂ, ಬ್ರಾಹ್ಮಣಭೂಮಿ ರಕ್ಷಕರೂ ಅವರಿಗೆ ಸಲ್ಲಬೇಕಾದುದನ್ನು ಕೊಡುತ್ತಿಲ್ಲ. ಇದರ ಹಿಂದೆ ಸಂಚೊಂದು ಇರುವಂತಿದೆ. ಹೊಸ ದೊರೆಯ ರಾಜ್ಯ ಸುಭಿಕ್ಷವಾಗದೆ, ಹಳೆಯ ನಂದರನ್ನೇ ಜನ ನೆನೆಯಲೆಂದು! ಹೇಗೆ ಹೇಳುವುದೆಂದು ತಿಳಿಯದೆ ಒದ್ದಾಡುತ್ತಿದ್ದೆ ಪ್ರಭು! ನಾನು ರಾಷ್ಟ್ರದ್ರೋಹಿ ಯಲ್ಲ! ರಾಷ್ಟ್ರ ನಿಮ್ಮನಾದ ಬಡವ.''

ಅಮಾತ್ಯ ರಾಕ್ಷಸನ ಆಡಳಿತೆಯ ಶಿಥಿಲಕಾಲ ಅದು! ರಾಕ್ಷಸನಿಗೆ ಎದೆ ನೋವು ಹಿಡಿಯಿತು! ಚಂದ್ರಗುಪ್ತನಿಗೆ ಕರುಳು ಹಿಂಡಿತು! ಚಾಣಕ್ಯ, ವಿಜಯಸೇನನೆಂಬ ಆ ಅಧಿಕಾರಿಗೆ ವಿಶೇಷ ರಾಜಮರ್ಯಾದೆ ಮಾಡಿಸಿ ಕಳುಹಿಕೊಟ್ಟ.

ಚಾಣಕ್ಯನ ದೆಸೆಯಿಂದ ಹೊಸ ಕೃಷಿನೀತಿ ಜಾರಿಗೆ ಬಂದಿತು. ಅದರ ವಿವರ ಹೀಗೆ. ಉದ್ದೇಶ್ಯಪೂರ್ವಕವಾಗಿ ಬಂಜರು ಬಿಟ್ಟ ಭೂಮಿ ಯನ್ನು ರಾಜನು ಆ ಧನಿಕ ಮಾಲಿಕರಿಂದ ಬಲಾತ್ಕಾರವಾಗಿ ಕಿತ್ತು ಬಡಕೃಷಿಕರಿಗೆ, ಭೂರಹಿತರಿಗೆ ಕೊಟ್ಟು-ಅವರನ್ನು ಶೋಷಿಸದೆ, ನಿಯತ ವಾದ ಧಾನ್ಯ ಪ್ರಮಾಣವನ್ನು ತೆರಿಗೆಯ ರೂಪದಲ್ಲಿ ಪಡೆಯಬೇಕು. ಉಳಿದ ಸಾಗುವಳಿ ಭೂಮಿಯಲ್ಲೂ, ಭೂಗುಣವನ್ನು ಪರೀಕ್ಷಿಸಿ, ಎಕರೆಗೆ ಎಷ್ಟೆಷ್ಟು ಬೆಳೆಯಬೇಕೆಂದು ಕಟ್ಟಳೆಯನ್ನು ಉಗ್ರವಾಗಿ ಹೊರಡಿಸಿ ಆ ಧನಿಕರಿಗೆ ತಿಳಿಸಬೇಕು. ಅಷ್ಟು ಬೆಳೆಯದಿದ್ದರೆ ನಷ್ಟವನ್ನು ಅವರಿಂದ ಬಲಾತ್ಕಾರ ವಾಗಿ ರಾಜನು ವಸೂಲಿ ಮಾಡಬೇಕು. ಬಡ ಕೃಷಿಕ ತನ್ನ ತಪ್ಪಿಲ್ಲದೆ ಉತ್ಪನ್ನ ಕಡಿಮೆಯಾದರೆ ಅವನನ್ನು ಶಿಕ್ಷಿಸಬಾರದು. ಅವನ ನಷ್ಟವನ್ನು ರಾಜನೇ ತುಂಬಿ ಕೊಡಬೇಕು. ಅವನಿಗೆ ಎತ್ತು, ಗಾಡಿ, ಬಿತ್ತನೆ ಬೀಜಾದಿ

ಗಳನ್ನು ಸರ್ಕಾರವೇ ಕೊಡಬೇಕು. ಧನಿಕರಾದ ದೊಡ್ಡ ಹಿಡುವಳಿದಾರರು ತಿದ್ದಿಕೊಳ್ಳದೆ, ಭೂಮಿಯ ಉತ್ಪನ್ನ ಕಡಿಮೆ ಮಾಡಿದರೆ, ಒಂದು ವರ್ಷದ ನಂತರ, ಸಾಮಾನ್ಯ ಭೂ ತೆರಿಗೆಯ ಎರಡರಷ್ಟನ್ನು ಅವರಿಗೆ ಹೇರಬೇಕು. ಕೊಡದಿದ್ದರೆ ಅವರ ಭೂಮಿಯನ್ನು ಕಿತ್ತುಕೊಂಡು ಅವರನ್ನು ದೈಹಿಕ ಶ್ರಮ ಕಾರ್ಯಗಳಲ್ಲಿ ತೊಡಗಿಸಬೇಕು.

ಎರಡನೆಯದಾಗಿ ಕೆರೆ ಕಟ್ಟಿ ಕಾಲುವೆಗಳ ಹೊಳೆತ್ತುವ ಕೆಲಸ ಭರದಿಂದ ಸಾಗಬೇಕು. ಹೊಸ ಆಣೆ ಕಟ್ಟುಗಳನ್ನು ಎಲ್ಲೆಲ್ಲಿ ಕಟ್ಟ ಬರುವುದೋ ಅಲ್ಲೆಲ್ಲ ಕಟ್ಟಲು ಸರ್ಕಾರ ಮುಂದಾಗಬೇಕು. ಗ್ರಾಮಸ್ಥರನ್ನೂ ಕೂಡಿಸಿಕೊಳ್ಳಬೇಕು. ಅವಿನೀತ ಕೆಲಸಗಾರರನ್ನೂ, ಅಡ್ಡ ಬರುವ ಭೂ ಮಾಲಿಕರನ್ನೂ ಸೆರೆಯಲ್ಲಿಡಬೇಕು. ರಾಜ್ಯದ ನೀರೆಲ್ಲ ಸರ್ಕಾರದ್ದು........ ಇತ್ಯಾದಿ ಇತ್ಯಾದಿ.

  

ಮರುದಿನ ಅಮಾತ್ಯ ರಾಕ್ಷಸನು ದೊರೆಯನ್ನೂ, ಚಾಣಕ್ಯನನ್ನೂ, ಕಂಡು ತಾನು ಅಮಾತ್ಯ ಪದವಿಗೆ ಅನರ್ಹನೆಂದೂ, ತನ್ನನ್ನು ವಿಮುಕ್ತಿಗೊಳಿಸಬೇಕೆಂದೂ, ತನ್ನ ತಪ್ಪಿನಿಂದ ಈ ಅನರ್ಥವಾಯಿತೆಂದೂ ಬಿನ್ನೈಸಿದ.

ಚಾಣಕ್ಯ : "ಅಮಾತ್ಯರೇ! ನಂದಾನುರಾಗಿ ಧನಿಕರನ್ನು ಅವರು ಯಾವ ಮಟ್ಟಿಯುರೇ ಆಗಿರಲಿ ನಿಗ್ರಹಿಸುವುದು ಈಗಲೂ ಸಾಧ್ಯ. ಅದಕ್ಕೆ ಅಧಿಕಾರಿಗಳನ್ನೆಲ್ಲ ತೆಗೆದು ಹಾಕಿ. ದಕ್ಷರನ್ನು ನೇಮಿಸಿಕೊಳ್ಳಿ. ಶಾಸನ ಕೊಂಚ ಉಗ್ರವಾಗಬೇಕು, ಅಷ್ಟೆ."

ಅಮಾತ್ಯ ; "ಪ್ರಭುಗಳ ಚಿತ್ತ."

ಚಾಣಕ್ಯನಿಗೆ ತಿಳಿಯಿತು : "ದೊರೆಯೇ ನಿನ್ನ ಹೊಸ ರಾಜಗುರು ವಿಗೆ ಅರಮನೆಯ ಅಧಿಕಾರ ನೇಮಕಾತಿಯ ವಿಷಯದಲ್ಲಿ ಪ್ರಭಾವ ಹೇಗೆ ಬೆಳೆಯಿತು? ರಾಣಿಯ ಮೂಲಕವಾದರೆ, ಇದು ದೊಡ್ಡ ತಪ್ಪು! ನಿನ್ನ

ಮೂಲಕವೇ ಆಗಿದ್ದರೆ ನೀನು ಪಶ್ಚಾತ್ತಾಪದೊಡನೆಯೇ ಸಾಯುವೆ ! ಖಂಡಿತ !" ಚಂದ್ರಗುಪ್ತ ಉತ್ತರಿಸಲಿಲ್ಲ!

  

ವಿದ್ಯುಲ್ಲೇಖೆ ಆಚಾರ್ಯನನ್ನು ಕಂಡು ನಮಸ್ಕರಿಸಿದಳು. ''ಬಂಜರು ಭೂಮಿಗೆ ಮಳೆ ತಂದ ದೇವರು ಬಂಜೆಗೂ ಮಗು ಕರುಣಿಸಿಯಾನು, ಮಗಳೇ! " ಎಂದಾಶೀರ್ವದಿಸಿದ. ಆಚಾರ್ಯ !

ದೊರೆಯೂ ನಮಸ್ಕರಿಸಿದ. ಆಚಾರ್ಯ ಅವನಿಗೆಂದ. "ಅಯ್ಯಾ! ನಾಯಿಗಳ ಹಿಂಡನ್ನು ಸಾಕುವವನ ದನವು ನಾಯಿಗಳಿಗೆ ಮಾತ್ರ ಹಾಲು ಕರೆಯುತ್ತದೆಯಷ್ಟೆ! ರಾಜನು ಗೋವುಗಳನ್ನು ಸಾಕಬೇಕೋ, ನಾಯಿ ಗಳನ್ನೋ ಎಂಬುದು ಹೊಸ ನಿರ್ಣಯವಲ್ಲವಷ್ಟೆ! ನಿನ್ನ ಆಡಳಿತದಲ್ಲಿ ಎಷ್ಟೊಂದು ಲೋಪದೋಷಗಳು ಬಲ್ಲೆಯಾ? ಎಂಥ ಅಸಮರ್ಥರು ಈ ನಿನ್ನ ಅಧಿಕಾರಿಗಳು! ಎಲ್ಲವನ್ನೂ ನಿನ್ನೆದುರೇ ನಿರೂಪಿಸಿರುವೆನಷ್ಟೆ ? ನಿನ್ನ ಗಮನಕ್ಕೆ ಬಾರದೆಯೇ ಇಷ್ಟೊಂದು ಅಯೋಗ್ಯರು ಹೇಗಯ್ಯ ಅಧಿಕಾರಕ್ಕೆ ಬಂದರು ? ಜಾತಿ ಪಕ್ಷಪಾತ ಈ ಪ್ರಮಾಣದಲ್ಲಿ ಹೇಗಾಯಿತು ? ಇದೆಲ್ಲ ಸರ್ವಧರ್ಮಸಮಭಾವವೆ ?"

ಚಂದ್ರಗುಪ್ತ ತನ್ನ ಅನಾರೋಗ್ಯವನ್ನೂ, ಅದರಿಂದ ಬಂದ ವೈರಾಗ್ಯ ಭಾವವನ್ನೂ ಗುರುವಿಗರುಹಿ, ಈ ದುರಾಡಳಿತ ತನ್ನ ಅಸಾಮರ್ಥ್ಯವನ್ನು ತೋರಿಸುವುದೆಂದೊಪ್ಪಿ, ತಾನು ಸಂನ್ಯಾಸಿಯಾಗುವ ಬಯಕೆಯನ್ನು ತಿಳಿಸಿದ!

ಚಾಣಕ್ಯನಿಗೆ ಸಿಡಿಲು ಬಡಿದಂತಾಯ್ತು ! "ಏನೆಂದೆ ? ನಿನಗೆ ಸಂನ್ಯಾಸವೆ ? ಅಯ್ಯೋ ! ಮೇಟಿಯೇ ಗಟ್ಟಿಯಿಲ್ಲವಾದರೆ ಧಾನ್ಯದ ಒಕ್ಕಣೆ ಹೇಗೆ ಶಕ್ಯ? ನಿನ್ನ ಅನಾರೋಗ್ಯಕ್ಕೆ ಮಂತ್ರ, ಔಷಧ, ನಿಯಮ,

ತಪಸ್ಸುಗಳಿಂದ ಗುಣ ಹುಡುಕೋಣ. ಮನಸ್ಸನ್ನು ಕೆಡಿಸಿಕೊಳ್ಳಬೇಕ.''
ಎಂದು ಬಾಯಿ ಮುಚ್ಚಿಸಿ ಕಳುಹಿದ.

  

ದಶಮಿಯಂದು ರಾಜಗುರುವೂ ಚಾಣಕ್ಯನೂ ವಾಕ್ಯಾರ್ಥ, ಧರ್ಮ ವಿಚಾರ ಸಂವಾದಕ್ಕೆ ಸಭೆ ಸೇರಿದರು. ಚಂದ್ರಗುಪ್ತ ನಿಷ್ಪಕ್ಷಪಾತಿಯಾದ ನ್ಯಾಯಾಧೀಶನಾಗಿ ಶಿರೋಧಾರ್ಯನಾಗುವ ಹೊಣೆ ಹೊತ್ತ. ಚಾಣಕ್ಯಶಿಷ್ಯ ಶ್ರುತವಿನೀತನು, ಆಚಾರ್ಯರ ಪರವಾಗಿ ತಾನೇ ಅಂದು ವಾದ ಮಾಡುವುದಾಗಿ ಅಪ್ಪಣೆ ಬೇಡಿದ. ಚಾಣಕ್ಯ ನಗುತ್ತ, "ಬೇಡ'' ಎಂದು ಬಿಟ್ಟ! ವಾದ ಆರಂಭವಾಯಿತು.

ರಾಜಗುರು : "ಒಂದು ದಿನಕ್ಕೆ ಮಳೆ ತಂದರೆ ಬರ ಹೋಗಲಾರದು ಆಚಾರ್ಯರೇ! ನೀವು ಹೋಮ ಮಾಡುವುದಕ್ಕೂ, ಮಳೆ ಬರುವುದಕ್ಕೂ ಕಾಕ ತಾಳೀಯ ಸಂಬಂಧವೇ ಹೊರತು, ಇದೆಲ್ಲ ವ್ಯರ್ಥ, ಯಜ್ಞಯಾಗ ಗಳಿಂದ ಆಗದು. ಭಾದ್ರಪದ ಮಾಸದಲ್ಲಿ ಮಳೆ ತರಿಸುವುದು ಹೆಚ್ಚಲ್ಲ. ಮಾಘ ಮಾಸದಲ್ಲಿ ತರಿಸಿದರೆ ನಿಮ್ಮ ಜಪ ಶಕ್ತಿ ಒಪ್ಪೋಣ! ''

ಚಾಣಕ್ಯ : ''ಸಂತಾನ ಶಕ್ತಿ ಇರುವವನು ಮುದುಕಿಯಲ್ಲಿ ಮಕ್ಕಳು ಹುಟ್ಟಿಸಬೇಕೆಂದೂ ಇಲ್ಲವಾದರೆ ಅವನು ನಿರ್ವೀರ್ಯನೆಂದೂ ವಾದಿಸಿದಂತಿದೆ ನಿಮ್ಮ ಸರಣಿ, ರಾಜಗುರುವೆ!! (ಶಿಷ್ಯರೂ, ಸಭೆಯೂ ನಗುತ್ತದೆ) ಪ್ರಕೃತಿ ತನ್ನ ಧರ್ಮವನ್ನು ಬಿಟ್ಟಾಗ, ಅದನ್ನು ಮತ್ತೆ ಅದಕ್ಕೆ ಸಾಧಿಸಿ ಕೊಡುವುದು ಮಂತ್ರ, ಜಪ, ಯಾಗಗಳ ಶಕ್ತಿಯ ನಿಯಮ. ಸಿಕ್ಕದ್ದನ್ನೆಲ್ಲ ಮಾಡುವುದಲ್ಲ. ಇನ್ನು ನಾಲ್ಕು ವರ್ಷ ಸತತ ಸುಭಿಕ್ಷ ಬರುವುದೋ ಇಲ್ಲವೋ ನೋಡಿ. ಮಳೆ ಬಂದರೆ ನಿಮ್ಮ ಕೈಯಿಂದಲ್ಲೆ ನೀವೇ ತಲೆ ಕತ್ತರಿಸಿಕೊಳ್ಳುವಿರಾ ? ನಾಲಗೆ ಕತ್ತರಿಸಿಕೊಂಡರೂ ಸಾಕು !'' (ಜನರೆಲ್ಲ ಹರ್ಷೋದ್ಗಾರ ಮಾಡುವರು.)

ರಾಜಗುರು ; "ಮುಂದಿನ ವಿಷಯ ಈಗೇಕೆ ? ರಾಷ್ಟ್ರಕ್ಕೆ ಹೇಗೂ ಕ್ಷೇಮವಾದರೆ ಸಾಕು. ಮಳೆ ಬರದಾರದೆಂದು ನಾವು ಹೇಳುವವರಲ್ಲ. ನಾವೂ ರಾಷ್ಟ್ರಭಕ್ತರೇ. ಮಾನವ, ತ್ಯಾಗದಿಂದ, ತಪದಿಂದ ಸಾಧಿಸಲಾಗದ್ದನ್ನು ಶುಷ್ಕ ಯಜ್ಞಕ್ರಿಯಾ ವಿಧಿಗಳು ಸಾಧಿಸಲಾರವೆಂದು ನಮ್ಮ ಮತ."

ಚಾಣಕ್ಯ ; "ಯಾವ ಕ್ರಿಯೆಯೂ ಅರ್ಥವಿಲ್ಲದೆ ಮಾಡಿದರೆ ಶುಷ್ಕವಾಗುತ್ತವೆ. ನಿಮ್ಮವೂ ಅಷ್ಟೇ. ಅದು ಕ್ರಿಯೆಯ ತಪ್ಪಲ್ಲ. ಆಚರಿಸುವವರ ವಿಧಿಲೋಪ, ಶ್ರದ್ಧಾಲೋಪ. ಇದೆಲ್ಲ ಇರಲಿ. ನೀವು ಬೋಧಿಸುವ ನಾಸ್ತಿಕ ಮತದಿಂದ ಲೋಕ ಕಲ್ಯಾಣ ಹೇಗೆ ಶಕ್ಯ? ಈ ನಿಮ್ಮ ಧರ್ಮ ಶುಷ್ಕವೋ, ನಮ್ಮದೋ? "

ವಾದ ಬೆಳೆಯಿತು. ತ್ಯಾಗ, ಯಜ್ಞ, ಅಹಿಂಸೆ, ತಪಸ್ಸು, ಇಂದ್ರಿಯ ನಿಗ್ರಹ, ಮೋಕ್ಷವೆಂಬ ಪರಮಪುರುಷಾರ್ಥ, ವರ್ಣ, ಆಶ್ರಮ ಧರ್ಮ, ಲೋಕನೀತಿ, ಪ್ರಜಾಕ್ಷೇಮ, ಮಾನವೀಯತೆ, ಮಾನವತಾವಾದ, ದೇವತಾವಾದ, ಪುಣ್ಯಪಾಪ, ಪರಲೋಕ – ಈ ಎಲ್ಲ ವಿಚಾರಗಳಲ್ಲೂ ಸತತ ಮೂರು ದಿನ ವಾದಪ್ರತಿವಾದ ನಡೆಯಿತು. ದೊರೆಯ ಆಸ್ಥಾನ ಕಿಕ್ಕಿರಿದು ಪಂಡಿತ ಪಾಮರರಿಂದ ಸೇರಿದ್ದು ಆಲಿಸಿತು. ಚಾಣಕ್ಯನೂ ದಣಿದ. ತನ್ನ ವಾಗ್ವಿಲಾಸವನ್ನೆಲ್ಲ ಈ ವಾಗ್ಯುದ್ಧದಲ್ಲಿ ಮೆರೆದ ! ರಾಜಗುರುವೂ ದಣಿದ. ಆವನ ಮಾತುಗಳು ಎಷ್ಟೂ ಕಳೆ ಕಟ್ಟಲಿಲ್ಲ.

ನಾಲ್ಕನೆಯ ದಿನ ವಾದ ಮುಗಿದು ನಿರ್ಣಯಕ್ಕೆ ಎಲ್ಲರೂ ಉತ್ಸುಕರಾಗಿ ಕುಳಿತರು. ಸೂರ್ಯ ನೆತ್ತಿಯ ಮೇಲೆ ನಿಂತ. ಚಾಣಕ್ಯನಿಗೆ ಮಾಧ್ಯಾಹ್ನಿಕದ ವೇಳೆ ಬಂತು.

ದೊರೆ ಗಂಭೀರವಾಗಿ ಮೇಲೆದ್ದು ಎರಡೂ ಕೈಯೆತ್ತಿ, ಗದ್ಗದಕಂಠದಿಂದ ನುಡಿದ ; ''ಚಾಣಕ್ಯ ಆಚಾರ್ಯರು ವಿಜಯಿಗಳಾಗಿದ್ದಾರೆ."

ಸಭೆ ಗಡಚಿಕ್ಕುವಂತೆ ಕರತಾಡನ ಮಾಡಿತು. ಬ್ರಾಹ್ಮಣರು "ಚಾಣಕ್ಯರಿಗೆ ಜಯವಾಗಲಿ'' ಎಂದು ಮುಗಿಲು ಬಿರಿಯುವಂತೆ ಘೋಷಿಸಿದರು. ದೊರೆ ಮುಂದುವರೆದ.

"ಪ್ರಮಾಣ ನಿರೂಪಣೆಯಲ್ಲಿ, ತರ್ಕಬಲದಲ್ಲಿ, ಯುಕ್ತಿಯಲ್ಲಿ, ವಾಕ್ ಶೈಲಿಯಲ್ಲಿ ಸಕಲ ವಿಧದಲ್ಲೂ ಆಚಾರ್ಯರು ರಾಜಗುರುಗಳ ವಾದಗಳನ್ನೆಲ್ಲ ಸಮರ್ಥವಾಗಿ ಖಂಡಿಸಿ, ವೈದಿಕ ಧರ್ಮದ ನಿರಾಬಾಧತ್ವವನ್ನು ಸ್ಥಾಪಿಸಿರುತ್ತಾರೆ.''

ಮತ್ತೆ ಕರತಾಡನವಾಯಿತು, ಹತ್ತು ನಿಮಿಷ. ಬ್ರಾಹ್ಮಣರ ಜಯಕಾರ ತಡೆಯಲು ಅಸಾಧ್ಯವಾಗಿ ಅರಮನೆಯ ಮಾಳಿಗೆಯನ್ನು ಕಿತ್ತೆಸೆಯಿತು!! ಮತ್ತೆ ಸಭೆ ಶಾಂತವಾದಾಗ ದೊರೆ ಈ ಕೊನೆಯ ಮಾತು ಹೇಳಿದ.

''ಆದರೆ ನಾವು ವೈರಾಗ್ಯ ಹೊಂದಿ ರಾಜ್ಯಪರಿತ್ಯಾಗ ಮಾಡಿ, ಸಂನ್ಯಾಸಿಗಳಾಗಿ ಹೊರಡುವ ನಿಶ್ಚಯ ಮಾಡಿದ್ದೇವೆ !'' ಸಭೆಯಲ್ಲಿ "ಅಯ್ಯೋ'' ಎಂಬ ಆಕ್ರಂದನ ಭೂಮಿಯನ್ನು ಬಿರಿಯಿತು ! ಚಾಣಕ್ಯ ಹುಬ್ಬುಗಂಟಿಕ್ಕಿದ !!



## ಇಪ್ಪತ್ತನಾಲ್ಕನೆಯ ಅಧ್ಯಾಯ

# ಮಗಧದ ಭಾಗ್ಯದೇವತೆ

ರಾಜಗುರುವೂ ಮತ್ತು ಶಿಷ್ಯರೂ ಹರ್ಷೋದ್ಗಾರ ಮಾಡುತ್ತಾ ಸಭೆಯಿಂದ ಹೊರ ನಡೆದರು.

ಚಾಣಕ್ಯ ಆಕಾಶವನ್ನು ಹುಬ್ಬುಗಂಟಿಕ್ಕಿ ನೋಡುತ್ತ, ಬಹು ಹೊತ್ತು ಅ ಸ್ಥಾನದಲ್ಲೇ ಕುಳಿತ, ಬ್ರಾಹ್ಮಣರಾರೂ ಕದಲಲಿಲ್ಲ. ಚಂದ್ರಗುಪ್ತನೂ ಅಲ್ಲೇ ನಿಂತ. ಸಭಾ ಪದ್ಧತಿಗೆ ಅಂದು ಭಂಗವಾಗಿತ್ತು. ಮೊದಲು ದೊರೆ ಏಳಬೇಕು. ನಂತರ ಸಭೆ ಎದ್ದು ನಿಲ್ಲಬೇಕು. ದೊರೆ ಅಂತಃಪುರಕ್ಕೆ ಹೊರಟ ಮೇಲೆ ಸಭಾಸದರು ಚದುರುತ್ತಿದ್ದರು. ಮೊದಲು ಅಮಾತ್ಯ, ಸೇನಾನಿ,ಸೇನಾ ಪ್ರಮುಖರು, ಪುರೋಹಿತ, ಪಂಡಿತರು, ವೈದ್ಯ, ಆಮೇಲೆ ಸಾಮಾನ್ಯರು, ಹೀಗೆ ಕ್ರಮವಿತ್ತು. ತಮ್ಮ ಗುರುವಿಗೆ ಅಪಮಾನ

ತೆಂದು ಕೆಲವರು ಅಂದು ಆ ಸಭಾಮರ್ಯಾದೆಯನ್ನು ಮುರಿದರು· ಅಮಾತ್ಯರಾಕ್ಷಸನಿಗೆ 'ಏನೋ ಕೋಲಾಹಲ ನಡೆಯುತ್ತಿದೆ' ಎಂದೂ, ಎಲ್ಲ ಪೂರ್ವಯೋಜಿತವೇದೂ, ಎನಿಸಿತು! ತಲೆ ತಗ್ಗಿಸಿ ಕುಳಿತಿದ್ದ!!

ಚಂದ್ರಗುಪ್ತ ಮೆಲ್ಲನೆ ಆಚಾರ್ಯನ ಪಾದಕ್ಕೆ ಶಿರಬಾಗಿ "ನನ್ನನ್ನು ಕ್ಷಮಿಸಬೇಕು." ಎಂದು ಪಿಸುಮಾತಿನಲ್ಲಿ ಪ್ರಾರ್ಥಿಸಿದ. ವಿದ್ಯುಲ್ಲೇಖೆ ಅವನ ಜೊತೆಯಲ್ಲೇ ನಿಂತಿದ್ದಳು! ಆಚಾರ್ಯ ದುಗುಡದಿಂದ ''ನಿನ್ನ ನಮಸ್ಕಾರವೂ ಬೇಡ! ನನ್ನ ಕ್ಷಮೆಯೂ ಬೇಡ! ಕೃತಘ್ನನಾದ ರೋಗಿಗೆ ಗುಣ ಪಡಿಸಿದ ವೈದ್ಯನಂತೆ ನಾನೇ ನಿಂದನೀಯ!!" ಎನ್ನುತ್ತಾ ನಿಟ್ಟುಸಿರಿಟ್ಟು ಅರಮನೆಯಿಂದ ಬಿರುಗಾಳಿಯಂತೆ ನಡೆದೇ ಬಿಟ್ಟ! ಆಚಾರ್ಯನ ಶಿಷ್ಯರು ಹಿಂಬಾಲಿಸಿದರು!! ಬ್ರಾಹ್ಮಣರೂ ನಿರುಪಾಯರಾಗಿ ಮನೆಗಳಿಗೆ ನಡೆದರು.

ಚಂದ್ರಗುಪ್ತ ಅಮಾತ್ಯನ ಮುಖ ನೋಡಿದ. ಅಮಾತ್ಯ ಶೂನ್ಯ ಮುಖನಾಗಿದ್ದ! ವಿದ್ಯುಲ್ಲೇಖೆಯ ಮುಖವನ್ನು ದೊರೆ ಗಮನಿಸಿದ! ಅದು ತಿರಸ್ಕಾರದಿಂದ ತುಂಬಿತ್ತು! ''ಎಲ್ಲ, ನೀವೇ ಮಾಡಿದ ಅವಾಂತರ'' ಎಂದು ಆ ಮುಖಭಾವ ಅವನನ್ನು ಚುಚ್ಚಿತು. ಭದ್ರಭಟ, ಡಿಂಗಿರಾತ, ಬಾಗುರಾಯಣಾದಿಗಳೂ ಅಸಮಾಧಾನಗೊಂಡದ್ದು ದೊರೆಯ ಗಮನಕ್ಕೆ ಬಂದಿತು!

ಚಾರನೊಬ್ಬ ಓಡಿ ಬಂದು ದೊರೆಯ ಮೊದಲ ರಾಣಿ (ಮೊದಲ ಹೆಂಡತಿ) ರಾಜನ ಅಕಾಲ ಪದತ್ಯಾಗ ಮತ್ತು ಸಂನ್ಯಾಸ ವಾರ್ತೆಯನ್ನು ಕೇಳಿ ಹೃದಯಾಘಾತದಿಂದ ಮೃತಿಯೈದಿದುದಾಗಿ ಬಿನ್ನವಿಸಿದ! ಈ ಸಿಡಿಲಿನಂಥ ವಾರ್ತೆಯನ್ನು ಕೇಳಿ ದೊರೆಗೆ ದಿಗ್ಭ್ರಾಂತಿಯಾಗಿ ಅವಳ ಬಳಿ ಗೋಡಿದ! ''ಇನ್ನೆಷ್ಟು ಜನರ ಬಲಿಯನ್ನು ನಾನು ತೆಗೆದುಕೊಳ್ಳಬೇಕೋ'' ಎಂದು ತನ್ನನ್ನೇ ಹಳಿದುಕೊಂಡ. ಪಟ್ಟದ ರಾಣಿಯೂ ಈ ವಾರ್ತೆಯಿಂದ ಪ್ರಕಟವಾಗಿಯೇ ಅಸಂತುಷ್ಟಳಾಗಿದ್ದಳು. ಅತ್ತ ರಾಜ

ಗುರುವೂ ಸೂರ್ಯೋದಯಕ್ಕೆ ಮುಂಚೆಯೇ ಕೊನೆಯ ಬಾರಿಗೆ ಪಾಟಲೀ ಪುತ್ರದಿಂದ ಹೊರಗೆ ನಿರ್ಗಮಿಸಿದ್ದ. ಆ ಹೊತ್ತಿನಲ್ಲಿ ಅವನನ್ನು ಕಾಣ ಲಾಗದುದಕ್ಕೆ ದೊರೆ ತುಂಬ ಪರಿತಪಿಸಿದ! ಇತ್ತ ರಾಣಿಯ ಮರಣ ! ಅತ್ತ ರಾಜ ಗುರುವಿನ ರಾಜ್ಯ ಪರಿತ್ಯಾಗ! ಮತ್ತೊಂದತ್ತ ಪ್ರಿಯ ಆಚಾರ್ಯನ ಕೋಪ! ಇನ್ನೊಂದತ್ತ ಪ್ರಿಯೆ ವಿದ್ಯುಲ್ಲೇಖೆಯ ಅಸಂತೋಷ, ಅಸಂತೃಪ್ತಿ!! "ಯಾರಿಗೆ ಸಮಾಧಾನ ಹೇಳುವುದು ?" ಎಂದು ತಿಳಿಯದೆ, ರಾತ್ರಿ ಭೋಜನವನ್ನೊಲ್ಲದೆ ದೊರೆ ನಿದ್ರೆ ತೊರೆದು ಬೆಳ್ಳಂಬೆಳಗೂ ಚಿಂತಿಸಿದ. ಶಾಂತಿ ಬರಲಿಲ್ಲ.

ಬೆಳಗಾದಾಗ ಚಾರನೊಬ್ಬ "ಆಚಾರ್ಯರು ಆಮರಣಾಂತ ಪ್ರಾಯೋಪವೇಶಕ್ಕೆ ಕುಳಿತಿದ್ದಾರೆ" ಎಂಬ ಮೃತ್ಯು ಸದೃಶ ಸಮಾಚಾರ ತಂದ !

ದೊರೆ ಒಡನೆಯೇ ಚಾಣಕ್ಯನ ನಿವಾಸಕ್ಕೆ ತೆರಳಿ, ಗುರುಪಾದದಲ್ಲಿ ಶಿರವನ್ನಿರಿಸಿ, ತನ್ನನ್ನು ಕ್ಷಮಿಸುವಂತೆಯೂ, ತಾನು ಯಾವ ಪ್ರಾಯ ಶ್ಚಿತ್ತಕ್ಕೂ, ತ್ಯಾಗಕ್ಕೂ ಸಿದ್ಧನೆಂದೂ ವಚನ ಕೊಟ್ಟ.

ಚಾಣಕ್ಯ : "ಮೂರ್ಖ ದೊರೆಯೆ ! ಸಂನ್ಯಾಸಕ್ಕೂ, ಪದ ತ್ಯಾಗಕ್ಕೂ ಸಂಕಲ್ಪಿಸಿರುವ ನೀನು ಇನ್ನೇನು ತ್ಯಾಗ ಮಾಡುವುದಿದೆ? ಪ್ರಾಣ ತಾನೇ ? ಅದು ನನಗೆ ಬೇಡ. ನೀನು ಅರಸು ಪದವಿಯನ್ನು ಬಿಡದೆ ಮಗಧವನ್ನು ರಕ್ಷಿಸುವೆಯೆಂದು ವಚನ ಕೊಟ್ಟರೆ ಮಾತ್ರ ಚಾಣಕ್ಯ ಮೇಲೇಳುತ್ತಾನೆ. ಇಲ್ಲವಾದರೆ ಅವನನ್ನು ಕೊಂದ ಪಾಪ ನೀನು ಸಂನ್ಯಾಸಿ ಯಾದರೂ ನಿನ್ನನ್ನು ಬಿಡದು! ಅವಿವೇಕಿಯೆ? ನಿನಗಾಗಿ ನಾನು ಮಾಡಿದ ಸಾಧನೆಗಳೆಷ್ಟು ? ನನ್ನ ತಪಸ್ಸೆಷ್ಟು ಖರ್ಚಾಯಿತೋ? ಸೂಳೆಯಾಗುವ ಬಯಕೆಯ ಗೃಹಿಣಿಯನ್ನು ಯಾರು ತಿದ್ದಿ ಮನೆಯಲ್ಲಿಟ್ಟುಕೊಳ್ಳಬಲ್ಲರು ? ಎಷ್ಟು ಕಾಲ ಇದು ಸಾಧ್ಯ? ನಿಯತವಾದ ಕರ್ತವ್ಯಕರ್ಮದಿಂದ ಮಾನ

ವನಿಗೆ ಸಂನ್ಯಾಸವೆಂಬುದಿಲ್ಲವೆಂಬ ಗೀತಾವಚನವನ್ನು ನಿನಗೆಷ್ಟು ಬಾರಿ ಹೇಳಿರುವೆ, ನೆನಪಿದೆಯೆ ? ಅರಸರು ಸಂನ್ಯಾಸಿಗಳಾದರೆ, ಪ್ರಜೆಗಳ ಪಾಡೇನು ? ನಿನಗೇನಾಗಿದೆ ?''

ದೊರೆ : ''ಗುರುವೆ ! ಮೊದಲು ಜ್ಞಾತಿವಧೆ ಮಾಡಿದೆ. ಘೋರ ಯುದ್ಧಕ್ಕೂ ಕಾರಣನಾದೆ. ಈ ಪಾಪವೇ ನನಗೆ ಈ ರೋಗ ತಂದಿತೆಂದು ಭಾವಿಸುತ್ತೇನೆ ! ಕೈ ಹುಣ್ಣಿಗೆ ಕನ್ನಡಿಯೇಕೆ ? ನನ್ನ ಕರ್ಮ ನನಗೇ ಶಿಕ್ಷೆ ವಿಧಿಸಿತು. ನಂದರು ಶಿಷ್ಟರೋ, ದುಷ್ಟರೋ ಅವರ ಕರ್ಮ ಅವರಿಗೆ ನ್ನದೆ, ಕ್ಷುದ್ರರಾಜ್ಯಕ್ಕೆ ಆಶಿಸಿ ನಾನು ಮಾಡಿದುದೆಲ್ಲ ತಪ್ಪು. ಈ ರೋಗ ವನ್ನು ನಾನಿನ್ನು ಅನುಭವಿಸಲಾರೆ. ನನ್ನ ಪ್ರಜೆಗಳು ನನ್ನ ತಪ್ಪಿಗೆ ಬಲಿ ಯಾಗಿ ಕ್ಷಾಮದ ಬವಣೆಯನ್ನನುಭವಿಸುವುದು ಇನ್ನು ಬೇಡ. ನಾನೆಲ್ಲಾ ದರೂ ತೊಲಗಿದರೇ ಕ್ಷೇಮ. ಇದರಲ್ಲಿ ನನಗೂ ಲೋಕಕ್ಕೂ ಕ್ಷೇಮ ವಿದೆ. ಗುರುಗಳೆ ! ನಾನು ಕೃತಘ್ನನಲ್ಲ. ಅವಿವೇಕಿಯೂ ಅಲ್ಲ. ನಿಮ್ಮ ತ್ಯಾಗವನ್ನೂ, ನನ್ನ ಮೇಲಿನ ಪ್ರೀತಿಯನ್ನೂ ಮರೆತವನೂ ಅಲ್ಲ. ನನ್ನ ಮಾತನ್ನು ನಂಬಿ.''

ಚಾಣಕ್ಯ : ''(ಕ್ರೋಧದಿಂದ ಕುದಿಯುತ್ತಾ) ಎಲವೋ! ಮುಠಾಳ ಅರಸೇ ! ಇದು ಬೇರೆಯೋ, ಈ ಬಾಯಿಬಡುಕತನ ! ಹಿಂದಣ ಅರ್ಜುನ ನಂತೆ, ಧರ್ಮರಾಜನಂತೆ ಮಾತಾಡಲು ನಾಚಿಕೆಯಾಗಲಾರದೆ? ಜ್ಞಾತಿ ವಧೆ ಮಾಡಿದವನು ನೀನಲ್ಲ. ನಂದರು ! ನಿನ್ನ ತಂದೆ, ತಾತಂದಿರನ್ನು ಕೊಂದವರಾರು ? ನೆನಪಿದೆಯೇ ? ದೈವವೇ ನಂದರನ್ನು ನಿಗ್ರಹಿಸಿತು. ನೀನೂ ನಾನೂ ಅದರ ಉಪಕರಣಗಳಾದೆವು. ಕರ್ತವ್ಯ ನಿರ್ವಹಿಸಿದ ದೊರೆಯ ಉಪಕರಣಗಳಿಗೆ ಹೇಗೆ ಪಾಪವಿಲ್ಲವೋ ಹಾಗೆ ನಿನಗೂ ನನಗೂ ಯಾವ ಕಳಂಕವೂ ಇಲ್ಲ! ಇದನ್ನೆಷ್ಟು ಸಲ ನಿನಗೆ ಹೇಳಬೇಕು? ನಿನಗೆ ರೋಗ ಬಂದದ್ದಕ್ಕೆ ಅದು ಕಾರಣವಲ್ಲ. ಅದನ್ನು ಹುಡುಕಿ ನಿಗ್ರಹಿಸದಿದ್ದರೆ ನಾನು ಚಾಣಕ್ಯನಲ್ಲ. ಬಂದುದನ್ನು ಧೈರ್ಯದಿಂದ ಎದುರಿಸದೆ, ಚಾಣಕ್ಯ ನನ್ನು ಕೇಳದೆ, ಅವನನ್ನು ಕೈಬಿಟ್ಟು ದುಷ್ಟ ಗುರುಗಳ ದುರ್ಬೋಧೆಗೆ ಎಡೆ

ಯಾಗಿ ಅನಾರ್ಯವಾಗಿ ಸಾಯುವುದು ,ಯಾವ ಧರ್ಮ?. ಯಾವ ನೀತಿ ? ನಿನಗೆ ತಲೆ ಕೆಟ್ಟಿರುವುದು ನಿಜ! ಬರಗಾಲ ಬಂದುದಕ್ಕೆ ದೈವ ಕೋಪ ಕಾರಣ. ನಿನ್ನಂತೆ ಹೀಗೆ ಅವಿವೇಕ ಮಾಡಿದರೆ ಬರಗಾಲವೂ ಬಂದೀತು ! ರೋಗ ದುರ್ವ್ಯಾಧಿಗಳೂ ಆಡರುವುವು. ನೀನು ಪದತ್ಯಾಗದ ಮಾತನ್ನು ಕೈಬಿಡು. ಮಗಧಕ್ಕೆ ನಾನು ಸುಭಿಕ್ಷ ತಂದು ಕೊಡುತ್ತೇನೆ- ನಿನ್ನ ರೋಗಕ್ಕೆ ಕಾರಣ ಪತ್ತೆ ಹಚ್ಚಿ ನಿನ್ನನ್ನು ಮುಕ್ತ ಮಾಡುವುದು ನನ್ನ ಹೊಣೆ....ಸತ್ತ ರಾಣಿಯ ಉತ್ತರ ಕ್ರಿಯೆಯನ್ನು ಸರಿಯಾಗಿ ಮಾಡಿಸು. ಉಳಿದ ರಾಣಿಯರು ಸಾಯದಂತೆ ಕಾಪಾಡಿಕೋ !! ನನ್ನ ಮಾತನ್ನು ಕೇಳುತ್ತೇನೆಂದರೆ ಮಾತ್ರ ನಾನು ನಿರಶನ ವ್ರತ ಕೈ ಬಿಡುತ್ತೇನೆ. ಚಾಣಕ್ಯನ ಕ್ರಿಯಾಶಕ್ತಿಯನ್ನು ಕಣ್ಣಿಂದ ಕಂಡೂ, ಹೀಗೆ ಗುರುಪ್ರೀತಿಗೆ ಬಾಹಿರನಾಗಬೇಡ. ಊರಲ್ಲಿ, ರಾಜ್ಯದಲ್ಲಿ ಯಾವ ನಿನ್ನ ದುರ್ಬೋಧಕನೂ ಇರತಕ್ಕುದಲ್ಲ ! ತಿಳಿಯಿತೆ? ಸ್ವಕರ್ಮದಲ್ಲಿರುವ ಅನ್ಯಮತೀಯ ಗೃಹಸ್ಥರು ಇರಲಿ. ಅವರ ವೈಯಕ್ತಿಕ ಆಚರಣೆಗಳ ಬಗೆಗೆ ಆಕ್ಷೇಪವಿಲ್ಲ. ಕಪಟಿ ಧೂರ್ತರನ್ನು ನಿಗ್ರಹಿಸು. ಪಟ್ಟದ ರಾಣಿಯ ಬಳಿ ಬಂದು ಹೋಗುವವ ರನ್ನು ಗಮನಿಸಿ ಹದ್ದು ಬಸ್ತಿನಲ್ಲಿಡು''.

ದೊರೆ ವಚನ ಕೊಟ್ಟ ಮೇಲೆ ಚಾಣಕ್ಯ ಆಹ್ನಿಕಕ್ಕೆ ನೇಲೆದ್ದ. ಅಮಾತ್ಯನನ್ನೂ ಬಾಗುರಾಯಣನನ್ನೂ ಕರೆಸಿ ಬಹು ಹೊತ್ತು ಅವರೊಡನೆ ಆಚಾರ್ಯ ಏನೇನೋ ಚರ್ಚಿಸಿದ.

ದೂರದೂರದ ಅಗ್ರಹಾರಗಳ ಬ್ರಾಹ್ಮಣರೂ, ವೈಶ್ಯಕುಲತಿಲಕರೂ, ದೈವ ಭಕ್ತರೂ ಆಚಾರ್ಯನ ದರ್ಶನಕ್ಕೆಂದು ಜಾತ್ರೆಗೆ ಬರುವ ಯಾತ್ರಿಕ ರಂತೆ ಬರಲಾರಂಭಿಸಿದರು. ''ಆಚಾರ್ಯ ಮತ್ತೆ ಮಗಧದಲ್ಲಿ ನೆಲೆಸುವನಂತೆ! ದುರ್ಭಿಕ್ಷ ತೊಲಗಿಸುವ ಭಾಗ್ಯದೇವತೆ ಮತ್ತೆ ರಾಜ್ಯಕ್ಕೆ ಬಂದಿದೆಯಂತೆ. ದೊರೆಯ ಪದತ್ಯಾಗ ನಿಶ್ಚಯ ಕೈಬಿಡಲಾಗಿದೆಯಂತೆ !'' ಎಂಬ ಸುದ್ದಿ ರಾಜ್ಯದಲ್ಲೆಲ್ಲ ದಾವಾನಲನಂತೆ ಹಬ್ಬಿತು. ನಿರಾಶೆಯ ಹಿಮದಲ್ಲಿ ಸಾಯು ತ್ತಿದ್ದ ಸತ್ಪ್ರಜೆಗಳಿಗೆ ಬೆಚ್ಚನೆಯ ಸುದ್ದಿ ಮುಟ್ಟಿತು.

  

ಅರಮನೆಯ ವೈದ್ಯನನ್ನು ಕರೆಸಿ ಆಚಾರ್ಯ ಚಂದ್ರಗುಪ್ತನ ದೇಹಾರೋಗ್ಯದ ವಿಷಯವನ್ನು ಚರ್ಚಿಸಿದ. ಅವನ ವಿವರಣೆ, ಚಿಕಿತ್ಸೆ ಎಲ್ಲ ಸಮರ್ಪಕವಾಗಿತ್ತು. ಅವನನ್ನು ಕಳುಹಿ, ಅಮಾತ್ಯನೊಡನೆ ಗುರು ಚರ್ಚಿಸಿದ: "ಇನ್ನುಳಿದಿರುದು ಅಭಿಚಾರದ ಶಂಕೆ. ಅಮಾತ್ಯರೇ! ನಂದರ ಕಡೆಯ ಭಕ್ತರು ಇನ್ನೂ ಇರುವ ಸಂಭವವೊ? ಅಥವಾ ಆಚಾರ್ಯರು ತಮ್ಮ ಪ್ರಾಬಲ್ಯ ಕಳೆದುದಕ್ಕೆ ಸಿಟ್ಟಾಗಿ ಎರಗಿರುವುದು ಸಂಭವವೋ? ಅಭಿಚಾರ ಮಾಡುವವರು ಇಲ್ಲಿ ಯಾರಾರು ಇರುವರು?" ಎಂದು ಕೇಳಿದ. ಶೋಧಿಸಿ ಹೇಳುವಂತೆ ಉತ್ತರಿಸಿ ಅಮಾತ್ಯ ನಿರ್ಗಮಿಸಿದ. ಚಾಣಕ್ಯ ಮೂರು ದಿನ ಉಪವಾಸವಿದ್ದು ಮುಂದಿನ ಅಮಾವಾಸ್ಯೆಯ ರಾತ್ರಿ ಇಷ್ಟ ದೇವತಾ ಧ್ಯಾನ ಮಾಡಿ, ಕಣ್ಣಿಗೆ ಅಂಜನ ಹಚ್ಚಿಕೊಂಡ. ಮನಸ್ಸಿನ ಶಂಕೆಗೆ ಅಂಜನ ಉತ್ತರ ತಿಳಿಸಿತು! ಅರಮನೆಯ ವಿಶಾಲ ಅಂಗಳದ ಅಂಚಿನಲ್ಲಿ ಒಂದು ಬಿಲ್ವ ವೃಕ್ಷ... ದೊರೆ ನಿತ್ಯ ವಾಯು ವಿಹಾರಕ್ಕೆಂದು ಸುತ್ತಿ ಬರುತ್ತಿದ್ದ ದಾರಿಯ ಅಂಚು ಅದು....ಅದರಡಿಯಲ್ಲಿ ಒಂದು ಹುತ್ತ.... ಆ ಹುತ್ತದೊಳಗೆ ಮಿನುಗುವ ಬಣ್ಣ ಬಣ್ಣದ ಒಂದು ಹಿಟ್ಟಿನ ಗೊಂಬೆಗೆ ಮೈಯೆಲ್ಲಾ ಕಪ್ಪು ಚುಕ್ಕೆಗಳಾಗಿದ್ದು, ಅದರ ಕಂಗಳು ಭಯಂಕರವಾಗಿ ಮಿನುಗುತ್ತಿದವು!.... ಈ ದೃಶ್ಯವು ಅಂಜನ ಹಾಕಿಕೊಂಡ ಚಾಣಕ್ಯ ಗಣ್ಣಿಗೆ ಕಾಣಿಸಿತು!!

''ಯಾರು ನಿನ್ನನ್ನು ಪ್ರತಿಷ್ಠಿಸಿದರು? ಬೊಗಳು? ನಿನಗೆ ಚಿತ್ರಹಿಂಸೆ ಮಾಡಿ ಉಚ್ಚಾಟಿಸುವೆ! ಎಲೆ ರಂಭೇ ಶಕ್ತಿಯೇ! ಇಲ್ಲೇಕೆ ಬಂದು ದೊರೆಗೆ ಉಪದ್ರವ ಕೊಡುತ್ತಿರುವೆ?" ಎನ್ನುತ್ತಾ ಮಂತ್ರಿಸಿದ ದರ್ಭೆಯಿಂದ ಆಚಾರ್ಯ ಆ ಗೊಂಬೆಯ ಆಕೃತಿಗೆ ಬಡಿದ!!

ಬೊಂಬೆ ಬಾಯ್ಬಿಡಲಿಲ್ಲ! ಚಾಣಕ್ಯ ಅಗ್ನಿಯನ್ನು ಪ್ರತಿಷ್ಠಿಸಿ, ಸ್ವಾಹಾಕಾರ ಪೂರ್ವಕವಾಗಿ ಗೊಂಬೆಯ ತೇಜೋವಧೆಗೆ ಉಪಕ್ರಮಿಸಿದ. ಅದಕ್ಕೆ ತಡೆಯಲಾರದ ಯಾತನೆ ಆರಂಭವಾಯಿತು. ''ಮೀರಾಚಾರ'

ವೀರಾಚಾರಿ, ವೀರಾಚಾರಿ !!!" ಎಂದು ಮೂರು ಸಲ ಹೇಳಿತು. ಚಾಣಕ್ಯ ಚಕಿತನಾದ ! ''ಆ ವಿಧವಾಪುತ್ರನೋ ನಿನ್ನನ್ನಲ್ಲಿಟ್ಟವನು ? ಅವನಿಗೆ ಶಾಸ್ತಿ ಮಾಡುತ್ತೇನೆ ನೋಡುವೆಯಂತೆ ! ನೀನು ತೊಲಗು. ನಿನಗೇನು ಬೇಕು ? ದೊರೆಯ ಪ್ರಾಣ ಬಿಟ್ಟು ಬೇರೇನನ್ನಾದರೂ ಕೇಳಿಕೋ '' ಎಂದು ಗರ್ಜಿಸಿದ! ಗೊಂಬೆ ಮತ್ತೆ ವೀರಾಚಾರಿಯ ಹೆಸರನ್ನು ಮೂರು ಸಲ ಹೇಳಿತು. ಅವನ ರಕ್ತವನ್ನು ಗೊಂಬೆ ಕೇಳುತ್ತಿದೆಯೆಂದು ಆಚಾರ್ಯ ತಿಳಿದುಕೊಂಡ. ದರ್ಭೆಯ ಶಕ್ತಿಯಿಂದ ಗೊಂಬೆಯ ಕೈಕಾಲುಗಳನ್ನೂ, ಅದರ ದುಃಶಕ್ತಿಯನ್ನೂ ಕಟ್ಟಿ ಹಾಕಿ, ಅದನ್ನು ಸಾಯಿಸುವ ಬೆದರಿಕೆ ಹಾಕಿದ ! ಗೊಂಬೆ ಕಣ್ಣೀರಿಟ್ಟು ತಲೆಯಾಡಿಸಿ, ತನಗೇನೂ ತೊಂದರೆ ಕೊಡ ದಂತೆ ಪ್ರಾರ್ಥಿಸಿತು. "ಹಾಗಾದರೆ ಇಂದಿನಿಂದ ದೊರೆಯನ್ನು ಕಾಡಬೇಡ! ವೀರಾಚಾರಿಯ ರಕ್ತವನ್ನೇ ಕೊಡಿಸುತ್ತೇನೆ'' ಎಂದು ಆಚಾರ್ಯ ಹೇಳಿದ.

  

ಮರುದಿನ ಮಾಧ್ಯಾಹ್ನಿಕದ ವೇಳೆಗೆ ಅಮಾತ್ಯ ಓಡೋಡಿ ಬಂದು ಚಾಣಕ್ಯನನ್ನು ಕಂಡ ; ''ಆಚಾರ್ಯರೆ ! ನಂದರಿಂದ ಉಪಕೃತರಾದ ಧನಿಕರು ಬಹಳ ಜನ ಇನ್ನೂ ಮಗಧದಲ್ಲುಂಟು. ತಮ್ಮ ಉಗ್ರ ಕೃಷಿ ನೀತಿ, ಹೊಸ ಶಾಸನ ಅವರಿಗೆ ಪ್ರಕಟವಾಗಿಯೇ ಕೋಪ ತಂದಿದೆ! ಇದು ಹೊಸ ಮಾತು!! ದೊರೆಯ ರೋಗಕ್ಕೂ ಇದಕ್ಕೂ ಸಂಬಂಧವಿಲ್ಲ. ಇನ್ನು ಪ್ರಭಾವ ಕಳಕೊಂಡ ಜನಾಂಗದ ವಾಮಾಚಾರದ ಸಾಧ್ಯತೆ. ಅದು ಇದೆ. ಅವರು ವಾಮಾಚಾರ ಬಲ್ಲವರಾದರೂ ಇಷ್ಟು ತೀವ್ರವಾದ ರಾಜೋಪದ್ರವಕ್ಕೆ ಅವರಿಗೆ ಶಕ್ತಿಯಿಲ್ಲ. ಈ ಊರಲ್ಲಿ ಅಥರ್ವವೇದೀ ಪಂಡಿತ ಒಬ್ಬನೇ ಇದ್ದಾನೆ. ಆಸ್ಥಾನ ಪಂಡಿತ. ಅವನು ವೇದಜ್ಞನೇ ಹೊರತು ಪ್ರಯೋಗ ಜ್ಞನಲ್ಲ. ಮಲೆಯಾಳೀ ಮೋಡಿ ಹಾಕುವವರು ಮೂವರು ಈಗ ಐದಾರು ವರ್ಷಗಳಿಂದ ಬಂದು ಸೇರಿಕೊಂಡಿದ್ದಾರೆ. ಮೂವರೂ ಬೇರೆ ಬೇರೆ ಊರಿ ನವರು. ಒಬ್ಬನ ಹೆಸರು ವೀರಾಚಾರಿ. ಇವನೇ ಪ್ರಬಲ. ಇವನಿಗೆ ವರ

ಮಾನವೂ ಹೆಚ್ಚಾಗಿದೆ. ಮತ್ತೊಬ್ಬ ಕಾಳಾಚಾರಿ. ಇನ್ನೊಬ್ಬ ಭದ್ರಾಚಾರಿ. ಇವರಿಬ್ಬರನ್ನೂ ಬಂಗಾರದ ಆಭರಣ ತಯಾರಿಕೆಗೆಂದು ನಂದ ಭಕ್ತನೊಬ್ಬ ಧನಿಕ ಕರೆತಂದನಂತೆ ಇವರೂ ವಾಮಾಚಾರಿಗಳಾದರೂ, ಅದು ಅವರಿಗೆ ಪ್ರಾಸಂಗಿಕ, ಮೂವರನ್ನೂ ಕರೆಸಿದ್ದೇನೆ. ಅರಮನೆಯ ಅಪರಾಧಿ ಪರೀಕ್ಷಾ ಶಾಲೆಯಲ್ಲಿ ದೊರೆಗಳೇ ಆಸೀನರಾಗಿರುವರು. ಅವರ ಸಮ್ಮುಖದಲ್ಲೇ ಇದರ ಪರೀಕ್ಷೆಯಾಗಲಿ" ಎಂದ.

ಚಾಣಕ್ಯನಿಗೆ ಆನಂದವಾಯಿತು. ಮಾಧ್ಯಾಹ್ನಿಕ ಮುಗಿಸಿ ಶಿಷ್ಯರೊಡನೆ ಅರಮನೆಗೆ ನಡೆದ ದೊರೆ ನಮಸ್ಕರಿಸಿ, ತನ್ನ ಶರೀರದಲ್ಲಿ ಹೊಸ ಲವಲವಿಕೆ ಮೂಡಿರುವುದೆಂದೂ ಇದು ಆಚಾರ್ಯಾನುಗ್ರಹವೆಂದೂ ಬಿನ್ನೈಸಿದ. ಆಚಾರ್ಯ ತನ್ನ ಸಂಶೋಧನೆಯನ್ನು ಯಾರಿಗೂ ತಿಳಿಸಿರಲಿಲ್ಲ! ದೇವರನ್ನು ಧ್ಯಾನಿಸಿ ''ಆಯುಷ್ಮಂತನಾಗು !" ಎಂದು ಹರಸಿ, ಭದ್ರಾಸನದಲ್ಲಿ ಕುಳಿತು ವಿಚಾರಣೆ ಆರಂಭಿಸಿದ. ಮೊದಲು ಕಾಳಾಚಾರಿ, ಭದ್ರಾಚಾರಿಗಳನ್ನು ಒಬ್ಬೊಬ್ಬರನ್ನೇ ವಿಚಾರಿಸಿ, ಅವರು ನಿರಪರಾಧಿಗಳೆಂದು, ತಿಳಿದು ಅವರು ಮಾಡುತ್ತಿದ್ದ ಬೇರೆ ವಾಮಾಚಾರಗಳ ಬಗೆಗೆ ಅವರಿಂದಲೇ ಬಾಯಿಬಿಡಿಸಿ, ಅವರಿಗೆ ದೊರೆಯ ಹೆಸರಲ್ಲಿ ಗಡೀ ಪಾರು ಶಿಕ್ಷೆ ವಿಧಿಸಲಾಯಿತು.

ಮೂರನೆಯ ಅಪರಾಧಿ ವೀರಾಚಾರಿ ಬಂದು ಎದುರು ನಿಂತ! ದೊರೆ ಅವನನ್ನು ನಿಟ್ಟಿಸಿ ನೋಡಿದ. ಅವನನ್ನು ಮುಂಚೆ ನೋಡಿದ್ದ ನೆನಪಾಯಿತು ! ''ಎಲವೋ, ಪ್ರತೀ ಅಮಾವಾಸ್ಯೆಯೂ ದೇವಿ ಪ್ರಸಾದವೆಂದು ನನಗೆ ಹೂವು, ನಿಂಬೇಹಣ್ಣು ತಂದು ಕೊಡುತ್ತಿದ್ದೆಯಲ್ಲವೆ ? ಎಂದು ಕೇಳಿದ !

ಅಮಾತ್ಯ, ಬಾಗುರಾಯಣ, ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು! ಚಾಣಕ್ಯ ''ಆ ನಿಂಬೇ ಹಣ್ಣುಗಳೆಲ್ಲಿ ?'' ಎಂದು ಕೇಳಿದ. "ದೇವರ ಮನೆಯಲ್ಲಿ'' ಎಂದ ಮೇಲೆ, ಚಾಣಕ್ಯನ ಮುಖ ಹುಬ್ಬು ಗಂಟಿ

ಕ್ಕಿತು ! ''ಅಪರೀಕ್ಷಿತರು ಕೊಟ್ಟದ್ದನ್ನೆಲ್ಲ ದೊರೆ ಹೀಗೆ ಮುಟ್ಟುವುದೆ ?'' ಎಂದು ಕೇಳಿದ. ಚೀಟಿಯ ಕಡೆಯಿಂದ ಆ ಹಣ್ಣುಗಳನ್ನು ತರಿಸಿದ ! ಸುಮಾರು ಹತ್ತು ಹನ್ನೆರಡು ಇದ್ದವು. ಉಳಿದವನ್ನು ಎಸೆಯಲಾಗಿತ್ತು. ವೀರಾಚಾರಿ ನಡನಡುಗುತ್ತಿದ್ದ !

ಚಾಣಕ್ಯ : ''ಎಲೋ ದುರಾತ್ಮನೇ ! ರಾಜದ್ರೋಹದ ಅಪಾದನೆ ನಿನ್ನ ಮೇಲಿದೆ. ದೊರೆಗೆ ಈ ರೋಗವನ್ನೇಕೆ ಬರಿಸಿದೆ ? ಯಾರು ಹಣ ಕೊಟ್ಟರು ? ಯಾರ ಪ್ರಚೋದನೆ ಇದು ? ಈ ಊರಿಗೇಕೆ ಬಂದೆ?''

ಆಚಾರಿ "(ಅರ್ಧ ಮಲೆಯಾಳ, ಅರ್ಧ ಮಾಗಧಿಗಳ ಮಿಶ್ರ ಭಾಷೆ ಯಲ್ಲಿ) ''ನನಗೇನೂ ಗೊತ್ತಿಲ್ಲ ! ತಾವೇನೆನ್ನುತ್ತಿರುವಿರೋ ತಿಳಿಯದು'' ಎಂದ.

ಅಮಾತ್ಯನ ದೂತರು ಬಂದು ಚಾಣಕ್ಯನ ಕಣ್ಣು ಸನ್ನೆಯಿಂದ ಆಚಾರಿಗೆ ನಾಲ್ಕು ಬಿಗಿದರು! ಅವನು ಬಾಯಿ ಬಿಡಲಿಲ್ಲ. ಒಳಗೊಯ್ದು ಅವನನ್ನು ಚೆನ್ನಾಗಿ ಥಳಿಸಿ, ಹಣ್ಣು ಮಾಡಿ ಕರೆತಂದರು. ಆಚಾರಿ ಬಾಯಿ ಬಿಟ್ಟ. ಯಾರೋ ಧನಿಕನೊಬ್ಬ ಅವನನ್ನು ಮಲೆಯಾಳದಿಂದ ಈ ಕೆಲಸ ಕ್ಕೆಂದೇ ಕರೆತಂದನೆಂದೂ, ಅವನು ಸಂದರು ಸತ್ತ ವರ್ಷವೇ ಸತ್ತನೆಂದೂ, ಈಚೆಗೆ ಸಂನ್ಯಾಸಿಯೊಬ್ಬ ಬಂದು ತನ್ನ ಶತ್ರುವೊಬ್ಬನ ಸಾವಿಗಾಗಿ ಒಂದು 'ಕೃತ್ಯ'ವನ್ನು ಮಾಡಿಸಲು ಹಣಕೊಟ್ಟು ಹೋದನೆಂದೂ; ಕೃತ್ಯವು ಯಾರ ವಿರುದ್ಧವೋ ಅವನು ಭಯಂಕರ ರೋಗವೊಂದರಿಂದ ಸಾಯುವಂತೆ ಮಾಡ ಹೇಳಿದನೆಂದೂ, ಅವನ ನಕ್ಷತ್ರ, ಪುಷ್ಯವೆಂದೂ, ಅವನ ಎರಡು ತಲೆ ಗೂದ ಲನ್ನೂ, ನಾಲ್ಕು ಚೂರು ಕಾಲು ಕೈ ಉಗುರುಗಳನ್ನೂ ತಂದು ಕೊಟ್ಟ ನೆಂದೂ, ಆ ನಿಮಿತ್ತ ಆಚಾರಿಯು ಕೃತ್ಯವನ್ನು ಮಾಡಿದ್ದಾಗಿಯೂ ತಿಳಿಸಿ ದನು.

ಆಚಾರ್ಯ ; ''ನಿನಗೆ ಆ ತಲೆಗೂದಲನ್ನೂ, ಉಗುರುಗಳನ್ನೂ ತಂದು ಕೊಟ್ಟವನನ್ನು ಗುರುತಿಸ ಬಲ್ಲೆಯಾ ?''

ಆಚಾರಿ ; "ಖಂಡಿತ, ಮಹಾಸ್ವಾಮಿ."

ಚಾಣಕ್ಯನು ಅರಮನೆಯ ಹಡಪದ ಊಳಿಗದ ಐವತ್ತು ಮಂದಿಯನ್ನು (ಕ್ಷೌರಿಕರನ್ನು) ಕರೆಸಿದ. ಆ ಪೈಕಿ ಒಬ್ಬನನ್ನು ಆಚಾರಿ ತೋರಿಸಿ "ಇವನೇ" ಎಂದ. ಅವನು ತಪ್ಪೊಪ್ಪಿಕೊಂಡ ನಂತರ ಅವನನ್ನು ಮರಣ ದಂಡನೆಗೆ ಗುರಿಪಡಿಸಿ ಶೂಲಕ್ಕೇರಿಸಲಾಯಿತು! ಉಳಿದವರು ಭಯದಿಂದ ನಿಂತಿದ್ದರು. ಚಾಣಕ್ಯ "ನಿಮ್ಮ ಕರ್ತವ್ಯ ಲೋಪ, ಅತಿಕ್ರಮಣ, ಆದರೆ ನಿಮಗೂ ಇದೇ ಗತಿ'' ಎಂದು ಬೆದರಿಸಿ ಕಳುಹಿದ.

ಚಾಣಕ್ಯ : ''ದೊರೆಯೇ ! ನಿನ್ನ ನಕ್ಷತ್ರವೇನು ?''

ಚಂದ್ರಗುಪ್ತ ; "ಪುಷ್ಯವಿರಬೇಕು. ಸರಿಯಾಗಿ ನೆನಪಿಲ್ಲ''

ಚಾಣಕ್ಯ : "ಇಂದು ಶರ್ಮನನ್ನು ಕರೆಸಿ"

ಇಂದುಶರ್ಮನು ಅರಮನೆಯ ದಾಖಲೆಯಿಂದ ದೊರೆಯನಕ್ಷತ್ರ ಪುಷ್ಯವೆಂಬುದನ್ನು ಖಚಿತಪಡಿಸಿದ ! " ಇದೆಲ್ಲ ಏನು ಮಿತ್ರ ? " ಎಂದು ಕೇಳಿದ. ಚಾಣಕ್ಯ ಅವನಿಗೆ ಕುಳ್ಳಿರುವಂತೆ ಸನ್ನೆ ಮಾಡಿ, ತಮಾಷೆ ನೋಡುವಂತೆ ಹೇಳಿದ. ಆಶ್ಚರ್ಯ ಪಟ್ಟು ಇಂದುಶರ್ಮ ಅಲ್ಲೇ ಕುಳಿತ.

ಚಾಣಕ್ಯ : ''ಎಲೋ, ದುರಾಚಾರಿ ? ನೀನು ನಡೆಸಿದ ಈ ಕೃತ್ಯ ದೊರೆಯವಿರುದ್ಧವೆಂಬುದನ್ನು ಈಗ ಅರಿತೆಯ ? ಅದನ್ನು ನೀನೇ ನಿಗ್ರಹಿಸುವೆಯೊ ? ನಾನೇ ನಿನ್ನೊಡನೆ ಅದನ್ನು ಮುಗಿಸಲೊ ?"

ಆಚಾರಿ : "ಪ್ರಭು ! ಅದರಲ್ಲಿ ಗುರುತರ ಶಕ್ತಿಯನ್ನಿಟ್ಟಿರುವೆ ನಾಗಿ ಅದನ್ನು ನಾನೇ ನಿಗ್ರಹಿಸಲಾಗದು ! ಏನಾದರೂ ಮಾಡ ಹೋದರೆ ನನ್ನನ್ನೇ ಮುಗಿಸುತ್ತದೆ. ದೊರೆಯ ವಿರುದ್ಧ ಇದು ಎಂದು ನನಗೆ ಈ ವರೆಗೆ ತಿಳಿಯಲಿಲ್ಲ. ಹಣದಾಸೆಗೆ ಮಾಡಿದ್ದು ತಪ್ಪು. ನನ್ನನ್ನು ಮನ್ನಿಸಿ.

ನಿನಗೆ ಮಂತ್ರ ಶಕ್ತಿ ಇದ್ದರೆ ನೀವೇ ನಿಗ್ರಹಿಸಿ, ದೊರೆಯನ್ನೂ ನನ್ನನ್ನೂ ಉಳಿಸಿ.''

ಚಾಣಕ್ಯ : "ಎಲವೋ ದುಷ್ಟ! ದೊರೆ ಇರಲಿ, ಸಾಮಾನ್ಯ ನಿರಲಿ. ಇದು ಜೀವ ಮಾತ್ರಕ್ಕೆ ದ್ರೋಹ ಚಿಂತನೆಯಲ್ಲವೇನೋ? ಇನ್ನೊಂದು ಜೀವದ ಹಿಂಸೆಗೆ ಎಳೆಸಿದ ನಿನಗೆ ಜೀವ ಏಕೆ ಉಳಿಯಬೇಕು ? ನೀನೇ ಅದನ್ನು ಕರೆಸು, ಕೆಣಕು. ನಿಗ್ರಹಿಸಲು ನೋಡು. ಆಗುವುದಾಗಲಿ. ನೀನಾದರೂ ಸಾಯಬೇಕು! ನಾವಾದರೂ ಕೊಲ್ಲಿಸಬೇಕು !! ಎರಡೂ ಒಂದೆ. ನಿನ್ನ ರಾಜದ್ರೋಹಕ್ಕೆ ಇದು ಕಮ್ಮಿಯೇ ಶಿಕ್ಷೆ !''

ಆಚಾರಿ ಹಿಂದೆ ಮುಂದೆ ನೋಡಿದ ! "ನನಗೆ ಹೆಂಡತಿ ಮಕ್ಕಳಿರು ವರು ! ಅವರಿಗಿನ್ನೇನು ಗತಿ? '' ಎಂದು ಅಂಗಲಾಚಿದ.

''ದೊರೆಗೂ ರಾಣಿಯರು, ಅವನನ್ನೇ ನಂಬಿದ ಪ್ರಜೆಗಳೂ ಇರು ವರು ! ರಾಜ್ಯದ ಉಳಿವಿನ ಪ್ರಶ್ನೆ ಇದು. ಅವರಿಗೆ, ಅದಕ್ಕೆ ಯಾರು ಗತಿಯೋ? ಬೊಗಳು ? ಇದೆಲ್ಲ ನಿನ್ನ ಚಿತ್ತಕ್ಕೆ ಬಾರದೆಯೇ ಅದನ್ನು ಮಾಡಿದೆಯಾ ?''

ಆಚಾರಿಗೆ ನಾಚಿಕೆಯಾಯ್ತು. ಅರಮನೆಯಿಂದ ಅರಿಶಿನ ಕುಂಕುಮ ತರಲು ಹೇಳಿದ. "—ಂಡೇ ಮಗನೇ ! ಅರಮನೆಯಿಂದ ಏನೂ ತರ ತಕ್ಕದ್ದಲ್ಲ !! ನಿನ್ನ ಮನೆಯಿಂದಲೇ ತರಿಸು'' ಎಂದು ಚಾಣಕ್ಯ ಗುಡುಗಿದ.

ಆಚಾರಿಯ ಮನೆಯಿಂದ ಅರಿಶಿನ ಕುಂಕುಮ ಬಂದವು. ಆಚಾರಿ ಯನ್ನು ಅರಮನೆಯ ಚಾರರು ಬಂಧಿಸಿ, ಅವನು ಹೇಳಿದ ಕಡೆ ಕರೆ ದೊಯ್ದರು. ದೊರೆಗೆ ಅದನ್ನು ನೋಡುವ ಕುತೂಹಲವಿದ್ದರೂ ಚಾಣಕ್ಯ ತಡೆದ. "ಆಸನ ಬಿಟ್ಟೇಳ ಕೂಡದು'' ಎಂದಪ್ಪಣೆ ಮಾಡಿದ. ಬಾಗು

ರಾಯಣ, ಅಮಾತ್ಯ, ಇಂದುಶರ್ಮರು ಆಚಾರಿಯ ಜೊತೆ ಹೊರಟರು. ಅವನು ಬಿಲ್ವಪತ್ರೇ ಮರದ ಹುತ್ತದ ಬಳಿ ಹೋಗಿ, ಏನೇನೋ ಮಂತ್ರ ಹೇಳಿ, ಉದ್ದಕ್ಕೆ ಅರಿಶಿನ ಕುಂಕುಮ ಚೆಲ್ಲುತ್ತಾ, ಅರಮನೆಯತ್ತ ಬರಲಾರಂಭಿಸಿದ. ಇದನ್ನರಿತ ಚಾಣಕ್ಯ ಹೊರಗೋಡಿ "ಎಲವೋ (ಸೂಳೇ) ಮಗನೇ! ಅದನ್ನು ಇತ್ತಲೇಕೆ ಕರೆತರುವೆಯೋ? ನಿನ್ನ ವಿದ್ಯೆ ನನಗೆ ತಿಳಿಯದೆಂದುಕೊಂಡೆಯಾ?'' ಎನ್ನುತ್ತಾ ಕಂಗಳಲ್ಲಿ ಕಿಡಿಗಾರಲಾರಂಭಿಸಿದ. ಗೊಂಬೆ ಭಯಂಕರವಾಗಿ ಕುಣಿಯುತ್ತಾ ಆಚಾರಿಯ ಹಿಂದೆ ಅರಿಶಿನ ಕುಂಕುಮ ಪಥದಲ್ಲಿ ಬರುತ್ತಿತ್ತು! ಚಾಣಕ್ಯ ಮಂತ್ರೋಚ್ಚಾರಣ ಮಾಡಿ, ''ಹುಂ''ಕಾರ ಮಾಡಿದೊಡನೆಯೇ ಅದು ಆಚಾರಿಯನ್ನು ಮೆಟ್ಟಿ ಅವನ ತಲೆ, ಮುಖ, ಭುಜ, ಕೈಕಾಲುಗಳನ್ನು ಕಾಡುತ್ತ ಅವನ ಮೇಲೆ ಕುಣಿಯಲಾರಂಭಿಸಿತು. ಆಚಾರಿ ರಕ್ತ ಕಾರುತ್ತಾ ಸತ್ತು ಬಿದ್ದ!! ಚಾಣಕ್ಯ ತನ್ನ ಮಂತ್ರೋಚ್ಚಾರಣ ಶಕ್ತಿಯಿಂದ ಆ ಕೃತ್ಯವನ್ನು ನಿಗ್ರಹಿಸಿದ್ದ!! ಗೊಂಬೆ ನಿಶ್ಚೇಷ್ಟವಾಗಿ ಬಿದ್ದಿತು. ಅದನ್ನು ಬೆಂಕಿಯಲ್ಲಿ ಸುಡಿಸಿ ಬೂದಿಯನ್ನು ಸ್ಮಶಾನದಲ್ಲಿ ವಿಸರ್ಜಿಸಲಾಯಿತು. ಬಿಲ್ವಪತ್ರೇ ಗಿಡವನ್ನು ಕಡಿಸಿ, ಅದರ ಬಳಿ ಹುತ್ತವನ್ನು ಅಗೆಸಿ, ಆ ಸ್ಥಳ ಶುದ್ಧ ಮಾಡಿ ಅಲ್ಲಿ ಸುಂದರ ಶ್ರೀ ಕೃಷ್ಣ ಮಂದಿರವನ್ನು ನಿರ್ಮಿಸಲಾಯ್ತು!

ಅರಮನೆಯ ವೈದ್ಯನನ್ನು ಕರೆಸಿ ''ಇನ್ನು ನಿಮ್ಮ ವೈದ್ಯ ಹಿಡಿಯುತ್ತದೆ. ಚಿಕಿತ್ಸೆ ಬಲವಾಗಿ ನಡೆಯಲಿ" ಎಂದು ಆಚಾರ್ಯ ಅಪ್ಪಣೆ ಮಾಡಿದ. .......

ಒಂದು ತಿಂಗಳಲ್ಲಿ ದೊರೆಯ ನೈ ಚುಕ್ಕೆಗಳು ಮಾಯವಾದವು! ನರಗಳ ಗಂಟುಗಳೆಲ್ಲ ಅದೃಶ್ಯವಾಗಿ, ಸರ್ವಾಂಗವೂ ದೊರೆಗೆ ದೃಢವಾಯಿತು!! ಕ್ರಮೇಣ ಮಧುಮೇಹವೂ ಹತೋಟಿಗೆ ಬಂದಿತು. ದೊರೆ ಪುಲಕಿತನಾದ! ವಿದ್ಯುಲ್ಲೇಖೆ ಆನಂದಿಸಿದಳು. ಅಮಾತ್ಯ, ಚಾಗುರಾಯಣಾದಿಗಳು ಎಲ್ಲರಿಗೂ ನೆಮ್ಮದಿ ಆಯಿತು. ಊರ ದುಷ್ಟ ಮಾಂತ್ರಿಕರನ್ನೆಲ್ಲ ಗಡೀ ಪಾರು ಮಾಡಲಾಯಿತು!

  

ಕೆರೆ ಕಟ್ಟೆ ಕಾಲುವೆಗಳ ಹೂಳೆತ್ತುವ ಕಾರ್ಯ ಎಲ್ಲೆಲ್ಲೂ ರಭಸದಿಂದ ಆರಂಭವಾಯಿತ್ತು. ನಂದರ ಗುಪ್ತನಿಧಿಯನ್ನು ಚಂದ್ರಗುಪ್ತ ಹೊರತೆಗೆಸಿ, ಹೊರ ರಾಜ್ಯಗಳಿಂದ ಧಾರಾಳವಾಗಿ ಆಹಾರ ಧಾನ್ಯ ತರಿಸಿ ಬಡಬಗ್ಗರಿಗೆ ಹಂಚಿಸಿದ. ದೇವಾಲಯಗಳಲ್ಲಿ ಪೂಜೆಗಳು ನಿರ್ವಿಘ್ನವಾಗಿ ನಡೆಯಲಾರಂಭಿಸಿದವು. ಅಲ್ಲಲ್ಲಿ ಬ್ರಾಹ್ಮಣರು ಪರ್ಜನ್ಯಜಪ, ಹೋಮಗಳನ್ನು ರಾಜಾಜ್ಞೆಯಂತೆ ನಡೆಸಿದರು. ಉತ್ತಮ ಬಿತ್ತನೆ ಬೀಜಗಳನ್ನು ಇಂದ್ರಪ್ರಸ್ಥ ರಾಜ್ಯದಿಂದಲೂ, ಕಳಿಂಗದಿಂದಲೂ ತರಿಸಿ, ರೈತರಿಗೆ ಹಂಚಲಾಯಿತು.

ಮುಂದಿನ ಮಳೆಗಾಲದಲ್ಲಿ ಸುವೃಷ್ಟಿಯಾಯಿತು. ಗಂಗೆ ತುಂಬಿ ಹರಿದಳು. ಶ್ರಾವಣದಲ್ಲಿ ದೊರೆ ರಾಣಿಯರೊಡನೆ ಗಂಗಾಪೂಜೆ ಮಾಡಿ, ದಾನಧರ್ಮ ಮಾಡಿದ. ಪಟ್ಟದರಾಣಿಯ ಮೇಲೆ ಚಾಣಕ್ಯ ಸರ್ಪಗಾವಲು ಇಟ್ಟಿದ್ದರಿಂದ ಅನಾರ್ಯರಿಗೆ ಕಪಟಸಂನ್ಯಾಸಿಗಳಿಗೆ ಅರಮನೆಯ ಪ್ರವೇಶ ತಪ್ಪಿತು. ವಿದ್ಯುಲ್ಲೇಖೆ ದೊರೆಯ ಪ್ರೀತಿಯನ್ನು ಮತ್ತೆ ಗಳಿಸಿದಳು.

ಆ ವರ್ಷದ ಕುಂಭ ಮೇಳ ಪ್ರಯಾಗೆಯಲ್ಲಿ ಅದ್ಭುತವಾಯಿತು. ಇಪ್ಪತ್ತು ಲಕ್ಷಜನ ಸೇರಿ ಚಾಣಕ್ಯನ ಪಪಾಡವನ್ನು ಕಂಡು ಆನಂದಿಸಿದರು. ಯಥೇಷ್ಟವಾಗಿ ಅನ್ನಸಂತರ್ಪಣೆ ನಡೆಯಿತು.

ವಾಸುದೇವಭಟ್ಟಾರಕರಿಂದ ಪಾಟಲೀಪುತ್ರದಲ್ಲಿ ಹೊಸ ವಾಸುದೇವ ದೇವಾಲಯವನ್ನು ದೊರೆ ಈ ವಿಜಯದ ಜ್ಞಾಪಕಕ್ಕಾಗಿ ನಿರ್ಮಿಸಿದ.

ಮುಂದಿನ ನಾಲ್ಕು ವರ್ಷಗಳೂ ಹೀಗೇ ಸುಭಿಕ್ಷವಾಗಿ ಮಗಧ ಮತ್ತೆ ತನ್ನ ಯೌವ್ವನದ ಅವಸ್ಥೆಗೆ ಮುಟ್ಟಿತು. ದೊರೆ ಮತ್ತೆ ಯುವಕನಂತೆ ಕಾಣತೊಡಗಿದ ! ದಿನಾ ಆಚಾರ್ಯಸೇವೆಯಲ್ಲಿರುತ್ತಾ, ರಾಜ್ಯಕಾರ್ಯದಲ್ಲೂ ಉತ್ಸಾಹ ತೋರಿದ. ಅಮಾತ್ಯ ಎಂದಿಗಿಂತ ಹೆಚ್ಚಾಗಿ ಅಧಿಕಾರಿ

ಗಳನ್ನು ಹಿಡಿತದಲ್ಲಿಟ್ಟು, ರಾಜಾದಾಯ ಪೋಲಾಗದಂತೆ, ಬೊಕ್ಕಸವನ್ನೂ, ಧಾನ್ಯಾಗಾರವನ್ನೂ ಬೆಳಸಿದ....

ಕಾಲ ಉರುಳಿತು ದೊರೆಗೆ ಪಟ್ಟಾಭಿಷೇಕವಾಗಿ ಈಗ ಹದಿನಾಲ್ಕು ವರ್ಷಗಳಾಗಿದ್ದವು. ರಾಜಕುಮಾರ ಬಿಂದುಸಾರ ಈಗ ಯುವಕನಾಗಿದ್ದ. ಚಾಣಕ್ಯ ಅವನಿಗೆ ವಿಶೇಷ ವಿದ್ಯೆಕಲಿಸುವ ವ್ಯವಸ್ಥೆಮಾಡಿದ್ದ. ಅನಾರ್ಯ ಸಂಸರ್ಗವಿಲ್ಲದೆ, ಯುದ್ಧ, ನೀತಿ, ಶಾಸ್ತ್ರ, ಕಲೆ-ಎಲ್ಲದರಲ್ಲಿ ಅವನಿಗೆ ಶಿಕ್ಷಣ ನೀಡಲಾಗುತ್ತಿತ್ತು.

ನೆಮ್ಮದಿಯ ನಿಟ್ಟುಸಿರಿಟ್ಟು ಆಚಾರ್ಯ ಒಂದು ದಿನ ಮತ್ತೆ ತಕ್ಷಶಿಲೆಗೆ ಹೋಗುವ ಬಯಕೆಯನ್ನು ತೋರಿದ. ದೊರೆಗೆ ಭಯವಾಯಿತು! "ಗುರು ದೇವ ! ನೀವು ಹೊರಟರೆ, ಮಗಧದ ಭಾಗ್ಯಲಕ್ಷ್ಮಿ ನನ್ನನ್ನು ತ್ಯಜಿಸು ವುದು ಖಂಡಿತ ! ನೀವಿಲ್ಲದೆ ನಾನು ನಾನು ಹೆಣವಾಗುತ್ತೇನೆ. ಈ ಗೊಂಬೆ ಯಲ್ಲಿ ಜೀವತುಂಬಿ, ಇದಕ್ಕೆ ಪ್ರಾಣಶಕ್ತಿ ಕೊಟ್ಟವರು ನೀವೇ! ನನ್ನನ್ನಗಲ ಬೇಡಿ'' ಎಂದು ಗೋಗರೆದ !

ಆಚಾರ್ಯ ಹೇಳಿದ : " ನನಗೂ ವಯಸ್ಸಾಗುತ್ತಿದೆ ! ನನಗಿರು ವುದು. ಇನ್ನೊಂದು ವರ್ಷ ಆಯುಸ್ಸು. ತಕ್ಷಶಿಲೆ ಮತ್ತೆ ಗತವೈಭದಲ್ಲಿ. ದೆಯೋ ಹೇಗೆಂದು ಒಮ್ಮೆ ನೋಡಿಬರುವೆ. ನಿನ್ನನ್ನು ಬಿಡಲು ನನಗೂ ಇಷ್ಟವಿಲ್ಲ'' ಎಂದು ಹೇಳಿ, ಒಂದು ದಿನ ಹೊರಟೇ ಬಿಟ್ಟ !



## ಇಪ್ಪತ್ತೈದನೆಯ ಅಧ್ಯಾಯ

# ಆಚಾರ್ಯ ಜ್ಯೋತಿಯ ಅಸ್ತಮಾನ! ಮಗಧದಲ್ಲಿ ಅನಾಹುತ!!

"ನಿನಗೆ ಈ ಜನ್ಮದಲ್ಲಿ ಮೋಕ್ಷವಿಲ್ಲ ! ನನ್ನಾಣೆ! ಮತ್ತೆಲ್ಲಿಯಾದರೂ ಸಂನ್ಯಾಸದ ಬಯಕೆ ಮರುಕಳಿಸದಿರಲಿ! ಸಂನ್ಯಾಸಿಯಾದರೆ ನೀನು ಪಿಶಾಚಿಯಾಗುವೆ. ಮತ್ತೆ ಹನ್ನೆರಡನೇ ಜನ್ಮದಲ್ಲಿ ನೀನು 'ವಿಷ್ಣುವರ್ಧನ'ನೆಂಬ ಹೆಸರಿನ ಅರಸನಾಗಿ ಹುಟ್ಟುವೆ. ಆ ವರೆಗೆ ನಾನೂ ನಿನ್ನನ್ನು ಬಿಟ್ಟು ಮೋಕ್ಷಕ್ಕೆ ಹೋಗದೆ ಲೋಕೋಪಕಾರದ ಜನ್ಮಗಳನ್ನೆತ್ತುತ್ತಿರುತ್ತೇನೆ ! ನೀನು 'ವಿಷ್ಣುವರ್ಧನ'ನಾದಾಗ ನಾನು ನಿನ್ನನ್ನು ಕರ್ನಾಟಕದ ತೊಂಡನೂರಲ್ಲಿ ಸಂಧಿಸುವೆ. ಆಗ ನಿನಗೆ ನನ್ನ ಕೈಯ್ಯಲ್ಲೇ ಚಕ್ರಾಂಕನವಾಗುವುದು ! ವಿದ್ಯುಲ್ಲೇಖೆ ಆಗ ನಿನಗೆ ಶ್ರೀ ವೈಷ್ಣವ ಕುಲದ ಪತ್ನಿಯಾಗು

ವಳು. ಈಗ ಸಂತಾನವಿರದ ಅವಳಿಗೆ ಆಗ ನಿನ್ನಿಂದ ಸಂತಾನವಾಗುವುದು. ಈ ಜನ್ಮದಲ್ಲಿ ಗೃಹಸ್ಥನಾಗಿ ಸಾಯುವ ನಾನು ಆಗ ತ್ರಿದಂಡೀ ಸಂನ್ಯಾಸಿಯಾಗಿ ನಿನ್ನಾಶ್ರಯ ಬೇಡಿ ಬರುವೆ. ಮತ್ತೆ ದ್ರವಿಡ ದೇಶದಲ್ಲೇ ಹುಟ್ಟಿ, ಈಗ ಆರಂಭಿಸಿದ ವೇದಾಂತ ಪರಿಷ್ಕರಣ ಕಾರ್ಯವನ್ನು ಮುಂದುವರೆಸಿ, ನಿನ್ನ ರಾಜ್ಯದಲ್ಲೇ ಬ್ರಹ್ಮಸೂತ್ರ ಭಾಷ್ಯದ ಪೂರೈಕೆ ಮಾಡುವೆ. ನಿನ್ನನ್ನು ಈ ವರೆಗೆ ತಲೆ ಕೆಡಿಸಿದ ಕುಲದವರು ಆಗ ನಿನ್ನನ್ನು ಪರಿತ್ಯಜಿಸುತ್ತಾರೆ. ನಿನ್ನ ಕೈಯ್ಯಲ್ಲಿ ಒಂದು ಬೆರಳು ಕಮ್ಮಿಯಾಗಿರುತ್ತದೆ, ಆಗ! ಆ ಇಲ್ಲದ ಬೆರಳನ್ನು ನೋಡಿಕೊಂಡಾಗಲೆಲ್ಲ ನಿನಗೆ ನನ್ನ ನೆನಪಾಗಲಿ'' ಎನ್ನುತ್ತಾ, ಅಳುತ್ತಾ, ಚಾಣಕ್ಯ ಪಾಟಲೀಪುತ್ರವನ್ನು ಬಿಟ್ಟು, ಅಗಲಲು ಇಷ್ಟವಿಲ್ಲದ ದೊರೆಯನ್ನೂ ರಾಣಿಯರನ್ನೂ ಅಮಾತ್ಯಾದಿಗಳನ್ನೂ ಹರಸಿ, ಪಶ್ಚಿಮಾಭಿಮುಖನಾಗಿ ಶಿಷ್ಯರೊಡನೆ ಹೊರಟ.

ಸಂಕರ್ಷಣಾಲಯದಲ್ಲಿ ನಾಲ್ಕು ತಿಂಗಳು ಮಳೆಗಾಲ ಕಳೆದು, ಮುಂದೆ ಹೊರಟು ನಿಧಾನವಾಗಿ ತಕ್ಷ ಶಿಲೆಯನ್ನು ಮುಟ್ಟುವ ವೇಳೆಗೆ ಮಗಧದಿಂದ ಹೊರಟು ಒಂಭತ್ತು ತಿಂಗಳಾಗಿತ್ತು.

  

ಇತ್ತ ಮಗಧದಲ್ಲಿ ಈ ಒಂಭತ್ತು ತಿಂಗಳಲ್ಲಿ ದೊಡ್ಡ ಅವಾಂತರವೇ ಆಗಿತ್ತು ! ಚಾಣಕ್ಯನ ಉಗ್ರಕೃಷಿ ನೀತಿಗೆ ಗುರಿಯಾಗಿ ಪೂರ್ವದ ನಂದ ಸಂಬಂಧದ ಸಾವಿರಾರು ಧನಿಕ ಜಮೀನ್ದಾರರು ನಿರ್ಗತಿಕರಾಗಿದ್ದರು. ಅನ್ಯಮತಗಳ ಒಲವಿನ ಹಲವು ಸಾವಿರ ವರ್ತಕರು, ಮೋಸಗಳಿಗಾಗಿ ಶಿಕ್ಷಿತರಾಗಿ ಕುದಿದು ಸಿಟ್ಟಾಗಿದ್ದರು. ಅಳತೆ ತೂಕದ ಮೋಸದ ಆಧಾರದ ಮೇಲೆ ಸೆರೆಮನೆ ಕಂಡ ಕಳ್ಳ ವ್ಯಾಪಾರಿಗಳ ಸಮೂಹವೂ ಇತ್ತು. ಬಾಯಿಗೆ ಮಣ್ಣು ಹಾಕಿಸಿಕೊಂಡ ಲಂಚಕೋರರೂ ಬಹು ಸಂಖ್ಯೆಯಲ್ಲಿದ್ದರು. ಸೋಮಾರೀ ಭಿಕ್ಷುಕರ, ಸಂನ್ಯಾಸಿ ವೇಷದವರ ಸೈನ್ಯವೇ ಒಂದು ಪ್ರತೀಕಾರಕ್ಕೆ ತಯಾರಾಗಿತ್ತು ! ಬಿಗಿ, ಭದ್ರ, ನ್ಯಾಯ ಸಂಮ್ಮತ ಧರ್ಮ ಆಡಳಿತವನ್ನು ಜನತೆ ಯಾವಾಗಲೂ ಮನಸಾರೆ ಒಪ್ಪಲಾರದು, ಅಲ್ಲವೆ ?

ಸ್ವಾತಂತ್ರ್ಯದ ಹೆಸರಿನ ಅವ್ಯಾಪಾರಗಳು ಜನಪ್ರಿಯವಾಗಿರುವಂತೆ, ಸುವ್ಯವಸ್ಥಿತ ನ್ಯಾಯ ರಾಜ್ಯಭಾರವು ಆಗಲಾರದೆಂಬುದು ನಿತ್ಯ ಸತ್ಯ. ಮಹಾಭಾರತದ ಧರ್ಮರಾಜನಿಗಿಂತ ದುರ್ಯೋಧನನೇ ಹೆಚ್ಚು ಜನಪ್ರಿಯನಾಗಲಿಲ್ಲವೆ ? ಹಾಗೆ ಅಂದು ಮಗಧದಲ್ಲೂ ಆಯಿತು. ಅತೃಪ್ತ ದುಷ್ಟರೆಲ್ಲರೂ ಸಮಯ ಕಾಯುತ್ತಿದ್ದರು. ಚಾಣಕ್ಯನ ನಿರ್ಗಮನದ ಅವರಿಗೆ ಅವಕಾಶವನ್ನು ತಂದು ಕೊಟ್ಟಿತು! ದೊರೆಯ ಮೇಲೆ ಪ್ರತೀಕಾರವನ್ನು ತೆಗೆದುಕೊಳ್ಳಲು ಯತ್ನಿಸಿದರು. ಮತ್ತೆ ಅಭಿಚಾರ ಕೃತ್ಯ ನಡೆಯಿತು !

ಒಂದು ರಾತ್ರಿ ಶಯ್ಯಾಗ್ರಹದಲ್ಲಿ ಮಲಗಿರುತ್ತಾ ವಿದ್ಯುಲ್ಲೇಖೆ ಮತ್ತೆ ಚಂದ್ರಗುಪ್ತನ ಉದರದಲ್ಲಿ ಹಳೆಯಮಾದರಿಯ ಚುಕ್ಕೆಗಳನ್ನು ಕಂಡು ಭಯಗೊಂಡಳು ! ದೊರೆ ಉದಾಸೀನನಾಗಿದ್ದ.

ಮರುದಿನ ಸ್ನಾನ ಮಾಡುತ್ತಾ ಇರಲು ಕೈ, ತೋಳು, ಮುಖಗಳಲ್ಲೂ ಆ ಬಗೆಯ ಚುಕ್ಕೆಗಳು ಸಾಂದ್ರವಾಗಿ ಕಾಣಿಸಿಕೊಂಡವು ! — ದೊರೆಗೆ ವಿಸ್ಮಯವಾಯಿತು. !

ಎಂಟುದಿನ ಕಳೆಯುತ್ತಾ ನರಮಂಡಲಗಳಲ್ಲಿ ಗಂಟುಗಳೂ, ಹದಿನೈದು ದಿನಗಳಲ್ಲಿ ಮುಖದ ವಿಕಾರ ಭಾವವೂ, ಮತ್ತೆನಾರದಲ್ಲಿ ಮಧುಮೇಹ, ದೊರೆಗೆ ಬುದ್ಧಿಭ್ರಮಣೆಯ ಲಕ್ಷಣಗಳು ಮರುಕಳಿಸಿದವು. ರಾಜವೈದ್ಯ ಅಮಾತ್ಯ ನಿಗರುಹಿದ ! ಅಮಾತ್ಯ ಅಭಿಚಾರಕೃತ್ಯದವರನ್ನು ಮತ್ತೆ ನಗರದಲ್ಲಿ ಹುಡುಕಿಸಿದ. ಆಗಿನವರು ಹಿಂದಿನವರಿಗಿಂತ ಹೆಚ್ಚು ಎಕ್ಕರತೆಗೆದುಕೊಂಡು ಭೂಗತರಾಗಿದ್ದರು! ಎಷ್ಟು ಹುಡುಕಿಯೂ ಪತ್ತೆಯಾಗಲಿಲ್ಲ.

ಅಮಾತ್ಯನಿಗೆ ಭಯವಾಯಿತು! ಇಂದುಶರ್ಮನಿಗೆ ತಿಳಿಸಿ, ಆಚಾರ್ಯರನ್ನು ಬೇಗ ಬರುವಂತೆ ಕರೆತರಬೇಕೆಂದು ಚಾರರೊಡನೆ ತಕ್ಷಶಿಲೆಗೆ ಕಳುಹಿದ. ಆ ಪ್ರಯಾಣ ಒಂದು ತಿಂಗಳು ಹಿಡಿಯಿತು. ಇಂದುಶರ್ಮ ತಕ್ಷಶಿಲೆಗೆ ಬರುವುದರೊಳಗೆ ಕೆಟ್ಟ ಸಮಾಚಾರ ಕಾದಿತ್ತು!!

  

ಇಂದುಶರ್ಮ ಅಲ್ಲಿಗೆ ಬರುವ ಮೊದಲ ದಿನ ಮಧ್ಯಾಹ್ನಕ್ಕೆ ಮುಂಜಿ ಆಚಾರ್ಯ, ಶಿಷ್ಯರಿಗೆ ಬ್ರಹ್ಮಸೂತ್ರಪಾಠ ಹೇಳುತ್ತಿದ್ದ. ''ಅನಾವೃತ್ತಿಃ ಶಬ್ದಾತ್, ಅನಾವೃತ್ತಿಃ ಶಬ್ದಾತ್ '' ಎಂದು ಕೊನೆಯ ಸೂತ್ರ ಅಂದಿನ ವಿಷಯ. ಛಾಂದೋಗ್ಯದ " ನ ಚ ಪುನರಾವರ್ತತೇ, ನ ಚಪುನರಾವರ್ತತೇ ಎಂಬುದು ಆ ಸೂತ್ರಕ್ಕೆ ಮೂಲಾಧಾರವಾದ ವಿಷಯವಾಕ್ಯ.

''ದೇವರಿಟ್ಟ ಮಿತಿಯಲ್ಲಿ ಯಾವದಾಯುಷ್ಯವೂ ವರ್ಣಾಶ್ರಮನಿಯಮೋಲ್ಲಂಘನೆ ಮಾಡದೆ, ವೇದೋಕ್ತ ಕ್ರಮದಲ್ಲಿ ಭಗವದುಪಾಸನೆ ಮಾಡಿದ ಸಾಧಕನು ಕೊನೆಗೆ ಹೃದಯದ ನೂರೊಂದನೆಯ ನಾಡೀ ಮಾರ್ಗದಲ್ಲಿ ಶರೀರದಿಂದ ಹೊರಗೆ ನಿರ್ಗಮಿಸುತ್ತಾ ಆತಿವಾಹಿಕ ದೇವತೆಗಳೆಂಬ ಅರ್ಚಿಸ್ಸು (ಹಗಲು), ದಿನ ಪೂರ್ವಪಕ್ಷ (ಶುಕ್ಲಪಕ್ಷ), ಉತ್ತರಾಯಣ, ವರ್ಷ ಮೊದಲಾದ ದೇವತೆಗಳ ಉಪಚಾರಪಡೆಯುತ್ತಾ, ಸೂರ್ಯಮಂಡಲವನ್ನು ಭೇದಿಸಿಕೊಂಡು ಪ್ರಕೃತಿ ಮಂಡಲವನ್ನು ದಾಟಿ, ವಿರಜಾನದೀಸ್ನಾನಮಾಡಿ ವೈಕುಂಠವೆಂಬ ಪರಮಾತ್ಮನ ದಿವ್ಯಲೋಕವನ್ನು ಸೇರುವನೆಂದು ಈ ಹಿಂದಿನ ಅಧಿಕರಣಗಳಲ್ಲಿ ವೇದವ್ಯಾಸರು ವಿವರಿಸಿ, ಸ್ಥಾಪಿಸಿರುವರಷ್ಟೆ! ಈಗ ಪ್ರಕೃತದ ಸೂತ್ರಕ್ಕೆ ಒಂದು ಪೂರ್ವಪಕ್ಷವುಂಟು. ವೈಕುಂಠಲೋಕಕ್ಕೆ ಒಂದು ವೈಲಕ್ಷಣ್ಯವುಂಟು. ಅಲ್ಲಿಗೆ ಹೋದವರು ಮತ್ತೆ ಸಂಸಾರಕ್ಕೆ ಬರಲಾರರು ಎಂದು. ಉಳಿದೆಲ್ಲ ಲೋಕಗಳೂ ಕ್ಷಯಿಷ್ಣುಗಳು. ಈ ವಿಷಯಕ್ಕೆ ಪ್ರಸಿದ್ಧವಾದ ಒಂದು ಗೀತಾವಾಕ್ಯವನ್ನು ನಿಮ್ಮಲ್ಲಿ ಯಾರಾದರೂ ನೆನೆಪಿಸುವಿರಾ?'' ಎಂದು ಆಚಾರ್ಯ ಕೇಳಿದ.

ಸೋಮಶರ್ಮನೆಂಬ ಬುದ್ಧಿವಂತ ಬಾಲಕ ಬೇಗನೆ ಹೇಳಿದ: ''ಆ ಬ್ರಹ್ಮಭುವನಾತ್ ಲೋಕಾಃ ಪುನರಾವರ್ತಿನಃ, ಅರ್ಜುನ ! ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥" – ಹೌದೇ, ಗುರುಗಳೇ !

ಚಾಣಕ್ಯ : "ಹೌದು! ಭೇಷ್! ಆದರೆ ಇಲ್ಲಿ 'ಮಾಂ ಉಪೇತ್ಯ'– 'ನನ್ನನ್ನು ಹೊಂದಿ' ಎಂದಷ್ಟೇ ಶ್ರೀ ಕೃಷ್ಣ ವಾಕ್ಯವಿದೆ. ಯಾವ ದಿವ್ಯ ಲೋಕದ ಪ್ರಸ್ತಾವವೂ ಇಲ್ಲ. ಅದು ಬೇರೊಂದು ಶ್ಲೋಕದಲ್ಲಿದೆ. ಯಾರು ಹೇಳುವಿರಿ ?''

ನಾರಾಯಣ ಶರ್ಮ : "ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ!'' ಮಡಿಯಲ್ಲಿದ್ದೂ ಆಚಾರ್ಯ ಎದ್ದು ಬಂದು ಎಂಟು ವಯಸ್ಸಿನ ಮುದ್ದು ಮಗು ನಾರಾಯಣಶರ್ಮನನ್ನು ಆಲಿಂಗಿಸಿ, ಹರಸಿದ. ''ಚೆನ್ನಾಗಿ ಬಾಳು, ಕಂದ! ಗೀತೆಯನ್ನು ದಿನಾ ಪಾರಾಯಣ ಮಾಡು. ಮಾಡುವುದರ ಫಲ ಇದು. ಬೇಕೆಂದಾಗ ಬೇಕಾದ ಶ್ಲೋಕ ನೆನಪಿಗೆ ಬರುತ್ತೆ. ಈಗ ನಾನು ಹೇಳಿದ ಸೂತ್ರಕ್ಕೆ ಪೂರ್ವಪಕ್ಷನೇನೆಂದರೆ ಇಂಥ ಅಪುನರಾವೃತ್ತಿಯ ಲೋಕಕ್ಕೆ ಹೋಗಿ ಸಾಧಕ ಸೇರಿದನೆನ್ನಿ. ಅದಕ್ಕೆ ಒಡೆಯನಾದ ಶ್ರೀಮನ್ನಾರಾಯಣನು ಸರ್ವೇಶ್ವರನೂ ಸ್ವತಂತ್ರನೂ ಅಜ್ಞಾಸಮರ್ಥನೂ ಆದುದರಿಂದ, ತನ್ನಿಚ್ಛೆಯಂತೆ, ಮುಕ್ತನಾದ ಜೀವಾತ್ಮ ನನ್ನೂ ಅಂಥ ದಿವ್ಯಲೋಕದಿಂದಲೂ ಕೆಳಗೆ ತಳ್ಳಿ, ಮತ್ತೆ ಸಂಸಾರಕ್ಕೇ ಹೋಗುವಂತೆ ಮಾಡಿದರೆ ಆಗ ಅವನ ಕೈ ಹಿಡಿದು ತಡೆಯುವವರಾರು ? ಅವನೆಂದೂ ಹಾಗೆ ಮಾಡಲಾರನೆನ್ನುವುದಕ್ಕೆ ವೇದ, ಉಪನಿಷತ್ತು, ಗೀತೆ ಗಳಿಂದ, ಯುಕ್ತಿಯಿಂದ, ಏನು ಪ್ರಮಾಣವುಂಟು? ಯಾರು ಹೇಳುವಿರಿ?''

ಕ್ಷಣ ಕಾಲ ಶಿಷ್ಯ ಮಂಡಲಿ ಮೌನವಾಗಿತ್ತು! ಒಬ್ಬ ಹಿರಿಯ ಶಿಷ್ಯ "ಇದೆಂಥ ಪೂರ್ವಪಕ್ಷ! ದೇವರ ಸ್ವಭಾವವನ್ನು ಪ್ರಶ್ನಿಸುವುದೇ ?'' ಎಂದ.

ಆಚಾರ್ಯ ; "ದೇವರ ಸ್ವಭಾವವನ್ನು ಪ್ರಶ್ನಿಸುವವರು ನಾವಲ್ಲ. ಹಾಗೆ ಪ್ರಶ್ನಿಸುವ ಮುಗ್ಧರೂ ಉಂಟಲ್ಲ! ಅವರಿಗೆ ಸಮರ್ಥ ಕಾರಣ ಕೊಟ್ಟು ಉತ್ತರಿಸುವ ಹೊಣೆ ನಮ್ಮದು. ಬ್ರಹ್ಮಸೂತ್ರ, ವಿಚಾರ ಶಾಸ್ತ್ರ. ಯಾವ ಪ್ರಶ್ನೆಯನ್ನೂ ವೇದಾಂತಿ ಎತ್ತಬಹುದು. ಅಪರಾಧವಲ್ಲ. ಪ್ರಶ್ನಿ ಸದೆಯೇ ಮೊಂಡು ಉತ್ತರವನ್ನು ಗಿಣೀ ಪಾಠ ಮಾಡಿದರೆ ವೇದಾಂತ ಬಿದ್ದು

ಹೋಗುತ್ತದೆ. ಇದು ಕುರುಡು ವಿಚಾರವಲ್ಲ. ವತ್ಸ ! ಯೋಚಿಸಿ ಉತ್ತರಿಸು. ದೇವರನ್ನು ಹಾಗೆ ಮಾಡದಂತೆ, ಮುಕ್ತನನ್ನು ಕೆಳಗಿಳಿಸದ ಶಕ್ತಿ ಯಾವುದು ?''

ನಾರಾಯಣಶರ್ಮ ; ''ಗುರುಗಳೇ, ಏಳನೆಯ ಅಧ್ಯಾಯ ಗೀತೆಯನ್ನು ಬೋಧಿಸುತ್ತಾ ತಾವು 'ವಾಸುದೇವನೇ ತನಗೆ ಸರ್ವಸ್ವವೆಂದು ತಿಳಿದವನೇ ಭಗವಂತನಿಗೆ ಪ್ರಿಯ. ಅವನೇ ಮಹಾತ್ಮಾ ಎಂದು ವಿವರಿಸಿ, 'ಸಾ ದುರ್ಲಭಃ' ಎಂದರೆ, ಅಂಥ ಜ್ಞಾನೀ ಭಕ್ತನು ದೇವರಿಗೂ ದೊರೆಯುವುದು ಕಷ್ಟ' ವೆಂದು ಹೇಳಿ, ಬಹುಹೊತ್ತು ಆನಂದದ ಕಣ್ಣೀರಿಟ್ಟು ಅನುಭವಿಸಿದಿರಿ. ಅಂಥ ಭಕ್ತ ಅಪರೂಪಕ್ಕೆ ದೊರೆತಮೇಲೂ, ಅವನನ್ನು ಮತ್ತೆ ಸಂಸಾರಕ್ಕೇ ತಳ್ಳುವನಾದರೆ, ದೇವರ ಸ್ವಭಾವ ಹುಚ್ಚಾಗಲಾರದೆ? ದೇವರು ತನ್ನನ್ನು ಹಾಗಾಗ ಬಿಡುವನೇ ! ಎಂದಿಗೂ ಇಲ್ಲ. ಅವನ ಕಾರುಣ್ಯ, ಶೀಲ ವಾತ್ಸಲ್ಯ ಶಕ್ತಿಗಳೇ ಹಾಗಾಗದಂತೆ ಅವನನ್ನು ತಡೆಯುತ್ತವೆ. ದೇವರಿಗಿಂತ ಅವನ ಗುಣಗಳೇ ದೊಡ್ಡವೆಂದು ತಾವೇ ಹೇಳುತ್ತಿರಲಿಲ್ಲವೇ ...''

ಆಚಾರ್ಯರ : '' ಮಗು, ದೀರ್ಘಾಯುಷ್ಮಾನ್ ಭವ! ಎಂಥ ಚೆನ್ನಾಗಿ ಹೇಳಿದಯೋ, ಅಪ್ಪ ! ನಾರಾಯಣಶರ್ಮ! ಶ್ರೀಮನ್ನಾರಾಯಣನೇ ನಿನ್ನ ಬಾಯಲ್ಲಿ ಈ ಉತ್ತರ ಹೇಳಿಸಿರಬೇಕು. ವತ್ಸ! ಬಾಲಕರಿಗೆ ಹೊಳೆಯುವ ಉತ್ತರ ಇದಲ್ಲ! ಪ್ರಚಂಡ ಪರಿಣತರಿಗೂ ಇದು ತಿಳಿಯುವುದು ಕಷ್ಟ. ದೇವರಿಗೆ ಸಂಕಲ್ಪ ಶಕ್ತಿಯುಂಟಾದರೂ ಅದು ಯದ್ವಾ ತದ್ವಾ ಹೋಗದಂತೆ ಮಾಡುವುದು ಇದು ಅವನ ದಿವ್ಯ ಸ್ವಭಾವ...ನಾರಾಯಣಶರ್ಮ!! ನಿನ್ನ ಮಾತಾ ಪಿತೃಗಳು ಧನ್ಯರು'' ಎನ್ನುತ್ತಾ ಆಚಾರ್ಯರ ಆನಂದಾಶ್ರುಗಳಿಂದ ಪರಿಪ್ಲುತವಾದ ಕಂಗಳಿಂದ, ಹೃದಯ ಭಾವಪರವಶವಾಗಿರಲು ಮಗುವನ್ನು ತಬ್ಬಿ ಆಶೀರ್ವದಿಸಲು ಮೇಲೇಳುತ್ತಾ, ''ನಾರಾಯಣಶರ್ಮಾ, ನೀನು ಧನ್ಯ, ನಾರಾಯಣ .....ನಾರಾಯಣ........ನಾರಾಯ........'' ಎನ್ನುತ್ತಾ ಮೇಲೆದ್ದು, ಹಾಗೆಯೇ ಕುಸಿದು, ನೆಲಕ್ಕುರುಳಿ, ಕಣ್ಮುಚ್ಚಿದ್ದ!!

ಶಿಷ್ಯರಿಗೆಲ್ಲ ಗಾಬರಿಯಾಯ್ತು! ಹಿರಿಯವನು ಆಚಾರ್ಯನ ಕಮಂಡಲೂ ತೀರ್ಥದಿಂದ ಶೈತ್ಯೋಪಚಾರ ಮಾಡಿದ. ಆಚಾರ್ಯ ಕಣ್ಣು ಬಿಡಲಿಲ್ಲ. ನಿದ್ರಿಸುವವನಂತೆ ಮಲಗಿದ್ದ. ಶಿಷ್ಯರಿಗೆ ಏನೂ ತೋರಲಿಲ್ಲ. ಒಬ್ಬ ಓಡಿ ಹೋಗಿ ಕಾಮಂದಕನನ್ನು ಕರೆತಂದ. ಸಮಾಚಾರ ಹಬ್ಬಿ, ಶ್ರುತವಿನೀತ, ಸಿದ್ಧಾರ್ಥಕ, ಸಮಿದ್ಧಾರ್ಥಕ, ಪಶುಲೋಮ, ಸ್ವವೇಗಶರ್ಮ, ಶಾಕಾಯ್ರಣ ಮೊದಲಾದ ಸಹಸ್ರಾರು ಆಶ್ರಮವಾಸೀ ಶಿಷ್ಯರು ಬಂದು ನೋಡಿದರು!

ಅಳುತ್ತಾ ಕಾಮಂದಕ ಮೇಲೆದ್ದು ಶಿಷ್ಯ ಸ್ತೋಮಕ್ಕೆ ಅರುಹಿದ ! "ಇಂದು ಏಕಾದಶೀ! ಆಚಾರ್ಯ ಪರಂಧಾಮ ಸೇರಿಯಾಯ್ತು! ನಾವಿನ್ನೂ ತಬ್ಬಲಿಗಳಾದೆವು !! ಅಯ್ಯೋ ನಮಗಿನ್ನಾರು ಗತಿ?'' ಎನ್ನುತ್ತಾ, ತಡೆಯಲಾರದೆ, ಎಳೇ ಮಗುವಿನಂತೆ ಬಿಕ್ಕಿ ಬಿಕ್ಕಿ ಅತ್ತ. ಉಳಿದ ಶಿಷ್ಯರೂ ಅಳಲಾರಂಭಿಸಿದರು.

ಆಚಾರ್ಯನ ಪಾರ್ಥಿವ ಶರೀರಕ್ಕೆ ಶಿಷ್ಯರು ಭಗವಂತನ ಅರ್ಚೆಯ ಪುಷ್ಪಗಳಿಂದ ಅರ್ಚಿಸಿದರು. ಊರ್ಧ್ವ ಪುಂಡ್ರದಿಂದ ಆ ದೇಹವನ್ನು ಮತ್ತೆ ಅಷ್ಟಾಕ್ಷರ ಮಂತ್ರವೊಡನೆ ಅಲಂಕರಿಸಲಾಯಿತು. ಒಂದೆರಡು ತಾಸು ಗಳಲ್ಲಿ ಸುತ್ತ ಮುತ್ತಲ ಅಗ್ರಹಾರಗಳ ಬ್ರಾಹ್ಮಣರೂ ಆಶ್ರಮ ವಾಸಿಗಳೂ ಬಂದು ಸೇರಿದರು.

"ಎಂಥ ಸಾವು! 'ಅನಾವೃತ್ತಿ' ಸೂತ್ರವ್ಯಾಖ್ಯಾನದೊಡನೆ ! ನಾರಾ ಯಣ ನಾಮೋಚ್ಚಾರದೊಡನೆ !!" ಎಂದು, ವಿಷಯ ತಿಳಿದ ಹಿರಿಯರು ಉದ್ಗರಿಸುತ್ತಿದ್ದರು.

  

ಇಂದುಶರ್ಮ ಬರುವ ವೇಳೆಗೆ ಆಚಾರ್ಯನ ಅಂತ್ಯಸಂಸ್ಕಾರವೂ ಮುಗಿದಿತ್ತು. ಯಾವನೋ ಒಬ್ಬ ಬ್ರಾಹ್ಮಣನಿಗೆ ಆಗಬೇಕಾದ ರೀತಿಯ ಸರಳ ಸಂಸ್ಕಾರ ಅದು! ಪ್ರಿಯ ಶಿಷ್ಯನಾದ ನಾರಾಯಣಶರ್ಮನೇ ಚಿತೆಗೆ

ಅಗ್ನಿಸ್ಪರ್ಶ ಮಾಡಿ "ಅಗ್ನೇ ನಯ ಸುಪಥಾ ರಾಯೇ...." ಮಂತ್ರವನ್ನು ಗದ್ಗದಿತನಾಗಿ ಹೇಳಿದ. ಸಂಸ್ಕಾರಕ್ಕೆ ಮುಂಚೆ ಒಬ್ಬ ಹಿರಿಯರು "ಮಗಧಕ್ಕೆ ಸಮಾಚಾರ ತಿಳಿಸಿ. ಇಲ್ಲವಾದರೆ ದೊರೆಗೆ ಕೋಪ ಬರುತ್ತದೆ. ಪ್ರಿಯಶಿಷ್ಯನಾದ ಚಕ್ರವರ್ತಿ ಆಮೇಲೆ ನರಳಾಡುತ್ತಾನೆ. ಆಚಾರ್ಯನಿಗೂ ಇದು ಇಷ್ಟವಿದ್ದೀತು" ಎಂದ.

ಕಾಮಂದಕ : "ಹಿರಿಯರೇ! ಶಾಸ್ತ್ರಜ್ಞರು ಹೀಗೆ ಮಾತಾಡುವುದುಂಟೇ ? ಮಗಧವೆಲ್ಲಿ, ನಾವೆಲ್ಲಿ? ದೊರೆಗೆ ತಿಳಿಸಲು, ಅವನು ಬರಲು ಎಷ್ಟು ದಿನ ಬೇಕಾಗುವುದು? ಅಲ್ಲಿಯ ವರೆಗೆ ಅಸಂಸ್ಕೃತವಾಗಿ ಈ ದಿವ್ಯ ಶರೀರ ಉಳಿದು, ತಿಂಗಳಾಗಿ ಅಗ್ನಿಯನ್ನು ಸೇರಬಾರದು. ಇದು ಶಾಸ್ತ್ರ ನಿಯಮ. ಮೇಲಾಗಿ ದೊರೆ ಶಿಷ್ಯನೇ ವಿನಾ ಸಂಬಂಧಿ ಅಲ್ಲ. ಯಾವ ರಕ್ತ ಸಂಬಂಧಿಯೂ ಇಲ್ಲದ ಆಚಾರ್ಯರ ದೇಹ ಸಂಸ್ಕಾರಕ್ಕೆ ಯಾರಿಗೂ ಕಾಯಬೇಕಿಲ್ಲ. ದೊರೆ ಬಂದೂ ಮಾಡುವುದೇನು? ನಾವೆಲ್ಲ ಪುತ್ರಪ್ರಾಯ ಶಿಷ್ಯರು, ಇಲ್ಲೇ ಇರುವೆವಲ್ಲ. ವಿಳಂಬವೇಕೆ ?" ಎಂದುತ್ತರಿಸಿದ.

ಶಾಸ್ತ್ರ ತಿಳಿದ ಮಂಡಳಿಯಲ್ಲಿ ಮತ್ತೆ ಯಾರೂ ಏನೂ ಹೇಳಲಿಲ್ಲ. ಸಂಸ್ಕಾರ, ಬ್ರಹ್ಮಮೇಧ ವಿಧಿಯಂತೆ, ನ್ಯೂನಾತಿರೇಕವಿಲ್ಲದೆ ನಡೆಯಿತು.

ಅಸ್ಥಿ ಸಂಚಯನ ನಡೆಯುವ ಮರುದಿನದ ವೇಳೆಗೆ ಇಂದುಶರ್ಮ ಬರುತ್ತಾ ವಿಪಾಶಾ ನದಿಯ ದಡದಲ್ಲಿ ಸ್ಮಶಾನದಲ್ಲಿ ಹಾಯುತ್ತಾ, ಜನ ಜಂಗುಳಿ ಕೂಡಿರುವುದನ್ನು ಕಂಡ! "ಅದಾರ ಮರಣ ?" ಎಂದು ಸಮೀಪದವನನ್ನು ಕೇಳಿದ. "ನಿಮಗೆ ಗೊತ್ತಿಲ್ಲವೆ ? ಆಚಾರ್ಯ ಚಾಣಕ್ಯರು ಭಗವಂತನ ಸಂನ್ನಿಧಿಯನ್ನು ಸೇರಿದರು. ನೆನ್ನೆ ಏಕಾದಶೀ ಮಧ್ಯಾಹ್ನ ಅಭಿಜಿನ್ಮುಹೂರ್ತದಲ್ಲಿ" ಎಂದು ಅವನೆಂದುದನ್ನು ಕೇಳಿ ಇಂದುಶರ್ಮ ಮೂರ್ಛೆ ಹೋದ!!

ಆಶ್ರಮಸ್ಥರು ಬಂದು ಅವನನ್ನು ಚಾಣಕ್ಯ ಮಿತ್ರನೆಂದು ಗುರುತು ಹಿಡಿದರು. ಉಪಚರಿಸಿ, ಅವನಿಗೆ ನಡೆದುದೆಲ್ಲವನ್ನೂ ಹೇಳಿದರು ! "ಅಯ್ಯೋ ! ಅತ್ತ ಮಗಧದಲ್ಲಿ ಅಶಾಂತಿ ಎಂದು ಆಚಾರ್ಯನ ಬಲ ಬಯಸಿ ಬಂದರೆ, ಆಚಾರ್ಯನೇ ಇಲ್ಲವಾಯಿತಲ್ಲ ! ಚಂದ್ರಗುಪ್ತದೊರೆಗೆ ಏನು ಹೇಳಲಿ ? ವಿದ್ಯುಲ್ಲೇಖೆಗೆ ಏನುಸುರಲಿ ? ಅಮಾತ್ಯನಿಗೇನು ಬಿನ್ನೈಸಲಿ ? ದೊರೆಗಾರುಗತಿ ?" ಎನ್ನುತ್ತಾ ಇಂದುಶರ್ಮ ಗಳಗಳನೆ ಅತ್ತ.

  

ಪರ್ವತೇಶನ ಪುತ್ರರಾದ ಮಲಯಕೇತು, ಚಂದ್ರಕೇತುಗಳು ಬಂದು, ಚಾಣಕ್ಯನ ಶವ ಭಸ್ಮದ ಕೊಂಚ ಭಾಗಗಳನ್ನು ಬಂಗಾರದ ಬಿಂದಿಗೆಯಲ್ಲಿ ಶೇಖರಿಸಿ, ಒಂದು ಭಾಗವನ್ನು ತ್ರಿವೇಣೀ ಸಂಗಮದ ಪ್ರಯಾಗೆಯಲ್ಲೂ, ಮತ್ತೊಂದನ್ನು ಪಾಟಲೀ ಪುತ್ರದ ಬಳಿಯ ಗಂಗೆಯಲ್ಲೂ ಇನ್ನೊಂದನ್ನು ಸಿಂಧುವಿನಲ್ಲೂ ವಿಸರ್ಜಿಸಲು ಏರ್ಪಡಿಸಿದರು. ಆ ಭಸ್ಮ ಕಲಶದ ದರ್ಶನದಿಂದಾದರೂ ದೊರೆಗೆ ಶಾಂತಿಯಾಗಲೆಂದು ಬಯಸಿದರು. ಸರ್ವಾಲಂಕೃತವಾದ ಬಂಗಾರದ ರಥದಲ್ಲಿ ಆ ಕಳಶಗಳನ್ನಿಟ್ಟು ಸ್ವಯಂ ಮಲಯಕೇತುವೇ ರಥ ನಡೆಸುತ್ತ ಹೊರಟ.

ಇತ್ತ ಮುಂಚಿತನಾಗಿ ಮಗಧಕ್ಕೆ ಸಮಾಚಾರ ಮುಟ್ಟಿತ್ತು. ಚಂದ್ರಗುಪ್ತನಿಗೆ ಆ ಬುದ್ಧಿಭ್ರಮಣೆಯ ಅವಸ್ಥೆಯಲ್ಲೂ ಆಚಾರ್ಯನಾಮ ಸ್ಮರಣೆ ಎಚ್ಚರ ತಂದಿತು : "ಏನೆಂದಿರಿ ? ನನ್ನ ಗುರು ಅಸ್ತಂಗತನಾದನೇ ? ನನಗಾರು ಗತಿ ? ತಾಯಿ ತಂದೆ ಇಲ್ಲದ ತಬ್ಬಲಿಯನ್ನು ಬೆಳೆಸಿ, ವಿದ್ಯೆ ಕೊಟ್ಟು ಇಂದು ಚಕ್ರವರ್ತಿಯನ್ನಾಗಿಸಿದ ಪುಣ್ಯಪುರುಷನ ಅಂತ್ಯದರ್ಶನವೂ ಇಲ್ಲದಾಯಿತೆ ? ಎಂಥ ದುರ್ಭಾಗ್ಯ!" ಎನ್ನುತ್ತಾ ಮೈ ಮೇಲಿನ ಒಡವೆ ವಸ್ತ್ರಗಳನ್ನು ಕಿತ್ತೆಸೆದ ! ರಾಣಿಯರಿಗೆ ಭಯವಾಯಿತು! ಅಮಾತ್ಯ ಏನೇನೋ ಬುದ್ಧಿ ಹೇಳಿದ. ವೈದ್ಯನ ಚಿಕಿತ್ಸೆ ಫಲಕಾರಿಯಾಗಲಿಲ್ಲ.

ಸಮಾಚಾರ ಬಂದ ಎರಡನೇ ದಿನ ಹುಣ್ಣಿಮೆಯಂದು–ಚಿತಾಭಸ್ಮ ಪಾಟಲೀಪುತ್ರವನ್ನು ಸೇರಿತು. ಮಲಯಕೇತು, ಚಂದ್ರಕೇತುಗಳನ್ನು ಊರ ದ್ವಾರದಲ್ಲಿ ದೊರೆಯೇ ಎದುರು ಗೊಂಡ! ಸಹಸ್ರ ಸಂಖ್ಯೆಯ ಬ್ರಾಹ್ಮಣರ ವೇದ ಘೋಷದ ನಡುವೆ ಕಲಶವನ್ನು ನಗರ ಪ್ರದಕ್ಷಿಣೆ ಮಾಡಿಸಿ, ಅರಮನೆ ಯಲ್ಲಿ ಸತ್ಕರಿಸಿ, ಪೂಜಿಸಿ ಗಂಗೆಯಲ್ಲಿ ದೊರೆಯೇ ತನ್ನ ಕೈಗಳಿಂದಲೇ ಭಸ್ಮ ವನ್ನು ವಿಸರ್ಜಿಸಿದ. "ಆಚಾರ್ಯ ! ಈ ಜನ್ಮದಲ್ಲಿ ನಮ್ಮಿಬ್ಬರ ಋಣ ತೀರಿತು. ನಿಮ್ಮ ಮಾತಿನಂತೆ ಇನ್ನು ಹನ್ನೆರಡನೇ ಜನ್ಮವನ್ನು ಎದುರು ನೋಡುವೆ'' ಎನ್ನುತ್ತಾ ತಾನೂ ನದಿಯಲ್ಲಿ ಮುಳುಗಿ ಸಾಯಲು ಹೊರಟ. ಪರಿವಾರದವರು ಆಚಾತುರ್ಯ ತಪ್ಪಿಸಿದರು.

ಮಲಯಕೇತು ಪರಿವಾರದೊಡನೆ ಪ್ರಯಾಗೆಗೆ ಪ್ರಯಾಣ ಬೆಳೆಸಿದ.

  

ದೊರೆಯ ಮೈಯ್ಯೆಲ್ಲಾ ಹುಣ್ಣು ಹುಣ್ಣಾದಂತೆ, ಗಂಟು ಕಟ್ಟಿದ್ದ ಕಡೆ ಯೆಲ್ಲ ಬಿರಿಯಲಾರಂಭಿಸಿ, ರಕ್ತ ಸೋರುತ್ತಾ, ದುರ್ನಾಥ ಬರುತ್ತಿತ್ತು. ಎಷ್ಟು ಸುಗಂಧ ತೈಲಪೂಸಿದರೂ ಫಲವಿಲ್ಲದಾಯ್ತು. ಮಬ್ಬು ಬಲಿಯುತ್ತಾ, ನಿಶ್ಚೇತನನಾಗಿ ಬಿದ್ದಿದ್ದ ದೊರೆ ಹಗಲೆಲ್ಲ ಆಚಾರ್ಯನ ಹೆಸರನ್ನು ಹೇಳು ತ್ತಿದ್ದ.

ಪಟ್ಟದರಾಣಿ ಹೇಳಿದಳು ; "ದೊರೆಗಳ ಆ ಇನ್ನೊಂದು ಇಚ್ಛೆ ಪ್ರಬಲವಾಗಿರುವಂತಿದೆ, ಸಂನ್ಯಾಸ. ಈಗ ಆ ಆಸೆ ಪ್ರಬಲವಾಗಿರುವಂತಿದೆ. ವೇಗವಾಗಿ ರಥದಲ್ಲಿ ಅವರನ್ನು ಇಷ್ಟಸ್ಥಾನಕ್ಕೆ ಕೊಂಡೊಯ್ಯೋಣ !!''

ವಿದ್ಯುಲ್ಲೇಖೆ ಇದನ್ನು ಶಾಂತವಾಗಿ, ದಿಟ್ಟವಾಗಿ ಪ್ರತಿಭಟಿಸಿದಳು. ದೊಡ್ಡರಾಣಿ ಮುಸಿಸಾಗಿ ಏನೇನೋ ಬೈದಳು. ಅಮಾತ್ಯನಿಗೆ ಏನೂ ತೋರಲಿಲ್ಲ. ಬಾಗುರಾಯಣಾದಿಗಳೆಲ್ಲ ಸೇರಿ ಏನೋ ನಿಶ್ಚಯಿಸಿದರು. ಆ ರಾತ್ರಿ ದೊರೆಯು ಕಿವಿಯಲ್ಲಿ ಸಮಸ್ತ ಮಂತ್ರಿ ಪರಿವಾರದೆದುರು ಅಮಾತ್ಯ

ಭಿನ್ನವಿಸಿದ. "ಪ್ರಭೂ! ನಿಮ್ಮ ಚಿತ್ತ ತಿಳಿಯಲಿಲ್ಲ. ರಾಜಕುಮಾರರಿಗೆ ಯುವರಾಜ ಪಟ್ಟಾಭಿಷೇಕ ಮಾಡೋಣವೇ ? ತಾವು ಬೇಗ ಗುಣವಾಗುವಿರಿ. ಸಂದೇಹವಿಲ್ಲ, ಆದರೂ ರಾಜಕಾರ್ಯ ನಿಲ್ಲಬಾರದು. ನಮಗೇನಪ್ಪಣೆ ?"

ದೊರೆ ಹುಬ್ಬಾಡಿಸಿ ಅನುಮೋದಿಸಿದ. ತುಟಿಯ ತುದಿಯಲ್ಲಿ ಕಿರುನಗೆ ಮಿಂಚಿತು. "ತಾವು ಬೇಗ ಗುಣವಾಗುವಿರಿ'' ಎಂದ ಅಮಾತ್ಯನ ಮಾತಿಗೆ ಅದು ಉತ್ತರ ವಿರಬೇಕು!

ಮರುದಿನ ಗಡಿಬಿಡಿಯಲ್ಲಿ ಬಿಂದುಸಾರನಿಗೆ ಯೌವ್ವರಾಜ್ಯಾಭಿಷೇಕವಾಯಿತು.

ಅಂದೇ ಸಂಜೆ ಹಿರಿಯ ರಾಣಿಯ ಆದೇಶದಂತೆ ದೊರೆಯನ್ನು ರಥದಲ್ಲಿ ಮಲಗಿಸಿ ಶೀಘ್ರವೇಗದಲ್ಲಿ ಚಂದ್ರರಾಯಪಟ್ಟಣ ( ಈಗಿನ ಚೆನ್ನರಾಯಪಟ್ಟಣ ) ವೆಂಬ ಮಾಹಿಷಕ ನಗರದತ್ತ ಒಯ್ಯಲಾಯಿತು. ದೊರೆಗೆ ಜ್ಞಾನಾಜ್ಞಾನಸ್ಥಿತಿ. ರಾಣಿಯರು ಬಳಿಯಲ್ಲೇ ಇದ್ದರು. ಪ್ರಯಾಣ ಇಪ್ಪತ್ತುದಿನ ಹಿಡಿಯಿತು....

ಚಂದ್ರಗುಪ್ತ ಏನೇನೋ ಬಡಬಡಿಸುತ್ತಿದ್ದ. ಸಂನ್ಯಾಸಿಯಾಗುವ ತನ್ನ ಬಯಕೆಯನ್ನು ಹೇಳಿಕೊಳ್ಳುತ್ತಿರುವುದಾಗಿ ಅದಕ್ಕೆ ಅರ್ಥೈಸಲಾಯಿತು! ದೊಡ್ಡರಾಣಿ ಅದನ್ನನುಮೋದಿಸಿದಳು. ಅಮಾತ್ಯ, ಶೋಕದಿಂದ ತಲೆಯಾಡಿಸಿದ ! ಏನೂ ಮಾಡುವಂತಿರಲಿಲ್ಲ.

ಅಲ್ಲಿನ ನಿವಾಸಿಗಳು ದೊರೆಯ ಶರೀರವನ್ನೆತ್ತಿಕೊಂಡು ಚಂದ್ರಗಿರಿಯ ಗುಹೆಯೊಳಗೆ ಹೋದರು.

ರಾಣಿಯರಿಗೆ, ಮಂತ್ರಿಪರಿವಾರದವರಿಗೆ ''ಊರಿಗೆ ಹೊರಡ ಬಹುದು" ಎಂಬ ಅಲ್ಲಿನ ಮುನಿಗಳ ಸಂದೇಶವನ್ನು ಮುನಿ ಶಿಷ್ಯರು ಅರುಹಿದರು !

ರಾಣಿಯ ಅಪ್ಪಣೆಯಂತೆ ಉಳಿದವರೆಲ್ಲ ಭಾರವಾದ ಮನಸ್ಸಿನಿಂದ ಮಗಧದತ್ತ ಹೊರಟರು.

ವಿದ್ಯುಲ್ಲೇಖೆ ಮಾತ್ರ ಅವರೊಡನೆ ಸೇರಲಿಲ್ಲ. ಅಲ್ಲೇ ನಾಲ್ಕಾರು ದಿನ ಉಳಿದಳು. ದೊರೆಗೆ ದಿಗಂಬರ ದೀಕ್ಷೆ ಕೊಟ್ಟು ಅವನನ್ನು ಮುನಿಯನ್ನಾಗಿ ಮಾಡಲಾಯಿತೆಂಬ ಸುದ್ದಿ ಕೇಳಿ ಅವಳಿಗೆ ಎದೆಯೊಡೆಯಿತು. ಮಳಲಲ್ಲಿ ಹೊರಳಾಡಿದಳು ! ಪರಿಚಾರಕರು ಏನು ಸಮಾಧಾನ ಹೇಳಿದರೂ ಅವಳಿಗೆ ಶಾಂತಿ ಬರಲಿಲ್ಲ. ಗಂಡನ ಸೇವೆಯನ್ನೂ ಕಿತ್ತುಕೊಂಡ ಆ ಘೋರ ಸಂನ್ಯಾಸವನ್ನು ಶಪಿಸಿದಳು. ಆಸೆಯಿಂದ ಅಲ್ಲೇ ಕೆಲದಿನ ಉಳಿದಳು.

ದೊರೆಯ ಸ್ಥಿತಿ ಕ್ಷೀಣಿಸುತ್ತಿದೆಯೆಂದೂ, ಅನ್ನಾಹಾರ ವರ್ಜಿಸಿರುವನೆಂದೂ ಸಮಾಚಾರ ಬಂದಿತು !

ಇನ್ನೈದು ದಿನ, ಮತ್ತೆ ಹುಣ್ಣಿಮೆಯ ಚಂದ್ರ ಆಗಸದಲ್ಲಿ ಕಾಣಿಸಿಕೊಂಡ! ಭೂಲೋಕದ ಚಂದ್ರ ಅಸ್ತಂಗತನಾಗುತ್ತಿದ್ದ! ಕೌಮುದೀ ಮಹೋತ್ಸವದ ನೆನಪನ್ನು ವಿದ್ಯುಲ್ಲೇಖೆ ಮನಕ್ಕೆ ತಂದುಕೊಂಡಳು. ಅನಾಥಳಾಗಿ ಭಾರತಕ್ಕೆ ಬಂದ ತನಗೆ ಆಚಾರ್ಯನು ಮಾತಾಪಿತೃಸ್ಥಾನೀಯನಾಗಿಯೂ, ಚಂದ್ರಗುಪ್ತನಂಥ ಪತಿಯೂ ದೊರೆತಿದ್ದ ಆ ಭಾಗ್ಯವನ್ನು ವಿಧಿ ಅಂದು ಕಸಿದುಕೊಳ್ಳುವುದರಲ್ಲಿತ್ತು!.... ರಾತ್ರಿ ಸರಿಯುತ್ತಾ ದೊರೆ 'ಮೋಕ್ಷ ಕಲ್ಯಾಣ'ವನ್ನು ಹೊಂದಿದ ಸಮಾಚಾರ ಬಂದಿತು. ವಿದ್ಯುಲ್ಲೇಖೆಯನ್ನು ಸಂತೈಸುವವರು ಅಂದು ಅಲ್ಲಿ ಯಾರೂ ಇರಲಿಲ್ಲ!

  

ವಿದ್ಯುಲ್ಲೇಖೆ ವೈರಾಗಿಣಿಯಂತೆ ರಾಮಸೇತುವಿನ ವರೆಗಿನ ದಕ್ಷಿಣ ಭಾರತದ ಎಲ್ಲ ತೀರ್ಥ ಕ್ಷೇತ್ರಗಳನ್ನೂ ಸಂದರ್ಶಿಸಿದಳು. ಅರಮನೆಯ ಮಿತ ಪರಿವಾರ ಅವಳ ಹಿಂದಿತ್ತು. ಪತಿನಿಯೋಗವಾದಂದಿನಿಂದ ಏಕ ಭುಕ್ತಿವ್ರತ ಹಿಡಿದು ದೇಹ ಶೋಷಿಸಲು ಯತ್ನಿಸಿದಳು. ವಿಧಿ ಅವಳಿಗಿನ್ನೂ ಹದಿನೈದು

ವರ್ಷ ಆಯುಷ್ಯ ಕೊಟ್ಟಿತ್ತು. ಮತ್ತೆ ದ್ವಾರಕೆ. ಪುಷ್ಕರ, ಮೊದಲಾದ ತೀರ್ಥಗಳನ್ನು ಸಂದರ್ಶಿಸಿ, ಮಧುರೆಯ ಸಂಕರ್ಷಣಾಲಯಕ್ಕೆ ಬಂದು ನೆಲೆ ಸಿದಳು.

ಚಾಣಕ್ಯಗುರುವಿನ ಹೆಸರಿನಲ್ಲಿ ವಿದ್ಯಾ ಸಂಸ್ಥೆಯೊಂದನ್ನು ಸ್ಥಾಪಿಸಿ ಬಡವಟುಗಳಿಗೆ ಉಪನಯನ, ವೇದಾಭ್ಯಾಸ ಮಾಡಿಸುವ ಹೊಣೆ ಹೊತ್ತ ಆ ಆಶ್ರಮ ವಾಸುದೇವಭಟ್ಟರ ಸಮರ್ಥ ಮಾರ್ಗದರ್ಶನದಲ್ಲಿ ಚೆನ್ನಾಗಿಯೇ ನಡೆಯಿತು.

  

ಮಗಧದಲ್ಲಿ ಮತ್ತೆ ಕ್ಷಾಮ ತಲೆ ದೋರಿತು. ಬಿಂದುಸಾರಕುಮಾರ ಚಾಣಕ್ಯರ ಅರ್ಥಶಾಸ್ತ್ರಕ್ರಮದಲ್ಲಿ ಅದನ್ನು ಎದುರಿಸಲು ಬಿಗುವಾದ ಯತ್ನ ಮಾಡಿದ. ಅಮಾತ್ಯನೂ ಶಕ್ತಿ ಮೀರಿ ದುಡಿದ. ಕ್ಷಾಮ ಹತ್ತು ವರ್ಷ ಕಾಡಿತು. ಆ ಕೊನೆಯ ವರ್ಷ ಅಮಾತ್ಯನೂ ದೈವಾಧೀನನಾದ. ಅಮಾತ್ಯ ಪುತ್ರ ಆ ಸ್ಥಾನಕ್ಕೆ ನಿಯಮಿತನಾದ. ಮಗಧ ಮತ್ತೆ ತಲೆ ಎತ್ತಿತಾದರೂ ಹಿಂದಿನ ವೈಭವ ಮತ್ತೆ ಬರಲಿಲ್ಲ. ಹಳಬರು ಚಾಣಕ್ಯ ಚಂದ್ರಗುಪ್ತರ ನೆನಪಿನಲ್ಲಿ ದೇಹ, ಮನ ಸವೆಸಿದರು.

  

ಚಂದ್ರಗುಪ್ತ ದೈವಾಧೀನನಾದ ಹದಿನೈದನೆಯ ವರ್ಷ. ಜನ್ಮಾಷ್ಟಮಿ ವಿಶೇಷ ಉತ್ಸವ, ಸಂಕರ್ಷಣಾಲಯದಲ್ಲಿ ನಡೆದಿತ್ತು. ಕಾಮಂದಕ, ಮೊದ ಲಾದ ಆಚಾರ್ಯ ಶಿಷ್ಯರು ಅಲ್ಲಿಗೆ ಉತ್ಸವಕ್ಕೆ ಬಂದಿದ್ದು ವಿದ್ಯುಲ್ಲೇಖೆ ಯನ್ನು ಸಂದರ್ಶಿಸಿ ಹರಸಿದರು. ಅವಳು ಅವರಿಗೆ ಉಚಿತ ಕಾಣಿಕೆಗಳ ನ್ನಿತ್ತು, ಗುರುಸ್ಮರಣೆಯೊಡನೆ, ಪತಿಸ್ಮರಣೆಯೊಡನೆ ಅಂದು ಉಪವಾಸ ಮಾಡಿ, ಮರುದಿನ ಪಾರಣೆಯನ್ನು ಮಾಡಿದಳು....ಸಂಜೆಯ ದೀಪಾರಾಧ ನೆಯ ಸೊಬಗನ್ನು ಸವಿಯುತ್ತಾ ಶ್ರೀ ಕೃಷ್ಣಪಾದಾರವಿಂದಗಳನ್ನು ಸೇರಿಯೇ ಬಿಟ್ಟಳು!

"ಎಂಥ ಸಾವು!" ಎಂದು ಎಲ್ಲರೂ ಉದ್ಗರಿಸಿದರು. "ಆಚಾರ್ಯ ನಿಗೆಂಥವೋ ಶಿಷ್ಯರಿಗೂ ಅಂಥದೇ!" ಎಂದು ಒಬ್ಬ ಶಿಷ್ಯ ಹೇಳಿದ. ಬಿಂದು ಸಾರ ದೊರೆ ಸಪತ್ನೀಮಾತೃ ವಿಗೆ ಉಚಿತ ಸಂಸ್ಕಾರ ಮಾಡಿದ.

  

ಆಚಾರ್ಯನ ಜೀವ ಮತ್ತೆ ಚಂದ್ರಗುಪ್ತನ ಸಮಾಗಮಕ್ಕೆ ಕಾಯು ತ್ತಿತ್ತು! ಅತ್ತ ದೊರೆಯ ಜೀವವೂ ಗುರುಪಾದಸ್ಪರ್ಶಕ್ಕೆ ಶತಮಾನಗಳ ತಪಸ್ಸು ಮಾಡಿತ್ತು. ವಿದ್ಯುಲ್ಲೇಖೆ ಈ ಇಬ್ಬರ ಸಮಾಗಮಕ್ಕೆ ಮತ್ತೆ ಮತ್ತೆ ತಪಸ್ಸು ಮಾಡಿ ಬಂದಳು. ಅದು ಕರ್ನಾಟಕದ ಭಾಗ್ಯ.

ದಕ್ಷಿಣದ ಜ್ಯೋತಿಯೊಂದು ಉತ್ತರದಲ್ಲಿ ಇತಿಹಾಸ ಮಾಡಿ, ರಾಷ್ಟ್ರಕ್ಕೆ ಭದ್ರಬುನಾದಿ ಹಾಕಿ,ಶಸ್ತ್ರಶಾಸ್ತ್ರಗಳ ಅಪೂರ್ವ ರಕ್ಷಣೆಯೊದಗಿಸಿ, ಇಂದಿಗೂ ಅರ್ಥಶಾಸ್ತ್ರದ ದ್ವಾರಾ ಕತ್ತಲೆಯಲ್ಲೂ ಆಶಾಕಿರಣವಾಗಿಯೇ ಇದೆ. ಮಹಾತ್ಮರನ್ನು ಮರೆತು ಭಾರತದೇಶ ದಾಸ್ಯಭಾವದಿಂದ ಇನ್ನೂ ಮುಕ್ತ ವಾಗಿಯೇ ಇಲ್ಲ! ಆಚಾರ್ಯ ಚಾಣಕ್ಯ ಆ ಬಂಧನವನ್ನು ಖಂಡಿತ ಬಿಡಿಸಿ ಯಾನು! ಆದರೆ ಅದನ್ನು ಬಯಸುವ ಭೂಪರಾರು ?

॥ ಶುಭಮಸ್ತು ॥

ವೇದವಿದ್ಯಾ ಪ್ರಕಾಶನ, "ಮಾಲೋಲ"
ರೇಲ್ವೆಸ್ಟೇಶನ್ ಹಿಂದೆ, ಕಲ್ಯಾಣನಗರ,
ಧಾರವಾಡ - ೫೮೦೦೦೭.

# ಪ್ರೊ| ಕೆ. ಎಸ್. ನಾರಾಯಣಾಚಾರ್ಯರ ಕೃತಿಗಳು

| ( ಸದ್ಯದ ಬೆಲೆಗಳು ಮಾತ್ರ ) | ರೂ. ಪೈ. |
|---|---|
| 1. ವೇದ ಸಂಸ್ಕೃತಿಯ ಪರಿಚಯ. ಸಂಪುಟ ೧ ( ೨ ನೆಯ ಮುದ್ರಣ ) | 10-00 |
| 2. ,, ,, ೨ ,, | 12-00 |
| 3. ,, ,, ೩ ,, | 12-00 |
| 4. ,, ,, ೪ ,, | 12-00 |
| 5. ,, ,, ೫ ,, | 25-00 |
| 6. ,, ,, ೬ ,, | 25-00 |
| 7. ,, ,, ೭ ,, | 20-00 |
| 8. ವೇದ ಸಂಸ್ಕೃತಿಯ ಪರಿಚಯ, ಸಂಪುಟ ೮ (ದ್ವಿತೀಯ ಮುದ್ರಣ) | 50-00 |
| 9 + 10. ,, ,, ೯-೧೦ | 30-00 |
| 11. ವೇದಾಭರಣ (ವೈದಿಕ ಸಂಸ್ಕೃತಿಯ ಬಗೆಗೆ ಘನ ವಿದ್ವಾಂಸರ ೧೩ ಲೇಖನ ಮಾಲೆ) | 20-00 |

| No. | Title | Price |
|---|---|---|
| 12. | ಮೂಲ (ಸಂಕ್ಷೇಪ) ರಾಮಾಯಣ, "ಶ್ರೀ ರಾಮಪಾದ ಪ್ರಣಯಿನೀ" ಕನ್ನಡ ವ್ಯಾಖ್ಯಾನಸಹಿತ | 12-00 |
| 13. | ಶ್ರೀರಾಮಾಯಣ ಸಾಹಸ್ರೀ– ಭಾಗ ೧ (ದ್ವಿತೀಯ ಮುದ್ರಣ) | 4-00 |
| 14. | ,, ,, ೨ ,, | 20-00 |
| 15. | ,, ,, ೩ (ಪ್ರಥಮ ಮುದ್ರಣ) | 12-00 |
| 16. | ,, ,, ೪ ,, | 20-00 |
| 17. | ,, ,, ೫ ,, | 30-00 |
| 18. | ಶ್ರೀವ್ಯಾಸಸೂಕ್ತಿ ಸುಧಾ (ಭಾಗ ೧) | 8-00 |
| 19. | ಶ್ರೀ ಭೀಷ್ಮಸ್ತುತಿ (ಶ್ರೀ ಭಾಗವತಾಂತರ್ಗತ) ಕನ್ನಡ ವ್ಯಾಖ್ಯಾನದೊಡನೆ | 2-00 |
| 20. | Sri Gopika Gitam with English Commentary (ತೀರಿದೆ) | — |
| 21. | ಶ್ರೀ ಗೀತಾರ್ಥರತ್ನನಿಧಿ–ಭಾಗ ೧ (ಪ್ರಥಮ ಮು.) | 40-00 |
| 22. | ತಿರುಪ್ಪಾವೈ (ಶ್ರೀ ಕೃಷ್ಣಲೀಲಾ ಪ್ರಬಂಧ) —ಗೋದಾದೇವಿಯ ತಮಿಳು ಪ್ರಬಂಧ, ಕನ್ನಡ ಸುಬೋಧಿನೀ ವ್ಯಾಖ್ಯಾನಸಹಿತ [ತೀರಿದೆ] | |
| 23. | Sri Ramanuja on 'Tatvamasi, & Neti Neti' | 35-00 |
| 24. | Basic Concepts of Visistadvatia | 50.00 |
| 25. | ಶ್ರೀ ಮಹಾಭಾರತಪಾತ್ರಪ್ರಪಂಚ | 125-00 |
| 26. | ಶ್ರೀ ರಾಮಾಯಣಪಾತ್ರಪ್ರಪಂಚ | 140-00 |

27. ಡಬ್ಲ್ಯು. ಬಿ. ಯೇಟ್ಸನ ಕಾವ್ಯದ ಮೇಲೆ
ಭಾರತೀಯ ತತ್ತ್ವಶಾಸ್ತ್ರದ ಪ್ರಭಾವ ಸಾಧ್ಯತೆ (ತೀರಿದೆ)

28. ಶ್ರೀ ಗೋಪಾಲ ವಿಂಶತಿ (ಸವ್ಯಾಖ್ಯಾ) ಪ್ರತಿಗಳು ತೀರಿವೆ

29. ಶರಣಾಗತಿ ಗದ್ಯ (ಸವ್ಯಾಖ್ಯಾ) „

30. ಶ್ರೀರಂಗ ಗದ್ಯ ಮತ್ತು ವೈಕುಂಠ ಗದ್ಯ (ಸವ್ಯಾಖ್ಯಾ) „

31. ಶ್ರೀ ಕೂರನಾಥರ ಶ್ರೀಸ್ತವ ,,
('ಶ್ರೀರಂಜನೀ' ವ್ಯಾಖ್ಯಾಯುಕ್ತ) ,,

32. ವಿಶಿಷ್ಟಾದ್ವೈತಕ್ಕೆ ಶ್ರೀಯಾಮುನರ ಕೊಡುಗೆ
("ಶ್ರೀ ವೈಷ್ಣವ ದರ್ಶನ" —(ದತ್ತಿ ಉಪನ್ಯಾಸ)–
(ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟನೆ) 4–00

33. ತೊಂಡರಡಿಪ್ಪೊಡಿ ಆಳ್ವಾರರ 'ತಿರುಮಾಲೈ' | ತೀರಿವೆ
— ಕನ್ನಡ "ಶ್ರೀರಂಗ ಭಕ್ತಿ" ವ್ಯಾಖ್ಯಾ ಸಹಿತ |

34. "ತತ್ತ್ವಮಸಿ" ಮತ್ತು "ನೇತಿ ನೇತಿ"
—ಶ್ರೀರಾಮಾನುಜ ದರ್ಶನ 30–00

35 The Philosophy of Self Surrender |
according to Vedanta Desika | ತಯಾರಿ
—A digest of Sri Rahasyatrayasaram | ಯಲ್ಲಿದೆ

36. The Epistemology and Metaphysics
of Sri Ramanuja–Vindicated
(Pub.by S.Krishnaswamy Iyengar,

"Sri Vaishnava Sudarshanam,
3-A, Puttur Agraharam,
TIRUCHIRAPALLY (Tamil Nadu) 6-00

37. The Role of Sri Krishna in the Mahabharata (5 lectures)

Pub. by The Academy of Comparative Religions, Gurudeo Ranade Mandir, Hindwadi. Belgaum. 45-00

38. ಆಚಾರ್ಯ ಚಾಣಕ್ಯ(ಕೌಟಿಲ್ಯನ ಅರ್ಥಶಾಸ್ತ್ರವನ್ನಾಧರಿಸಿ ಬರೆದ ಕಾದಂಬರಿ) 51·00

39. ಅಗಸ್ತ್ಯ— ವೇದಪುರಾಣಾಧಾರಿತ ಕಾದಂಬರೀ [ಅಚ್ಚಿನಲ್ಲಿ]

40, ಆಳ್ವಾರರು ಮತ್ತು ಹರಿದಾಸರು
-- ಎಂ. ಜಿ. ಎಂ, ಕಾಲೇಜು, ಉಡುಪಿ
ಇವರಿಂದ ಪ್ರಕಟಿತ 10-00

41. Sri Ramanuja on the Nature of Experiencc [ಸಿದ್ಧತೆಯಲ್ಲಿ]

42. ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು — 20.00
(ಲೋಕಶಿಕ್ಷಣ ಟ್ರಸ್ಟ ಹುಬ್ಬಳ್ಳಿ, ಇವರಪ್ರಕಟನೆ)

43. ಶ್ರೀರಾಮಾವತಾರ ಮುಗಿಯುತ್ತಾ ಬಂದಾಗ ! ಸಿದ್ಧವಾಗಿದ್ದು
(ಲೋಕಶಿಕ್ಷಣ ಟ್ರಸ್ಟ್, ಪ್ರಕಟನೆ) ಪ್ರಕಟನೆಗೆ ಕಾದಿದೆ.

44. "ಆ ಹದಿನೆಂಟು ದಿನಗಳು !" ಸಿದ್ಧವಾಗಿದ್ದು
(ಶ್ರೀ ಮಹಾಭಾರತ ಯುದ್ಧಕಥೆಯಾಧಾರಿತ ಪ್ರಕಟನೆಯ
ಕಾದಂಬರಿರೂಪ ) ಅವಕಾಶ ಕಾದಿದೆ.

45, ಶ್ರೀ ಭಾಗವತ ಕಥಾಪ್ರಪಂಚ (ಸಿದ್ಧತೆಯಲ್ಲಿ)
(ಸಮಗ್ರ ಭಾಗವತ ಕನ್ನಡ ರೂಪಾಂತರ)

46. ಷೇಕ್ಸ್‌ಪಿಯರನ ಪಾತ್ರಪ್ರಪಂಚ (ಸಿದ್ಧತೆಯಲ್ಲಿ)
[ಆಂಗ್ಲನಾಟಕಕಾರನ ಪಾತ್ರಸೃಷ್ಟಿಯ ಕುರಿತು ವಿವರಣೆ]

47. "ತಿರುನೆಡುಂದಾಂಡಗಂ" (ಶ್ರೀಮದ್ ದೀರ್ಘ ದಂಡಕ)
ವೆಂಬ ತಿರುಮಂಗೈ ಆಳ್ವಾರರ ದಿವ್ಯಪ್ರಬಂಧ ವ್ಯಾಖ್ಯಾನ,
ಕನ್ನಡ "ಕಲಿವೈರಿ ಹೃದಯಂ" ದೊಡನೆ

48 ಆಚಾರ್ಯ ಚಾಣಕ್ಯನ ಭವ್ಯ ವ್ಯಕ್ತಿತ್ವ
—ಅರ್ಥಶಾಸ್ತ್ರಾಧಾರಿತ ವಿವರಣ ಪರಿಚಯ ಗ್ರಂಥ.
ಚಾಣಕ್ಯನೀತಿ ಸೂತ್ರಗಳ ಅನುವಾದದೊಡನೆ (ಸಿದ್ಧತೆಯಲ್ಲಿದೆ)

○○